ಶ್ರೀ ಫಕ್ಕೀರೇಶ್ವರ ಕೃಪಾಛತ್ರದಲ್ಲಿ ನಡೆದ

ತಿಳಿಗನ್ನಡ

# ವೀರಶೈವ ಚಂದ್ರಿಕೆ.

## ಆಗಿಯ ಹುಣ್ಣಿವೆ.


| ಸಂಪುಟ | ಮಾದರಿಯ ಸಂಚಿಕೆ. | | ಸಂಚಿಕೆ |
|---|---|---|---|
| ೧ | ವೈಶಾಖ ೧೮೫೬ | ಮೇ ೧೯೩೪ | ೧ |


ಪ್ರಾರಂಭ :- ಶ್ರೀ ಬಸವಜಯಂತಿ ವರ್ಧಂತ್ಯುತ್ಸವ

ಹರತನ್ನ ಭಕ್ತರ | ತಿರಿವಂತೆ ಮಾಡುವ |
ವರೆದು ನೋಡುವಾ | ಸುವರ್ಣದ ಚಿನ್ನದಂತೆ ।
ಅರೆದುನೋಡುವನು ಚಂದನದಂತೆ | ಅರಿದು
ನೋಡುವನು ಕಬ್ಬಿನಕೋಲಿನಂತೆ । ಬೆದರದೆ ಬೆಚ್ಚದೆ
ಇದ್ದೊಡೆ | ಕರೆದೆತ್ತಿಕೊಂಬ ನಮ್ಮ ರಾಮನಾಥಾ ||೧||


ಸಂಪಾದಕರು:—

ಆಲೂರ ಮುರಿಗೇಂದ್ರ ಶೆಟ್ಟರು, ಶಿರಹಟ್ಟಿ.



ವಾರ್ಷಿಕ ಚಂದಾ ಅಂಚೇ ವೆಚ್ಚ ಸೇರಿ ೧—೧೧—೦.

ಸ್ಥಳದವರಿಗೆ ೧—೮—೦. ಬಿಡಿ ಸಂಚಿಕೆ ೦—೩—೦

ಇದನ್ನು ಗದಗ-ರಸಿಕರಂಜನಿ ಮುದ್ರಾಲಯದಲ್ಲಿ ಮುದ್ರಿಸಿ
ವೀರಶೈವ ಚಂದ್ರಿಕೆಯ ಆಫೀಸಿನಲ್ಲಿ ಪ್ರಸಿದ್ಧ ಪಡಿಸಿತು.

# ವಿಷಯಾನುಕ್ರಮಣಿಕೆ,





## — ವೀರಶೈವ ಚಂದ್ರಿಕೆ. —

ಈ ಮಾಸಪತ್ರಿಕೆಯು

ಪ್ರತಿ ಪೌರ್ಣಿಮೆಯಲ್ಲಿ ಪ್ರಕಟವಾಗುವದು



ನೈತಿಕ, ಧಾರ್ಮಿಕ, ಸಾಮಾಜಿಕ, ಐತಿಹಾಸಿಕ ಮೊದಲಾದ ವಿಷಯುಗಳನ್ನೊಳಗೊಂಡು ಕನ್ನಡ ಭಾಷೆಯ ಶೇವೆಗೈಯ್ಯುವ ಈ ಪತ್ರಿಕೆಗೆ ಸರ್ವ ಮಹನೀಯರು ಸ್ವಹಸ್ತ-ಪರಹಸ್ತಗಳಿಂದ ಸಹಾಯ ಮಾಡಬೇಕು.

ಸರ್ವರಿಗೂ ಸುಲಭಸಾಧ್ಯವಾಗುವಂತೆ ವಾರ್ಷಿಕ ಚಂದಾ ರೂ. ೧—೮—೦ ಇಟ್ಟಿರುವದು. ಪರಸ್ಥಳದವರಿಗೆ ಅಂಚೆವೆಚ್ಚ [illegible]



ಜಾಹೀರಾತಿನ ದ[illegible] ಸಮಕ್ಷಮ

ಅಥವಾ ಪತ್ರದ್ವಾರ ಠರಾಯಿಸಿಕೊಳ್ಳಬೇಕು

ಸಿರಿಗನ್ನಡಂಗೆಲ್ಗೆ.

# ವೀರಶೈವ ಚಂದ್ರಿಕೆ.

ಬಯಲುಮೂರ್ತಿಯಾಗಿನಿಂದನೊಬ್ಬ ಶರಣ. ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ. ಆತನ ಶಾಂತಿಸೈರಣೆಯಿಂದ ಹುಟ್ಟಿದಾತ ವಿಷ್ಣು. ಆತನ ಕೋಪಕ್ರೋಧದಿಂದ ಹುಟ್ಟಿದಾತ ರುದ್ರ. ಈ ಮೂರು ಸೀಶವಂತಿರಲಿ. ಆ ಶರಣನನರಿದು ಶರಣೆನುತಿರ್ದೆನು ಕೂಡಲ ಸಂಗಮದೇವಾ.

ಶ್ರೀ ಬಸವೇಶ್ವರ.

| ಸಂಪುಟ ೧ | ಶ್ರೀಮನೃಪಶಾಲಿವಾಹನ ಶಕೆ ೧೮೫೬<br>ಆಗಿಯು ಹುಣ್ಣಿವೆ. | ಸಂಚಿಕೆ ೧ |
| --- | --- | --- |

## ಮಂಗಳಾಚರಣಂ.

೧ ಭಾ. ಷ.

ಹರನೆ ಗಂಗಾಧರನೆ ನಂದೀ।
ಶ್ವರನೆ ವೇದಸ್ತುತಿಗಳಿಗಗೋ।
ಚರನೆ ಶ್ರೀ ಶಂಕರನೆ ಶಿವನೆ ಶಶಾಂಕಶೇಖರನೇ ॥
ಪರಮ ಮಹಿಮನೆ ಪಾರ್ವತೀಶನೆ।
ಶರಣರಂಮನದಾಸೆಪೂರಿಸಿ।
ಪೊರೆವ ದೇವನು ನೀನೆ ನಿನ್ನಂ ನಮಿಸಿ ಬೇಡುವೆನು ॥

೨ ಕಂದ

ಶ್ರೀ ಮತ್ಕರ್ಪೂರಾಂಗಂ । ವೈಮೆವೆರದಪಾರ್ವತೀಶನಜ।
ಚಯಭಂಗಂ। ಕ್ಷೇಮ-ದಯಾಗುಣಸಂಗಂ। ಪ್ರೇಮದೆ ಪೊರೆ
ಗೆಮ್ಮನೆಯ್ದೆ ಶ್ರೀ ಶಿವಲಿಂಗಂ ॥

೩ ಭಾ. ಷ.

ಧಾರವಾಡದ ಜಿಲ್ಹೆಯಂತಾಂ।
[illegible]

ಸಿಹೆನು ಮತ್ತರ್ಪಿಪೆನುಕೊಂಡುರೆಕರುಣಸೈನತರೇ ॥
ವಿಹಿತಸುಖಧನಸಂತತಿಗಳೀ |
ಯಿಹಸುಖವನಾಸುಗತಿಯನ್ನಳ |
ಸಿಹರು ಭಜಿಸಿರಿ ಶ್ರೀಫಕೀರಸ್ವಾಮಿಗಳನೊಲಿದು ||

**ಕಂದ**

ಶ್ರೀ ಶಿವಹೃತ್ಸುಖಚಯವಾ |
ರಾಶಿಶಶಾಂಕೆ ಭಯಹಂತ್ರಿ ಗೌರಿ ಮೃಡಾಣೀ ||
ಆಸೆಯ ಪೂರಿಸಿದೆಮ್ಮಂ |
ತೋಷಿಸುವರದೆ ಜಗದಂಬೆ ನೀಂ ಶರ್ವಾಣೀ ||

ತಮ್ಮ ವಿಧೇಯನು,
**ಶ್ರೀ ಲಕ್ಷ್ಮೇಶ್ವರ ಪುರದ ಶಿವಾನಂದ ದೀಕ್ಷಿತ**
**ವಾಜಿಪೆ ಮನು ಹಾವೇರಿ.**

# ಆತ್ಮನಿವೇದನೆ.

**ಪ್ರಿಯ ಬಾಂಧವರೇ, ಹಾಗು ಭಗಿನಿಯರೇ !**

ಲೋಕದಲ್ಲಿ ಸಾಂಪ್ರತಕ್ಕೆ ಎಲ್ಲೆಲ್ಲಿಯೂ ಧರ್ಮಗ್ಲಾನಿಯ ಸೊಲ್ಲು ಕೇಳಬರುತ್ತಲಿದೆ. ಲೋಕಜನಗಳು ಭೌತಿಕಶಾಸ್ತ್ರವನ್ನೇ ಹೆಚ್ಚಾಗಿ ಅಭ್ಯಾಸಿಸಿ ತಮ್ಮ ಸೌಖ್ಯ-ಸೋಪಾನಗಳನ್ನು ಹೆಚ್ಚಿಸುತ್ತಿರುವರಲ್ಲದೆ, ಆಧ್ಯಾತ್ಮಕ ಶಾಸ್ತ್ರದಕಡೆಗೆ ಹೊರಳಿಕೂಡಾ ನೋಡರು. ಜಗತ್ತಿನಲ್ಲಿ ಜನ್ಮವೆತ್ತಿಬಂದು ಜಗದೊಡೆಯನಾದ ಆ ಪರಶಿವನ ವಿಷಯವಾಗಿ ವಿಚಾರಮಾಡದ ಮಾನವನನ್ನು ತುಂಬಾ ಕೃತಘ್ನನೆಂದು ಹೇಳಬಹುದು. ಬುದ್ಧಿಯೆಂಬ ಸಾಧನವನ್ನು ದೊರೆಕಿಸಿಕೊಂಡು ಪರಶಿವನ ಜ್ಞಾನವನ್ನು ಮಾಡಿಕೊಳ್ಳದಿದ್ದರೆ ಪಶುವಿಗಿಂತ ಇವನೇಕೆ ಹೆಚ್ಚು ಎಂಬದೊಂದು ಪ್ರಶ್ನೆಯು ಉದ್ಭವಿಸುವದು. ಆದ್ದರಿಂದ ಪ್ರತಿಯೊಬ್ಬನು ತನ್ನ ಪ್ರಪಂಚದಲ್ಲಿ ಬಂಧನದಲ್ಲಿದ್ದು ಕೂಡ ಪರಶಿವನ ಸೇವೆಗೈದು ತನ್ಮೂಲಕ ಆ ಬಂಧನವನ್ನು ಕಡಿದೊಗೆಯಲು ಸಾಧ್ಯವಿದೆ. ಈ ವಿಚಾರವನ್ನೇ ಮುಂದಿರಿಸಿಕೊಂಡು ನಾವು

" ವೀರಶೈವ ಚಂದ್ರಿಕೆ " ಎಂಬ ಮಾಸಪತ್ರಿಕೆಯನ್ನು ಹೊರಡಿಸಲುದ್ಯುಕ್ತ ರಾದೆವು. ನಮ್ಮ ಉತ್ಸಾಹದ ಉತ್ತೇಜನಾರ್ಥವಾಗಿಯೋ ಅಥವಾ ನಮ್ಮೆಲ್ಲರ ಸುದೈವಕ್ಕಾಗಿಯೋ ನಮ್ಮ ಮಿತ್ರಮಂಡಳದಲ್ಲಿ ಈ ವಿಚಾರವು ಸ್ಥಿರವಾಗುತ್ತಿರುವಾಗಲೇ ಮುಂದೆ ಸ್ವಲ್ಪ ದಿನಗಳಲ್ಲಿಯೇ ವೀರಶೈವಮತೋದ್ಧಾರಕರೂ ಮಹಾತ್ಮರೂ ಆದ ಶ್ರೀ ಬಸವೇಶ್ವರರ ವರ್ಧ್ಯಂತ್ಯುತ್ಸವವು ಬರಲಿಕ್ಕಿತ್ತು. ಅದುಕಾರಣ ಅಂತಹ ಸುದಿನವನ್ನೇ ಎದುರುನೋಡುತ್ತಿದ್ದ ನಾವುಗಳು ನಮ್ಮ ಮಾಸಿಕವನ್ನು ಅದೇ ದಿನದಿಂದ ಪ್ರಾರಂಭಿಸುವದನ್ನು ನಿಶ್ಚಯಿಸಿದೆವು.

ಇತ್ತ ನಮ್ಮ ಮಾಸಿಕಕ್ಕಾಗಿ ಲೇಖನಗಳನ್ನು ಬೇಡಿಕೊಂಡ ಸದ್ಗೃಹಸ್ಥರಿಂದ ಪತ್ರಗಳು ಬಂದವು. ಅವರಲ್ಲಿ ಪ್ರಸಿದ್ಧ ಕವಿಗಳಾದ ಶ್ರೀ. ವೇ. ಶಿವಾನಂದ ವಾಜಿಪೇಯರ ವ ಕರ್ನಾಟಕ ವಿದ್ಯಾವಿನೋದ ಎಂಬ ಬಿರುದುಳ್ಳ ಶ್ರೀ. ಗೋ. ಹ. ಹೊಸೂರ ಇವರು ಪರಸ್ಥಳದವರು. ಹಾಗೆಯೇ ಸ್ಥಳೀಯರಾದ ಶ್ರೀ. ರಾಮರಾವ ಬಾಲೇಹೊಸೂರ, ಶ್ರೀ. ವೇ. ಗೋ. ಫಡಣೀಸರವರು ನಮ್ಮ ಮಾಸಿಕಕ್ಕೆ ಲೇಖನಗಳನ್ನು ಒದಗಿಸಿಕೊಡಲು ಒಪ್ಪಿಗೆಯನ್ನಿತ್ತರು.

ಸಾಮಾನ್ಯವಾಗಿ ನಾವು ನಮ್ಮ ಮಾಸಿಕದಲ್ಲಿ ಧಾರ್ಮಿಕ, ಐತಿಹಾಸಿಕ, ಸಾಮಾಜಿಕ ವಿಷಯಗಳನ್ನೊಡಗೊಂಡ ಲೇಖನಗಳನ್ನು ಪ್ರಕಟಿಸುತ್ತ ಹೋಗುತ್ತೇವೆ. ಆದಷ್ಟು ಹೆಚ್ಚು ಜನರು ನಮ್ಮ ಮಾಸಿಕವನ್ನು ಓದಲೆಂಬ ಅಭಿಲಾಷೆಯಿಂದ ಚಂದಾದರವನ್ನಾದರೂ ತೀರ ಕಡಿಮೆ ಅಂದರೆ ದೀಡರೂಪಾಯಿಮಾತ್ರ ಇಟ್ಟಿರುವೆವು.

ಇಂತು ತಾಯಿನಾಡಿನ ಸೇವೆ ಗೈಯ್ಯುವ ಸಾಹಸವನ್ನು ಕೈಕೊಂಡಿರುವ ನಮ್ಮಗಳಿಗೆ ಕನ್ನಡ ಬಾಂಧವರಾದ ತಾವುಗಳು ಉದಾರಹಸ್ತದಿಂದ ಸಹಾಯ್ಯವನ್ನೀಯಲು ದಯಾಘನನಾದ ಶ್ರೀ ಫಕ್ಕೀರೇಶ್ವರನ ಅಂತರ್ಯಾಮದಲ್ಲಿ ಅಡಗಿರುವ ಆ ಪರಶಿವನು ತಮ್ಮಗಳಿಗೆ ಸದ್ಬುದ್ಧಿಯನ್ನೀಯಲೆಂದು ಅನನ್ಯಭಾವದಿಂದ ಬೇಡುವೆವು.

ಕನ್ನಡ ಬಾಂಧವರ ಅಡಿಯಾಳು,
**ಹು. ರಾ. ಅಗ್ನಿಹೋತ್ರಿ ಶಿರಹಟ್ಟಿ.**



# ಕನ್ನಡ ಸಾಹಿತ್ಯದಲ್ಲಿ ವೀರಶೈವರ ಮಹತಿ.

ಲೇಖಕರು :— ಬಾಳೇಹೊಸೂರ ರಾಮರಾಯ, ಶಿರಹಟ್ಟಿ.

ಕರ್ನಾಟಕವು ಬಹುತರ ಮತಗಳ ಸ್ಥಾಪನಾಚಾರ್ಯರ ಜನ್ಮಭೂಮಿಯಾಗಿದೆಯೆಂದೆನ್ನುವದಕ್ಕೆ ಆವ ಸಂದೇಹವೂ ಇಲ್ಲ. ಮೊಟ್ಟ ಮೊದಲು ಆರ್ಯರು ದಕ್ಷಿಣದಲ್ಲಿ ಆಗಮಿಸಿದಾಗಲೇ ವೇದಾಂತ ( ವೇದಪ್ರಾಮಾಣ್ಯವಾದ ) ಮತದ ಪ್ರಾಬಲ್ಯವನ್ನುಂಟುಮಾಡಿದರು. ಆ ಬಳಿಕ ಉತ್ತರದಿಂದ ಬಂದ ಜೈನರು ( ಕ್ರಿ. ಶ. ೩ ನೇ ಶತಮಾನ ) ಕರ್ನಾಟಕದಲ್ಲಿ ಬೇರೂರಿ ನಿಂತರು. ಮತ್ತು ವೈದಿಕ ಮತದಲ್ಲಿ ಹೇಳಿದ ಕರ್ಮಮಾರ್ಗವು ಜನಸಾಮಾನ್ಯರಿಗೆ ಸುಲಭವಾದುದಲ್ಲವೆಂಬ ದೊಂಬೆಯನ್ನೆಬ್ಬಿಸಿ ತಮ್ಮ ಮತವನ್ನು ಸ್ಥಾಪಿಸಿದರು. ವೈದಿಕ ಹಾಗೂ ಜೈನ ಮತಗಳಲ್ಲಿ ಭೇದಗಳಿದ್ದರೂ, ಆ ಕಾಲದ ಜನರಲ್ಲಿ ಶೀಲ ಸೌಜನ್ಯಗಳು ಹೆಚ್ಚಿದವು. ಕನ್ನಡ ನಾಡಿನ ಸಂಸ್ಕೃತಿಯು ಮುಂದರಿಯಿತು. ಕರ್ನಾಟಕ ರಾಷ್ಟ್ರದ ಅನೇಕ ಅಂಗಗಳು ಭರದಿಂದ ಬೆಳೆದವು. ಒಟ್ಟಾರೆ ಜೈನರು ಕನ್ನಡ ನಾಡಿಗೊಂದು ತರಹದ ಅತಿ ಮಹತ್ತರವಾದ ಉಪಕಾರ ಮಾಡಿದರೆಂಬುದಕ್ಕೆ ಸಂಶಯವಿಲ್ಲ.

ಮುಂದೆ ಹನ್ನೆರಡನೇ ಶತಮಾನದಲ್ಲಿ ಭಕ್ತಿ ಹಾಗೂ ಸಾತ್ವಿಕ ಜೀವನ ಇವೆರಡು ಸಾಧನೆಗಳೇ ಮಾನವನ ಆತ್ಮೋದ್ಧಾರದ ಕಾರ್ಯವನ್ನು ಮಾಡಬಲ್ಲವು ಎಂಬೀ ಮತವನ್ನು ಮುಂದಿಟ್ಟುಕೊಂಡು ಕೆಲ ಜನ ಆರಾಧ್ಯ ಬ್ರಾಹ್ಮಣರು ವೀರಶೈವ ಮತವನ್ನು ಸ್ಥಾಪಿಸಲು ಟೊಂಕಕಟ್ಟಿದರು. ಅವರಲ್ಲಿ ಬಹಳವಾಗಿ ಪ್ರಚೀತಿಯನ್ನು ಪಡೆದವರೆಂದರೆ ಶ್ರೀ ಬಸವೇಶ್ವರರು. ಇವರು ವೈದಿಕ ಮತದ ಕರ್ಮಮಾರ್ಗದಲ್ಲಿ ಹೇಳಿರುವ ಅನೇಕ ವಿಧಿಗಳು ಶುಷ್ಕವಾದವುಗಳೆಂದು ಅಲ್ಲಗಳೆದರು. ಲಿಂಗಧಾರಣೆ ಹಾಗೂ ಲಿಂಗಾರಾಧನೆ ಮುಂತಾಗಿ ತಾವು ಪ್ರಸಾರಮಾಡುವ ವೀರಶೈವ ಮತಕ್ಕೆ ಆಗಮಗಳನ್ನು ಆಧಾರವಾಗಿಟ್ಟುಕೊಂಡರು. ಅವರ ಆ ಮತದಲ್ಲಿ ಕುಲಜಾತಿ, ಉಚ್ಚ, ನೀಚ, ಹೆಂಣು ಗಂಡು, ಎಂಬ ಭೇಧವಿರದೆ ಎಲ್ಲರಿಗೂ ಸ್ವತಂತ್ರವಾಗಿ ಲಿಂಗಧಾರಣೆ ಹಾಗೂ ಲಿಂಗಾರಾಧನೆಯ ಮಾರ್ಗವು ತೆರದಿಡಲ್ಪಟ್ಟಿತು. ಆ ಕಾಲದಲ್ಲಿನ ವೈದಿಕ ಮತಕ್ಕೆ, ಬಸವೇಶ್ವರರಿಂದ ಸ್ಥಾಪಿತವಾದ ವೀರ

ಶೈವ ಮತವು ಬಹಳವಾಗಿ ಬಾಧೆಯುಂಟಾಯಿತು. ಭ್ರಾತೃಭಾವ, ಸತ್ಯತೆ, ಪ್ರಾಮಾಣಿಕತನ ಇವೇ ಮೊದಲಾದ ಉತ್ತಮಗುಣಗಳ ಉಗಮವೇ ವೀರಶೈವ ಮತದ ತತ್ವಗಳಲ್ಲಿ ಅಡಕವಾದ ಮಹತ್ತರವಾದ ಪ್ರಮೇಯಗಳು ಹಿಂದುಗಳಾದ ಅಂತ್ಯಜರಲ್ಲಿ ರೂಢವಾಗಿರುವ ಧರ್ಮದ ಮೂಢ ಹಾಗೂ, ಕ್ರೂರವಾದ ಆಚರಣೆಗಳನ್ನು ನಿರ್ಮೂಲ ಮಾಡುವವರಲ್ಲಿಯೂ, ಮತ್ತು ಅವರಲ್ಲಿ ಸತ್ಯತೆ ಪ್ರಾಮಾಣಿಕತನ ಮುಂತಾಗಿ ಸದ್ಗುಣಗಳನ್ನು ಹುಟ್ಟಿಸಿ ಅವರ ಜೀವನವನ್ನು ಪರಿಶುದ್ಧಗೊಳಿಸಿದ್ದರ ಶ್ರೇಯವು ವೀರಶೈವ ಮತಕ್ಕಲ್ಲದೆ ಬೇರೆ ಆವ ಮತಕ್ಕೂ ಇಲ್ಲ. ಈ ಮತದ ತತ್ವಗಳು, ಸಾಮಾನ್ಯಜನರ ಭಾಷೆಯಲ್ಲಿ ಅತಿ ಸುಲಭವಾದ ಕನ್ನಡ ನುಡಿಯಲ್ಲಿ ಹೇಳಲ್ಪಟ್ಟವು. ಅದು ಕಾರಣ. ಆ ಕಾಲಕ್ಕೆ ಕನ್ನಡ ಸಾಹಿತ್ಯವು ಬೆಳೆವುದಕ್ಕೆ ಒಳ್ಳೇ ಅವಕಾಶವು ದೊರೆಯಿತು. ಈ ಮುಂದೆ ಅದೇ ವಿಷಯವಾಗಿ ವಿವೇಚನೆ ಮಾಡುವದು ಇಂದಿನ ನಮ್ಮ ಲೇಖನದ ಗುರಿಯಾಗುವದರಿಂದ ಇಂತೀ ಉಪೋದ್ಘಾತದ ಅವಶ್ಯಕತೆಯುಂಟಾಯಿತು.

## ಬಸವೇಶ್ವರರು.

( ಪೂರ್ವೇತಿಹಾಸ ) ಬಸವೇಶ್ವರರು ಹನ್ನೆರಡನೆ ಶತಮಾನಕ್ಕೆ ಸೇರಿದವರು. ಆರಾಧ್ಯ ಬ್ರಾಹ್ಮಣ ಕುಲದಲ್ಲಿ ಜನಿಸಿದವರು. ಕರ್ನಾಟಕಲ್ಲಿ ಆಳಿದ ಕುಲಚುರ್ಯರ ಬಿಜ್ಜಳ ರಾಜನಲ್ಲಿ ಮಂತ್ರಿಯಾಗಿದ್ದ ಬಲದೇವನ ಅಳಿಯಂದಿರು. ಬಿಜ್ಜಳರಾಜನು ಬಸವೇಶ್ವರರ ತಂಗಿಯೊಡನೆ ಮದಿವೆ ಮಾಡಿಕೊಂಡನು. ಅದು ಕಾರಣ ಬಸವೇಶ್ವರರನ್ನು ಅಮಾತ್ಯನನ್ನಾಗಿ ಮಾಡಿದರು. ಬಿಜ್ಜಳನಿಂದ ಲಭಿಸಿದ ಈ ರಾಜಸತ್ತೆಯು ಬಸವೇಶ್ವರರಿಗೆ ಪ್ರಿಯವಾದ ವೀರಶೈವ ಮತ ಪ್ರಸಾರಣೆಯ ಕಾರ್ಯಕ್ಕೆ ಬಹಳವಾಗಿ ಅನುಕೂಲವಾಯಿತು. ಮುಂದೆ ಕಾರಣಾಂತರದಿಂದ ಬಿಜ್ಜಳನಿಗೂ ಬಸವೇಶ್ವರರಿಗೂ ವೈಮನಸ್ಯವು ಉಂಟಾದಾಗ್ಯೂ ಮತೋದ್ಧಾರದ ಕಾರ್ಯಕ್ಕೆ ವ್ಯತ್ಯಾಯವು ಬಾರದಷ್ಟು ಲೋಕಮತದ ಬೆಂಬಲವು ಬಸವೇಶ್ವರರಿಗಿತ್ತು. ಅದು ಕಾರಣ ಅವರು ಮುಂದೆ ವೀರಶೈವ ಮತ ಪ್ರಸಾರಣೆಯ ಕಾರ್ಯದಲ್ಲಿ ತಮ್ಮ ತನು ಮನ ಧನಗಳನ್ನು ಅರ್ಪಿಸಲು ಸಿದ್ಧರಾದರು. ಸ್ವಲ್ಪಾವಧಿಯಲ್ಲಿಯೇ ಕರ್ನಾಟಕ ಹಾಗೂ ಆಂಧ್ರ ಮುಂತಾದ ನಾಡುಗಳಲ್ಲಿ ವೀರಶೈವ ಮತವು ಅತಿಶಯವಾಗಿ ಪ್ರಬಲಿಸಿತು.

ಬಸವೇಶ್ವರರು ೮ ವರ್ಷದವರಿರುವಾಗ ಅವರ ತಂದೆಯು ವೈಧಿಕ ಧರ್ಮಕ್ಕೆನುಗುಣವಾಗಿ, ಮನೆಯಲ್ಲಿ ಮೌಂಜೀಬಂಧನ ವಿಧಿಯ ಪ್ರಸ್ತಾಪವನ್ನು ತೆಗೆಯಲು ಬಸವೇಶ್ವರರು ಆ ಬಗ್ಗೆ " ಜನಕ ಕೇಳ್ ಶಿವ ದೀಕ್ಷೆಯಿಲ್ಲದ ಘನಪೊಲೆಸ್ನಂ ಮುಂಜ-

ಗಟ್ಟಪ | ಮನವಿದೆಂತಾಯ್ತೀಗ ನಿನಗವಿವೇಕಿಯುಂದದಲಿ। ಜನಸಿದಾಗಳೆ ಸಂಗ ಮೇಶ್ವರ | ನೆನಗೆ ಸದ್ಗುರುವಾಗಿ ಬೋಧಿಸಿ | ವಿನುತ ಶೈವಾಚಾರ ಮಾರ್ಗದೊಳಿರಿಸಿ ಸಲುಹಿದನು || ಸಾರಸಂಸಾರ ದಿಜತ್ವವ | ಪಾರಪತಿತವಲಾ ಸದುಮುಳಾ। ಚಾರಸದ್ಗುರುವಿನ ಕರಾಬ್ಜದಿ ಜನ್ಮವಾದಂಗೆ | ಜಾತಿಗೋತ್ರಾತೀತ ಸದ್ಗುರು | ಜಾತನಂ ಬಹುಜಾತ ಗೋತ್ರಸ | ಸನೇತ ದುಷ್ಕ್ರಿಯವಾಶ್ರಯನ ಸೀನೆಂತು ಮಾಡಿದ ॥ ಎಂಬದಾಗಿ ಹೇಳಿ ತಮಗೆ ಡಾಂಭಿಕವಾದ ಮೌಂಜಿಬಂಧನ ಸಂಸ್ಕಾರವು ಬೇಡವೇ ಬೇಡೆಂದು ಸಾರಿ ಹೇಳಿದರು.

ಬಸವೇಶ್ವರರು ಉಜ್ವಲವಾದ ಶಿವಭಕ್ತರಾಗಿದ್ದರು. ನಂದೀಶ್ವರನ ಅವತಾರವೇ ಅವರಾಗಿದ್ದರೆಂದು ವೀರಶೈವ ಗ್ರಂಥಗಳಲ್ಲಿ ಹೇಳಿದೆ. ಆದುಕಾರಣ ಲಲ ಪವಾಡಗಳನ್ನು ಮಾಡಿದರೆ-ಬದಾಗಿ ವೀರಶೈವ ಕವಿಗಳು ರಚಿಸಿದ ಬಸವೇಶ್ವರರ ಚರಿತ್ರೆಗಳಿಂದ ಕಂಡುಬರುತ್ತಿದೆ. ಬಸವೇಶ್ವರರು ವೀರಶೈವ ಧರ್ಮದ ವಿಷಯಗಳನ್ನು ತಿಳಿಸಿ ಹೇಳುವ ಅನೇಕ ವಚನಗಳಿಂದ ಕೂಡಿ ಗ್ರಂಥವನ್ನು ರಚಿಸಿದರು. ವಚನಗಳಲ್ಲಿ ಅವರ ಅಂಕಿತರು ಕೂಡಲ ಸಂಗಮದೇವ ಎಂಬದಾಗಿ ಇರುತ್ತದೆ. ಹಾಗೆಯೇ ಅವರು ವೀರಶೈವ ಮತದ ಜನಗಳಿಗೆ ಅವಶ್ಯವಾದ ಷಟ್‌ಸ್ಥಲವಚನ, ಶಿಖಾರತ್ನ ವಚನ, ಕಾಲಜ್ಞಾನ ವಚನ ಮಂತ್ರಗೌಪ್ಯ ಮುಂತಾಗಿ ಗ್ರಂಥಗಳನ್ನು ತಿಳಿಗನ್ನಡದ ಮಧುರ ಶಬ್ದಗಳಲ್ಲಿ ಬರೆದರು.

ಅಧ್ಯಾತ್ಮಿಕ ವಿಚಾರದಲ್ಲಿ ಸಂಸಾರವು ಸುಖದಾಯಕವಲ್ಲಾ. ಆದರೂ ಮನುಷ್ಯನಿಗೆ ಸುಖವು ಮಾತ್ರ ಬೇಕು. ಆವದೇಶ ಕಾಲಗಳಲ್ಲಿಯೂ, ಮಾನವನ ಬೇರೆ ಬೇರೆ ಜೀವಿತಾವಸ್ಥೆಯಲ್ಲಿಯೂ ಬೇರೆ ಬೇರೆಯಾಗಿ ಪರಿಣಮಿಸುವ ಸುಖವು ನಿಜವಾದ ಸುಖವಲ್ಲ. ನೈಜಸುಖವು ದೇಶ, ಕಾಲ, ಅವಸ್ಥೆಗಳ ಎಲ್ಲೆಯನ್ನು ಮೀರಿದ್ದು. ಎಂಬ ಇದೇ ತತ್ವವನ್ನು ಲೋಕ ಜನಗಳಿ ಬೋಧಿಸಿ ಲೋಕೋದ್ಧಾರದ ಕಾರ್ಯವನ್ನು ಗೈದ ಬಸವೇಶ್ವರರ ವಚನಗಳಲ್ಲಿಯ ವಿಚಾರಗಳನ್ನಷ್ಟು ಅವಲೋಕಿಸಿರಿ.

“ಕಪ್ಪೆ ಸರ್ಪನ ನೆರಳಲ್ಲಿ ಇರ್ಪಂತೆ ಸಂಸಾರ.” “ಶೂಲದ ಮೇಲಣ ಭೋಗ ಸಂಸಾರ ಏನಾದೊಡೇನೋ”

“ಸಂಸಾರವೆಂಬ ಸರ್ಪ ಮುಟ್ಟಲು, ಪಂಚೇಂದ್ರಿಯದ ವಿಷವೆಂಬ ವಿಷದಿಂದ ಮನುಷ್ಯರು ಮುಂದುಗೆಟ್ಟ.”

ಎಂಬ ಮೇಲಿನ ವಿಚಾರಗಳಿಂದ ಸಂಸಾರದ ನಿಜವಾದ ಸ್ವರೂಪವು ಎಂತಹದಿದೆಯೆಂಬದನ್ನು ತಿಳಿಯಬಹುದು. ಜ್ಞಾನಿಗಳಾದ ಬಸವೇಶ್ವರರು ಸಂಸಾರದಲ್ಲಿ

ತೋರಿಯಡಗುವ ಕ್ಷಣಭಂಗುರವಾದ ಸುಖವನ್ನು ಎಷ್ಟು ತೀವ್ರವಾಗಿ ನಿಷೇಧಿಸಿರುವರು ನೋಡಿರಿ.

“ ಅತ್ತಲತ್ತ ಹೋಗದಂತೆ ಹೆಳವನ ಮಾಡೈ। ಸುತ್ತುವಳಿದು ನೋಡದಂತೆ ಅಂಧಕನ ಮಾಡೈ | ಮತ್ತೊಂದು ಕೇಳದಂತೆ ಕಿವುಡನ ಮಾಡೈ ತಂದೆ | ನಿಮ್ಮ ಶರಣರ ಪಾದವಲ್ಲದೆ ಇತರ ವಿಷಯಕ್ಕೆಳಸದಂತೆ ಇರಿಸು ” | ಎಂಬ ಅವರ ವಚನಗಳಿಂದ ಬಸವೇಶ್ವರರು ಎಂತಹ ಆಧ್ಯಾತ್ಮ ಜೀವಿಗಳಾಗಿದ್ದರೆಂಬದೂ, ಆತ್ಮಶುದ್ಧಿಗಾಗಿ ಎಷ್ಟು ಹೆಣಗುತ್ತಿದ್ದರೆಂಬದೂ ಸ್ಪಷ್ಟವಾಗಿ ಕಂಡುಬರುತ್ತದೆ.

“ ಓನಮಃ ಶಿವಾಯ ವೆಂಬುದೇ ಮಂತ್ರ| ಓನಮಃ ಶಿವಾಯ ಎಂಬುದೇ ತಂತ್ರ| ಎನ್ನ ಭವ ಬಂಧನದ ದುರಿತಂಗಳಗೆಲುವೊಡೆ ಓನಮಃ ಶಿವಾಯ ಶಿವ ಶರಣೆಂದರೆ ಸಾಲದೆ ||” ಈ ವಚನಗಳಿಂದ ಅವರು ಭಗವಂತನ ನಾಮದ ಮಹಿಮೆಯನ್ನು ಎಷ್ಟು ಚನ್ನಾಗಿ ತಿಳಿದುಕೊಂಡಿದ್ದರೆಂಬ ಸಂಗತಿಯು ವ್ಯಕ್ತವಾಗುತ್ತದೆ.

“ ಶರಣಾಗತಿ ಹಿರಿದು, ತನು ನಿನ್ನದು ಮನ ನಿನ್ನದು ಧನ ನಿನ್ನದು ”ಎಂಬ ಅವರ ಈ ವಚನವು, ದೇವನ ಸ್ವಾತಂತ್ರ ಮಾನವನು ಅಸ್ವತಂತ್ರ ಎಂಬ ವೇದಾಂತ ತತ್ವದ ತಿರುಳನ್ನು ಹೊರಪಡಿಸುತ್ತದೆ. ಬಸವಂಣನವರ ಈ ವಚನ ಬೋಧೆಯಿಂದ, ಧ್ಯಾನವೂ ಭಕ್ತಿಯೂ, ದೇವನ ಸೇವೆಯೂ ಕೆಲವರಿಗೆ ಸೇರಿದ ಅಧಿಕಾರವಲ್ಲ. ಸಾಮಾನ್ಯರಿಗೂ ಆ ವಿಷಯದಲ್ಲಿ ಸಮಾನವಾದ ಅಧಿಕಾರ ಇದೆ ಎಂಬ ಸಂಗತಿಯು ಮನದಟ್ಟಾಯಿತು. ಬೇಕಾದ ಧರ್ಮದವನಾಗಿರಲಿ, ಬೇಕಾದ ಉದ್ಯೋಗವನ್ನು ಮಾಡಲಿ ಅವನು ಆಚರಣ ಶೀಲನಾಗಿದ್ದರೆ ಸಾಕು, ಅವನಿಗೆ ಬಸವೇಶ್ವರರು ವೀರಶೈವ ಮತದ ದೀಕ್ಷೆಯನ್ನು ಕೊಡುವದಕ್ಕೆ ಹಿಂಜರಿಯುತ್ತಿದ್ದಿಲ್ಲ. ಅದುಕಾರಣ ಅವರ ಕಾಲದ ಸಾಮಾನ್ಯರಲ್ಲಿ ಕೂಡ ಅಚಲವಾದ ಭಕ್ತಿ, ಶುದ್ಧವಾದ ಆಚಾರ ಇತ್ತೆಂಬದು!ಕೆಳಗಿನ ಜನಗಳ ಪರಿಚಯ ಮಾಡಿಕೊಂಡಲ್ಲಿ ವಿದಿತವಾಗುವಂತಿದೆ.

ಮಡಿವಾಳ ಮಾಚಯ್ಯಾ, ಸೌಡೆಯ ಪೂರಯ್ಯಾ, ಮಾದಾರ ಚನ್ನಯ್ಯಾ, ತಳವಾರ ಕಾಮಿದೇವ, ಕಿರಾತ ಸಂಗಯ್ಯಾ, ತುರುಗಾಹಿ ರಾಮಣ್ಣಾ, ಹಡಪದ ಅಪ್ಪಣ್ಣಾ. ಈ ಮಹಾಜನಗಳೆಲ್ಲರೂ ಬಸವಂಣನವರ ಶಿಷ್ಯರು. ಮುಂದೆ ಇವರೇ ವಚನಕಾರರಾಗಿ ಕೀರ್ತಿ ಪಡೆದರು. ಮನುಷ್ಯನು ದೊಡ್ಡವನಾಗುವದು ಅವನ ಕೆಲಸದಿಂದ ಮಾತ್ರವಲ್ಲ. ಆದರೆ ಅವನ ಅಂತರಾತ್ಮನ ಪರಿಶುದ್ಧತೆಯಿಂದ ಎಂಬೀ ಸಂಗತಿಯನ್ನು ಬಸವೇಶ್ವರರು ತಮ್ಮ ಕೃತಿಗಳಿಂದ ಲೋಕಕ್ಕೆ ಸಿದ್ಧಮಾಡಿ ತೋರಿಸಿದರು.

ಬಸವಣ್ಣನವರ ಶಿಷ್ಯರಾಗಿದ್ದ ಅನೇಕ ಜನ ಸ್ತ್ರೀಯರು ಕೂಡ ವಚನ ಗ್ರಂಥಗಳನ್ನು ಬರೆದರು. ಅವರಲ್ಲಿ ಕಂತಿ, ಗಂಗಾಂಬಿಕೆ, ಮಹಾದೇವಿಯಕ್ಕ, ಗೊಗ್ಗವ್ವ, ಕೀಕವ್ಮ, ರೇಚವ್ವ ಇವರೇ ವಿಶೇಷವಾದ ಪ್ರಚೀತಿಯನ್ನು ಪಡೆದವರು. ಇದೊಂದೆ ಸಂಗತಿಯಿಂದ, ವೀರಶೈವ ಮತದಲ್ಲಿ ಶಿವಶರಣರು ಸ್ತ್ರೀಯರನ್ನು ಎಷ್ಟು ಮರ್ಯಾದೆಯಿಂದ ಕಂಡಿರುವರೆಂಬ ಸಂಗತಿಯು ಧ್ವನಿತವಾಗುತ್ತದೆ.

ಮೇಲೆ ಕಾಣಿಸಿದ ಭಕ್ತ ಜನಗಳಲ್ಲದೆ ೧೪ ನೇ ಶತಮಾನಕ್ಕೆ ಸೇರಿದ ಭೀಮ ಕವಿಯು ಶ್ರೀ ಬಸವೇಶ್ವರರ ಲೀಲೆಯನ್ನೊಳಗೊಂಡ ಒಂದು ಪುರಾಣವನ್ನು ರಚಿಸಿರುವನು. ಅದು ಪದ್ಯರೂಪದಲ್ಲಿರುವದು. ಅದಕ್ಕೆ ಬಸವ-ಪುರಾಣ ಎಂಬದಾಗಿ ಹೆಸರುಂಟು.

ಇಂತು ಮಹಾಮರಾದ ಶ್ರೀ ಬಸವೇಶ್ವರರು ವೀರಶೈವ ಮತೋದ್ಧಾರದ ಕಾರ್ಯವನ್ನು ಮಾಡುತ್ತಲೇ, ಆತ್ಮೋದ್ಧಾರದ ಮಾರ್ಗವನ್ನು ಕಂಡುಕೊಂಡರು. ಅಲ್ಲದೆ ತಮ್ಮ ಧಾರ್ಮಿಕ ಜೀವನದಲ್ಲಿದ್ದು ಕೂಡ ಕನ್ನಡ ಸಾಹಿತ್ಯ ಸೇವೆಗೈದರು.

( ಮುಂದೆ ಸಾಗುವದು. )



# ಆತ್ಮಾಹುತಿ.

ಲೇಖಕ :— ನೆ. ಗೋ. ಫಡಣೀಸ ಶಿರಹಟ್ಟಿ.

೧

ಭಾರತಾಂತರ್ಗದ ಮಹಾರಾಷ್ಟ್ರ ಸ್ವಾತಂತ್ರ್ಯ ಸೂರ್ಯನ ಉದಯ ಕಾಲ! ಯವನರ ಅನ್ಯಾಯದ ಹಾಗೂ ಅಧರ್ಮದ ರಾಜ್ಯದಾಡಳಿತಕ್ಕೆ ಹಿಂದುಗಳು ಬೆಂದು ಬೆಂಡಾಗಿದ್ದರು. ಈಗ ಅವರ ಹೃದಯಾಕಾಶದಲ್ಲಿ ಜ್ಞಾನಪ್ರಭಾಕರನು ಉದಯನಾಗಿದ್ದನು. ಆಳರಸರ ದಬ್ಬಾಳಿಕೆಗೆ ಬೇಸತ್ತಿದ್ದರಿಂದಲೇ ಅವರ ವಿಚಾರಗಳಲ್ಲಿ ಕ್ರಾಂತಿಯಾಗಿದ್ದಿತು. ಇಂತಹ ಸಮಯದಲ್ಲಿ ದೇವಗಿರಿಯ ಪಶ್ಚಿಮಕ್ಕಿರುವ ಪರ್ವತದ ಮಾರ್ಗದಲ್ಲಿ ಇಬ್ಬರು ಅಶ್ವಾರೋಹಿಗಳಾಗಿ ಒಳ್ಳೇ ವೇಗದಿಂದ ಸಾಗಿದ್ದರು. ಸಾಯಂಕಾಲವಾಗುತ್ತ ಬಂದಿತ್ತು. ಭಗವತೀವಸುಂಧರೆಯು ಪ್ರಭಾಕರನ ಪ್ರಖರವಾದ ಕಿರಣಗಳಿಂದ ಇದೇ ಈಗ ಬಿಡುಗಡೆಯನ್ನು ಹೊಂದಿದ್ದಳು. ಸುಳಿಗಾಳಿಯು ಸುಳಿಯಲಾರಂಭಿಸಿತ್ತು. ಎಲ್ಲೆಡೆಯಲ್ಲಿಯೂ ಶಾಂತತೆಯ ಸಾಮ್ರಾಜ್ಯವು ಪಸರಿಸಿತ್ತು. ಆ ಇಬ್ಬರು ಅಶ್ವಾರೋಹಿಗಳಲ್ಲಿ ಒಬ್ಬಳು ಹದಿನೈದು ವರುಷದ ಬಾಲಿಕೆಯು. ಇದೇ ಈಗ ತಾರುಣ್ಯಮಂದಿರದಲ್ಲಿ ಕಾಲಿಟ್ಟಿದ್ದಳು. ಮೊದಲೇ ಸುಂದರಳು. ಮೇಲೆ ನವಯೌವನದ ಕಾಂತಿಯು. ಕೇಳುವದೇನು? ಲಾವಣ್ಯಪ್ರತಿಭೆಯು ಅವಳ ಮೊಗದಾವರೆಯನ್ನಾವರಿಸಿಕೊಂಡಿತ್ತು. ಎಂತಹ ಪ್ರತಾಪಿಗಳಿರಲಿ, ಎಂತಹ ಧೈರ್ಯಶಾಲಿಗಳಿರಲಿ, ಎಂತಹ ವೀರಶ್ರೇಷ್ಠರೇ ಇರಲಿ ಅವರು ಇವಳ ಸೌಂದರ್ಯಕ್ಕೆ ಮೋಹಿತರಾಗದೆ ಇರುತ್ತಿರಲಿಲ್ಲ. ಇನ್ನೊಬ್ಬನು ಇವಳಿಗಿಂತ ನಾಲ್ಕೈದು ವರುಷಕ್ಕೆ ಹಿರಿಯನು. ಇವನೂ ಬಹು ಸುಂದರನು. ಮೊಗಮೀಶೆಗಳು ಇದೀಗ ಬರುತ್ತಲಿದ್ದವು. ಸ್ವಲ್ಪ ವೇಳೆಯಲ್ಲಿಯೇ ಆ ತರುಣ-ತರುಣಿಯರಿಬ್ಬರು ಜುಳುಜುಳು ಹರಿಯುತ್ತಿರುವ ಹಳ್ಳದ ದಂಡೆಗೆ ಬಂದರು. ಕುದುರೆಗಳಿಂದಿಳಿದು ಅವುಗಳನ್ನು ಒಂದು ವೃಕ್ಷಕ್ಕೆ ಬಂಧಿಸಿ, ಎಳೆಗರಿಕೆಯನ್ನು ತಂದು ಹಾಕಿ ತೃಷಾಬಾಧೆಯ ಪರಿಹಾರಕ್ಕೋಸ್ಕರ ಆ ಪ್ರವಾಹಕ್ಕೆ ಬಂದು, ಜಲಪ್ರಾಶನ

ವನ್ನು ಮಾಡಿ ತುಸು ಹೊತ್ತು ಅವರೀರ್ವರು ಸಮೀಪದಲ್ಲಿರುವ ಬಂಡೆಗಲ್ಲಮೇಲೆ ಕುಳಿತರು. ಯಾರ ಮುಖದಿಂದಲೂ ಶಬ್ದಗಳು ಹೊರಹೊರಡಲಿಲ್ಲ. ಅವರು ಕೇವಲ ತಟಸ್ಥರಾಗಿ ಕುಳಿತಿದ್ದರು. ಕೊನೆಗೆ ಬಾಲಿಕೆಯೇ ಮುಗ್ಧಭಾವವನ್ನು ತೋರಿದು ಮಾತಾಡಿದಳು

‘ ನೀರು ಹೇಗೆ ಸ್ಫಟಿಕದಂತೆ ಸ್ವಚ್ಛವಾಗಿವೆ ನೋಡಿರಿ ? ’

‘ ಕಪಟವಿದ್ಯಾಪ್ರವೀಣರಾದ ಮಾನವರಿಂದ ತುಂಬಿ ತುಳುಕುತ್ತಿರುವ ಈ ಸ್ವಾರ್ಥೀ ಜಗತ್ತಿಗೆ ಈ ಕಲ್ಪನೆಯು ಹೇಗೆ ಬಂದೀತು ? ಗಿರಿಬಾಲೆ! ಪರೋಪಕಾರಕ್ಕಾಗಿ ದೇಹವನ್ನು ಸವೆಸುವ ಮಹಾತ್ಮನಿಗೆ ಪರಮೇಶ್ವರನು ಇಂತಹ ತೇಜವನ್ನೂ ಔದಾರ್ಯದಿಂದ ಕೊಡುವನು. ’ ತರುಣನು ಸಸ್ಮಿತವಾಣಿಯಿಂದ ಬಾಲೆಯ ಮುಖವನ್ನು ನೋಡುತ್ತ ಉತ್ತರವಿತ್ತನು. ಬಾಲಿಕೆಯು ಮತ್ತೆ ಏನನ್ನೋ ಮಾತಾಡುವವಳು ಅಷ್ಟರಲ್ಲಿ ಸಮೀಪದಲ್ಲಿಯೇ ಗೋಮಾತೆಯ ‘ ಅಂಬಾ, ಅಂಬಾ ’ ಎಂಬ ಆರ್ತಧ್ವನಿಯು ಅವರಿಗೆ ಕೇಳಿಸಿತು. ಆ ಆರ್ತಧ್ವನಿಯನ್ನು ಕೇಳಿದಕೂಡಲೇ ತರುಣನ ಅಂತಃಕರಣವು ನೀರಾಯಿತು. ನಿಮಿಷಾರ್ಧದಲ್ಲಿಯೇ ಅವರಿಬ್ಬರು ಅಶ್ವಾರೋಹಿಗಳಾಗಿ ಧ್ವನಿಯು ಕೇಳಬರುವ ದಿಕ್ಕಿನ ಕಡೆಗೆ ವೇಗದಿಂದ ಹೊರಟರು. ಅಲ್ಲಿ ಹೋಗಿ ನೋಡುತ್ತಾರೆ, ಭಯಂಕರ ದೃಶ್ಯವು ಅವರ ಕಣ್ಣಿಗೆ ಬಿತ್ತು. ಮೂರು ನಾಲ್ಕು ಮಂದಿ ಯವನರು ಒಂದು ಆಕಳನ್ನು ಬಂಧಿಸಿ ತಮ್ಮ ಕರಾಲ ಖಡ್ಗಗಳಿಂದ ಆ ಪ್ರಾಣಿಯ ಶಿರಗಡಿಯಲು ಸಿದ್ಧರಾಗಿ ನಿಂತಿದ್ದರು! ಹತ್ತಿರವೇ ದನಗಾಹಿಯು ದೀನಮುದ್ರೆಯುಳ್ಳವನಾಗಿ ಯಾರಾದರೂ ತನ್ನನ್ನು ಈ ಸಂಕಟದಿಂದ ಮುಕ್ತಮಾಡಬಹುದೆ ? ಎಂದು ದಶದಿಕ್ಕುಗಳನ್ನು ಸಾಭಿಲಾಷವೃತ್ತಿಯಿಂದ ನೋಡುತ್ತ ನಿಂತಿದ್ದಾನೆ.

‘ ಹರಾಮಖೋರರೇ! ಹಿಂದುಗಳ ದೇವತಾಸದೃಶ್ಯವಾದ ಗೋವುಗಳು ನಿಮ್ಮ ನಾಲಿಗೆಯ ರುಚಿಗಾಗಿಯೇ ನಿರ್ಮಿಸಲ್ಪಟ್ಟವೆಯೋ ? ’ ಈ ಸಿಂಹಗರ್ಜನೆಯನ್ನು ಕೇಳಿ ಆ ಯವನರು ಹಿಂದಿರುಗಿ ನೋಡುತ್ತಾರೆ, ಓರ್ವ ತರುಣನು ಖಡ್ಗವನ್ನು ಝಳಿಪಿಸುತ್ತ ಹಲ್ಲು ಕಡಿಯುತ್ತ ತರುಣಿಸಮೇತನಾಗಿ ನಿಂತಿದ್ದಾನೆ. ಖಡ್ಗಪಾಣಿಯಾದ ಆ ವೀರನನ್ನು ನೋಡಿದಕೂಡಲೇ ಆ ಯವನರು ಅಂಜಿ ಗೋಮಾತೆಯನ್ನು ಬಿಟ್ಟು ಓಡಿಹೋದರು. ಇದನ್ನು ಕಂಡು ಆ ದನಗಾಹಿ ಬಾಲಕನು ಆನಂದಿತನಾಗಿ ಆ ವೀರನ ಉಪಕಾರವನ್ನು ಸ್ಮರಿಸಿ ಗೃಹಾಭಿಮುಖನಾದನು.

ಇಷ್ಟರಲ್ಲಿಯೇ ಈ ವಿಜಯೀ ವೀರನ ಅಭಿನಂದನಕ್ಕಾಗಿ ದೇಶದಾಸರಾದ ಶ್ರೀ ಸಮರ್ಥ ರಾಮದಾಸರು ಅಕಸ್ಮಾತ್ತಾಗಿ ಅಲ್ಲಿ ಉದಯಿಸಿದರು. ಕೂಡಲೇ

ಆ ತರುಣ-ತರುಣಿಯರು ಅವರಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದರು. ಶ್ರೀ ಸಮರ್ಥರು ಧೀರಗಂಭೀರವಾಣಿಯಿಂದ ಈರ್ವರಿಗೂ ಆಶೀರ್ವಾದವನ್ನು ಕೊಟ್ಟು, ನಕ್ಕರು. ಜ್ಞಾನದೃಷ್ಟಿಯಿಂದ ಎಲ್ಲವನ್ನು ಅವರು ತಿಳಿದಿದ್ದರು. ಅಂತೇ ನಕ್ಕು ಅದೃಶ್ಯರಾಗಿಬಿಟ್ಟರು.

೨.

ಹಿಂದಿನ ಪ್ರಕರಣದಲ್ಲಿ ದರ್ಶನಕೊಟ್ಟ ಲೋಕೋದ್ಧಾರಿಗಳಾದ ಶ್ರೀ ಸಮರ್ಥರನ್ನು ಮಹೇಶನು ( ತರುಣನ ಹೆಸರು ) ಮೇಲಿಂದಮೇಲೆ ಕಾಣಲು ಹೋಗಹತ್ತಿದನು. ಆದ್ದರಿಂದ ಆ ಮಹಾತ್ಮರಲ್ಲಿ ಇವನ ಭಕ್ತಿಯು ಹೆಚ್ಚಾಗತೊಡಗಿತು. ಹಿಂಧೂ ಧರ್ಮವನ್ನು ಅವಿಂಧರಿಂದ ಉಳಿಸಿಕೊಳ್ಳುವದಕ್ಕಾಗಿಯೂ, ಹಿಂದೂ ಯುವತಿಯರ ಶೀಲ-ಲಜ್ಜಾರಕ್ಷಣೆಗಾಗಿಯೂ ಸ್ವಸಂಸಾರವನ್ನು ತೊರೆದು, ವಿಶ್ವ ಸಂಸಾರಿಗಳಾಗಿ-ರಾಷ್ಟ್ರದ ದಾಸರಾಗಿ ಆತ್ಮಾಹುತಿಯನ್ನುಗೈಯ್ಯಲು ಸಿದ್ಧರಾಗುವಂಥ ನರಪುಂಗರನ್ನು ಕೂಡಿಸಲು ಶ್ರೀ ಸಮರ್ಥರು ಸಂಚರಿಸುತ್ತಲಿದ್ದರು. ಆಗಿನ ಕಾಲವು ಇಡೀ ಭರತಖಂಡಕ್ಕೆ ಶುಭಸಂಕ್ರಮಣದ್ದಾಗಿತ್ತು. ಅಂತೆಯೇ ಸಮರ್ಥರಂತಹ ಮಹಾತ್ಮರು ಉದಯಿಸಿದರು. ಶಿವಪ್ರಭು ಹಾಗು ಮಹೇಶರಂತಹ ನರವೀರರು ರಾಷ್ಟ್ರಕ್ಕಾಗಿ ಆತ್ಮತ್ಯಾಗವನ್ನು ಸ್ವಸಂತೋಷದಿಂದ ಮಾಡಲು ಮುಂದುವರೆದು ಮಹಾತ್ಮ ರಾಮದಾಸರು ಹೂಡಿದ ಸತ್ಯಾಗ್ರಹ--ಸಮರದಲ್ಲಿ—ಸ್ವಾತಂತ್ರ್ಯದ ರಣಯಜ್ಞದಲ್ಲಿ ಧುಮ್ಮಿಕ್ಕಲು ಸಿದ್ಧರಾದರು. ಮಹಾತ್ಮರ ಸಂದೇಶವನ್ನು ಭರತಖಂಡಕ್ಕೆ ತಿಳುಹಿಸಲು ಅಗ್ರೇಸರತ್ವವನ್ನು ವಹಿಸಿಕೊಂಡ ದೇದೀಪ್ಯಮಾನನಾದ ಶಿವಪ್ರಭುವಿನ ಭವಾನಿ ಖಡ್ಗಕ್ಕೆ ದಿಲ್ಲೀ ಸಾಮ್ರಾಜ್ಯವು ಥರಥರನೆ ನಡುಗಹತ್ತಿತು ! ಹಿಂದೂ ಸಾಮ್ರಾಜ್ಯದ ಇಂತಹ ಭಾಗ್ಯೋದಯದ ಕಾಲದಲ್ಲಿ ಬಿಸಿರಕ್ತವು ಹೊರಚಿಮ್ಮುವ ಅನೇಕ ಆದರ್ಶ ಹಿಂದೂ ತರುಣರು ಶ್ರೀ ಸಮರ್ಥರ ಪ್ರೇರಣೆಯಿಂದ ಸ್ವಸಂಸಾರವನ್ನು ಕಾಲಿನಿಂದೆಶೆದು, ಸ್ವದೇಶಕ್ಕಾಗಿಯೂ ಸ್ವಧರ್ಮಕ್ಕಾಗಿಯೂ ಸ್ವಾತಂತ್ರ್ಯದ ರಣಕುಂಡದಲ್ಲಿ ಆನಂದದಿಂದ ಧುಮ್ಮಿಕ್ಕಲು ಸಿದ್ಧರಾದರು ! ಇಂತಹ ವೀರರಲ್ಲಿ ಮಹೇಶನೂ ಎಣಿಸಲ್ಪಡತಕ್ಕವನಿದ್ದನು.

೩.

ಮುಂಜಾವಿನ ಸಮಯ ! ಪ್ರಭಾಕರನ ಕೋಮಲ ಕಿರಣಗಳು ಆಶ್ರಮದ ಆಸಮಂತಾತ್ತ ಪ್ರದೇಶದಲ್ಲಿ ಬಿದ್ದು ಎಲ್ಲೆಡೆಯಲ್ಲಿಯೂ ಹೊಂಬಣ್ಣದ ತಳಿಹಾಕಿದಂತೆ ಕಂಗೊಳಿಸುತ್ತಿವೆ. ಮಂದಮಾರುತನು ಪುಷ್ಪಗಳ ತನಿಗಂಧವನ್ನು ಎಲ್ಲೆಡೆಯಲ್ಲಿ

ಬೀರುತ್ತಲಿದ್ದಾನೆ. ಶ್ರೀ ಸಮರ್ಥರು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಎರಳೆ ದೊಗಲಿನಮೇಲೆ ಕುಳಿತಿದ್ದಾರೆ. ಕಲ್ಯಾಣಾದಿ ಶಿಷ್ಯ ಸಮೂಹವೂ ಕುಳಿತಿದೆ. ಆ ಹೊತ್ತಿಗೆ ಸರಿಯಾಗಿ ಮಹೇಶನು ಮಹಾತ್ಮರ ದರ್ಶನಾಪೇಕ್ಷೆಯಾಗಿ ಬಂದನು. ಅವನು ಸಮರ್ಥರ ಸಮ್ಮುಖದಲ್ಲಿ ಅತ್ಯಂತ ನಮ್ರತೆಯಿಂದ ತಲೆಬಾಗಿದನು. ಯಾವತ್ತೂ ಶಿಷ್ಯ-ಸಮೂಹವು ಸ್ತಬ್ಧವಾಯಿತು. 'ಮಹೇಶಾ! ನಿನ್ನಲ್ಲಿ ಒಂದು ವಿಚಾರವನ್ನು ಕೇಳಬೇಕಾಗಿದೆ.' ಸಮರ್ಥರ ಮುಖದಿಂದ ಬರಬರುವದರೊಳಗಾಗಿ ಮಹೇಶನು 'ಪ್ರಭೋ! ಈ ಭಕ್ತನಿಂದ ಅದಾವ ಸೇವೆಯಾಗಬೇಕಾಗಿದೆ. ಹೇಳಿರಿ ಸಿದ್ಧನಿರುವೆನು.'

ಎಂದು ನಯಭಯಭಕ್ತಿಯಿಂದ ನುಡಿದನು. 'ಮಹೇಶಾ! ಹಿಂದೂಧರ್ಮದ ರಕ್ಷಣೆಗಾಗಿ ನಮ್ಮ ಮತದ ದೀಕ್ಷೆಯನ್ನು ಸ್ವೀಕರಿಸುವಿಯಾ? ದೇಶ ಬಾಂಧವರ ಅಜ್ಞಾನವನ್ನು ಹೋಗಲಾಡಿಸಿ ಈಗ ದೇಶಕ್ಕೊದಗಿದ ಆಪತ್ತನ್ನು ದೂರೀಕರಿಸಲು ಶಾಂತಿಸ್ವಾತಂತ್ರ್ಯಕ್ಕಾಗಿ ನೀನು ರಣಕುಂಡದಲ್ಲಿ ಪ್ರಾಣಾರ್ಪಣವನ್ನು ಗೈಯಲು ಸಿದ್ಧನಿರುವಿಯಾ ಹೇಳು?'

'ಪ್ರಭೋ ಇಷ್ಟೊಂದು ಈ ದಾಸಾನುದಾಸನ ಭಾಗ್ಯವಿದ್ದಮೇಲೆ ನಾನೇ ಧನ್ಯತಮನು! ನಾನು ಯಾವ ಸೇವೆ ಮಾಡಬೇಕೆಂಬದನ್ನು ಹೇಳಿರಿ. ಅದು ನನಗೆ ಶಿರಸಾವಂದ್ಯವಿರುವದು.' 'ಮಹೇಶಾ! ವಿಚಾರಮಾಡು; ಒಂದೆರಡುಗಳಿಗೆ ಶಾಂತಮನಸ್ಸಿನಿಂದ ವಿಚಾರಮಾಡು. ಸ್ವಾತಂತ್ರ್ಯದ ರಣ-ಕುಂಡದಲ್ಲಿ ಆತ್ಮ ಬಲಿದಾನಮಾಡಬೇಕಾದರೆ ಸ್ವಸಂಸಾರದಮೇಲೆ ನೀರು ಬಿಡಬೇಕಾಗುತ್ತದೆ. ಆದ್ದರಿಂದ ಚನ್ನಾಗಿ ವಿಚಾರಮಾಡಿಕೊಂಡು ಹೇಳು.' ಎಂದು ಸಮರ್ಥರು ಸಿಷ್ಟುರ ವಾಣಿಯಿಂದ ನುಡಿದರು. ಆಗ ಮಹೇಶನು 'ಗುರುವೇ! ಈ ಶಿಷ್ಯನ ಪರೀಕ್ಷೆ ಮಾಡಬೇಕೆನ್ನುವಿರಾ? ಆಜ್ಞಾಪಿಸಿರಿ. ನಿಮ್ಮಂತಹ ಅಲೌಕಿಕ ಮಹಾಮಹಿಮರ ಕೃಪಾದೃಷ್ಟಿಯು ನನ್ನಮೇಲಿರುವಾಗ ನಾನೇಕೆ ವಿಚಾರಮಾಡಲಿ.' ಎಂದು ನುಡಿದನು. 'ವೀರಮಣಿಯೇ ಮಾತೃಭೂಮಿಯುಸಲುವಾಗಿ ಸ್ವಾರ್ಥತ್ಯಾಗಮಾಡಿ ದೇಶಕಾರ್ಯಮಾಡುವವರೇ ಸ್ವರಾಜ್ಯಸೇವಾಸಂಘದಲ್ಲಿ ಸೇರ್ಪಡೆಯಾಗಲು ಅರ್ಹರು. ಅದಿರಲಿ ಮಹೇಶಾ! ನಿನ್ನ ವಿವಾಹವಾಗಿದೆಯೇ? ತಾಯಿ-ತಂದೆಗಳಿರುವರೆ?' 'ಸ್ವಾಮಿನ್ ದುರ್ದೈವದಿಂದ ನನ್ನ ತಾಯಿತಂದೆಗಳು ನೀಚ ಯವನರ ಖಡ್ಗಕ್ಕೆ ಬಲಿಯಾದರು. ನನ್ನವರೆನ್ನುವವರು ಜಗತ್ತಿನಲ್ಲಿ ಯಾರೂ ಇಲ್ಲ. ಹಾಯ್! ಹಾಯ್! ಈ ಯವನರ ಸೊಕ್ಕು ಎಷ್ಟೆಂಬದನ್ನು ವರ್ಣಿಸಲಸದಳವು. ನಮ್ಮ ದೇಶದಿಂದಲೇ ಪಿಂಡವನ್ನು ಬೆಳೆಯಿಸಿಕೊಂಡು ನಮ್ಮ ಮೇಲೆಯೇ ತಿರುಗಿ ಬೀಳುವರಲ್ಲ!'

'ಮಹೇಶಾ! ಈ ನೀಚ ಮ್ಲೇಂಛರ ಬಲುಮೆಯ ರಾಜ್ಯದಾಘಾತವನ್ನು ಪಡೆಬಡೆಯುವದಕ್ಕಾಗಿಯೇ ನಿನ್ನಂತಹ ತರುಣರ ಅವಶ್ಯಕತೆಯು ನಮಗಿದೆ. ಅಂತೆಯೇ ನೀನು ದೇಶೋದ್ಧಾರದ ಕಂಕಣವನ್ನು ಕಟ್ಟಿಕೊಳ್ಳಲು ಸಿದ್ಧನಿರು ವಿಯಾ?' 'ಸದ್ಗುರೋ! ನಾನು ಮೊದಲೇ ಹೇಳಿರುವೆನಲ್ಲವೆ? ಮಾತೃಭೂಮಿಯ ಸೇವೆಗಾಗಿ ಸಿದ್ಧನೇ ಇರುವೆನೆಂಬದನ್ನು' 'ಮಹೇಶಾ! ನೀನು ಧನ್ಯನು ಕಂಡಯಾ? ದೇಶದಲ್ಲಿ ಅಧರ್ಮದ ಬೆಂಕಿಯು ಭುಗಿಭುಗಿಲೆಂದು ಹಬ್ಬಿರುವಾಗ ಆ ಕಿಚ್ಚಿನಲ್ಲಿ ಹಾರಲು ಸಿದ್ಧನಾದದ್ದನ್ನು ಕಂಡು ನನಗೆ ಪರಮ ಸಂತೋಷವಾಯಿತು. ನೀನಿನ್ನು ಹೊರಡು. ನಾಳೆ ಬೆಳಗಿನಲ್ಲಿ ದೀಕ್ಷಾವಿಧಿಯನ್ನು ಕಲ್ಯಾಣನು ಕೊಡುವನು.' ಸಮರ್ಥರು ಹೀಗೆ ಮಹೇಶನಿಗೆ ಆಜ್ಞಾಪಿಸಿ ಧ್ಯಾನಸ್ಥರಾದರು.

'ತನ್ನ ಪ್ರೇಮ ಸರ್ವಸ್ವವನ್ನು ಒಪ್ಪಿಸಿ ನನ್ನನ್ನೇ ಧ್ಯಾನಿಸುತ್ತ ಕುಳಿತಿರುವ ಗಿರಿಬಾಲೆಗೆ ನಾನು ಸ್ವೀಕರಿಸಿದ ನೂತನ ಆಯುಷ್ಯಕ್ರಮಣದ ಸಂಗತಿಯನ್ನು ಯಾವ ಮುಖದಿಂದ ಹೇಳಲಿ' ಹೀಗೆ ಆ ಮಹೇಶನು ಬಹುಪರಿಯಾಗಿ ಆಲೋಚಿಸಿದನು.

ಈ ಮೊದಲೇ ಮಹೇಶ-ಗಿರಿಬಾಲೆಯರ ವಿವಾಹದ ವಾಂಜ್ನಿಶ್ಚಯವಾಗಿತ್ತು. ಗಿರಿಬಾಲೆಯ ಮುಪ್ಪಿನ ತಾಯಿಯಾದ ವಾರಣಾಸಿಯು ರೋಗದ ಮೂಲಕ ಹಾಸಿಗೆ ಹಿಡಿದದ್ದರಿಂದಲೇ ಇವರೀರ್ವರ ವಿವಾಹವು ತಡೆದು ನಿಂತಿತ್ತು. ಸ್ವಲ್ಪಗುಣಮುಖವಾದಕೂಡಲೇ ಆ ಕಾರ್ಯವನ್ನು ಮಾಡಬೇಕೆಂದು ಆ ವೃದ್ಧಳು ಮನದಲ್ಲಿ ಯೋಚಿಸಿಕೊಂಡಿದ್ದಳು. ಆದರೆ ಅವಳ ಬೇನೆ ವಾಸಿಯಾಗದೆ ಉತ್ತರೋತ್ತರ ವೃದ್ಧಿಯಾಗುತ್ತಲೇ ಹೋಯಿತು. ಮಗಳ ಸಲುವಾಗಿಯಂತೂ ವಿಚಾರಿಸಿ ಅವಳ ಬೇನೆಯು ಮತ್ತಿಷ್ಟು ಹೆಚ್ಚಾಯಿತು. ಇನ್ನು ತಾನು ಹೆಚ್ಚುಕಾಲ ಇರಲಾರೆನೆಂದು ತಿಳಿದು ಮಹೇಶ-ಗಿರಿಬಾಲೆಯರಿಗೆ ಅವರ ಭಾವೀ ಆಯುಷ್ಯದ ವಿಷಯವಾಗಿ ನಾಲ್ಕು ಉಪದೇಶ ಮಾತುಗಳನ್ನು ಹೇಳಬೇಕೆಂದು ವಾರಣಾಸಿಯು ಇಂದು ಮಹೇಶನನ್ನು ಕರೆಯಲು ಗಿರಿಬಾಲೆಗೆ ಹೇಳಿದಳು. ಅವಳು ಮಹೇಶನನ್ನು ಕರೆತರುವಷ್ಟರಲ್ಲಿ ಆ ವೃದ್ಧಳು 'ಮಹೇಶನು ಬಂದನೆ?' ಎಂದು ಹತ್ತೆಂಟುಸಾರೆ ಕೇಳಿದ್ದಳು. ಗಿರಿಬಾಲೆಯು ತನ್ನ ಪ್ರಿಯಕರನನ್ನು ಕರೆದುಕೊಂಡು ಬಂದಳು. ಮನೆಗೆಬಂದ ಮೇಲೆ ಗಿರಿಬಾಲೆಯು ಮಾತಾಡದೆ ತಟಸ್ಥವೃತ್ತಿಯನ್ನು ಧರಿಸಿದ್ದು ನೋಡಿ ಮಹೇಶನು 'ಯಾಕೆ? ಗಿರಿಬಾಲೆ ಮಹೇಶನ ಜನ್ಮದ ವಿಸ್ಮೃತಿಯಾಗುವದೆಂದು ಹೀಗೆ ಮೌನಳಾಗಿರುವೆಯಾ? ನಿನ್ನ ಭಾವೀ ಪ್ರಿಯಕರನು ಯೋಗಿಯಾದರೂ ನಿನ್ನಂತಹ ಆದರ್ಶ ತರುಣಿಯ ಸ್ವರ್ಗೀಯ ಪ್ರೇಮಕ್ಕೆ ಹೊರತಾಗಿರುವನೆ? ಗಿರಿಬಾಲೆ, ಮಹಾರಾಷ್ಟ್ರದ ಕಿಂಬಹುನಾ ಭಾರತ ಭೂಮಾತೆಯ ಸಂಸಾರ ಪ್ರೇಮಕ್ಕಾಗಿ ಶ್ರೀ ಸಮರ್ಥರು ನನ್ನ ನಿನ್ನ ಸಂಸಾರದ ಹೋಮವನ್ನು ಮಾಡಲು ಅಪೇಕ್ಷಿಸುತ್ತಾರೆ. ಇದಕ್ಕೆ ನಿನ್ನ ಒಪ್ಪಿಗೆಯನ್ನು ಸಂತೋಷದಿಂದ ಕೊಡಲೇಬೇಕಲ್ಲವೆ?

ಮಹೇಶನ ಮುಖದಿಂದ ಹೊರಟ ಒಂದೊಂದು ವಾಕ್ಯವು, ವಾಕ್ಯದೊಳಗಿನ ಒಂದೊಂದು ಶಬ್ದವು, ಶಬ್ದದೊಳಗಿನ ಒಂದೊಂದು ಅಕ್ಷರವು ಅಗ್ನಿ ಕಣದಂತೆ ಗಿರಿಬಾಲೆಯ ಹೃದಯವನ್ನು ಸುಡಹತ್ತಿತು! ಚಂಡಮಾರುತನ ಪ್ರಚಂಡ ಆಘಾತ ದಿಂದ ಕದಳೀವೃಕ್ಷವು ಭೂಮಿಗಿಳಿಯುವಂತೆ ಆ ಸುಕುಮಾರಿಯು ದೇಹಭಾನ ವಿಲ್ಲದವಳಾಗಿ ಭೂಮಿಗುರುಳುವವಳು, ಅಷ್ಟರಲ್ಲಿಯೇ ಮಹೇಶನು ಅವಳನ್ನು ಹಿಡಿದನು.

'ಗಿರಿಬಾಲೆ, ಹೀಗೇಕೆ ಮಾಡುವೆ? ಸ್ವಲ್ಪ ವಿಚಾರಿಸು. ಇಂದು ದೇಶದಲ್ಲಿ ಯವನರು ನಡೆಯಿಸಿರುವ ಅತ್ಯಾಚಾರಕ್ಕೆ ಅವರ ಆ ಸುರಿಕಾಮವಾಸನೆಗೆ ನನ್ನ ನಿನ್ನಂತಹ ಸಾವಿರಾರು ಸಂಸಾರಗಳು ಮಣ್ಣುಪಾಲಾಗಹತ್ತಿವೆ! ಎಂಬದನ್ನು ನೋಡುವದಿಲ್ಲವೆ? ಅಂದಮೇಲೆ ಇನ್ನು ಈ ಕ್ಷುದ್ರಸಂಸಾರದ ಆಶೆಯೇಕೆ? ಇಷ್ಟು ಸ್ವಾರ್ಥವನ್ನು ನೀನು ತ್ಯಜಿಸಲು ಸಿದ್ಧಳಾಗದಿದ್ದರೆ, ದೇಶದ ಗತಿ ಏನು. ಧರ್ಮದ ಗತಿ ಏನು. ನೋಡು ನೀನೂ ವಿಚಾರವಂತಳಿರುವೆ. ನನ್ನ ಈ ಕಾರ್ಯಕ್ಕೆ ಅಡ್ಡಾಗಬೇಡ.'

'ಅಂದಮೇಲೆ ಜಗತ್ತಿನೊಳಗಿನ ಪವಿತ್ರ ಪ್ರೇಮದ ಅಂಶವು ಹಾಳಾಗಿ ಹೋಯಿತೆ?' ಹೊಟ್ಟೆಯುರಿಯನ್ನು ತಡೆಯದೆ ಗಿರಿಬಾಲೆಯು ನುಡಿದಳು. 'ಇಲ್ಲ! ಇಲ್ಲ! ಬಾಲೆ ಆ ಪ್ರೇಮವೇ ಸ್ವರ್ಗೀಯ ಭಗಿನೀ ಪ್ರೇಮದ ರೂಪದಿಂದ ಜಗತ್ತಿನಲ್ಲಿ ಉದಯಿಸಿ ಶಾಂತಿ ಪ್ರತಿಷ್ಠಾಪನೆಯನ್ನು ಮಾಡುತ್ತದೆಂಬದನ್ನು ನೀನು ಬೇಗ ಕಾಣುವೆ!'

'ಪ್ರೀಯಕರಾ!'

'ಅಲ್ಲ! ನಾನು ಪ್ರೀಯಕರನಲ್ಲ! ಪ್ರೀಯ ಸಹೋದರನು!'

'ತಾವು ಸನ್ಯಾಸಿಗಳಾಗುವದನ್ನು ನಿಶ್ಚಯಿಸಿ ಬಿಟ್ಟಿರುವಿರಾ?

'ಅಹುದು' ಮಹೇಶನು ಗಂಭೀರವಾಣಿಯಿಂದ ಉತ್ತರಕೊಟ್ಟನು.

'ಹಾಗಾದರೆ ನನ್ನ ಅವಸ್ಥೆ ಏನು? ಇದುವರೆಗೂ ಆಶಾಬದ್ಧಳಾಗಿದ್ದೆನು. ಇಂದು ಆ ನನ್ನ ಆಶಾವೃಕ್ಷವು ಭೂಮಿಗುರುಳಿತೆ?'

'ಗಿರಿಬಾಲೆ ಉಪಾಯವಿಲ್ಲದಾಗಿದೆ'

'ಆಗಲಿ ನನ್ನ ಅದೃಷ್ಟಕ್ಕೆ ತಾವೇನು ಮಾಡುವಿರಿ. ತಾಯಿಗಿಷ್ಟು ತಿಳಿಸಿರಿ.

ಮಹೇಶನು ಮುಂದಾದನು. ಗಿರಿಬಾಲೆಯು ಉಸುರ್ಗಳೆಯುತ್ತ ಹಿಂದೆ ಸಾಗಿದಳು. ಈರ್ವರೂ ಹೋಗಿ ವಾರಣಾಸಿಯು ಮಲಗಿಕೊಂಡ ಹಾಸಿಗೆಯ ಹತ್ತರ ವಿಷಣ್ಣವದನಿಗಳಾಗಿ ನಿಂತುಬಿಟ್ಟರು. ಯಾರ ಮುಖದಿಂದಲೂ ಶಬ್ದಗಳು ಹೊರಡಲೊಲ್ಲವು. ಕೊನೆಗೆ ಮಹೇಶನೇ ನಿಷ್ಠುರಮನಸ್ಕನಾಗಿ ಮಾತಾಡಹತ್ತಿದನು.

' ಅಮ್ಮಾ ನಾನು ಶ್ರೀ ಸಮರ್ಥ ಸ್ವಾಮಿಗಳ ಅಪ್ಪಣೆಯ ಮೇರೆಗೆ ಯೋಗಿಯಾಗ ಬೇಕೆಂದು ಮಾಡಿರುವೆನು. ಆದ್ದರಿಂದ ಹಿರಿಯರಾದ ತಮ್ಮ ಆಶೀರ್ವಾದವನ್ನು ಬೇಡಬಂದಿರುವೆನು.'

ಇದನ್ನು ! ಭೂಗರ್ಭವನ್ನು ಭೇದಿಸಿ ಹೊರಚಿಮ್ಮುವ ಜ್ವಾಲಾಮುಖಿಯಂತಿರುವ ಶಬ್ದಗಳನ್ನು! ಕೇಳಿ ಆ ವೃದ್ಧಳ ಹೃದಯವು ಇಬ್ಭಾಗವಾದಂತಾಯಿತು! ಮೈಯಲ್ಲಿ ಪಿಶಾಚಿಸಂಚಾರವಾದಂತಾಗಿ ಹಾಸಿಗೆಹಿಡಿದ ಅವಳು ಎದ್ದು ಕುಳಿತಳು! ಗಿರಿಬಾಲೆಯು ಬಿಕ್ಕಿ ಬಿಕ್ಕಿ ರೋದಿಸಹತ್ತಿದಳು. ' ಮಹೇಶಾ! ಮೊದಲು ಇವಳ ಹೃದಯವನ್ನು ನಿನ್ನ ಖಡ್ಗದಿಂದ ಸೀಳು. ಆಮೇಲೆ ನೀನು ಆನಂದದಿಂದ ಸನ್ಯಾಸಿಯಾಗು!

' ಅಮ್ಮಾ! ಇಷ್ಟೇಕೆ ಸಂತಾಪಗೊಳ್ಳುವಿರಿ. ನಾನು ಈ ವಿಚಾರವನ್ನು ಗಿರಿಬಾಲೆಗೆ ತಿಳಿಸಿರುವೆನು. ಅವಳಾದರೋ ಇದಕ್ಕೆ ಒಪ್ಪಿಕೊಂಡಿರುವಳು. ನನಗೀಗ ಹಿರಿಯರಾದ ತಮ್ಮ ಆಶೀರ್ವಾದವು ಬೇಕಾಗಿದೆ.' ಮಹೇಶನು ನಮ್ರತನದಿಂದ ಶಿರಬಾಗಿ ಬೇಡಿಕೊಂಡನು.

' ಮಹೇಶಾ! ಸಮರ್ಥರಿಗೆ ನನ್ನ ಮಗಳ ಸರ್ವಸ್ವದ ಆಹುತಿಯೇಕೆ ಬೇಕಾಯಿತು?' ವೃದ್ಧಳು ಕ್ಷೀಣ ಸ್ವರದಿಂದ ನುಡಿದಳು.

' ಅಮ್ಮಾ, ಔರಂಗಜೇಬನೂ ಮತ್ತು ಅವನ ಜಾತಿಯವರೂ ಮಾಡಿರುವ ಹಾಗೂ ಮಾಡುತ್ತಿರುವ ಆಸುರೀಕೃತ್ಯಗಳನ್ನು ನೆನಪಿಗೆತಂದುಕೊಂಡರೆ ಮೈಮೇಲಿನ ಕೂದಲಗಳು ನೆಟ್ಟಗಾಗುವವು. ಈ ಯವನರು ನಮ್ಮ ಸ್ತ್ರೀಯರನ್ನು ತಮ್ಮ ಜನಾನಖಾನೆಗೆ ಎಳೆದುಕೊಂಡು ಹೋಗುವರು! ಈ ಯವನರು ನಮ್ಮ ಸ್ತ್ರೀಯರ ಜನ್ಮವನ್ನೂ ಪಾವಿತ್ರ್ಯವನ್ನೂ ಹಾಳುಮಾಡುವರು! ಈ ಯವನರು ಹಿಂದೂಧರ್ಮ ಛಲನ ಮಾಡುವರು! ದೇಶಕ್ಕೆ ದೇಶವನ್ನೇ ಯವನಮಯ ಮಾಡಬೇಕೆಂದು ರಾಕ್ಷಸೀಮಹಾತ್ವಾಕಾಂಕ್ಷೆಯಿಂದ ತುಂಬಿತುಳುಕುತ್ತಿರುವ ಅವರು ಈಗ ಉನ್ಮತ್ತರಾಗಿರುವರು! ಅಮ್ಮಾ, ಏನು ಮಾಡುವದು? ಹೊಟ್ಟೆಯೊಳಗಿನಸಿಟ್ಟು ರಟ್ಟೆಯಲ್ಲಿಲ್ಲದಾಗಿದೆ! ಈ ದುಷ್ಟರ ಸೊಕ್ಕು ಮುರಿಯಲು ನಮ್ಮ ನಮ್ಮಲ್ಲಿ ಐಕ್ಯವಿಲ್ಲದಾಗದು! ಸ್ವಕುಲಾಭಿಮಾನ-ಸ್ವದೇಶಾಭಿಮಾನಗಳಿಲ್ಲದಾಗದು! ಆ ಐಕ್ಯಕ್ಕಾಗಿಯೇ ಹುದುಗಿಕೊಂಡ ಆ ಅಭಿಮಾನಗಳನ್ನು ಜಾಗ್ರತಗೊಳಿಸುವದಕ್ಕಾಯೇ ನಾನು ಸನ್ಯಾಸಿಯಾಗಬೇಕಾಗಿದೆ!'

' ಅದಕ್ಕಾಗಿ ನೀನೇಕೆ ಆಹುತಿಯಾಗಬೇಕು? ದೇಶ-ಧರ್ಮಗಳು ನಿನ್ನೊಬ್ಬನವೇ?'

'ಅಮ್ಮಾ, ಹೀಗೆಂದರೆ ಹೇಗೆ? ಪರರಿಗೆ ದೇಶ-ಧರ್ಮಗಳ ರಕ್ಷಣೆಗಾಗಿ ಜೀವದ ಹಂಗಿಲ್ಲದೆ ಹೋರಾಡಿರೆಂದು ಹೇಳುವವನು ಅದರಂತೆ ಆಚರಿಸಬೇಕಷ್ಟೆ? ಅಮ್ಮಾ, ನನ್ನನ್ನು ತಡೆಯಬೇಡಿರಿ. ಅಂಗೀಕೃತಕಾರ್ಯದಲ್ಲಿ ತಮ್ಮ ಆಶೀರ್ವಾದವನ್ನು ಕೊಡಿರಿ!'

'ಇದೇ ನಿನ್ನ ನಿಶ್ಚಯವೆ?'

'ನಿಶ್ಚಯವಲ್ಲದೆ ಮತ್ತೇನಮ್ಮಾ!'

'ಹಾಗಾದರೆ ಸ್ವೀಕರಿಸು ನನ್ನ ಆಶೀರ್ವಾದವನ್ನು.' ಮುದುಕಿಯ ಕುತ್ತಿಗೆಯ ಶಿರಗಳು ಉಬ್ಬಿದವು. ಕಣ್ಣುಗಳೊಳಗಿಂದ ಅಶ್ರುಗಳು ಬಳಬಳ ಉದುರಹತ್ತಿದವು. ಅವಳು ಮನಸ್ಸು ಕಲ್ಲುಮಾಡಿ ಅಧೋಮುಖನಾದ ಮಹೇಶನಕಡೆಗೊಮ್ಮೆ ಹಾಗೂ ರೋದಿಸುತ್ತ ನಿಂತಿರುವ ಮಗಳಕಡೆಗೊಮ್ಮೆ ಕೃದ್ಧ-ದೃಷ್ಟಿಯಿಂದ ನೋಡಿ 'ಮಹೇಶಾ, ದೇಶ-ಧರ್ಮಕ್ಕಾಗಿ ಸನ್ಯಾಸವನ್ನು ಸ್ವೀಕರಿಸಿ ನನ್ನ ಮಗಳ ಜನ್ಮದ ಆಹುತಿ ತೆಗೆದುಕೊಂಡಿಯಲ್ಲನೆ ಮರಣಕಾಲಕ್ಕೆ ನನಗೆ ಬಹು ಸಂಕಟವನ್ನುಂಟುಮಾಡಿದೆ. ಇಷ್ಟೆಲ್ಲ ನೀನು ಯಾರಸಲುವಾಗಿ ಮಾಡುವಿಯೋ ಅದೇ ದೇಶದ—ಅದೇ ಧರ್ಮದ ಜನರೇ ನಿನ್ನನ್ನು ದೇಶದ್ರೋಹಿ—ಧರ್ಮದ್ರೋಹಿ ಪಾಪಿಯೆಂದು ನಿಶ್ಚಯಿಸಿ ಅತ್ಯಂತ ಕಠೋರವಾದ ಶಿಕ್ಷೆಯನ್ನು ಕೊಡದೆ ಬಿಡರು. ಇದೇ ನನ್ನ ಪ್ರೇಮಳ ಆಸೀರ್ವಾದವು!' ಶಾಪವನ್ನಿತ್ತ ತುಸು ಹೊತ್ತಿನಲ್ಲಿಯೇ ಅವಳ ಪ್ರಾಣಜ್ಯೋತಿಯು ನಂದಿಹೋಯಿತು.

೫.

ಹಿಂದಿನ ಪ್ರಕರಣದಲ್ಲಿ ನಡೆದ ಸಂಗತಿಗೆ ಹನ್ನೆರಡು ವರುಷಗಳಾಗಿ ಹೋಗಿದ್ದವು. ಗಿರಿಬಾಲೆಯು ತನ್ನ ತಾಯಿಯ ಮರಣದತರುವಾಯ ದೇವಗಿರಿಯನ್ನು ಬಿಟ್ಟು ಕಾಶೀ ಕ್ಷೇತ್ರದಲ್ಲಿ ವಾಸವಾಗಿದ್ದಳು. ತನ್ನ ಶೇಷಾಯುಷ್ಯವನ್ನು ಲೋಕಶೇವೆಯಲ್ಲಿಯೇ ಕಳೆಯಬೇಕೆಂದು ನಿರ್ಧರಿಸಿಕೊಂಡು ಅಲ್ಲಿ ಒಂದು ಮಠವನ್ನು ಸ್ಥಾಪಿಸಿ 'ಗಿರೀಶ' ಎಂಬ ನಾಮವನ್ನು ಧರಿಸಿಕೊಂಡು ಪುರುಷವೇಷದಲ್ಲಿರಹತ್ತಿದಳು. ಮೊದಮೊದಲು ಮಹೇಶನು ತನ್ನನ್ನು ದೂರೀಕರಿಸಿದನೆಂಬ ದುಃಖವು ಅವಳನ್ನು ಬಾಧಿಸುತ್ತಲಿತ್ತು. ಕಾಲಾಂತರದಿಂದ ಮಹೇಶನ ವಿರಹದುಃಖವನ್ನು ಅವಳು ಸಂಪೂರ್ಣವಾಗಿ ಮರೆತಳು. ಇತ್ತ ಮಹೇಶನು ಶ್ರೀ ಸಮರ್ಥರ ಆಜ್ಞೆ

ಯಂತೆ ದೀಕ್ಷೆಯನ್ನು ಸ್ವೀಕರಿಸಿದಮೇಲೆ ತನ್ನ ಲೋಕೋತ್ತರ ಗುಣಗಳಿಂದ ಸಮರ್ಥರ ಪಟ್ಟಶಿಷ್ಯನಾದನು.

+ + + + + +

ದಿಲ್ಲೀ ಸಾಮ್ರಾಟನಾದ ಔರಂಗಜೇಬನು ಪುಂಡ-ಬಂಡುಗಾರನಾದ ಹಾಗೂ ತನ್ನ ಆಳಿಕೆಯ ಹುಳುಕನ್ನು ಹೊರಗೆಡುವಂಥ ಶಿವಛತ್ರಪತಿಯನ್ನು ಬಗ್ಗುಬಡಿಯಬೇಕೆಂಬ ಮನಸ್ಸಿನಿಂದ ಅನೇಕ ಕುಟಿಲತಂತ್ರಗಳ ಜಾಳಿಗೆಯನ್ನು ಪಸರಿಸಿ ಹೇಗಾದರೂಮಾಡಿ ಈ ಶಿವಸಿಂಹವನ್ನು ತನ್ನ ಬಲೆಯಲ್ಲಿ ಹಾಕಬೇಕೆಂದು ಯತ್ನಿಸತೊಡಗಿದನು. ಆದರೆ ಆ ಬಲೆಯಲ್ಲಿ ಶಿವಾಜಿಯು ಬೀಳದಹಾಗಾಗಲು ಅವನ್ನೂ ಅವನ ಮಗನಾದ ಸಂಭಾಜಿಯನ್ನೂ ಭೆಟ್ಟಿಗೋಸ್ಕರವಾಗಿ ದಿಲ್ಲಗೆ ಕರೆಕಳುಹಿಸಿದನು. ರಾಕ್ಷಸೀ ಮಹತ್ವಾಕಾಂಕ್ಷೆಯುಳ್ಳ ಬಾದಶಹನ ಸ್ವಭಾವವನ್ನು ಬಲ್ಲವನಾದ ಶಿವರಾಯನು ಸ್ವಸಂರಕ್ಷಣಾರ್ಥವಾಗಿ ಕೆಲವು ಸ್ವಾಮಿನಿಷ್ಠ ಸೇವಕರನ್ನು ತನ್ನ ಸಂಗಡ ಕರೆದುಕೊಂಡಿದ್ದನಲ್ಲದೆ, ಶ್ರೀ ಸಮರ್ಥರ ಆಗ್ರಹದಿಂದ ಮಹೇಶಸ್ವಾಮಿಯನ್ನು ಸಹ ಕರೆದುಕೊಂಡು ಹೋಗಿದ್ದನು. ಬಾದಶಹನು ತನ್ನ ನೀಚಸ್ವಭಾವಕ್ಕನುಸರಿಸಿ ಆ ತಂದೆ-ಮಕ್ಕಳನ್ನು ಬಂದಿಯಲ್ಲಿರಿಸಿದನು. ಆದರೆ ಅಂಬಾಭವಾನಿಯವರ ಕೃಪಾಪೋಷಿತನೂ ಶ್ರೀ ಸಮರ್ಥರ ಅನುಗ್ರಹಿತನೂ ಆದ ಶಿವರಾಯನು ಬಾದಶಹನ ಕಣ್ಣಲ್ಲಿ ಮಣ್ಣು ತೂರಿ ಬೈರಾಗಿವೇಷದಿಂದ ತನ್ನ ಸೇವಕರನ್ನೊಡಗೊಂಡು ರಾಯಗಡದ ಮಾರ್ಗಸ್ಥನಾದನು. ಹಾದಿಯಲ್ಲಿ ಅವರೆಲ್ಲರೂ ಕನೋಜದಲ್ಲಿ ತಳವೂರಿದರು. ಶಿವಾಜಿಯು ಓಡಿಹೋದ ಸುದ್ದಿಯನ್ನು ಕೇಳಿ ಬಾದಶಹನು ಸುಣ್ಣವನ್ನು ತಿಂದ ಮಂಗನಂತಾದನು. ಆದರೂ ಆ ನೀಚನು ಮತ್ತೆ ಅವನನ್ನು ಹಿಡಿದು ತರಲು ಪ್ರಯತ್ನ ಇರಲಿಲ್ಲ. 'ಶಿವಾಜಿಯನ್ನು ಹಿಡಿದು ತಂದು ಕೊಟ್ಟವರಿಗೆ ತನ್ನ ಮಗಳಾದ ಝಬುನ್ನಿಸೆಯನ್ನು ಅರ್ಪಿಸುವೆ' ನೆಂದು ಅವನು ಪ್ರಸಿದ್ಧಿಸಿದನು. ಈ ಆಶೆಗೆ ಬಲಿಬಿದ್ದ ಎಷ್ಟೋ ಹಿಂದೂ ಮುಸಲ್ಮಾನ ತರುಣರು ಶಿವಾಜಿಯ ಶೋಧಾರ್ಥವಾಗಿ ನಾಲ್ಕೂ ಕಡೆಗೆ ಹರಿಬಿದ್ದರು. ಈ ಸುದ್ದಿಯು ಗುಪ್ತಚಾರರ ಮುಖಾಂತರವಾಗಿ ಶಿವಾಜಿಗೆ ತಿಳಿದ ಕೂಡಲೇ ಅವನು ಸಂಭಾಜಿಯನ್ನು ಮಹೇಶಸ್ವಾಮಿಯ ಸ್ವಾಧೀನ ಪಡಿಸಿ ತಾನು ಬೇರೆ ಬೇರೆ ಮಾರ್ಗವಾಗಿ ರಾಯಗಡದ ಹಾದೀ ಹಿಡಿದನು. ಇತ್ತ ಮಹೇಶಸ್ವಾಮಿಯು ಕಾಶೀ ಕ್ಷೇತ್ರಕ್ಕೆ ಬಂದು ಗಿರೀಶ ಸ್ವಾಮಿಯ ಮಠದಲ್ಲಿಯೇ ಇಳಿದುಕೊಂಡನು.

ಸಂಧ್ಯಾಕಾಲ! ಆಗ ತಾನೇ ಹುಣ್ಣಿವೆ ಚಂದ್ರನು ಕ್ಷಿತಿಜವನ್ನು ಬಿಟ್ಟು ನಭೋಮಂಡಲದಲ್ಲಿ ಹೆಜ್ಜೆ ಇಕ್ಕತೊಡಗಿದನು. ಪ್ರಖರವಾದ ಮಾರ್ತಾಂಡನ ಕಿರಣಗಳಿಂದ ದುಃಖಬಡುತ್ತಿದ್ದ ಭೂಮಿಯು ಚಂದ್ರನ ಶೀತಲವಾದ ಕಿರಣಗಳಿಂದ

ಆನಂದದಲ್ಲಿ ಮಗ್ನವಾಗಿದೆ. ಮಠದಲ್ಲಿ ಶಿಷ್ಯಸಮೂಹವು ಆಹ್ನಿಕದಸಲುವಾಗಿ ಗಂಗಾತಟಾಕಕ್ಕೆ ಹೋಗುತ್ತಲಿದ್ದಾರೆ. ಆದರೆ ಗಿರೀಶಸ್ವಾಮಿಯು ಆಗುಂತಕರಲ್ಲಿ ಒಬ್ಬನನ್ನು ಗುರ್ತಿಸಿ ಮನದಲ್ಲಿ ಬಹು ದುಃಖಬಡುತ್ತಲಿದ್ದನು. ಅಂದು ಆ ಸ್ವಾಮಿಯು ಆಹ್ನಿಕವನ್ನೇ ಬಿಟ್ಟುಗೊಟ್ಟನು. ಆ ಸ್ವಾಮಿಗೆ ಗತಕಾಲಿನ ಸಂಗತಿಯು ನೆನಪಾಗಿಯಂತೂ ದುಃಖವು ಒತ್ತರಿಸಿತು. ಮುಖದಮೇಲೆ ಚಿಂತಾರೇಖೆಗಳು ಸ್ಪಷ್ಟವಾಗಿ ತೋರಹತ್ತಿದವು. ಆದರೆ ಈ ಸ್ಥಿತಿಯು ಯಾರಿಗೂ ಗೊತ್ತಾಗಬಾರದೆಂದು ಅವನು ಪ್ರಯತ್ನಿಸುತ್ತಿಲಿದ್ದನು. ಆ ಸ್ವಾಮಿಯ ಈ ಕರುಣಾಜನ್ಯಸ್ಥಿತಿಯನ್ನು ಮಹೇಶನು ನೋಡದೆ ಇರಲಿಲ್ಲ. ಅವನು ಗಿರೀಶನ ಮುಖವನ್ನು ಸಾಶಂಕಮುದ್ರೆಯಿಂದ ಮೇಲಿಂದಮೇಲೆ ಹುಳುಹುಳು ನೋಡುತ್ತಲಿದ್ದನು. ಗಿರೀಶನು ಆಗುಂತಕರ ಸ್ವಾಗತವನ್ನು ಚನ್ನಾಗಿ ನೋಡಿದನು. ಅಂದು ಗಿರೀಶನು ಯಾವ ವಿಷಯವನ್ನೂ ಎತ್ತಲಿಲ್ಲ. ಭೋಜನಾದಿನಂತರ ಎಲ್ಲರೂ ನಿದ್ದೆ ಹೋದರು.

## ೬.

ಪ್ರಾತಃಕಾಲ ಸಮಯ! ಬಾಲಸೂರ್ಯನ ಕೋಮಲ ಕಿರಣಗಳು ನಾಲ್ಕೂ ಕಡೆಗೆ ಪಸರಿಸಹತ್ತಿವೆ. ಮಠದೊಳಗಿನ ಶಿಷ್ಯರು ಸ್ನಾನಾದಿ ಪ್ರಾತರ್ವಿಧಿಗಳನ್ನು ತೀರಿಸಿಕೊಳ್ಳುವದಕ್ಕಾಗಿ ಗಂಗಾನದಿಗೆ ಹೋಗಿದ್ದಾರೆ. ಇಂತಹ ಸಮಯದಲ್ಲಿ ಕನೋಜದ ಸುಭೇದಾರನಾದ ಮುರ್ಶಿದಾಖಾನನು ತನ್ನ ತಂಡದೊಂದಿಗೆ ಈ ಮಠವನ್ನು ಮುತ್ತಿದನು. ಆಗ ಮಹೇಶನು ಬಹು ಭಯಗ್ರಸ್ತನಾದನು. 'ಸುಮ್ಮನೆ ಬಾಗಿಲವನ್ನು ತೆಗೆದು ಶತ್ರುಗಳನ್ನು ನಮ್ಮ ಸ್ವಾಧೀನಪಡಿಸುವಿರೋ? ಅಥವಾ ಬಾಗಿಲವನ್ನು ಮುರಿದು ಒಳನುಗ್ಗಿ ಬಲಾತ್ಕಾರದಿಂದ ಶತ್ರುಗಳನ್ನು ವಶಪಡಿಸಿಕೊಳ್ಳೋಣವೋ?' ಎಂದು ಯವನರ ತಂಡದ ಮುಖಂಡನಾದ ಮುರ್ಶಿದಾಖಾನನು ಗರ್ಜಿಸಹತ್ತಿದನು.

ಇತ್ತ ಗಿರೀಶನು ಮಹೇಶನನ್ನು ಏಕಾಂತಸ್ಥಳದಲ್ಲಿ ಕರೆದೊಯ್ದು ಸಂಭಾಜಿಯ ರಕ್ಷಣೆಗಾಗಿ ಆಲೋಚಿಸಹತ್ತಿದನು.

'ಸ್ವಾಮಿ ಮಹಾರಾಜ' ಗಿರೀಶನು ಮಾತಾಡಹತ್ತಿದನು. 'ಈ ಮಹತ್ಸಂಕಟದಿಂದ ಸಂಭಾಜಿಯನ್ನು ಉಳಿಸಿಕೊಳ್ಳಬೇಕಾದರೆ, ಶಕ್ತಿಗಿಂತ ಯುಕ್ತಿಯನ್ನೇ ಹೆಚ್ಚಾಗಿ ಅವಲಂಬಿಸಬೇಕಾಗುತ್ತದೆ. ಏನಾದರೊಂದು ಅತರ್ಕ್ಯವಾದ ಘಟನೆಯನ್ನು ಮಾಡಿ ಶತ್ರುಗಳಿಗೆ ಮಂಕುಬೂದಿಯನ್ನು ಹಚ್ಚದಹೊರತು ಗತ್ಯಂತರವಿಲ್ಲದಾಗಿದೆ.'

'ಹಾಗಾದರೆ ತಾವು ಯಾವ ಹಂಚಿಕೆಯನ್ನು ತೆಗೆಯುವಿರಿ? ಮಹೇಶಸ್ವಾಮಿಯ ವಾಕ್ಯವು ಮುಗಿಯುವಷ್ಟರಲ್ಲಿಯೇ ಗಿರಿಬಾಲೆಯು ತನ್ನ ರೂಪವನ್ನು ಪ್ರಕಟಗೊಳಿಸಿದಳು. ಮಹೇಶನು ಅವಳನ್ನು ಗುರ್ತಿಸಿದನು. ಆದರೆ ಅವಳ ಈ ಸಾಹಸವನ್ನು ನೋಡಿ ದಿಙ್ಮೂಢನಾದನು. ಸ್ವಲ್ಪ ಹೊತ್ತಿನಮೇಲೆ ಗಿರಿಬಾಲೆಯು ವಿಷಯದ ಪೂರ್ವಾಪರವೃತ್ತವನ್ನು ವಿಚಾರಿಸಿದನು. ಆದರೆ ಸ್ವರಾಜ್ಯದ ಪಂಚಪ್ರಾಣದಮೇಲೆ ಬಂದ ಸಂಕಟಕಾಲದಲ್ಲಿ ತನ್ನ ಕರ್ಮಕಥೆಯನ್ನು ಹೇಳುತ್ತ ವ್ಯಥಾಕಾಲಕ್ಷೇಪವಮಾಡುವದು ಉಪಯೋಗದ್ದಲ್ಲವೆಂದು ಚಿಂತಿಸಿ 'ಮಹೇಶ, ಪ್ರಾಪ್ತಸಂಕಟವನ್ನು ನಮ್ಮ ಶುಭಸಂಯೋಗದಿಂದ ದೂರೀಕರಿಸಿದಮೇಲೆ ಮುಂದೆ ಸುದೈವದಿಂದ ತಮ್ಮ ದರ್ಶನವಾದಾಗ್ಗೆ ಎಲ್ಲ ವೃತ್ತಾಂತವನ್ನು ಆನಂದದಿಂದ ಹೇಳುವೆನು. ಆದರೆ...............' ಎಂದು ಅಷ್ಟಕ್ಕೆ ಮಾತನ್ನು ಪೂರ್ತಿಗೊಳಿಸಿ ಮಹೇಶನ ಕಿವಿಯಲ್ಲಿ ಏನನ್ನೋ ಹೇಳಲಾರಂಭಿಸಿದಳು. ಕೇಳುತ್ತ ಹೋದಹಾಗೆಲ್ಲ ಮಹೇಶನ ಹೃದಯಸಾಗರದಲ್ಲಿ ಗತಕಾಲೀನ ಸೌಖ್ಯದ ಕಲ್ಪನಾತರಂಗಗಳು ಉದಯಾಸ್ತಗಳನ್ನು ಹೊಂದಿ ಅವನಿಗೆ ಬಹುವೇದನೆಯನ್ನುಂಟುಮಾಡುತ್ತಲಿದ್ದವು. ಈ ಸ್ಥಿತಿಯಲ್ಲಿ ಗಿರಿಬಾಲೆಯು ಮಹೇಶನ ಹೃದಯವನ್ನು ಕೂಡಲೇ ಗುರ್ತಿಸಿದಳು.

'ಮಹೇಶ! ದೇಶಕ್ಕಾಗಿಯೂ ಮತ್ತು ಧರ್ಮಕ್ಕಾಗಿಯೂ ನಾವೀರ್ವರೂ ಈ ಮೊದಲೇ ಪತಿ-ಪತ್ನಿಯರಾಗುತ್ತಲಿದ್ದೆವು. ಆದರೆ ಶ್ರೀ ಸಮರ್ಥಸ್ವಾಮಿಗಳ ಆಶೀರ್ವಾದದಿಂದ ಅದೇ ದೇಶ-ಧರ್ಮದ ಋಣವನ್ನು ಸೇವೆಯ ರೂಪದಿಂದ ತೀರಿಸಲು ನಾವಿಬ್ಬರು ಬೇರೆ ಬೇರೆ ಮಾರ್ಗಾವಲಂಬಿಗಳಾದೆವು. ಆದರೆ ಇಂದು ಆ ಪತಿ-ಪತ್ನಿಯರ ಭಾವನೆಯಿಂದಲೇ ನಮ್ಮಿಬ್ಬರ ಪ್ರಾಣಕ್ಕಿಂತಲೂ ಶ್ರೇಷ್ಠನಾದ ದೇಶದ ಹಾಗು ಧರ್ಮದ ಪ್ರಾಣವಾದ ಯುವರಾಜನನ್ನು ದುಷ್ಟರಿಂದ ರಕ್ಷಿಸಿಕೊಳ್ಳುವದಕ್ಕಾಗಿ ಸಿದ್ಧರಾಗಬೇಕಾಗಿದೆ. ಒಂದು ಕ್ಷಣವೇ ಆಗಲೊಲ್ಲದು, ಪತಿ-ಪತ್ನಿಯರಾಗಿ ಸಂಭಾಜಿಯನ್ನು ಶ್ರೇಷ್ಠ ಪುತ್ರನ ಸ್ಥಾನದಲ್ಲಿರಿಸಿ ಕಪಟನಾಟಕವನ್ನು ಹೂಡಿ ಶತ್ರುಗಳಿಂದ ನಮ್ಮ ಬಾಲರಾಜನನ್ನು ಉಳಿಸಿಕೊಳ್ಳದ ಹೊರತು ಬೇರೆ ಉಪಾಯವಿಲ್ಲ.' ಎಂದು ಗಿರಿಬಾಲೆಯು ನುಡಿದುದಲ್ಲದೆ ಅವನ ಕಿವಿಯಲ್ಲಿ ಮತ್ತೇನನ್ನೋ ಹೇಳಿ ತಾನು ಒಳಕ್ಕೆ ಸೇರಿದಳು. ಅನಂತರ ಬಾಗಿಲವು ತೆರೆಯಲ್ಪಟ್ಟಿತು. ಖಾನನು ಕೆಲವು ಜನರೊಡನೆ ಮಹೇಶನು ಕುಳಿತಲ್ಲಿಗೆ ಬಂದನು.

'ಹ! ಎಲ್ಲಿರುವರು ನಮ್ಮ ಶತ್ರುಗಳು? ಗಿರಫದಾರ ಮಾಡುತ್ತೇವೆ ತೋರಿಸಿರಿ.' ಖಾನನು ಅಧಿಕಾರವಾಣಿಯಿಂದ ನುಡಿದನು. ಮಹೇಶನ ಕಪಟನಾಟಕಕ್ಕೆ ಪ್ರಾರಂಭವಾಯಿತು. 'ಸುಭೇದಾರ ಸಾಹೇಬ! ಇದೋ ತೆಗೆದುಕೊಳ್ಳಿರಿ. ಮಹಾರಾಷ್ಟ್ರ ಯುವರಾಜ ಸಂಭಾಜಿರಾವ ಭೋಸಲೆ. ನಮಗೆ ಕೊಡತಕ್ಕ ಪಾರಿತೋಷಕವನ್ನು ಕೊಡಿರಿ,' ಎಂದು ಮಹೇಶನು ಮಾತಾಡುತ್ತ ಸಂ-

ಭಾಜಿಯನ್ನು ಯವನರ ಸ್ವಾಧೀನ ಮಾಡಿದನು ಸುಭೇದಾರನಿಗೆ ಕಲ್ಪನಾತೀತ ಆನಂದವಾಯಿತು. ಆಗಲೇ ಖಾನನು ಸುಖದ ಕನಸುಗಳನ್ನು ಕಾಣಹತ್ತಿದನು. ಲಾವಣ್ಯವತಿಯಾದ ಝುಬುನ್ನಿಸೆಯ ಕಪೋಲಗಳನ್ನು ಪಿಡಿದು ಚುಂಬಿಸುತ್ತಲಿದ್ದಾನೆ. ವಿಲಾಸಮಂದಿರದಲ್ಲಿ ಸುಖೋಪಭೋಗಗಳನ್ನು ಅನುಭವಿಸುತ್ತ ಸ್ವಾನಂದ ಸಾಮ್ರಾಜ್ಯದಲ್ಲಿ ಲೋಲಾಡಹತ್ತಿದ್ದಾನೆ. ಸುಭೇದಾರನು ಸುವರ್ಣ ಮುದ್ರೆಗಳ ರಾಶಿಯನ್ನೇ ಮಹೇಶನಮುಂದೆ ಸುರುವಿದನು. ಈ ವಿಪರೀತಪ್ರಕಾರವನ್ನು ನೋಡಿ ಸಂಭಾಜಿಗೆ ಏನೂ ತಿಳಿಯದೆ ದಿಂಙ್ಮೂಢನಾಗಿ ನಿಂತುಬಿಟ್ಟನು. 'ಈ ಗೋಸಾವಿಯು ಸಮರ್ಥರ ಶಿಷ್ಯನೆನಿಸಿಕೊಳ್ಳುತ್ತಾನೆ. ಲಗ್ನವಾಗಿಲ್ಲವೆಂದು ಹೇಳುತ್ತಲಿದ್ದವನು ಯಾವಳೋ ಓರ್ವ ಸ್ತ್ರೀಗೆ ಹೆಂಡತಿಯೆಂದು ಸಂಭೋದಿಸುತ್ತಾನೆ ಮತ್ತು ನನ್ನನ್ನು ತನ್ನ ಮಗನೆಂದು ತಿಳಿದು ಹೊಟ್ಟೆಗಾಗಿ ಯವನರ ಸ್ವಾಧೀನಕ್ಕೆ ನನ್ನನ್ನು ಕೊಡುತ್ತಾನೆ. ಇದೇನಿರಬಹುದು ? ಅದಿರಲಿ ಅತ್ಯಂತ ವಿಶ್ವಾಸುಕನೆಂದು ತಿಳಿದು ಆಬಾಸಾಹೇಬರು ( ಶಿವಾಜಿ ) ನನ್ನನ್ನು ಇವನ ಸ್ವಾಧೀನಪಡಿಸಿರಲು ಹೀಗೇಕೆ ವಿಶ್ವಾಸಘಾತಮಾಡಿದನು ?'

ಬಾಲರಾಜನಿಗೆ ಈ ಕಪಟ ನಾಟಕದ ನೆಲೆಯು ಹೇಗೆ ತಿಳಿಯಬೇಕು? ತಾನು ಈಶಕೃಪೆಯಿಂದ ಇಲ್ಲಿಂದ ಪಾರಾಗಿ ರಾಯಗಡಕ್ಕೆ ಹೋದಮೇಲೆ ಈ ರಾಜದ್ರೋಹಿನರಾಧಮನಿಗೆ ತಂದೆಯವರಕಡೆಯಿಂದ ಯೋಗ್ಯ ಶಿಕ್ಷೆಯನ್ನು ಕೊಡಿಸಲೇ ಬೇಕೆಂದು ಅವನು ಆತ್ಮನಿಶ್ಚಯವನ್ನು ಮಾಡಿಕೊಂಡನು.

ಖಾನನು ಸುರುವಿದ ಸುವರ್ಣ ಮುದ್ರೆಗಳನ್ನು ಹೆಂಡತಿಗೆ ಕೊಡಬೇಕೆಂದು ಮಹೇಶನು ಆ ಧನರಾಶಿಯನ್ನು ಕಟ್ಟಿಕೊಂಡು ಒಳಗೆ ಹೋದನು. ಪರಕ್ಷಣದಲ್ಲಿ ಆ ಸುವರ್ಣ ಮುದ್ರೆಗಳನ್ನು ತೆಗೆದುಕೊಂಡು ಓರ್ವ ಸ್ತ್ರೀಯು ಕರುಣಾಸ್ವರದಿಂದ ರೋದಿಸುತ್ತ ಹೊರಗೆ ಬಂದು ಅವುಗಳನ್ನು ಖಾನನ ಮೈಮೇಲೆ ಚೆಲ್ಲಿ ಬಾಲಸಂಭಾಜಿಯನ್ನು ಕೈಚಾಚಿ ಹೃದಯಕ್ಕೆ ಅಪ್ಪಿಕೊಂಡು, ಮಹೇಶನನ್ನು ದುರುದುರು ನೋಡುತ್ತ ಮಾತಾಡಿದಳು. 'ಬೆಂಕಿ ಹಚ್ಚಲಿ ನಿಮ್ಮ ಸ್ವಾರ್ಥಕ್ಕೆ. ನಾಚಿಕೆ ಇಲ್ಲವೆ ನಿಮಗೆ? ಹೊಟ್ಟೆಯ ಕರಳನ್ನು ಒಡಲುಹರಿದುಕೊಳ್ಳಲು ದಿಟ್ಟತನದಿಂದ ಮಾರುವ ಮಾನವರಿಗೆ ರಾಕ್ಷಸನೆನ್ನಬೇಕೋ ಹೇಗೆ? ಈ ಕೂಸು ಸಂಭಾಜಿಯೆಂದು ಸುಳ್ಳೊಂದು ಸುಟ್ಟೊಂದು ಹೇಳಿ ಈ ದಯವಂತಖಾನರನ್ನು ಮೋಸಗೊಳಿಸಬೇಕೆಂದು ಮಾಡಿದ್ದರಲ್ಲವೆ? ಸುಭೇದಾರಸಾಹೇಬ! ತಮ್ಮ ಕಾಲಿಗೆ ಬೀಳುವೆನು. ನನ್ನನ್ನು ತಮ್ಮ ಧರ್ಮಭಗಿನಿಯೆಂದು ತಿಳಿದು ಈ ಕೂಸನ್ನು-ನನ್ನ ಕಂದಮ್ಮನನ್ನು ನನಗೆ ಕೊಡಿರಿ. ಪುತ್ರದಾನ ಮಾಡಿ ಪುಣ್ಯಶ್ರೀಯೋಭಾಗಿಗಳಾಗಿರಿ.'

ಹೀಗೆ ಗಿರಿಬಾಲೆಯು ಕಾನನದೊಳಗಿನ ಕರಿಯಬಂಡಿಯು ಕರಗುವಂತೆ ವಿಲಾಪಿಸುತ್ತ ನಿಜವಾಗಿಯೂ ಖಾನನ ಪಾದಗಳನ್ನು ಗಟ್ಟಿಯಾಗಿ ಹಿಡಿದಳು.

ಕೃತಾಂತನ ಹೃದಯುವನ್ನು ಕರಗಿಸುವಂತಹ ಆ ಕರುಣಾದ್ರಶ್ಯವನ್ನು ನೋಡಿ ಆ ನೀಚ ಖಾನನ ಕಠೋರ ಹೃದಯುವು ಕೂಡಾ ಕರಗಿಸೀರಾಯಿತು. ಮಹೇಶ ಸ್ವಾಮಿಯನೇತ್ರಗಳು ಅಶ್ರುಪೂರ್ಣವಾದವು. ಬಾಲರಾಜನ ಕಣ್ಣುಗಳೊಳಗಿಂದಲೂ ಕಂಬನಿಗಳು ಉದುರಹತ್ತಿದವು. ಧನ್ಯಳವ್ವಾ! ವೀರ ಮಹಿಳೇ! ಆರ್ಯ ಲಲನಾ ಮಣಿಯರ ಕೀರ್ತಿಧ್ವಜವನ್ನು ಮೆರೆಯಿಸಿದ ನೀನು ಧನ್ಯಳವ್ವಾ ಧನ್ಯಳು!

ಸುಭೇದಾರನು ತಾನು ಮೋಸ ಹೊಂದಿದೆನೆಂದೂ ಇವನು ಸಂಭಾಜಿ ಅಲ್ಲವೆಂದೂ ತಿಳಿದು ತನ್ನ ಸೇನೆಯೊಡನೆ ಹೊರಟುಹೋದನು. ಈ ಅನಿಷ್ಟ ಪ್ರಸಂಗದಿಂದ ಪಾರಾದೆವೆಂದು ಮೂವರಿಗೂ ಸಮಾಧಾನವಾಯಿತು. ಗಿರಿಬಾಲೆಯು ರಾಷ್ಟ್ರಧರ್ಮಕ್ಕಾಗಿ ತನ್ನಿಂದ ಸಹಾಯವಾಯಿತೆಂದು ಸಂತೋಷವನ್ನು ಹೊಂದಿದಳು. ಆದರೆ ಇನ್ನು ಮುಂದೆ ಮಹೇಶನ ವಿರಹ ದುಃಖವನ್ನು ಸಹಿಸುವದು ಕಷ್ಟಸಾಧ್ಯವೆಂದೂ ಮತ್ತು ಈ ಮಠದಲ್ಲಿರುವದು ಅಪಾಯಕರವೆಂದು ಯೋಚಿಸಿ ಮಹೇಶನಿಗೆ ಒಂದು ಪತ್ರವನ್ನು ಬರೆದಿಟ್ಟು ಆ ಕ್ಷಣವೇ ಅದೃಶ್ಯಳಾದಳು. ಮಹೇಶ ಸಂಭಾಜಿಯರಿಬ್ಬರು ಅವಳನ್ನು ಬಹು ಸರಿಯಾಗಿ ಶೋಧಿಸಿದರು. ಆದರೆ ಅವರ ಇಚ್ಛೆಯು ಫಲಕಾರಿಯಾಗಲಿಲ್ಲ. ಆದರೆ ಅವಳು ಬರೆದಿಟ್ಟ ಪತ್ರವು ಮಾತ್ರ ಮಹೇಶನಿಗೆ ದೊರೆಯಿತು. ಆ ಪತ್ರವಲ್ಲಿ ಹೀಗಿತ್ತು.

"ಪ್ರಿಯ ಸ್ವಾಮಿನ್!

ಬಹುದಿವಸದಿಂದ ನನ್ನ ಹೃದಯಮಂದಿರದಲ್ಲಿ ನಿಮ್ಮ ಮೂರ್ತಿಯನ್ನು ಪ್ರತಿಷ್ಠಾಪಿಸಿದ್ದರಿಂದ-ಪ್ರೇಮಸರ್ವಸ್ವವನ್ನು ಅರ್ಪಿಸಿದ್ದರಿಂದ ನಾನು ಲೋಕದಲ್ಲಿ ಬಹು ಸುಖಿಯೆಂದು ತಿಳಿದಿದ್ದೆನು. ಆದರೆ ಮಹೇಶಾ! ಆ ನಿನ್ನ ಪ್ರೇಮಮಯ ಮೂರ್ತಿಯನ್ನು ಶ್ರೀ ಸಮರ್ಥರು ನನ್ನ ಹೃದಯದಿಂದ ಅಂತರಿಸಿದರು. ಉಪಾಯವಿಲ್ಲ. ನಿಮ್ಮ ವಿರಹದುಃಖವನ್ನು ಇನ್ನು ನನ್ನಿಂದ ತಡೆಯುವದು ಅಸಾಧ್ಯ. ಇಂತಹ ಅಪವಿತ್ರ ದೇಹವನ್ನು ಈ ಪುಣ್ಯಕ್ಷೇತ್ರದಲ್ಲಿರಗೊಡುವದು ಪಾಪಕರವೆಂದು ತಿಳಿದು ಇಲ್ಲಿಂದ ಹೊರಟಿರುವೆನು. ನನ್ನ ನಿಮ್ಮ ದರ್ಶನವು ಸ್ವರ್ಗಲೋಕದಲ್ಲಿ! ಸ್ವಾಮಿನ್! ಈ ನನ್ನ ಅಪರಾಧವನ್ನು ಕ್ಷಮಿಸಿರಿ. ಈ ರಹಸ್ಯಸ್ಫೋಟವನ್ನು ತಾವು ಪ್ರಾಣ ಹೋದರೂ ಮಾಡಬಾರದು. ಓದಿ ಪತ್ರವನ್ನು ಹರಿದುಬಿಡಿರಿ." ಇಷ್ಟೇ ನನ್ನ ಬೇಡಿಕೆ.

ತಮ್ಮ ಸೇವಿಕಾ,

**ಗಿರಿಬಾಲೆ.**

೭.

ಇಂದು ರಾಯಗಡದಲ್ಲಿ ಮಹೇಶನ ಅಪರಾಧದ ವಿಚಾರಣೆಯ ಸಲುವಾಗಿಯೇ ಶಿವಾಜಿ ಮಹಾರಾಜನು ಓಲಗವನ್ನು ನೆರೆಯಿಸಿದ್ದನು. ಮಹೇಶನು ಅಧೋ

ಮುಖನಾಗಿ ಆ ಓಲಗಮಧ್ಯದಲ್ಲಿ ನಿಂತಿದ್ದನು. 'ಎಲೋ ಸನ್ಯಾಸಿಯೇ ಸಂಭಾಜಿಯ ಹೇಳಿಕೆಯಂತೆ ನಿನ್ನಿಂದ ಅಂತಹ ಕೃತ್ಯಗಳೇಕೆ ಘಟಿಸಿದವು ?' ಶಿವಾಜಿಯು ಸಂತಪ್ತನಾಗಿ ನುಡಿದನು. ಸಭೆಯು ಶಾಂತವಾಯಿತು

ಎಲ್ಲರ ಲಕ್ಷ್ಯವು ಮಹೇಶನ ಕಡೆಗಿತ್ತು. ಘನಗಂಭೀರವಾಣಿಯಿಂದಲೂ ನಿಶ್ಚಯ ಮುದ್ರೆಯಿಂದಲೂ ಮಹೇಶನು ಮಾತಾಡಹತ್ತಿದನು. "ರಾಜಾ! ನಿಜವಾಗಿಯೂ ನಾನು ಅಪರಾಧಿಯಲ್ಲ. ಆದರೆ ಅಲ್ಲಿ ನಡೆದ ಘಟನೆಗಳಿಂದಲೇ ಯುವರಾಜರಲ್ಲಿ ಪ್ರಾಣರಕ್ಷಣೆಯಾಯಿತು. ಈ ವಿಷಯದ ರಹಸ್ಯಸ್ಫೋಟಮಾಡಬಾರದೆಂಬದಾಗಿ ಬಾಲರಾಜರ ರಕ್ಷಕಳಾದ ಆ ಪವಿತ್ರಮೂರ್ತಿಯಿಂದಲೇ ನಾನು ವಚನಬದ್ಧನಾಗಿರುವೆನು. ಲೋಕ ವ್ಯವಹಾರಕ್ಕನುಸಾರವಾಗಿ ನಾನೇನೋ ದೋಷಿ ಎಂಬದು ನಿಜ. ಆದರೆ ಪರಮೇಶ್ವರನ ಚರಣಸನ್ನಿಧಿಯಲ್ಲಿ ನಾನು ನಿರ್ದೋಷಿಯು! ಆದರೂ ತಾವುಕೊಟ್ಟ ಶಿಕ್ಷೆಯನ್ನು ಭೋಗಿಸಲು ನಾನು ಸಿದ್ಧನಿರುವೆನು. "ನೀಚ! ದ್ರೋಹವನ್ನು ಮಾಡಿ ಮತ್ತೆ ನಿರ್ದೋಷಿಯೆಂದು ಹೇಳಲು ನಿನಗೆ ನಾಚಿಕೆ ಬರುವದಿಲ್ಲವೆ? ನಿನ್ನಂತಹ ಪಾಪೀ ಹೃದಯವನ್ನು ಹದ್ದು-ನರಿ-ನಾಯಿಗಳಿಗೆ ತಿನ್ನಿಸುವದೇ ನೀನು ಮಾಡಿದ ಪಾಪಕ್ಕೆ ಯೋಗ್ಯ ಪ್ರಾಯಶ್ಚಿತ್ತವು." ಮಹಾರಾಜರ ಈ ಕಠೋರ ಶಿಕ್ಷೆಯನ್ನು ಕೇಳಿ ಓಲಗವು ಆಶ್ಚರ್ಯಮಗ್ನವಾಯಿತು. ಮುಂದೆ ಸ್ವಲ್ಪ ವೇಳೆಯಲ್ಲಿ ಸಭೆ ವಿಸರ್ಜನೆಯಾಯಿತು. ಆನಂತರದಲ್ಲಿ ಶಿವರಾಯನು ಆಕ್ಷಣವೇ ಮಹೇಶನ ಶಿಕ್ಷೆಯನ್ನು ಪ್ರಚಾರದಲ್ಲಿ ತಂದನು. ಮಹೇಶನು ಹೀಗೆ ಸ್ವಜನರಿಂದ ಅತ್ಯಂತ ದಾರುಣವಾದ ಯೋಚನೆಗಳನ್ನು ಹೊಂದಿ ಕೊಲ್ಲಲ್ಪಟ್ಟನು. ತರುವಾಯ ಈ ದುಃಖದಸಂಗತಿಯು ಶ್ರೀ ಸಮರ್ಥರ ಕಿವಿಗೆ ತಲುಪಿದ ಕೂಡಲೇ ಅವರು ಬಂದು ಶಿವರಾಯನಿಗೆ ಕಾಶಿಯಲ್ಲಿ ನಡೆದ ನಿಜಸಂಗತಿಯನ್ನು ಹೇಳಿ ಮಹೇಶನು ನಿರ್ದೋಷಿಯೆಂಬದನ್ನು ನಂಬುಗೆ ಮಾಡಿಕೊಟ್ಟಮೇಲೆ ಶಿವಾಜಿಗೂ ತಾನು ಮಾಡಿದ ಅಪರಾಧಕ್ಕಾಗಿ ಪಶ್ಚಾತ್ತಾಪಬಟ್ಟನು. ಆದರೆ ಹೋದ ಜೀವವು ತಿರುಗಿ ಬರುವದೆಂತು? ದೇಶ ಧರ್ಮ ರಕ್ಷಣೆಗಾಗಿ "ಆತ್ಮಾಹುತಿ" ಯನ್ನಿತ್ತ ಮಹೇಶನು ಧನ್ಯನೇಸರಿ!

ಭಾರತ ಭೂಮಾತೆಯು ಇಂತಹ ನರವೀರ ಪುತ್ರರನ್ನು ಪೆತ್ತು ಇಂದಿನವರೆಗೂ ತನ್ನ ಒಗರನ್ನು ಕಾಯ್ದುಕೊಂಡಿರುವಳು. ಭರತವರಷದ ಸಧ್ಯದ ಅವನತಿ ಕಾಲದಲ್ಲಿ ಮಹೇಶನಂತಹ ಸ್ವದೇಶ ಪ್ರೇಮಿಗಳಾದ ಜನರ ಆವಶ್ಯಕತೆಯು ಬಹಳವಾಗಿರುವದು. ಪರಮಾತ್ಮನು ಅಂತಹ ನರರತ್ನಗಳನ್ನು ಆರ್ಯ ಭೂಮಿಯಲ್ಲಿ ಸೃಷ್ಟಿಸಲಿಕ್ಕಿಲ್ಲವೇನು?

[ ಸಂಪೂರ್ಣ. ]

## ವೀರಶೈವ ಬಾಲೆ

# ಪಾರ್ವತಿ.

ಲೇಖಕ :— ಶ್ರೀನಿವಾಸತನಯ.

ಪಾರ್ವತಿಯು ವೀರಶೈವ ಬಾಲೆಯಾಗಿದ್ದರೂ ಹಳೇಪದ್ಧತಿಯ ಮೂಢ ಸ್ತ್ರೀಯಾಗಿರಲಿಲ್ಲ. ತನ್ನ ಪಿತಾಪಿತರಗಳನ್ನು ತಿಳಿದುಕೊಳ್ಳುವಷ್ಟು ಯೋಗ್ಯತೆಯುಳ್ಳವಳಾಗಿದ್ದಳು. ಅವಳು ಕನ್ನಡ ನಾಲ್ಕನೇಯತ್ತೆಯಲ್ಲಿ ತೇರ್ಗಡೆಹೊಂದಿ ಐದನೇಯತ್ತೆಯ ಅಭ್ಯಾಸವನ್ನು ಕೈಕೊಂಡಿದ್ದಳು. ಅವಳು ನಿತ್ಯಕ್ರಮವನ್ನು ಎಂದೂ ಮರೆಯುತ್ತಿದ್ದಿಲ್ಲ. ಮುಂಜಾನೆಯಲ್ಲಿಯೇ ಎದ್ದು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ವಿಭೂತಿಯನ್ನು ಹಚ್ಚಿಕೊಂಡು ಮಾತಾಪಿತೃಗಳಿಗೆ ವಂದನೆಯಂ ಮಾಡಿ ನಂತರ, ಯೋಗೀಶ್ವರರೂ ಶರಣುಬಂದ ಭಕ್ತರ ಮನೋಭೀಷ್ಟವನ್ನು ನೆರವೇರಿಸುವ ಕರುಣಾಶಾಲಿಗಳಾದ ಫಕೀರಸ್ವಾಮಿಗಳ ಚರಣಧೂಳಿಯನ್ನು ಶಿರದಲ್ಲಿ ಧರಿಸಿ ಸಾಲೆಗೆ ಹೋಗುವದು ಅವಳ ನಿತ್ಯಕ್ರಮವಾಗಿತ್ತು. ಅವಳ ತಂದೆಯು ಅಷ್ಟೇನೂ ಶ್ರೀಮಂತನಲ್ಲ. ಪೂರ್ವಜರು ಗಳಿಸಿಟ್ಟಿದ್ದ ನಾಲ್ಕು ಕೂರಿಗೆ ಜಮೀನನ್ನೇ ಮನೆಯಲ್ಲಿ ಎರಡು ಎತ್ತುಗಳನ್ನು ಕಟ್ಟಿಕೊಂಡು ಭೂಮಿಯ ಸಾಗುವಳಿಯನ್ನು ಮಾಡಿ ಅದರಲ್ಲಿ ಬಂದ ಜೋಳ-ಕಾಳುಗಳಲ್ಲಿಯೇ ಸಂಸಾರವನ್ನು ಸಾಗಿಸಿಕೊಂಡು ಸುಖರೂಪದಿಂದಿದ್ದನು. ಇವನ ಹೆಂಡತಿ ಮಲ್ಲಮ್ಮನು ಅವಿದ್ಯಾವಂತಿಯಾಗಿದ್ದರೂ ಪತಿಭಕ್ತಿಪರಾಯಣಳಾಗಿದ್ದಳು. ಇವಳಾದರೋ ತನ್ನ ಆಯುಷ್ಯದಲ್ಲಿ ಯಾವ ದೇವರಿಗಾಗಲಿ ಸ್ವಾಮಿಗಳಿಗಾಗಲಿ ಕೈ ಮುಗಿದವಳಲ್ಲ. ಎಲ್ಲವೂ ಪತಿಯೆಂದೇ ಭಾವಿಸಿ ನಡೆದುಕೊಳ್ಳುತ್ತಿದ್ದಳು. ಜನವೀರಪ್ಪನಾದರೂ ಅವಳಲ್ಲಿ ತುಂಬಾ ಮಮತೆಯುಳ್ಳವನಾಗಿದ್ದನು.

ತನ್ನ ಬಡತನದಲ್ಲಿಯೇ ಮಗಳನ್ನು ಬಹು ಅಕ್ಕರತೆಯಿಂದ ಸಲುಹಿದ್ದನು. ಪಾರ್ವತಿಯು ಹನ್ನೆರಡು ವರ್ಷದವಳಾದಳೆಂದು ಅವಳ ಮದುವೆಯ ಚಿಂತೆಯು ಈ ಬಡದಂಪತಿಗಳನ್ನು ಬಾಧಿಸದೆ ಬಿಡಲಿಲ್ಲ. ಇಷ್ಟರೊಳಗಾಗಿ ಎಷ್ಟೋ ಶ್ರೀಮಂ

ತರು ಪಾರ್ವತಿಯ ಲಗ್ನದ ವಿಷಯವನ್ನು ಚನವೀರಪ್ಪನೊಡನೆ ಚರ್ಚಿಸಿದ್ದರು. ಆದರೆ ಪಾರ್ವತಿಯೇ ಒಪ್ಪಿಗೆಯನ್ನಿತ್ತಿರಲಿಲ್ಲ. ಅವಳಿಗಿನ್ನೂ ಕಲಿಯುವ ಆಶೆ. ಪಾರ್ವತಿಯ ರೂಪವೇನೂ ಬಹಳ ಹೇಳಿಕೊಳ್ಳುವಂಥಾದ್ದಲ್ಲ. ಗಿಡ್ಡತರಹಾ ಸಾದ ಗಪ್ಪು. ತುಂಬಿದ ಗಲ್ಲ. ನಸುಗೆಂಪಿನ ತುಟಿ. ಅರಳಲಿರುವ ಕಮಲಸದೃಶ್ಯವಾದ ನೇತ್ರ. ಈಗಲೀಗ ಹೊರಸೂಸುವ ಕುಚಯುಗ್ಮಗಳಿಂದೊಡಗೂಡಿದ ಪಾರ್ವತಿಯು ಗಂಭೀರಮುಖಭಾವದೊಡನೆ ಮಂದಗಮನೆಯಾಗಿ ಸಾಲೆಗೆ ಹೋಗುತ್ತಿರುವಾಗ ಅವಳನ್ನು ನೋಡಿದವರೆ ಸುಹೃದಯಗಳಿಗೆ ಪೂಜ್ಯಭಾವವೂ, ದುಷ್ಟರಿಗೆ ದುರ್ಭಾವನೆಗಳೂ ಸಹಜವಾಗಿ ಉದ್ಭವಿಸುತ್ತಿದ್ದವು. ಹೀಗೆಯೇ ಕೆಲವುಕಾಲಕಳೆದನಂತರ ಊರಲ್ಲಿ ಬಡ್ಡಿಯ ಹಣದಿಂದ ಕೊಬ್ಬಿದ ಸಾಹುಕಾರ ಪುತ್ರನೊಬ್ಬನು ಪಾರ್ವತಿಗೆ ಪಾಶಹಾಕಬೇಕೆಂದೆಣಿಸಿ, ಪಾರ್ವತಿಯ ತಂದೆಯಾದ ಚನವೀರಪ್ಪನನ್ನು ಮನೆಗೆ ಕರಿಸಿ ನನಗೆ ನಿನ್ನ ಮಗಳನ್ನು ಲಗ್ನಮಾಡಿಕೊಡೆಂಬದಾಗಿ ಕೇಳಿದನು. ಅದಕ್ಕೆ ಚನವೀರಪ್ಪನೂ ಆಗಲಿ ಸಾಹುಕಾರರೇ ಮನೆಯಲ್ಲಿ ಕೇಳಿ ತಿಳಿಸುತ್ತೇನೆಂದು ಉತ್ತರವಿತ್ತನು. ಅದಕ್ಕೆ ಸಾಹುಕಾರಪುತ್ರನು ಅಹಂಕಾರಯುಕ್ತನಾಗಿ— ನೋಡು. ನಿನ್ನ ಮಗಳನ್ನು ನನಗೆ ಕೊಟ್ಟೆಯಾದರೆ ಒಳಿತು. ಇಲ್ಲವಾದರೆ ನೀನು ಈ ಊರಲ್ಲಿರುವದೇ ಕಠಿಣವಾದೀತು ಜೋಕೆ. ಎಂದು ಗದ್ದರಿಸಿದನು. ಇವನ ದರ್ಪೋಕ್ತಿಗಳನ್ನು ಕೇಳಿ ಸಾಧುವಾದ ಚನವೀರಪ್ಪನು ಮನಸ್ಸಿನಲ್ಲಿ ಭಯಭೀತನಾಗಿ, ಆಗಲಿ ಸಾಹುಕಾರರೇ ನಾನು ನಿಮಗೆ ಹೊರತಾಗಿರುವೆನೇ. ಎಂದು ಹೇಳಿ ಮನೆಗೆ ಹೊರಟು ಹೋದನು.

ಬಾಂಧವರೇ, ಶಿರಪುರವೆಂಬುದೊಂದು ಹುಬ್ಬಳ್ಳಿ-ಧಾರವಾಡದಂಥ ದೊಡ್ಡ ಪಟ್ಟಣವಲ್ಲದಿದ್ದರೂ ನಾಗರೀಕತೆಯ ಮರ್ಮವನ್ನರಿತ ಸಭ್ಯಗ್ರಹಸ್ಥರಿಂದ ತುಂಬಿದ ಸುಶೋಭಿತ ಪಟ್ಟಣವೆಂದೇ ಹೇಳಬಹುದು. ಊರಲ್ಲಿ ಕೋರ್ಟು-ಕಚೇರಿಗಳಾದರೂ ಇವೆ, ಬ್ರಾಹ್ಮಣ ವಸ್ತಿಯು ಇಲ್ಲಿ ವಿಶೇಷವಾಗಿದ್ದರೂ, ಲಿಂಗಾಂಗಿಗಳೂ ಇವರೂ ಜಾತಿಮತ್ಸರಕ್ಕೆ ಅವಕಾಶವನ್ನು ಕಲ್ಪಿಸದೇ ಒಬ್ಬರಿಗೊಬ್ಬರು ಸ್ನೇಹಭಾವದಿಂದಲೇ ಇದ್ದಾರೆ. ಅಂತೇ ಫಕೀರಸ್ವಾಮಿಗಳು ಇಲ್ಲಿ ವಾಸಮಾಡಿಕೊಂಡು ತಮ್ಮ ಪ್ರಭಾವದಿಂದ ಸರ್ವಜಗತ್ತನ್ನೇ ಬೆಳಗುತ್ತಲಿದ್ದಾರೆ. ಮಠದ ಪ್ರಕಾರವಾದರೂ ಬಹುದೊಡ್ಡದು. ನಗಾರಖಾನೆಯಂತೂ ಬಹು ಚಿತ್ತಾಕರ್ಷಕವಾಗಿದೆ. ಪ್ರತಿವರುಷ ನಡೆಯುತ್ತಿರುವ ಫಕೀರೇಶನ ಜಾತ್ರೆಯು ಬಹು ವಿಜ್ರಂಭಣೆಯಿಂದ ನೆರವೇರುತ್ತದೆ. ತೇರಿನ ಮರುದಿನ ಕಡಬಿನಕಾಳಗದಲ್ಲಿ ಕುದುರೆಯನ್ನೇರಿ ಬೆಲ್ಲವನ್ನು ತೂರುತ್ತಾ ಬರುತ್ತಿರುವ ಆ ರಾಜಯೋಗಿಯಾದ ಫಕೀರೇಶನನ್ನು ನೋಡದ ವೀರಶೈವನ ಜನ್ಮವು ವ್ಯರ್ಥವೇ ಸರಿ! ಫಕೀರೇಶನ ಮಹತಿಯು ವರ್ಣನಾತೀತವೇ ಸರಿ. ಅಂದಮೇಲೆ ಇಂಥಾ ತಪೋವರನ ಯಾತ್ರೆಯ ಸಮಾರಂಭವನ್ನು ಹೇಗೆ

ನೋಡೇವೆಂಬ ಆತುರಮನಸ್ಸುಳ್ಳವರಾಗಿರುವಿರೇನು ? ಛೇ, ಇದಕ್ಕೇಕೆ ಇಷ್ಟೊಂ ದುಚಿಂತೆ. ಹೇಗೂ ಇದು ವೈಶಾಖಮಾಸವಲ್ಲವೇ!? ಅದೋ ನೋಡಿ, ಜಾತ್ರೆಗಾಗಿ ಎಲ್ಲ ದೇಶದ ದನದವ್ಯಾಪಾರಿಗಳು ಎಷ್ಟು ಉತ್ಸಾಹದಿಂದ ಬರುತ್ತಲಿದ್ದಾರೆ. ಚಹಾ-ಸೋಡಾ-ಮಿಠಾಯಿಗಳ ವ್ಯಾಪಾರವನ್ನು ಎಷ್ಟು ತೀವ್ರ ಸುರುವು ಮಾಡುವೆವೋ ಅಷ್ಟು ಲಾಭವಾಗುವದೆಂದು ಹೇಗೆ ಸ್ಫೂರ್ತಿಯಿಂದ ಕಾರ್ಯ ಮಾಡುತ್ತಲಿದ್ದಾರೆ ನೋಡಿ. ಹಾಗಾದರೆ ಜಾತ್ರೆಯು ಕೂಡಿರಬಹುದೇನು ? ಕೂಡದೆ ಏನು. ಬನ್ನಿ ಜಾತ್ರೆಯ ಮೋಜನ್ನಷ್ಟು ನೋಡುವಾ. ಈ ಮಿಠಾಯಿ-ಚಹಾದ ಅಂಗಡಿ ಸಾಲುಗಳು ಎಷ್ಟು ರಮಣೀಯವಾಗಿವೆ. ಈ ಅಂದಚಂದಗಳನ್ನು ನೋಡಲು ಉತ್ಸುಕರಾಗಿ ಎಷ್ಟೋ ತರುಣ-ತರುಣಿಯರು ಗುಂಪುಗುಂಪಾಗಿ ಬರುತ್ತಲಿದ್ದಾರೆ. ಈ ಮಧ್ಯದಲ್ಲಿ ಹಲವು ಹೊಸ ತರುಣರು ಓರೆ ಟೊಪ್ಪಿಗೆ ಹಾಕಿ ಎಡಗೈಯಿಂದ ಕ್ರಾಫ್ ತೀಡಿಕೊಳ್ಳುತ್ತ ಒಸಡೆಯಲ್ಲಿ ಸಿಗರೇಟೊಂದನ್ನು ಇಟ್ಟುಕೊಂಡು ತಮ್ಮ ಸಾಂಕೇತಿಕ ತರುಣಿಯರಿಗೆ ನೇತ್ರಚಾಪಲ್ಯದ ಸೂಚನೆಯನ್ನು ಬೀರುತ್ತ ಒಬ್ಬರಿಗೊಬ್ಬರು ಹಸ್ತಲಾಘವದಿಂದ ನಗುತ್ತ ಕಲೆಯುತ್ತ ನಿಂತಿದ್ದಾರೆ. ಎಲಾ ಇದೇನು ? ಪೋಷಾಕು ನೋಡಿದರೆ ಸಭ್ಯರೆಂದು ತೋರುತ್ತಾರೆ. ಇವರು ಇಲ್ಲಿ ನಿಂತಿರುವದೇಕೆ ? ಈ ರಗಳೆಯು ನಮಗೇಕೆಂದು ಸುಮ್ಮನೆ ಹೋಗಬಹುದಾಗಿತ್ತಲ್ಲವೇ ? ಪಾಪ ! ಅವರಿಗೂ ಏನೋ ಮನಸಿನ ಆಶೆ. ಇವಕ್ಕೆ ನಾವೇಕೆ ವಿಘ್ನವಾಗಬೇಕು.

ನಡೆಯಿರಿ ನಾವಿನ್ನು ಬಳೆಯ ಅಂಗಡಿಗಳ ಸಾಲಿಗೆ ಹೋಗೋಣ. ನೋಡಿ ನಮ್ಮ ಸ್ತ್ರೀಯರನ್ನು ಮೋಹಕ್ಕೆ ಗುರಿಮಾಡಿ ಹಣ ಶೆಳೆಯುವದಕ್ಕಾಗಿ ತಮ್ಮ ಬುದ್ಧಿವಂತಿಕೆಯನ್ನು ವೆಚ್ಚಮಾಡಿ ತಯಾರಿಸಿದ ಪರದೇಶದ ಬಳೆಗಳಿವು. ನೋಡಿದಿರಾ ಈ ಉತ್ಸವವನ್ನು ಕೇಳಿದಿರಾ ಈ ಕಾಮುಕರ ವ್ಯಂಗೋಕ್ತಿಗಳನ್ನು ಸ್ವಜನರೆಂಬ ಅಭಿಮಾನವಿಲ್ಲದೆ ಭಕ್ತಿಯಿಂದ ಫಕೀರೇಶನ ಅನುಗ್ರಹ ಪಡೆಯಲು ಬಂದ ಮಾನಿನಿಯರಿಗೆ ಈ ಅಧಮರು ಆಡುತ್ತಿರುವ ದುರ್ಭಾವದ ದುರ್ನುಡಿಗಳನ್ನು ಕೇಳಿ ನೀವೇನನ್ನುವಿರಿ. ಇಂಥಾ ಉತ್ಸವಕ್ಕೆ ನಮ್ಮ ಲಲನೆಯರನ್ನು ಹೇಗೆ ಕಳಿಸಬೇಕೆಂಬ ಗೊಂದಲದಲ್ಲಿರುವಿರೇನು ಹೌದು ನಿಮ್ಮ ವಿಚಾರವು ಸರಿಯಾಗಿದೆ.

ಬನ್ನಿ ದನಗಳನ್ನು ನೋಡುವಾ ಇಂಥಾ ಬೆಲೆಯುಳ್ಳ ಹೋರಿಯ ಜೊತೆಗಳು, ಇನ್ನಾವಸ್ಥಳದಲ್ಲಿಯೂ ನೋಡಲು ದೊರೆಯಲಾರವು. ಆದರೆ ಇದೇನು ಗೋವುಗಳ ಮಾರಾಟ ಈ ಸಾಹೇಬರು ಗೋವುಗಳ ಹಿಂಡನ್ನೇ ಖರೀದಿ ತಗೆದುಕೊಂಡರಲ್ಲಾ. ಏತಕ್ಕಾಗಿ ಕಸಾಯಿ ಖಾನೆಗೆ ಕಳುಹಿಸುವಕ್ಕಾಗಿಯೇ. ಅಯ್ಯೋ ದೈವವೇ ಯಾವ ಭಾರತೀಯರು ಗೋಮಾತೆಯ ಮಕ್ಕಳಿಂದ ಭೂಮಿಯನ್ನು ಬಿತ್ತಿ ಬೆಳೆದು ತಿಂದು ತೇಗುವರೋ, ಯಾವ ಗೋವಿನ ಹಾಲಿನಿಂದ ತಮ್ಮ ಶಿಶುಗಳ ಪಾಲನ

ಪೋಷಣೆಯನ್ನು ಮಾಡುವರೋ ಯಾವ ಆಕಳಿನ ಹಾಲಿನಿಂದ ದೇಹಾರೋಗ್ಯವನ್ನು ಹೊಂದಿ ಬಹುದಿವಸ ಬಾಳುವರೋ, ಇಂಥ ಭಾರತೀಯರು ನಮಗೆ ಜನ್ಮವನ್ನಿತ್ತ ಭೂದೇವಿಯು ಮೂವತ್ತೂರು ಕೋಟಿ ದೇವತೆಗಳಿಂದೊಡಗೂಡಿ ಗೋ ಹೃದಯದಲ್ಲಿ ವಾಸಿಸಿರುವಳೆಂಬದನ್ನು ಮರತೇ ಬಿಟ್ಟರೇನು? ಕೃತಘ್ನರೇ ಇಂಥ ಮಾತೆಯ ಉಪಕಾರವನ್ನು ಮರೆತು ಅವಳನ್ನು ಕಟುಗರ ಕೈಯಲ್ಲಿ ಕೊಟ್ಟು, ಅವಳ ಕುತ್ತಿಗೆ ಕೊಯ್ಯುವದನ್ನು ಕೌತುಕದಿಂದ ನೋಡುವ ಹಿಂದುಗಳೇ! ನಿಮ್ಮ ಹೃದಯವು ಇಷ್ಟು ಕ್ರೂರವಾಯಿತೇನು. ಪರದೇಶದ ಪಿಶಾಚಿಗಳನ್ನು ತೃಪ್ತಿಪಡಿಸುವದಕ್ಕಾಗಿ ನೀವು ನಿಮ್ಮ ಮಾತೆಯಾದ ಗೋಮಾಂಸವನ್ನರ್ಪಿಸುವಷ್ಟು ನೀಚ ಹೃದಯಿಗಳಾದಿರೇನು. ನಿಮ್ಮದಾದರೂ ಏನು ತಪ್ಪು. ಜಗತ್ತಿಗೇ ಮಾರ್ಗದರ್ಶಕರಾದ ಬ್ರಾಹ್ಮಣರೇ ಗೋಧನ ಕಾಪಾಡುವದನ್ನು ಬಿಟ್ಟು, ವಿಲಕ್ಷಣ ದ್ರವ್ಯಾರ್ಜನೆಯ ಹಂಬಲಕ್ಕೆ ಬಿದ್ದು, ಪಾಪಮಾರ್ಗಪ್ರವರ್ತರಾದಮೇಲೆ ಯಾರೇನು ಮಾಡುವಹಾಗಿದೆ. ಆಗಲಿ ಕರ್ಮಕ್ಕೆ ತಕ್ಕ ಫಲವು ಸಿಕ್ಕೇ ಸಿಗುವದು. ಪ್ರೇಕ್ಷಕ ಮಹಾಶಯರೇ ಬನ್ನಿ ಮುಂದಕ್ಕೆ ಹೋಗುವಾ. ಎಲಾ ಈ ಮನುಷ್ಯನು ಅಳುವನೇಕೆ? ಅಯ್ಯಾ ನಿನ್ನ ದುಃಖಕ್ಕೆ ಕಾರಣವೇನು ಸ್ವಾಮಿ ನಾನೊಬ್ಬ ರೈತಾ ಹೋರಿಗಳನ್ನು ಕೊಳ್ಳಲು ಬಂದೆ. ಇಲ್ಲಿ ಒಂದು ಬಿಲ್ಲಿಗೆ ಐದು ಬಿಲ್ಲಿಯೆಂದು ಇವರು ಕೂಗುತ್ತಿದ್ದರು. ಆಶೆಗೆ ಬಿದ್ದು ಈ ಜೂಜಾಟವನ್ನಾಡಿದೆ. ನನ್ನ ಮುನ್ನೂರು ರೂಪಾಯಿಗಳು ಹೋಗಿಬಿಟ್ಟವು. ಇನ್ನು ನಾನು ಹೇಗೆ ಬದಕಲಿ. ನನ್ನ ಹೆಂಡರು ಮಕ್ಕಳನ್ನು ರಕ್ಷಿಸುವ ಉಪಾಯವೇನು ಎಂದು ಅಳಹತ್ತಿದನು. ರೈತ, ಮನುಷ್ಯ ಜೂಜಾಟವನ್ನಾಡಿಯೇ ಪಾಂಡವರು ವನವಾಸದ ದುಃಖಕ್ಕೀಡಾದರು. ಅಂತೇ ನಮ್ಮ ಗುರುಹಿರಿಯರು ಜೂಜಾಡಬೇಡಿರೆಂದು ಕ್ಷಣ ಕ್ಷಣಕ್ಕೆ ಹೇಳುತ್ತಿರುವರು. ಆ ಅನುಭವಶಾಲಿಗಳ ವಾಕ್ಯಗಳನ್ನು ಮೀರಿನಡೆದ ಪ್ರಾಯಿಶ್ಚಿತ್ತವನ್ನು ಅನುಭೋಗಿಸು. ಮಾಡಿದ್ದುಣ್ಣೋ ಮಾರಾಯಾ. ಇನ್ನು ಮಿಠಾಯಿ ಅಂಗಡಿಗಳ ಸೊಬಗನ್ನಷ್ಟು ನೋಡುವಾ. ಅಯ್ಯೋ ದುರ್ಗಂಧವೇ ಶಹರಗಳಲ್ಲಿಯ ರಕ್ಕಸಗಳವಾಸನೆಗಿಂತಲೂ ತೀಕ್ಷ್ಣವಾದೆ. ಕರೆದು ಕರೆದು ಹಸರೇರಿದ ಯಣ್ಣೆಯಲ್ಲಿ ತಯಾರಿಸಿದ ನಾನಾಥರದ ಬಣ್ಣದಿಂದೊಪ್ಪುವ ಧೂಳು ಮಿಶ್ರಿತ ಮಿಠಾಯಿಗಳು ಜ್ಞಾನಶೂನ್ಯರಾದ ಹಳ್ಳಿಗರನ್ನು ಆಕರ್ಷಿಸದೆ ಬಿಡಲಾರವು. ರೋಗಾಗಾರಕ್ಕೆ ಮೂಲಾಧಾರವಾದ ಈ ಹಳಸಿದ ಪದಾರ್ಥಗಳನ್ನು ತಿಂದು ರೋಗಗ್ರಸ್ತರಾಗಿ ನೆರಳುವ ಯಾತ್ರಿಕರ ಗೋಳನ್ನು ಫಕೀರೇಶನೇ ಕೇಳಬೇಕು. ಉಳಿದವರಿಗಿದು ಅಸಾಧ್ಯವೇ. ಇರಲಿ ಬನ್ನಿ ಆ ಪಾರ್ಶ್ವದಲ್ಲಿ ಕಾಣುವದೇನು ಆ ಗುಡಿಸಲುಗಳೇತರವು ಅವುಗಳ ಮುಂದೆ ತಂಡ ತಂಡವಾಗಿ ತಿರುಗಾಡುತ್ತಿರುವ ಮಹಾನುಭಾವರಾರು. ಆ ಚಮತ್ಕಾರವನ್ನಷ್ಟು ನೋಡುವಾ! ಇದೇನರಿ ಬಿದರಿನ ಕಮಾನಿಗೆ ಈಚಲ ಚಾಪೆಯ ಹೊದಿಕೆ. ಅದರೊಳಗೊಂದು ಹೆಣ್ಣು ಪ್ರೇತಾ, ಅಲ್ಲಾ ಅದು ಪ್ರೇತವಲ್ಲಾ. ಅವಯವಗಳ ಚಲನವಲನೆಯು ಇದ್ದಯಾದ್ದರಿಂದ ಅದು

ಸಜೀವ ಪ್ರೇತವೆಂದು ಧೈರ್ಯವಾಗಿ ಹೇಳಬಹುದು. ಈ ಪ್ರೇತಕ್ಕಾಗಿ ಎರಗಿರುವ ಹದ್ದುಗಳನ್ನು ನೋಡಿ, ನಿಮಗೆ ನಗೆ ಬಂದಿರುವದೇನು? ಹೂಂ ನಗಬೇಡಿ ಇದೂ ಒಂದು ನಮ್ಮ ಮನ್ಮಥನ ಶ್ರಿಂಗಾರ ಚೇಷ್ಟೆಯ ಅಂತ್ಯಾವಸ್ಥೆ. ಕಾಮುಕರ ಕೊನೆಯ ಅವಸ್ಥೆ. ದೇವಕೀ ಹೃದಯವಿದೀರ್ಣವಾದ ಈ ದೃಶ್ಯವನ್ನು ನೋಡುವದಾದರೂ ಹೇಗೆ. ಇಂಥ ನೀಚ ಮನೋವೃತ್ತಿಯ ಕಾಮುಕರು ಹುಟ್ಟಿದ್ದರಿಂದಲೇ ನಮ್ಮ ಹಿಂದುಸ್ಥಾನವು ರಸಾತಲಕ್ಕೆ ಹೋಯಿತು. ನಮ್ಮ ಹಿಂದೂ ಮಹಿಳೆಯರಿಗೆ ಇದಕ್ಕಿಂತ ಹೆಚ್ಚಿನ ನರಕವು ಮತ್ತಾವದು. ಪರಮೇಶ್ವರಾ, ಅನಾಥರಾದ ನಮ್ಮ ಹಿಂದೂ ಸಮಾಜಕ್ಕೆ ಈ ಅಪವಾದವನ್ನು ಕಲ್ಪಿಸಬೇಕೆ ಛೇ, ಅವನದೇನು ತಪ್ಪು, ದ್ರವ್ಯಾರ್ಜನೆಗಾಗಿ ನಾವಾಗಿಯೇ ಅಗ್ನಿಯನ್ನು ಧುಮಿಕಿ ದೇವರೇ ಎಂದರೆ, ಅವನೇನು ಮಾಡಬೇಕು. ಯಾವ ಭರತಖಂಡದಲ್ಲಿ ಭಾರತೀಯರಿಗೆ ಸ್ವರ್ಗಸುಖವನ್ನು ಕೊಡಿಸಲು, ಮಹನ್ ಮಹನ್ ರುಷಿಗಳು ತಪವನ್ನಾಚರಿಸಲು ಕಟ್ಟಿಕೊಂಡ ಗುಡಿಸಲುಗಳು ಕಂಗೊಳಿಸುತ್ತಿದ್ದವೋ ಇಂಥ ನಮ್ಮ ದೇಶದಲ್ಲಿ ದರ್ಶನಮಾತ್ರದಿಂದ ದಹಿಸಿಬಿಡುವ ನರಕ ಭಾಜನರ ಗುಡಿಸಲಗಳನ್ನು ನೋಡುವ ಭಾರತೀಯರ ದುರ್ಭಾಗ್ಯಕ್ಕೆ ಬೆಲೆಯೇ ಇಲ್ಲಾ. ಛೇ ನಾವಿಲ್ಲಿ ಕ್ಷಣವಾದರೂ ನಿಲ್ಲುವದು ಯೋಗ್ಯವಲ್ಲ. ಈ ಸಂದರ್ಶನದಿಂದಾದ ಪಾಪಪರಿಹಾರಾರ್ಥವಾಗಿ ಫಕ್ಕೀರೇಶನ ದರ್ಶನವನ್ನು ತೆಗೆದುಕೊಂಡು ಪುನೀತರಾಗುವಾ, ನೋಡವು ಕವಿದಿದೆ ಮಳೆ ಬರುವಹಾಗಿದೆ ಬೇಗನೇ ಮನಿ ಶೇರೋಣ. ಎಲಾ ಇದೇನು ಕೂಗು, ಫಕ್ಕೀರೇಶಾ ಈ ಅನಾಥಳನ್ನು ರಕ್ಷಿಸು. ಅಯ್ಯೋ ಅಯ್ಯೋಯೆಂಬ ಆರ್ತಧ್ವನಿಯು ಓರ್ವ ಸ್ತ್ರೀಯಳದಾಗಿರಬೇಕು. ಹೌದು ಅಗೋ ಆ ಹೊಲದಲ್ಲಿ ಇಬ್ಬರು ಕುಡಕರು ಓರ್ವ ವೀರಶೈವ ಬಾಲೆಯನ್ನು ಬಲಾತ್ಕಾರವಾಗಿ ಎಳೆಯುತ್ತಲಿದ್ದಾರೆ. ಆ ದೀನ ಕುವರಿಯು ಭೀಕರ ಸ್ವರೂಪಿಗಳಾದ ಅವರ ಸಂಗಡ ಕಾದಲಸಮರ್ಥಳಾಗಿ “ ಫಕ್ಕೀರೇಶಾ ನನ್ನ ಮಾನವನ್ನು ರಕ್ಷಿಸು ” ಯೆಂದು ಕೂಗಿ ನೆಲಕ್ಕೆ ಬಿದ್ದುಬಿಟ್ಟಳು. ಈ ಕೂಗನ್ನು ಕೇಳಿ ಫಕ್ಕೀರೇಶನೇ ಬಂದನೋ

( ಮುಂದೆ ಸಾಗುವದು. )



# ಕನ್ನಡ ನುಡಿಯ ಪ್ರಾಚೀನತೆ.



ಪುಣೆಯ ವಸಂತ ವ್ಯಾಖ್ಯಾನ ಮಾಲೆಯ ಮಂಡಲದ ಪರವಾಗಿ,
ಶ್ರೀ. ಬೇಂದ್ರೆ ಅವರು,

" ಜ್ಞಾನೇಶ್ವರಿ ಗ್ರಂಥದ ಪೂರ್ವಕಾಲದಲ್ಲಿದ್ದ
ಕನ್ನಡ ವಾಙ್ಮಯ "

ಎಂಬ ವಿಷಯದ ಮೇಲೆ, ಬರೆದ ಗ್ರಂಥವನ್ನು ಪ್ರೋಫೇಸರ ಗೋಕಾಕರವರ ಅಧ್ಯಕ್ಷತೆಯಲ್ಲಿ ಓದಿದರು. ಅದನ್ನೇ ಇಲ್ಲಿ ಕನ್ನಡಿಸಿ ಕೊಡಲಾಗಿದೆ.

## ಜ್ಞಾನೇಶ್ವರಿ ಗ್ರಂಥದ ಪೂರ್ವದಲ್ಲಿದ್ದ ಕನ್ನಡ ವಾಙ್ಮಯ.



ಪ್ರಬಂಧ ಬರೆದವರು :— ಶ್ರೀ. ದ. ರಾ. ಬೇಂದ್ರೆ.

ಅನುವಾದಕರು :— ಶ್ರೀ. ರಾ. ಬಾ. ಬಾಜೇಹೊಸೂರ

ಆವುದಾದರೊಂದು ಭಾಷೆಗೆ ವ್ಯಾಕರಣ ಸಂಸ್ಕಾರದ ದೃಷ್ಟಿಯಿಂದ ವಾಙ್ಮಯದ ಸ್ವರೂಪವು ಬರಬೇಕಾದರೆ, ಮೂರು ಸಂಗತಿಗಳು ಅವಶ್ಯವಾಗಿ ಬೇಕಾಗುತ್ತವೆ.

(೧) ಆ ಭಾಷೆಯನ್ನಾಡುವ ಸಮಾಜ

(೨) ಆ ಸಮಾಜದಲ್ಲಿನ ವಿದ್ವಾಂಸರಾದ ಲೇಖಕ ವರ್ಗ

(೩) ಲೇಖಕ ವರ್ಗಕ್ಕೆ ಆಶ್ರಯವನ್ನೀಯುವ ಕೀರ್ತಿಪ್ರಿಯರಾದ ಧನಿಕ ವರ್ಗ, ಅಥವಾ ರಾಜವರ್ಗ, ಇವುಗಳಲ್ಲಿ ಆವವಾದರೂ ಎರಡು ಅನುಕೂಲವಾಗಿದ್ದರೆ, ಮೂರನೆಯದನ್ನು ಅನುಕೂಲ ಮಾಡಿಕೊಳ್ಳುವದಕ್ಕೆ ಬರುತ್ತದೆ.

ಕನ್ನಡ ಅಥವಾ ತತ್ ಸದೃಶವಾದ ಭಾಷೆಯನ್ನಾಡುವ ರಾಜವರ್ಗವು (ರಾಷ್ಟ್ರಕೂಟ, ಚಾಲುಕ್ಯಗಂಗ, ಕದಂಬ ಇತ್ಯಾದಿ) ವಿಂಧ್ಯಾಚಲ ಪರ್ವತದ ದಕ್ಷಿಣದಲ್ಲಿ ಪ್ರಬಲವಾಗಿದ್ದುದರಿಂದ, ಪಂಡಿತ ವರ್ಗಕ್ಕೆ ಆ ಭಾಷೆಯ ಏಳಿಗೆಗಾಗಿ ಯತ್ನಿಸಲು, ಸಹಜವಾಗಿಯೇ ಅನುಕೂಲ ಪರಿಸ್ಥಿತಿಯುಂಟಾಯಿತು. ಆ ಕಾಲದ ರಾಜವರ್ಗ ಹಾಗೂ ಪಂಡಿತವರ್ಗ ಇವುಗಳ ಸಂಯೋಗದಿಂದ ಕ್ರಿ. ಶಕದ, ೫ ನೇ. ೬ ನೇ ಶತಮಾನದ ಪೂರ್ವದಲ್ಲಿಯೇ ಕನ್ನಡದಲ್ಲಿ ಉಚ್ಚ ತರಗತಿಯ ಗ್ರಂಥರಚನೆಗೆ ಪ್ರಾರಂಭವಾಯಿತು.

ಮರಾಠಿ ಭಾಷೆಯನ್ನು ಸ್ವತಂತ್ರವಾಗಿ ಆಡುವ ರಾಜವರ್ಗವು ಸಾಧಾರಣವಾಗಿ ೧೧, ೧೨ ನೇ ಶತಮಾನದ ಪರ್ಯಂತ ಉತ್ಪನ್ನವಾಗಿರಲಿಲ್ಲ. ಮತ್ತು ಲೇಖಕ ವರ್ಗವು ಧರ್ಮದಿಂದ ಆವುದಿದ್ದರೂ, ಬಹುತರವಾಗಿ ಜಾತಿಯಿಂದ ಬ್ರಾಹ್ಮಣರದಾಗಿತ್ತು. ಆದ್ದರಿಂದ ಬ್ರಾಹ್ಮಣರಾದ ಆ ವಿದ್ವಾಂಸರು ಮರಾಠಿಯಂತಹ ಪ್ರಾಕೃತ ಭಾಷೆಗೆ ಸಹಜವಾಗಿಯೇ ಪ್ರತಿಕೂಲರಾಗಿದ್ದರು. ಹೀಗೆ ಎರಡೂ ದೃಷ್ಟಿಯಿಂದ ವಿರುದ್ಧ ಪರಿಸ್ಥಿತಿಯಿದ್ದುದರಿದ, ಮರಾಠಿ ಭಾಷೆಯಲ್ಲಿ ಪ್ರೌಢಗ್ರಂಥ ರಚನೆಗೆ ೧೨ ನೇ ಶತಮಾನದವರೆಗೆ ಪ್ರಾರಂಭವಾಗಲಿಲ್ಲವೆಂಬದಾಗಿ ತೋರುತ್ತದೆ.

ಕ್ರಿ. ಶಕದ ೫ ನೇ ಶತಮಾನಕ್ಕೆ ಮುಂಚಿತವಾಗಿಯೇ, ಕನ್ನಡ ಭಾಷೆಯ ಏಳಿಗೆಯು ಪ್ರಾರಂಭವಾಗಿರಲಿಕ್ಕೆಬೇಕು, ಎಂಬದಾಗಿ ಊಹಿಸಲು ಅವಕಾಶವಿದೆ. ಆ ಕಾಲದ ಶಿಲಾಲೇಖ ಹಾಗೂ ನಾಣ್ಯಗಳಲ್ಲಿ ಕಂಡು ಬರುವ ಕನ್ನಡ ಭಾಷೆಯೇ ಅದಕ್ಕೆ ಸಾಕ್ಷಿ. ಅಲ್ಲದೆ ಕ್ರಿ. ಶ. ೨ ನೇ ಶತಮಾನದಲ್ಲಿ ರಚಿತವಾದ ಒಂದು ಗ್ರೀಕ ಜನದ ಪ್ರಹಸನದಲ್ಲಿ ಕನ್ನಡ ಭಾಷೆಯಾಡುವ ಒಂದು ಸಂಪೂರ್ಣ ಪಾತ್ರವಿದೆ.

## ಜೈನ ಆಚಾರ್ಯರ ಕಾರ್ಯ.

೫ ನೇ ಶತಮಾನದಲ್ಲಿ ಸುಮಂತಭದ್ರ, ಕವಿಪರಮೇಷ್ಠಿ ಪೂಜ್ಯಪಾದ ಈ ಜೈನ ಆಚಾರ್ಯರು, ಕನ್ನಡ ಭಾಷೆಗೆ ವ್ಯಾಕರಣ, ಅಲಂಕಾರಾದಿ ಗ್ರಂಥಗಳನ್ನು ಬರೆದು ಅದಕ್ಕೊಂದು ವಿಶಿಷ್ಟ ಸ್ವರೂಪವನ್ನು ಕೊಟ್ಟರು. ಜಂಪೂ ಕಾವ್ಯಗಳ ಬರವಣಿಗೆಯಾದರೂ ಇದೇ ಕಾಲದಲ್ಲಿ ಪ್ರಾರಂಭವಾಯಿತು. ಅಂದರೆ ರಾಷ್ಟ್ರಕೂಟರನೃಪತುಂಗ ರಾಜನ ಪರ್ಯಂತ ಕನ್ನಡನಾಡಿನಲ್ಲಿ ಹದಿಮೂರು ಹದಿನಾಲ್ಕು ಜನ ಗ್ರಂಥಕರ್ತರು ಉದಯಿಸಿದರು. ಗಂಗರಾಜ, ದುರ್ವಿನೀತಿ ಇವರು ವೈಶಾಜ್ಯ ಬೃಹತ್ಕಥೆಗಳಿಗೆ, 'ವಡ್ಡಕಥಾ' ಎಂಬ ಹೆಸರನ್ನಿಟ್ಟು ಬರೆಸಿರಬೇಕಾಗಿ ತೋರುತ್ತದೆ. ಹಾಗೆಯೇ, ತುಂಬಲರಾಚಾರ್ಯರು, ಜೈನ ತತ್ವಜ್ಞಾನದ ವಿಷಯವಾಗಿ, ಅನುಷ್ಟುಪ ಛಂದದ ೯೩೦೦ ಶ್ಲೋಕಗಳುಳ್ಳ ಒಂದು ಗ್ರಂಥವನ್ನು ಬರೆದರು.

ಚಂದ್ರಕವಿಯು, ಭಾಗವತ ಸಾಂಪ್ರದಾಯದ ಕಾವ್ಯಗಳಿಗೆ, ಚಾಲನ ಕೊಟ್ಟರು. ಕ್ರಿ. ಶ. ೯ ನೇ ಶತಮಾನದಿಂದ ೧೨ ನೇ ಶತಮಾನದವರೆಗೆ ಅಂದರೆ ನೃಪತುಂಗ ರಾಜನಿಂದ ಮಹಾರಾಷ್ಟ್ರ ಕವಿಯಾದ ಮುಕುಂದರಾಜನ ಪರ್ಯಂತ, ಕನ್ನಡ ಭಾಷೆಯ ಬೆಳಿಗೆಯಲ್ಲಿ ಮೂರು ವಿಭಾಗಗಳನ್ನು ಕಲ್ಪಿಸಲಿಕ್ಕೆ ಬರುತ್ತದೆ.

ಮೊದಲನೇ ಭಾಗದಲ್ಲಿ ನೃಪತುಂಗ ರಾಜನ 'ಕವಿರಾಜ ಮಾರ್ಗ' ವೆಂಬ ಗ್ರಂಥವು ಮಹತ್ವದ್ದಾಗಿರುತ್ತದೆ. ಇದರಲ್ಲಿ ಸುಮಂತಭದ್ರನು ಬರೆದ ಶ್ರೀ ವಿಜಯದ ಅಂತರ್ಭಾವವಿದೆ. ಎರಡನೇ ಭಾಗವೆಂದರೆ, ೧೦ ನೇ ಶತಮಾನದಲ್ಲಿ ಆಗಿ ಹೋದ ಜೈನ ಕವಿಗಳಕಾಲವು. ಈ ಕಾಲಕ್ಕೆ ಕನ್ನಡ ವಾಙ್ಮಯದ ಸುವರ್ಣಯುಗ ವೆಂತಲೇ, ಹೇಳಬಹುದು. ಕವಿಚಕ್ರವರ್ತಿಗಳಾದ ಪಂಪ,ಹೊನ್ನ,ಕನ್ನರು ಜೈನ ಸಮಾಜಕ್ಕೆ ವಂದ್ಯವಾಗಿರುವ ಆದಿಪುರಾಣ, ಶಾಂತಿಪುರಾಣ ಅಜಿತಪುರಾಣವೆಂಬ ಈ ಗ್ರಂಥಗಳನ್ನು ಇದೇ ಕಾಲದಲ್ಲಿ ಬರೆದರು. ಶೂದ್ರಕನ 'ವಿಕ್ರಮಾರ್ಜುನ ವಿಜಯ' ಭುವನೈಕ ರಾಮಾಭ್ಯುದಯ' ಗದಾಯುದ್ಧ ಇತ್ಯಾದಿ ಪ್ರತಿಹಾಸಿಕ ಕಾವ್ಯಗಳೂ ಗೋಮಟೇಶ್ವರನ ಪ್ರತಿಷ್ಠಾಪನೆ ಮಾಡಿದ, ಚಾಂಡರಾಯನ 'ತ್ರಿಷಷ್ಠಿಶೂಕ ಪುರುಷ ಪುರಾಣ' ಎಂಬ ಗ್ರಂಥವಾದರೂ, ಇದೇ ಕಾಲದಲ್ಲಿ ಬರೆಯಲ್ಪಟ್ಟಿತು.

ಮೂರನೇ ವಿಭಾಗವು ಅಂದರೆ, ೧೧ ನೇ ಹಾಗೂ ೧೨ ನೇ ಶತಮಾನಗಳ ಕಾಲವು. ಈ ಕಾಲಕ್ಕೆ ಜೈನ ಸತ್ತೆಯ ಹ್ರಾಸವು ಪ್ರಾರಂಭವಾಯಿತು. ವೈದಿಕ ಹಾಗೂ ಆಗಮಿರ ಶೈವರ ಅಭಿವೃದ್ಧಿಕಾಲವು ಪ್ರಾಪ್ತವಾಯಿತು. ರಾಮಾನುಜಾಚಾರ್ಯರು, ತಮ್ಮ ವೈಷ್ಣವ ಸಾಂಪ್ರದಾಯದ ಕೀರ್ತಿಧ್ವಜವನ್ನು ಹೊಯ್ಸಳರ ರಾಜ್ಯದಲ್ಲಿ ನೆಟ್ಟರು. ಇತ್ತ ಕಲ್ಯಾಣದಲ್ಲಿ ವೀರಶೈವರು ಲಿಂಗಾಯತ ಮತಕ್ಕೆ ಪ್ರತಿಷ್ಠೆಯನ್ನು ತಂದರು. ಆ ಕಾಲಕ್ಕೆ ಶಾಂತಿರಸದ ಕಾವ್ಯಗಳೂ, ವ್ಯವಹಾರಿಕ ಗ್ರಂಥಗಳೂ, ಹೊಸ ಸಾಂಪ್ರದಾಯದ ವಿಡಂಬನಪರ ಗ್ರಂಥಗಳೂ ನಿರ್ಮಿತವಾದವು. ದುರ್ಗಸಿಂಹನ 'ಪಂಚತಂತ್ರ' ನಾಗವರ್ಮನ 'ಬಾಣಕಾದಂಬರಿ' ರುದ್ರಭಟ್ಟನ 'ಜಗನ್ನಾತ ವಿಜಯ' ಎಂಬೀಕಾವ್ಯಗಳು ಪ್ರಾಮುಖ್ಯವಾಗಿ ಸಂಸ್ಕೃತಮಿಶ್ರಿತವಾದ ಕನ್ನಡ ಭಾಷೆಯಲ್ಲಿ ವೈದಿಕ ಶೈವರಿಂದ ಬರೆಯಲ್ಪಟ್ಟವು.

( ಮುಂದೆ ಸಾಗುವದು. )

---

## ಲೇಖಕರಿಗೆ ವಿನಂತಿಯು.

೧ ನೈತಿಕ, ಧಾರ್ಮಿಕ, ಸಾಮಾಜಿಕ, ಐತಿಹಾಸಿಕ ಲೇಖಗಳಿಗೆ ಆಶ್ರಯ ಕೊಡಲ್ಪಡುವದು.

೨ ಲೇಖಗಳನ್ನು ಒಂದೇಮಗ್ಗಲು ಸ್ಪಷ್ಟವಾಗಿ ಬರೆಯಬೇಕು.

೩ ಅಗ್ರಾಹ್ಯವಾದ ಲೇಖಗಳನ್ನು ತಿರುಗಿ ಕಳಿಸುವದಾದರೆ ಅವರವರ ಖರ್ಚಿನಿಂದ ಕಳುಹಿಸಲಾಗುವದು.

೪ ಲೇಖಗಳನ್ನು ಪ್ರತಿತಿಂಗಳ ೧೫ನೇ ತಾರೀಖಿನೊಳಗಾಗಿ ಕಳುಹಿಸತಕ್ಕದ್ದು.

೫ ಲೇಖಗಳು ೮ ಪುಟಕ್ಕಿಂತ ಹೆಚ್ಚಿರಕೂಡದು.

೬ ಲಘುಕಥೆಗಳಿಗೆ ಆದಷ್ಟು ಆಶ್ರಯಕೊಡುವೆವು.

೭ ಟೀಕಾಸ್ಪದವಾದ ಲೇಖಗಳಿಗೆ ಆಶ್ರಯ ದೊರೆಯಲಾರದು.

೮ "ಪದ್ಯಶೀಮೆ" ಗಾಗಿ ಕೆಲವು ಪುಟಗಳು ಕಾದಿಡಲ್ಪಟ್ಟಿವೆ. ಅದಕ್ಕಾಗಿ ಧಾರ್ಮಿಕ, ನೈತಿಕ ಹಾಗೂ ಸಾಮಾಜಿಕ ವಿಷಯಗಳನ್ನೊಡಗೊಂಡ ಪದ್ಯಗಳನ್ನು ಕಳುಹಿಸಬಹುದು.

ಮ್ಯಾನೇಜರ,
ವಿ. ಚ, ಶಿರಹಟ್ಟಿ,

---

ಜಾಹೀರಾತಿನ ಸಲುವಾಗಿ ಈ ಸ್ಥಳವು

ಕಾದಿಡಲ್ಪಟ್ಟಿದೆ.

---

ವೀರಶೈವ ಚಂದ್ರಿಕೆ.

ಮ॥ ರಾ॥ ರಾ॥

ಮು॥

ಇವರಿಗೆ—

ವೀರಶೈವ ಚಂದ್ರಿಕೆ ಆಫೀಸು,
ಶಿರಹಟ್ಟಿ. } ಪೋ.

ಶಿರಹಟ್ಟಿ.

ಶ್ರೀ ಫಕ್ಕೀರೇಶ್ವರ ಸ್ವಾಮಿಗಳ ಕೃಪಾಛತ್ರದಲ್ಲಿ ನಡೆದ

# ವೀರಶೈವ ಚಂದ್ರಿಕೆ.

ತಿಳಿಗನ್ನಡ ಮಾಸಪತ್ರಿಕೆ.

ಕಾರಹುಣ್ಣಿವೆ.


| ಸಂಪುಟ ೧ | ಪ್ರಾರಂಭ :— ಶ್ರೀ ಬಸವಜಯಂತಿ ೧೮೫೬ ಜೇಷ್ಠ ೧೮೫೬ ಜೂನ ೧೯೩೪. | ಸಂಚಿಕೆ ೨ |
|---|---|---|


ಹರತನ್ನ ಭಕ್ತರ | ತಿರಿವಂತೆ ಮಾಡುವ |
ವರೆದು ನೋಡುವಾ | ಸುವರ್ಣದ ಚಿನ್ನದಂತೆ |
ಅರಿದುನೋಡುವನು ಚಂದನದಂತೆ |
ಅರಿದು ನೋಡುವನು ಕಬ್ಬಿನಕೋಲಿನಂತೆ |
ಬೆದರದೆ ಬೆಚ್ಚದೆ ಇದ್ದೊಡೆ | ಕರದೆತ್ತಿ ಕೊಂಬ ನಮ್ಮ ರಾಮನಾಥಾ ||


ಸಂಪಾದಕರು ಹಾಗೂ ಪ್ರಕಾಶಕರು :

ಆಲೂರ ಮುರಿಗೇಂದ್ರ ಶೆಟ್ಟರು, ಶಿರಹಟ್ಟಿ.


## ವಿಷಯಾನುಕ್ರಮಣಿಕೆ :




ವಾರ್ಷಿಕ ಚಂದಾ

ಸ್ಥಳದವರಿಗೆ ೧-೮-೦. ] ಬಿಡಿಸಂಚಿಕೆ ೦-೩-೦ [ ಅಂಚೇ ವೆಚ್ಚ ಸೇರಿ ೧-೧೧-೦

ಸಿರಿಗನ್ನಡಂ ಗೆಲ್ಗೆ.

# ವೀರಶೈವ ಚಂದ್ರಿಕೆ.

ಬಯಲುಮೂರ್ತಿಯಾಗಿನಿಂದನೊಬ್ಬ ಶರಣ. ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ. ಆತನ ಶಾಂತಿಸೈರಣೆಯಿಂದ ಹುಟ್ಟಿದಾತ ವಿಷ್ಣು. ಆತನ ಕೋಪಕ್ರೋಧದಿಂದ ಹುಟ್ಟಿದಾತ ರುದ್ರ. ಈ ಮೂರು ಸೀಠವಂತಿರಲಿ. ಆ ಶರಣನನರಿದು ಶರಣೆನುತಿರ್ದೆನು ಕೂಡಲ ಸಂಗಮದೇವಾ.

ಶ್ರೀ ಬಸವೇಶ್ವರ.

| | | |
|---|---|---|
| ಸಂಪುಟ ೧ | ಶ್ರೀಮನೃಪಶಾಲಿವಾಹನ ಶಕೆ ೧೮೫೭<br>ಕಾರಹುಣ್ಣಿವೆ. | ಸಂಚಿಕೆ ೨ |

## ಪದ್ಯಶ್ರೀಮೆ.

### ಶ್ರೀ ಬಸವೇಶ್ವರರ ಚರಿತ್ರೆ.

ಕವನಗಾರ:— ರಾಮರಾವ ಬಾಲೇಹೊಸೂರ ಶಿರಹಟ್ಟಿ.

ದಾಟಿ– ಧನ್ಯ ಶಿವಾಜೀ ತೋರಣಗಾಜೀ ಎಂಬ ಮರಾಠಿ ಪದದಂತೆ.

ಭರತಭೂಮಿಯಾ ಭಾಗವಾಗಿಹಾ | ವರಕರನಾಟಕದೀ ||
ಮೆರೆಯಿತು ವಿಜಾಪುರದ ರಾಜ್ಯವು ಶಿರಿಸೌಖ್ಯದಿ ಗಡದಿ ||ಪಲ್ಲ||
ಕರಿನಾಡಿನ ಈ ಉರಿಯುವ ದೇಶದಿ ಇರುವದೊಂದು ಗ್ರಾಮಾ ||
ಧರಿಸುತಲೆ ಬಸವನು ಜನಿಸಿದ-ಬಾ | ಗೇವಾಡಿಯು ನಾಮಾ ||೧||
ಸಾವಿರದಾ ಇನ್ನೂರು ವರುಷದಾ ಆದಿಯಲೀಪುರದೀ ||
ಭಾವಿಕನಾದಾ ಲಿಂಗಾಭಟ್ಟನು ವಾಸಿಸಿದನು ಗಡದೀ ||೨||
ಪರಶಿವನಾ ಈ ಪರಮ ಭಕುತಗೆ ಸುತನೊಬ್ಬನು ಇದ್ದಾ ||
ಉರುತರವಾದಾ ಮಹಾದೇವನಾ ನಾಮುವ ಧರಿಸಿದ್ದಾ ||೩||

ಬರುವ ಕಾಲದಿ ಮಹಾದೇವನಿಗೆ ಜನಿಸುತೆ ಬಸವಜನೂ ||
ಧರೆಯೊಳಗಿರುವಾ ವೀರಶೈವರಾನುದ್ಧರಿಸಿದನವನೂ ||೪||
ಮೋದದಿ ಬಸವನು ಕಾಲವ ಕಳೆಯುತೆ ಪೋದನು ಸಂಗಮಕೆ ||
ಸಾಧುವಾದಾ ಮುನಿಜಾತ ವೇದನಾ ಬೋಧವ ಪಡೆವುದಕೆ ||೫||
ವರಮತಿಯಾದಾ ಜಾತವೇದನವ ಬೋಧಿಸಿ ತತ್ವವನೂ ||
ನಿರದಲೆ ಬಸವನಿಗಿತ್ತನು ವೀರಾಶೈವರ ದೀಕ್ಷೆಯನೂ ||೬||
ಗುರುವಿನ ವಚನದಿ ಅರಸು ಬಿಜ್ಜಳನಾ ಸಚಿವನ ಕುವರಿಯನೂ ||
ವರಿಸುತೆ ವರಕಲ್ಯಾಣಪಟ್ಟಣದಿ ಕಳೆದನು ಕಾಲವನೂ ||೭||
ಲಕ್ಷಿಸಿ ವೀರಾಶೈವರಾ ಮತದಾ ಹೀನತೆ ಸ್ಥಿತಿಯನ್ನೂ ||
ರಕ್ಷಿಸಲದನೂ ಪರಿಪರಿಸಾಹಸ ಕೃತ್ಯಗೈದನಿವನೂ ||೮||
ಮುಂದಿರಿಸುತಲೆ ನೀತಿಯೊಂದನು ಬಸವನವನು ಮುದದೀ ||
ಅಂದವಾದ ಧರ್ಮವನೊಂದನು ತಾ, ಸ್ಥಾಪಿಸಿದನು ಜವದೀ ||೯||
ಶಾಂತಭಾವದಾ ಬಸವಜನವನು ಧರ್ಮದದೀಕ್ಷೆಯನೂ ||
ಅಂತ್ಯಜನಿಗು ಸಹ ನೀಡುತೆ ಪಡೆದವನು ಪರಮ ಖ್ಯಾತಿಯನ್ನೂ ||೧೦||
ಬರೆಯುತೆ ಧರ್ಮದ ಗ್ರಂಥಗಳೆಲ್ಲವ ಮಾತೃಭಾಷೆಯಾದಾ ||
ಪರಮ ವೈಭವದ ಕನ್ನಡ ನುಡಿಯನು ಉರುತರ ಸ್ಥಿತಿಗೈದಾ ||೧೧||
ನಂದೀ ಕೃಪೆಯಲಿ ಜನಿಸುತೆ ಧರೆಯಲ್ಲಿ ಬಂದೀ ಬಸವಜನೂ ||
ಅಂದದೀ ಲೀಲೆಗಳನೆ ಬಹುತೋರುತೆ ವಂದ್ಯನಾದನಿವನೂ ||೧೨||

# ಹದಿನಾರು ಸೋಮವಾರಗಳ ಕಥೆ.

## ಶ್ರೀ ಶಿವವ್ರತ.

( ಶಿವಾನಂದ ದೀಕ್ಷಿತವಾಜಿಪೇಯ ವಿರಚಿತಂ. )

## ಮಂಗಳಾಚರಣಂ

ಭಾಮಿನೀ ಷಟ್ಪದಿ

೧ ಭೋ! ಶಿವನೆ! ಗಿರಿಜಾಧವನೆ | ಭವ |
ದೋಷದೂರನೆ| ದಿವ್ಯತೇಜನೆ |
ದಾಸರಾಸೆಯ ಪೂರಿಪಾತನೆ| ನರನ ನಲಿಸಿದನೇ! ||
ಶ್ರೀ ಶುಭದ ನಿಜ ಷೋಡಶೇಂದುಸು |
ವಾಸರವ್ರತ ಕಥೆಯ ವಿರಚಿಸ |
ಲಾಸೆಗೆಯ್ದಾಂ ಬೇಳ್ಪೆನೀವುದು ಸುಮತಿಯಂದೇವಾ! |

## ಕಥಾರಂಭ.

### ( ಶ್ರೀ ತಾರಕೇಶ್ವರನ ಗುಡಿಯ ವರ್ಣನೆ )

೨ ಭರತಧರೆಯಲಿ ಮೆರೆವ ಕನ್ನಡ |
ತಿರಿಯೊಳಿಹ ಕಾಂತಿಮತಿನಾಮದ |
ಪುರದೊಳಾಗುಡಿ ತಾರಕೇಶನಿವಾಸವೆನಿಸುವುದು ||
ಪರಮಕಾಂತಿಯನಾಂತುತಾನಾ |
ಗಿರಿಶನಂ ಸೇವಿಪರ ಬಯಕೆಗ |
ಳಿರದೆಸಲ್ಲಲು ಕೀರ್ತಿವೊಂದಿತ್ತುರಿಯಿರಾನತರೇ ! ||

### ಶ್ರೀ ಪಾರ್ವತೀ-ಪರಮೇಶ್ವರರು ಕೈಲಾಸದಿಂದಿಲ್ಲಿಗೆ ಬಂದದ್ದು, ಲೆತ್ತವಾಡಬಯಸಿದ್ದು.

೩ ಶಿವಶಿವೆಯರಿತ್ತಿಲ್ಲಿಬಂದೆಲೊ |
ಧವನೆ ! ರಮ್ಯಸ್ಥಳವಿದಹ | ಚಿ |
ತ್ರವನು ರಮಿಸುವ ! ಲೆತ್ತದಿಂದೆಂದಗಜೆಬಯಸಿರಲು ||
ಭವನು ಬಹು ಸಂಭ್ರಮವು ! ಸೋಲು-ಗೆ |
ಲವುಗಳನ್ನೊರೆದಪನು ಮೂರನೆ |
ಯವನಿರುವನೀಯರ್ಚಕನುಬಾ | ಲಲನೆ! ಎನಲಿತ್ತ ||

### (ಲೆತ್ತವಾಡಿ ಅರ್ಚಕ (ಪೂಜಾರಿ) ನನ್ನು ಕೇಳಿದ್ದು ಆತನು ಹೇಳಿದ್ದು)

೪ ಲೆತ್ತವನ್ನಸರಾಡಿಯರ್ಾ ಜಯ |
ವೆತ್ತರೆಂದರ್ಚಕನ ಕೇಳಲು ।
ಕೃತ್ತಿವಾಸನು ಗೆದ್ದನೆಂದವನ ನನೃತವಂ ನುಡಿಯೇ ||
ನುತ್ತೆಕ್ರೀಡಿಸಿ ಕೇಳಲರ್ಚಕ |
ನಿತ್ತಲುಮುಮೆಯೆ | ಸೋತಳೆನ್ನಲು |
ಮಿಥ್ಯವಾಡಿದ ನುಡಿಗೆ ನಗಸುತೆ ನಾಡೆಖತಿಗೊಂಡು ||

### ( ಶ್ರೀ ಪಾರ್ವತಿಯು ಅರ್ಚಕನನ್ನು ಶಾಪಿಸಿದ ಸಂಗತಿ )

೫ ಎಲವೊ ! ಖುಲ್ಲನೆ ! ಖಲನೆ ! ಅರ್ಚಕ |
ನೆಲಸಿಕೊಂಡಿಹ ಕುಷ್ಠಿಯಿರು ! ನಡೆ |
ನಿಲಲು ಬೇಡೆಲೊ ಪಾಪಿ ಪೋಗೆಂದಗಜೆ ಶಪಿಸಲ್ಕೆ ||
ಬಲಿತ ಕುಷ್ಠದೊಳೆಲ್ಲ ದೇಹವು |
ಕಲೆತು ಕೊಂಡಿದ್ದಾಂತ ಬಾಧೆಗೆ |
ಬಲು ಬಳಲಿಯುವನಲ್ಲೆ ಬನದಲಿ ಭ್ರಮಿಸತೊಡಗಿದನು ||

೬ ಕಂದ ಪದ್ಯಂ.

( ಶಾಪದ ಮಹತ್ವ—ಅರ್ಚಕನ ಅಳಲು )

ದೇವಯಜಕನ-ಭಜಕನಸು |
ಭಾವದಿ ನಿರುಪಸವಮಾನದಿಂದಳಲಿರೆ ಮಾ ||
ದೇವಿಯ ತುಷ್ಟಿಯಮಾಡಿರ |
ಲೇಂಪೇಳ್ವೆದೊ! ಅರ್ಚಕನಳಲಿಗಳತೆಯಿಲ್ಲೈ ||

೭ ಭಾಂ ಷಂ.

ಅಪ್ಸರಾಸ್ತ್ರೀಯರು ಇಲ್ಲಿಗೆ ಬಂದದ್ದು.-ಅರ್ಚಕನನ್ನು ನೋಡಿ ಕೇಳಿದ್ದು ಆತನು ಹೇಳಿದ್ದು.

ವಾರಿ-ಗಂಧಾ-ಕ್ಷತ-ಕುಸುಮ-ಫಲ |
ಚಾರುಧೂಪ-ಸುದೀಪ-ಮಧು-ಗೋ |
ಕ್ಷೀರ-ನೈವೇದ್ಯಾದಿ ಪೂಜಾದ್ರವ್ಯಮೊಡಗೊಂಡು ||
ವಾರನಾರಿಯರಲ್ಲಿಬಂದಾ |
ಭೂರಿಹತಿಯಾಂತರ್ಚಕನಕಂ ।
ಡೀರುಜೆನಿನಗೊ! ಎನಲವನುಮೆಯ ಶಾಪ ಫಲವಿನ್ನು ||

---

# ತಿದ್ದುಪಡಿ.

ಆಗಿಯ ಹುಣ್ಣಿವಿಯ ಸಂಚಿಕೆಯಲ್ಲಿ ಪ್ರಕಟವಾಗಿರುವ ಪದ್ಯಗಳಲ್ಲಿ ಕೆಲವು ಅಚ್ಚಿನ ದೋಷಗಳಾಗಿರುವವು. ಅವುಗಳನ್ನು ಈ ಕೆಳಗೆ ಬರೆದಂತೆ ತಿದ್ದುಪಡಿ ಮಾಡಿದೆ. ವಾಚಕವೃಂದವು ಅದರಂತೆ ಸರಿಮಾಡಿಕೊಳ್ಳತಕ್ಕದ್ದು.

| ಪುಟ | ಪದ್ಯ | ತಪ್ಪು | ಒಪ್ಪು |
|---|---|---|---|
| ೧ | ೨ | ಪಾರ್ವತೀಶನಜಚಯ ಭಂಗಂ | ಪಾರ್ವತೀಶನಘಚಯಭಂಗಂ |
| ೨ | ೫ | ವೀರಶೈವ ಚಂದ್ರಿಕೆ | ವೀರಶೈವಸುಚಂದ್ರಿಕೆ |
| ೨ | ೬ | ಶೇವಾಪ್ರಿಯ | ಸೇವಾಪ್ರಿಯ |
| ೩ | ೨ | ಧರೆಯೋಳ್ ಭವಿಸಿ | ಧರೆಯೊಳುದಯಿಸಿ |
| ೩ | ೨ | ಧರೆಗೆಮಾನುಷಲೀಲೆ | ಧರೆಗಮಾನುಷಲೀಲೆ |
| ೩ | ೨ | ಗಾನಿಸಲಿರೆನು | ಗಾನಿಸಲಿರುವೆ |
| ೩ | ೨ | ಸುಮತಿಯಾನೀದಯದೊಳ್ಳೈ | ಸುಮತಿಯುಂ ನೀಂ |
| ೩ | ೪ | ಶಾಸಿಶಿ | ಶಾಸಿಸಿ |
| ೪ | ೬ | ಸುಗತಿಯನ್ನಳಸಿಹರು | ಸುಗತಿಯನ್ನೆಳಸಿಹರು |
| ೪ | ೭ | ಆಸೆಯಪೂರಿಸಿದೆಮ್ಮಂ | ಆಸೆಯಪೂರಿಸಿದೆಮ್ಮಂ |



# ಕನ್ನಡ ಸಾಹಿತ್ಯದಲ್ಲಿ ವೀರಶೈವರ ಮಹತಿ.

ಲೇಖಕರು:— **ಬಾಲೇಹೊಸೂರ ರಾಮರಾಯ, ಶಿರಹಟ್ಟಿ.**

( ಹಿಂದಿನ ಸಂಚಿಕೆಯಿಂದ ಮುಂದೆ ಸಾಗಿದ್ದು )

ಕರ್ನಾಟಕದಲ್ಲಿ ಪ್ರಬಲವಾಗಿರುವ ವೀರಶೈವ ಮತದಲ್ಲಿ ಸಾಹಿತ್ಯಸೇವೆ ಮಾಡಿದ ಶರಣರು ಅನೇಕರಾಗಿರುವರು. ಅವರು ಆತ್ಮೋದ್ಧಾರದ ತತ್ವಗಳನ್ನು ವಚನರೂಪವಾಗಿ ಬರೆದರು. ಪಂಡಿತರಾಗದ ಅವರುಗಳ ಬರಹದಲ್ಲಿನ ವಿಚಾರಗಳು ಪಂಡಿತರ ಪಾಂಡಿತ್ಯಕ್ಕೂ ನಿಲುಕದವಾಗಿವೆ. ವಚನಗಳು ಸಾಮಾನ್ಯ ಜನರ ಮಾತಿನಲ್ಲಿ ದರೆದವು. ಶರಣರು ಪ್ರಾಪಂಚಿಕ ವಿಷಯದ ಗೌಪ್ಯವನ್ನರಿತುಕೊಂಡವರಾದ್ದರಿಂದ ಸಾಮಾನ್ಯರ ಅನುಭವಗಳನ್ನೇ ಉದಾಹರಣೆಗಾಗಿ, ತಕ್ಕೊಂಡು ತತ್ವಗಳನ್ನು ಬಿಡಿಸಿ ಹೇಳಿದ್ದಾರೆ. ಅವರ ಉದಾಹರಣೆಗಳು ಹಳ್ಳಿಯಲ್ಲಿ ಕಾಣತಕ್ಕವು. ಒಟ್ಟಾರೆ, ವೀರಶೈವ ಶರಣರು ಉಪದೇಶಿಸಿದ ತತ್ವವು ಸಾಮಾನ್ಯರಿಂದ ಸಾಮಾನ್ಯಜನರಿಗಾಗಿ, ತಿಳಿಗನ್ನಡದಲ್ಲಿ ಪ್ರಸಾರಮಾಡಲ್ಪಟ್ಟಿತು. ಅದುಕಾರಣವೇ ಹಳ್ಳಿಯ ಜೀವನಕ್ಕೆ ಬೇಕಾಗುವ ಎಲ್ಲ ಉದ್ಯೋಗಗಳ ಜನರನ್ನು ವೀರಶೈವರಲ್ಲಿ ಕಾಣಬಹುದಾಗಿದೆ. ಹೊಲಮಾಡುವವರು, ಬಡಿಗರು, ಕಂಬಾರರು, ಘೋರರು ಇತ್ಯಾದಿ ಜನರು ವೀರಶೈವ ಮತದಲ್ಲಿದ್ದಾರೆ. ಹೀಗಾಗಿ ರಾಷ್ಟ್ರ ಜೀವನಕ್ಕೆ ಪೋಷಕವಾದ ವೀರಶೈವರ ಮತವು ದಕ್ಷಿಣದಲ್ಲಿ ಕ್ಷಿಪ್ರದಲ್ಲಿಯೇ ಪ್ರಬಲಿಸಿತು. ಶರಣರು ಹೀಗೆ ತಮ್ಮ ಧರ್ಮಕಾರ್ಯವನ್ನು ನೆರೆವೇರಿಸುತ್ತಲೇ ಕನ್ನಡ ಸಾಹಿತ್ಯದ ಸೇವೆಯನ್ನು ಅವಬಗೆಯಾಗಿ ಮಾಡಿದರೆಂಬದನ್ನು ತೋರಿಸಿಕೊಡುವದೇ ನಮ್ಮ ಈ ಲೇಖನದ ಗುರಿಯಾಗಿದೆ. ಹೋದಸಾರೆ ನಮ್ಮ ಚಂದ್ರಿಕೆಯಲ್ಲಿ ಶ್ರೀ ಬಸವಂಣನವರ ವಿಷಯವಾಗಿ ಓದಿದ್ದಿರಿ. ಈ ಸಾರೆ ಧರ್ಮ ಹಾಗು ಸಾಹಿತ್ಯಗಳ ಜೋಡಣೆಯನ್ನು ಸಮರಸಭಾವದಲ್ಲಿರಿಸಿಕೊಂಡು ಜನಗಳಿಗೆ ಅವಶ್ಯಕವಾದ ಯಾವತ್ತೂ ವ್ಯವಹಾರಿಕ ಜ್ಞಾನವನ್ನು ಕನ್ನಡದ ತ್ರಿಪದಿಗಳಲ್ಲಿ ಬರೆದು ಎಲ್ಲೆಡಿಯಲ್ಲಿ ಹರಡಿ ಅತಿಶಯವಾದ ಮಹತಿಯನ್ನು ಪಡೆದ ಸರ್ವಜ್ಞ ಕವಿಯ ಬಗ್ಗೆ ಕೆಲವು ಸಂಗತಿಗಳನ್ನು ಕೊಡಲಾಗಿದೆ. ಅವನ್ನೋದುವದರಿಂದ ಮಾನವರು ವ್ಯವಹಾರ ಚತುರರಾಗಿ, ಯೋಗ್ಯಾಯೋಗ್ಯ ವಿಚಾರವುಳ್ಳವರಾಗುವದರೆಂಬದರಲ್ಲಿ ಆವ ಸಂದೇಹವೂ ಇಲ್ಲಾ.

# ಸರ್ವಜ್ಞ ಕವಿ.

**ಕಾಲನಿರ್ಣಯ:—** ಸರ್ವಜ್ಞನು ಬದುಕಿ ಬಾಳಿದ ಕಾಲವನ್ನು ನಿರ್ಣಯಿಸುವದು ಒಳ್ಳೇ ಕಷ್ಟಸಾಧ್ಯವಾದ ಮಾತಾಗಿದೆ. ಇವನ ಚರಿತ್ರೆಗೆ ಸಂಬಂಧಿಸಿದ ಆಧಾರಗಳು (ಐತಿಹಾಸಿಕ ಟಿಪ್ಪಣಿಗಳು) ಸಾಕಷ್ಟು ದೊರೆಯದಿರುವದೇ ಅದಕ್ಕೆ ಕಾರಣ. ಆದರೂಕೂಡ ಉಪಲಬ್ಧವಾದ ಚರಿತ್ರೆಗಳಿಂದ ತಿಳಿಯುವ ಕೆಲವು ಸಂಗತಿಗಳು ಅತಿ ವಿಲಕ್ಷಣವಾಗಿವೆ. ಆ ಚರಿತ್ರೆಗಳಲ್ಲಿ ಹೇಳಿರುವ ಸರ್ವಜ್ಞನ ತ್ರಿಪದಿಗಳಲ್ಲಿ ವಿಜಯನಗರ ರಾಜ್ಯದ ನಾಶದ ಸಂಗತಿಯೂ, ಇಕ್ಕೇರಿ ಸಂಸ್ಥಾನವು ಹಾಳಾದ ವೃತ್ತಾಂತವೂ, ಆಂಗ್ಲರು ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡ ಇತಿಹಾಸವೂ ಕಂಡುಬರುವದು. ಆದುದರಿಂದ ಸರ್ವಜ್ಞನು ೧೮ ನೇ ಶತಮಾನಕ್ಕೆ ಸೇರಿದವನೆಂಬದಾಗಿ ಕೆಲವರು ತರ್ಕಿಸುವರು. ಆದರೆ ೧೮೦೦ಕ್ಕೆ ಹಿಂದೆ ಬರೆದ ಓಲೆಗರಿಗಳ ಮೇಲೆ ಬರೆದ ಸರ್ವಜ್ಞನ ತ್ರಿಪದಿಗಳೂ ದೊರೆಯುವದರಿಂದ ಇವನು ೧೭ ನೇ ಶತಮಾನದಲ್ಲಿದ್ದಿರಬೇಕೆಂಬದಾಗಿಯೂ ಊಹಿಸುವರು. ವೀರಶೈವ ಕವಿಯಾದ ಸಿದ್ಧವೀರಣಾಚಾರ್ಯನು, ತನ್ನ ಗ್ರಂಥದಲ್ಲಿ ಸರ್ವಜ್ಞ ಮೂರ್ತಿಯ ಕೆಲವು ತ್ರಿಪದಿಗಳನ್ನು ಎತ್ತಿ ಬರೆದಿರುವೆನೆಂಬದಾಗಿ ಹೇಳಿರುವನು. ಅದು ಕಾರಣ ಅವನು ೧೬ ನೇ ಶತಮಾನದವನಾಗಿರಬಹುದೇ? ಎಂಬದಾಗಿ ಬಲವಾದ ಶಂಕೆಯೊಂದು ಉದ್ಭವಿಸುತ್ತದೆ. ಇತಿಹಾಸ ಸಂಶೋಧಕರು ಈ ವರೆಗೆ ಶೋಧಮಾಡಿದ ಸಂಗತಿಗಳಮೇಲಿಂದ, ಇವನು ೧೭ ನೇ ಶತಮಾನಕ್ಕೆ ಸೇರಿದವನೆಂದು ಹೇಳಿದರೆ ತೀರಾ ತಪ್ಪಾಗಲಿಕ್ಕಿಲ್ಲವೆಂಬದಾಗಿ ನನ್ನ ಸಾತ್ವಿಕ ನಂಬುಗೆ.

**ಜನ್ಮವೃತ್ತಾಂತ :—** ಸರ್ವಜ್ಞನ ತಂದೆಯು ಬಸವರಸನೆಂಬ ಆರಾಧ್ಯ ಬ್ರಾಹ್ಮಣನು. ತಾಯಿಯು ಮಲ್ಲಮ್ಮಾ. ಈ ದಂಪತಿಗಳು ಧಾರವಾಡ ಜಿಲ್ಹೆಯಲ್ಲಿರುವ ಮಾಸೂರ ಎಂಬ ಗ್ರಾಮದಲ್ಲಿ ವಾಸಿಸುತ್ತಿದ್ದರು. ಅವರಿಗೆ ಅನೇಕ ದಿನಗಳವರೆಗೆ ಮಕ್ಕಳಾಗಿರಲಿಲ್ಲ. ಅದು ಕಾರಣ ಆ ದಂಪತಿಗಳು ಅತೀವ ದುಃಖಿತರಾಗಿ ಕಾಶೀಯಾತ್ರೆಗೆಹೋಗಿ, ಅಲ್ಲಿ ಶ್ರೀ ವಿಶ್ವೇಶ್ವರನ್ನು ಕಂಡುಕೊಂಡು ಅವನ ಬಳಿ, ತಮ್ಮ ಇಷ್ಟಾರ್ಥವನ್ನು ಪೂರ್ತಿಗೊಳಿಸುವದಕ್ಕೆ ಅನನ್ಯಭಾವದಿಂದ ಪ್ರಾರ್ಥಿಸಿಕೊಂಡರು. ಶ್ರೀ ವಿಶ್ವೇಶ್ವರನು ಅವರ ಭಕ್ತಿಗೆ ಮೆಚ್ಚಿ, "ನಿಮ್ಮ ಇಚ್ಛೆಯು ಪೂರ್ಣವಾಗುವದು; ಚಿಂತಿಸಬೇಡಿ" ಎಂಬದಾಗಿ ವರವನ್ನಿತ್ತನು. ವಿಶ್ವೇಶ್ವರನಿಂದ ಇಂತು ಪ್ರಸಾದವನ್ನು ಪಡೆದು, ಅವನ ನೈವೇದ್ಯವನ್ನು ಭುಂಜಿಸಿ ಬಸವರಸನು ತನ್ನ ಊರಿಗೆ ಹೊರಟನು. ಬರುವಾಗ್ಗೆ ಅಂಬಲೂರ ಎಂಬ ಹಳ್ಳಿಯಲ್ಲಿ ಒಂದು ದಿನ ರಾತ್ರಿ ವಸತಿಗಾಗಿ, ಆವನೋ ಒಬ್ಬ ಕುಂಬಾರವನ ಮನೆಯಲ್ಲಿ ಉಳಿದುಕೊಂಡನು. ಕುಂಬಾರವನಿಗೆ ರೂಪವತಿಯಾದ ಒಬ್ಬ ಮಗಳಿದ್ದಳು. ಬಸವರಸನು ಅವಳನ್ನುಕಂಡು ಮೋಹಿತನಾದನು. ಅವಳಾದರೂ ಬಸವರಸನಮೇಲೆ

ಅನುರಾಗವನ್ನು ತಳೆದು, ಅದೇ ದಿನ ರಾತ್ರಿ ಅವನೊಡನೆ ಸಮಾಗಮಹೊಂದಿ ಗರ್ಭಧಾರಣೆ ಮಾಡಿದಳು. ಮತ್ತು ಆ ಮುಂದೆ ಯೋಗ್ಯ ಕಾಲದಲ್ಲಿ ಸರ್ವಜ್ಞನನ್ನು ಹೆತ್ತಳು. ಇದೊಂದು ಸರ್ವಜ್ಞನ ಜನ್ಮದ ಬಗ್ಗೆ ಜನರಲ್ಲಿ ಹರಡಿರುವ ದಂತಕಥೆ. ಆದರೆ ಸರ್ವಜ್ಞನು ತಾನೇ ರಚಿಸಿದ ಗ್ರಂಥವೊಂದರಲ್ಲಿ ಮಾತ್ರ " ತಾನು ಮೊದಲು ಕೈಲಾಸದಲ್ಲಿ ಪುಷ್ಪದತ್ತನಾಗಿದ್ದನೆಂತಲೂ, ಬಳಿಕ ವರರುಚಿಯಾಗಿ ಹುಟ್ಟಿದೆನೆಂತಲೂ, ಆ ಮುಂದೆ ಸರ್ವಜ್ಞನಾಗಿ ಜನಿಸಿರುವೆನೆಂತಲೂ ಹೇಳಿರುವನು " ಜಗದ್ವಿಷಯುಕವಾದ ಅವನ ಅಗಾಧವಾದ ಜ್ಞಾನವನ್ನು ಪರುಕಿಸಿದಲ್ಲಿ ಮೇಲಿನ ಉ-ಕ್ತಿಯೇ ನಿಜವೆಂದೆನಿಸದೆ ಇರುವಂತಿಲ್ಲ. ಹೀಗೆ ಅನೇಕ ಬಗೆಯಾಗಿ ಸರ್ವಜ್ಞನ ಜನುಮದ ವೃತ್ತಾಂತವಿದೆ. ತಜ್ಞರಾದವರು ಸಾಧಕ ಬಾಧಕ ಪ್ರಮಾಣಗಳನ್ನು ತೂಗಿನೋಡಿ ಯೋಗ್ಯವಾದದನ್ನು ಕಂಡು ಹಿಡಿಯಬಹುದಾಗಿ ಯೋಚಿಸಿ ಮೇಲಿನ ಎರಡೂ ವೃತ್ತಾಂತಗಳನ್ನು ಕೊಡಲಾಗಿದೆ.

## " ಸರ್ವಜ್ಞನ ಸಾಹಿತ್ಯ ಕಾರ್ಯ "

ಸರ್ವಜ್ಞನು ರಚಿಸಿದ ಯಾವತ್ತೂ ಗ್ರಂಥರಾಶಿಯು ತಿಳಿಗನ್ನಡದ ತ್ರಿಪದಿಗಳಲ್ಲಿ ಬರೆದುದಾಗಿದೆ. ಅವನು ಶಿಕ್ಷಣ ಪಡೆದದು ಎಲ್ಲಿ? ಎಂಬ ಸಂಗತಿಯು ತಿಳಿಯದಹಾಗಿದ್ದರೂ, ಅವನಜ್ಞಾನವು ಮಾತ್ರ ಅಮೋಘವಾದುದು. ಅವನಿಗೆ ಗೊತ್ತಿಲ್ಲದ ವಿಷಯುವೇ ಇಲ್ಲ. ಅಂತಲೇ ಅವನಿಗೆ ಸರ್ವಜ್ಞನೆಂಬ ಹೆಸರು ಸಲ್ಲುವದು. ತುಸು ಮಾತಿನಲ್ಲಿ ಬಹಳವನ್ನು ಹೇಳುವ ( ತ್ರಿಪದಿಗಳು ) ಇವನ ಶಕ್ತಿಯು ಅತ್ಯದ್ಭುತವಾದದ್ದು. ತ್ರಿಪದಿಗಳಲ್ಲಿನ ಇವನ ಕನ್ನಡ ಭಾಷೆಯು ಸಾಮಾನ್ಯರಿಗೂ ಕೂಡ ತಿಳಿಯುವದು. ಸರ್ವಜ್ಞನಲ್ಲಿನ ಜ್ಞಾನವು ವಿಶಾಲವಾದುದೂ, ಉದಾತ್ತವಾದುದೂ ಆದುದಿತ್ತು. ಅವನ ಬುದ್ಧಿವಾದವು ಹೃದಯದಿಂದ ಹೊರ ಹೊಮ್ಮಿದ್ದು, ಜನ ಜೀವನದ ಝರಿಯಿಂದ ಪೋಷಿತವಾದದ್ದು. ಸಾಹಿತ್ಯದಲ್ಲಿ ಮಾರ್ಮಿಕವಾದ ಹಾಸ್ಯ ತರಂಗಗಳನ್ನು ಹುಟ್ಟಿಸುವ ಇವನ ಮಾತಿನ ಶೈಲಿಯು ಹೊಗಳತಕ್ಕುದಾಗಿದೆ. ಇವನ ತ್ರಿಪದಿಗಳು ಜನತೆಯ ಬಾಯಿಯಲ್ಲಿ ಬಳಕೆಯಾಗಿರುವ ನಾಣ್ಯಗಳೇ ಆಗಿವೆಯೆಂದರೆ ಅಡ್ಡಿ ಇಲ್ಲ. ತ್ರಿಪದಿಗಳಲ್ಲಿ ನೀತಿ, ಧರ್ಮ, ವ್ಯವಹಾರ ಜ್ಯೋತಿಷ್ಯ ಮುಂತಾಗಿ ಅನೇಕ ವಿಷಯುಗಳು ಪ್ರತಿಪಾದಿಸಲ್ಪಟ್ಟಿವೆ. ಪರಮ ವೀರಶೈವನಾದ ಸರ್ವಜ್ಞನಿಗೆ ಲಿಂಗಧಾರಣೆಯೇ ಮುಖ್ಯತತ್ವವಾದ ವೀರಶೈವ ಮತದ ಬಗ್ಗೆ ಎಷ್ಟು ತೀವ್ರವಾದ ಅಭಿಮಾನವಿತ್ತೆಂಬುದು ಕೆಳಗಿನ ತ್ರಿಪದಿಗಳಿಂದ ಕಂಡುಬರುತ್ತದೆ.

" ಲಿಂಗಕ್ಕೆ ಕಡೆಯಲ್ಲಿ? ಲಿಂಗಿಲ್ಲದೆಡೆಯೆಲ್ಲಿ? ಲಿಂಗದಿ ಜಗವು ಅಡಗಿಹುದು
ಲಿಂಗವನು ಹಿಂಗಿದವರುಂಟೆ ಸರ್ವಜ್ಞ ".

ಮೇಲಿನ ಪದ್ಯದಿಂದ ಲಿಂಗಧಾರಣೆಯ ವೀರಶೈವ ಜನಗಳು ಒಳ್ಳೇ ಚನ್ನಾಗಿ ಗ್ರಹಿಸುವಂತಿದೆ.

" ಲಿಂಗದಲಿ ಮನವಾಗಿ, ಲಿಂಗದಲಿನೆನಹಾಗಿ ಲಿಂಗದಿ ನೋಟ ನುಡಿಕೂಟ
ವಾದವನು ಲಿಂಗವೇ ಅಕ್ಕು ಸರ್ವಜ್ಞ "

ಇಂತು ಪ್ರಾಪಂಚಿಕ ವ್ಯಾಮೋಹವನ್ನು ಬದಿಗಿರಿಸಿ ಲಿಂಗದೊಡನೆ ತನ್ನ ಆತ್ಮನನ್ನು ಬೆರೆಯಿಸಿಟ್ಟಲ್ಲಿ ಆತನಿಗೆ ಆತ್ಮಶುದ್ಧಿಯ ಆ ಬಲದಿಂದ ಲಿಂಗಸ್ವರೂಪವೇ ಆಗುವದಕ್ಕೆ ಸಾಧ್ಯವಿದೆಯೆಂಬುದೇ ಈ ಅವನ ಉಕ್ತಿಯ ಮರ್ಮ.

" ಲಿಂಗವಿರಹಿತನಾಗಿ ನುಂಗದಿರುವನವನು ತಿಂಗಳಲಿ ಸತ್ತ ಕೊಳೆನಾಯ
ಮಾಂಸವನು ನುಂಗಿದಂತಕ್ಕು ಸರ್ವಜ್ಞ "

ಯಾವಾಗಲೂ ವೀರಶೈವನಾದವನು ಲಿಂಗವನ್ನು ಬಿಟ್ಟಿರಬಾರದು. ತಾನು ನಿತ್ಯಶಃ ತಿನ್ನುವ ಆಹಾರವನ್ನು ಲಿಂಗದಲ್ಲಿ ಅರ್ಪಿಸಿ ಆಮೇಲೆ ಅದನ್ನು ತಾನು ಭುಂಜಿಸುವದೇ ವೀರಶೈವರಿಗೆ ಉಚಿತವಾದ ಧರ್ಮ.

" ಸೋಕಿದಾ ಸುಖಂಗಳ, ನೇಕವಾಶಿವಗಿತ್ತು ತಾ ಕಿಂಕರತೆಯ ಕೈಕೊಂಡ
ಮನುಜನೆ ಲೋಕಕ್ಕೆ ಶರಣ ಸರ್ವಜ್ಞ "

ಇದುನೋಡಿ ನಿಜವಾದ ಶರಣನ ವ್ಯಾಖ್ಯೆಯನ್ನು. ಸರ್ವಜ್ಞನು ಎಷ್ಟು ಚನ್ನಾಗಿ ಹೇಳಿರುವನು ನೋಡಿ. ಯಾವನು ತನಗೆ ಪ್ರಪಂಚದಲ್ಲಿ ಒದಗಿದ ಸುಖದುಃಖಗಳೆಲ್ಲ ಶಿವನ ಆಜ್ಞೆಯಂತೆಯೇ ಬಂದಿರುವವೆಂದು ತಿಳಿದು ಅವುಗಳಿಗಾಗಿ ನೋಯದೆ, ಲೋಕಾರಾಧನೆಮಾಡಿ ಶಿವಕೃಪೆಗೆ ಪಾತ್ರನಾಗುವನೋ ಅವನೇ ನಿಜವಾದ ಶರಣನೆಂಬುದೇ ಮೇಲಿನ ತ್ರಿಪದಿಯಲ್ಲಿರುವ ಮತಿತಾರ್ಥ.

" ನಾನುನೀನುಗಳಳಿದು, ತಾನು ಲಿಂಗದಿ ಉಳಿದು, ನಾನಾಭ್ರಮೆಗಳತಿ
ಗಳೆದು ನಿಂದಾತ ತಾನೈಕ್ಯ ನೋಡ ಸರ್ವಜ್ಞ "

ಮಾನವನು ತನ್ನ ಅಂತಿಮಧ್ಯೇಯವಾದ ಶಿವೈಕ್ಯತೆ ಪಡೆಯಬೇಕಾದರೆ ಪ್ರಪಂಚದಲ್ಲಿ ಆವರೀತಿಯಲ್ಲಿದ್ದುಕೊಂಡು ಅದರ ಸಾಧನೆ ಮಾಡಿಕೊಳ್ಳಬೇಕೆಂಬದನ್ನು, ವೇದಾಂತವನ್ನರಿಯದ ಸಾಮಾನ್ಯಜನರಿಗೂ ಕೂಡ ತಿಳಿಯುವ ಹಾಗೆ ಮನೆಮಾತಿನಲ್ಲಿ ಹೇಳಿರುವದನ್ನು ನೋಡಿದರೆ, ಸರ್ವಜ್ಞನಲ್ಲಿ ಎಲ್ಲರಿಗೂ ಭಕ್ತಿ ವಿಶ್ವಾಸಗಳು ಹುಟ್ಟದಿರವು. ಸರ್ವಜ್ಞನು ಎಂತಹ ಸ್ವತಂತ್ರ ವಿಚಾರಿಯೂ, ನ್ಯಾಯ ಹಾಗೂ ನೀತಿಗಳ ಪಕ್ಷಪಾತಿಯೂ, ಆಗಿದ್ದಾನೆಂಬುದಕ್ಕೆ ಅವನು ರಚಿಸಿರುವ ತ್ರಿಪದಿಗಳೇ ಸಾಕ್ಷಿ. ಇರಲಿ ಇನ್ನು ಅವನ ಬೇರೆ ಮಾತುಗಳಲ್ಲಿನ ಸವಿಯನ್ನಷ್ಟು ನೋಡುವಾ?

" ಹೊಲಸು ಮಾಂಸದ ಹುತ್ತು ಎಲುವಿನಾ ಹಂದರವು ಹೊಲೆಬಲಿದ ತನು
ವಿನೊಳಗಿರ್ದು ಆವರೋಳ್ ಕುಲವನರಸುವರೆ ಸರ್ವಜ್ಞ "

ಎಂಬ ಈ ಅವನ ಉಕ್ತಿಯಿಂದ, ಉಚ್ಚನೀಚ ಕುಲಗಳ ಬಡಿವಾಟಕ್ಕೆ ಅರದಾಳವೇ ಬಿದ್ದು ಹೋಗಿದೆ. ಮತ್ತು ಈ ಅವನ ತತ್ವವು ರಾಷ್ಟ್ರೀಯ ಜೀವನಕ್ಕೆ ಎಷ್ಟು ಒಳ್ಳೇ ರೀತಿಯಿಂದ ಪೋಷಕ್ರವಾಗಿದೆ ನೋಡಿ !

" ಮುಂಡೆ ಬೋಳಾದೊಡೆಂ ದಂಡಕೋಲ್ಪಿಡಿದೊಡಂ ಹೆಂಡತಿಯ ಬಿಟ್ಟು
ನಡೆದಡಂ ಗುರುಮುಖ ಕಂಡಿಲ್ಲದಿಲ್ಲ ಸರ್ವಜ್ಞ "

ನೈಜವಾದ ಮುಕುತಿಯ ಮಾರ್ಗವನ್ನು ಕಂಡುಕೊಳ್ಳಬೇಕಾದರೆ, ಗುರುವು ಅತ್ಯವಶ್ಯವಾಗಿ ಎಂಬ ಮಾತನ್ನು ಮೇಲಿನ ಉಕ್ತಿಯು ಘಂಟಾಘೋಷವಾಗಿ ಹೇಳುತ್ತಲಿದೆ.

" ಎತ್ತು ತೊತ್ತಾಗಿ ಹಿತ್ತಲದ ಗಿಡವಾಗಿ ಮತ್ತೆ ಪಾದದ ಕೆರವಾಗಿ ಗುರು
ವಿನ ಹತ್ತಲಿರು ಎಂದ ಸರ್ವಜ್ಞ "

ಗುರುವಿನ ವಿಷಯಕ್ಕೆ ಸರ್ವಜ್ಞನಲ್ಲಿ ಎಂತಹ ಭಕ್ತಿ ವಿಶ್ವಾಸಗಳೂ ಆದರವೂ ಇತ್ತೆಂಬುದಕ್ಕೆ ಮೇಲಿನ ತ್ರಿಪದಿಯು ಸಾಕ್ಷಿಯಾಗಿದೆ.

" ಹೇಳಬಲ್ಲೊಡೆ ಗುರುವು, ಕೇಳಬಲ್ಲೊಡೆ ಶಿಷ್ಯ, ಹೇಳಲು ಕೇಳಲು ಅರಿ-
ಯದ ಗುರು ಶಿಷ್ಯರ ಮೇಳವೆಂತೆಂದ ಸರ್ವಜ್ಞ "

ಗುರು-ಶಿಷ್ಯರು ಹೀಗಿರಬೇಕು ಅಂದರೆ—ಅನ್ಯೋನ್ಯರಿಗೆ ಸುಖವಾಗುವದು. ಕಾರ್ಯಸಾಧನೆಯ ಫಲವು ಪ್ರಾಪ್ತಿಯಾಗುವದು. ಎಂಬ ಭಾವವನ್ನು ಸರ್ವಜ್ಞನು ಎಷ್ಟು ಒಳ್ಳೆ ರೀತಿಯಿಂದ ಚಿತ್ರಿಸಿರುವನು ನೋಡಿರಿ.

"ಒಬ್ಬನಲ್ಲದೆ ಜಗಕೆ, ಇಬ್ಬರುಂಟೇ ಮತ್ತೆ ಒಬ್ಬ ಸರ್ವಜ್ಞ ಕರ್ತ ಜಗಕೆಲ್ಲ
ಒಬ್ಬನೇ ದೈವ ಸರ್ವಜ್ಞ "

ಇದೀಗ ಮೇಲಿನ ಪದ್ಯದಿಂದ ಸರ್ವಜ್ಞನ ದೇವರ ಅಸ್ತಿತ್ವದ ವಿಷಯವು ವಿದಿತವಾಗುತ್ತಲಿದೆ. ಅನೇಕ ದೇವರನ್ನು ಪೂಜಿಸುವ ಮೂಢವಾದ ರೂಢಿಯು ಕಟ್ಟು ಸರ್ವಜ್ಞನಿಗೆ ಒಪ್ಪಿತವಿಲ್ಲವೆಂಬದಾಗಿ ತೋರುತ್ತದೆ.

" ಆದಿದೈವವನು ತಾ ಭೇದಿಸಲರಿಯದೆ ಹಾದಿಯಾ ಕಲ್ಲಿಗೆಡೆಮಾಡಿ ನಮಿ
ಸುವ ಮಾದಿಗರ ನೋಡ! ಸರ್ವಜ್ಞ "

ಎಂಬ ಈ ಆವನ ಉಕ್ತಿಯಿಂದ ಸರ್ವಜ್ಞನು ಮೂರ್ತಿ ಪೂಜೆಯನ್ನು ನಿರಾಕರಿಸುವವನಾಗಿದ್ದಾನೆಂಬದಾಗಿ ಊಹಿಸಬಹುದಾಗಿದೆ.

" ಹರಿಬೊಮ್ಮರೆಂಬುವರು, ಹರನಿಂದಲಾದವರು ಅರಸಿಗೆ ಆಳು ಸರಿಯಿ
ಹನೆ, ಶಿವನಿಂದ ಮೆರೆವರಿನ್ನಾರು? ಸರ್ವಜ್ಞ "

ಮೇಲಿನ ಪದ್ಯದಿಂದ ಶಿವಸರ್ವೋತ್ತಮ ತತ್ವವು ಮಾನ್ಯವಾಗಿದ್ದಿತೆಂಬುದು ಸ್ಪಷ್ಟವಾಗಿ ಕಂಡುಬರುತ್ತದೆ.

" ಜ್ಞಾನದಿಂದಲೆ ಇಹವು, ಜ್ಞಾನದಿಂದಲೆ ಪರವು ಜ್ಞಾನವಿಲ್ಲದಲೆ ಸಕಲವು
ತನಗಿದ್ದು ಹಾನಿಕಾಣಯ್ಯಾ ಸರ್ವಜ್ಞ "

ಸರ್ವಜ್ಞನಲ್ಲಿ ಜ್ಞಾನಲಾಲಸೆಯು ಎಷ್ಟು ತೀವ್ರವಾಗಿತ್ತೆಂಬುದು ಮೇಲಿನ ಅವನ ತ್ರಿಪದಿಯಿಂದ ವ್ಯಕ್ತವಾಗುತ್ತದೆ. ಅದು ಕೂಡ ಪರತತ್ವ ವಿಷಯಕವಾದ ಜ್ಞಾನವೇ ಮಿಗಿಲಾದ ಜ್ಞಾನ ಎಂಬ ಸಂಗತಿಯೂ ಸಿದ್ಧವಾಗುತ್ತದೆ. ಕೆಳಗಿನ ಪದ್ಯವನ್ನಷ್ಟು ನೋಡಿ ಜ್ಞಾನವಿಲ್ಲದ ಮಾನವನನ್ನು ಹೇಗೆ ಹೀಯಾಳಿಸಿರುವನೆಂಬದನ್ನು?

" ಜ್ಞಾನವುಳ್ಳವರೊಡಲು ಭಾನುಮಂಡಲದಂತೆ ಜ್ಞಾನವಿಲ್ಲದವರೊಡಲು
ಅಗಸರ ಬಾನಿಯಂತಕ್ಕು ಸರ್ವಜ್ಞ "

ಈ ಪದ್ಯವು ಎಷ್ಟು ವಿನೋದಪೂರ್ಣವಾಗಿದೆಯೆಂಬುದನ್ನು ನೋಡಿರಿ. ಸಾಧಾರಣ ಓದುಬಹ ಕಲಿತವರಾದರೂ ಅದನ್ನೋದಿ ಕನ್ನಡ ನುಡಿಯ ಸವಿಯನ್ನು ಸವಿಯಬಹುದಾಗಿದೆ. ಆದುದರಿಂದಲೇ ಸರ್ವಜ್ಞನು ಜನಜೀವನದಲ್ಲಿ ಬೆರೆತು ಜನರ ಪ್ರತಿದಿನದ ವ್ಯವಹಾರಿಕವಾದ ಮಾತಿನಲ್ಲಿಯೇ ತನಗೆ ಹೇಳಬೇಕಾದುದನ್ನು ಹೇಳಿರುವನು. ಸರ್ವಜ್ಞನಿಗೆ ಪುನರ್ಜನ್ಮದಲ್ಲಿ ನಂಬುಗೆ ಇಲ್ಲವೆಂಬದು ಅವನದೊಂದು ತ್ರಿಪದಿಯಿಂದ ಕಂಡುಬರುತ್ತದೆ.

" ಸತ್ತಬಳಿಕಾಜೀವ, ವೆತ್ತಹೋಗುವದನರಿಯಾರತ್ತ ಪರಲೋಕವೆಂಬವರ
ತಲೆಯಲಿ ಪಿತ್ತವೇರಿಹುದು ಸರ್ವಜ್ಞ "

ಈ ಲೋಕದಲ್ಲಿ ಮಾನವನು ಮಾಡುವ ಕೃತಿಗಳ ಬಗ್ಗೆ ಅವನಿಗೆ ಪರಲೋಕದಲ್ಲಿ ದೊರೆಯುವ ಒಳ್ಳೇ ಅಥವಾ ಕೆಟ್ಟ ಫಲಗಳ ಬಗ್ಗೆ ಅವನಲ್ಲಿ ವಿಶ್ವಾಸವಿರಲಿಲ್ಲವೆಂದು ಮೇಲಿನ ಪದ್ಯದಿಂದ ಹೊಳೆಯುವಂತಿದೆ. ಇರಲಿ ಇನ್ನು ಜ್ಞಾನಿಯಾದ ಮನುಷ್ಯನ ಇರುವು ಹೇಗೆ ಇರುವದೆಂಬ ಸಂಗತಿಯನ್ನು ಎಷ್ಟು ಒಳ್ಳೇ ರೀತಿಯಿಂದ ಹೇಳಿರುವನು ನೋಡಿರಿ!

" ಜಾತಿ ಸೂತಕವಳಿದು, ಮಾತಿನಾಗುಣ ತಿಳಿದು ಆತುಮನ ನಿಜವನರಿದು
ನಿಂದಾತನಿಗೇತರದು ಚಿಂತೆ ಸರ್ವಜ್ಞ "

ಹೀಗೆ ಸರ್ವಜ್ಞನು ತಾನು ಕಂಡು ಅನುಭವಿಸಿದ ಯಾವತ್ತೂ ಸಂಗತಿಗಳನ್ನು ಅತಿಸುಲಭವಾದ ತಿಳಿಗನ್ನಡದ ತ್ರಿಪದಿಗಳಲ್ಲಿ ರಚಿಸಿ ಅಸದಳವಾದ ಕೀರ್ತಿಯನ್ನು ಪಡೆದಿರುವನು. ಇವನ ತ್ರಿಪದಿಗಳಲ್ಲಿ ಹೇಳದ ವಿಷಯವೇ ಇಲ್ಲ. ಧರ್ಮ, ನೀತಿ, ಜ್ಯೋತಿಷ್ಯ, ವ್ಯವಹಾರಮುಂತಾಗಿ ಎಲ್ಲ ವಿಷಯಗಳೂ ಸರಿಯಾಗಿ ಹೇಳಲಾಗಿವೆ.

ಒಟ್ಟಾರೆ ಸರ್ವಜ್ಞನು ತನ್ನ ಹೆಸರಿಗೆತಕ್ಕಂತೆ ಲೋಕಸೇವೆಗೈದು ದಿಗಂತವಾದ ಕೀರ್ತಿ ಪಡೆದುದಲ್ಲದೆ, ಕನ್ನಡ ಸಾಹಿತ್ಯ ಜೀವಿಗಳಲ್ಲಿ ತನ್ನ ಹೆಸರು ಆಚಂದ್ರಾರ್ಕವಾಗಿ ಬಾಳುವಂತೆ ಮಾಡಿಹೋಗಿರುವನು. ಆದ್ದರಿಂದ ಕನ್ನಡಿಗರು ಈ ಅವನ ಬಹುಮೋಲವಾದ ಕಾರ್ಯಕ್ಕಾಗಿ ಬಹುವಾಗಿ ಕೃತಜ್ಞತೆಯನ್ನು ವ್ಯಕ್ತಪಡಿಸಬೇಕಾಗಿದೆಯೆಂಬದಾಗಿ ಬೇರೆ ಹೇಳುವ ಕಾರಣವಿಲ್ಲ.

( ಮುಂದೆ ಸಾಗುವದು. )

# ಪ್ರೇಮ ವೈಚಿತ್ರ್ಯ.

ಲೇಖಕ :— ವೆಂಕಟರಾವ ಫಡಣೀಸ ಶಿರಹಟ್ಟಿ.

೧.

ಪುಣ್ಯಪ್ರದ ಪ್ರದೋಷಕಾಲ! ನಿಲೀನ ಭೋಮಂಡಲದಲ್ಲಿ ಇದೀಗ ರಜನೀ ಪತಿಯು ಉದಯೋನ್ಮುಖನಾಗಿದ್ದನು! ಅನಂತ ತಾರಾಗಣವು ಆಗಸದಲ್ಲಿ ಆನಂದ ದಿಂದ ನೃತ್ಯಮಾಡುತ್ತಲಿವೆಯೆಂಬಂತೆ ಭಾಸವಾಗುತ್ತಲಿದೆ! ಇಂತಹ ಪ್ರಶಾಂತ ಸಮಯದಲ್ಲಿ ಲಲಿತಪುರದ ಊರ ಹೊರಗಿನ ಉದ್ಯಾನದೊಳಗಿಂದ ಗಾಯನದ ಮಂಜುಲ ಧ್ವನಿಯು ಕೇಳಬರುತ್ತಲಿವೆ. ಆ ಸ್ವರ್ಗೀಯ ಸಂಗೀತ! ಅಹಹ! ಅದಾರು ಗಾಯನಮಾಡುತ್ತಿರಬಹುದು? ಕಂಠಮಾಧುರ್ಯವು ಅದೆಷ್ಟು ಹೃದಯಂಗಮವಿರುವದು?

"ಕೃಷ್ಣಮೂರ್ತಿ ಕಂಣಮುಂದೆ ನಿಂತಿದಂತಿರೆ ||ಪಲ್ಲ||
ಮಸ್ತಕದಲಿ ಮಾಣಿಕದ ಕಿರೀಟಾ | ಕಸ್ತೂರಿ ತಿಲಕ
ದಿಂದೆಶೆವಲಲಾಟಾ| ಕೌಸ್ತುಭ ಎಡಬಲದಲ್ಲಿ ಲೋಲಾಟಾ"

ಉದ್ಯಾನದ ಮಧ್ಯದಲ್ಲಿರುವ ಜಗುಲಿಯಮೇಲೆ ನವಯೌವನ ಸುಂದರ ಯುವತಿಯೋರ್ವಳು ದೇವರ ಧ್ಯಾನದಲ್ಲಿ ಮಗ್ನಳಾಗಿ ಕುಳಿತಿದ್ದಳು. ಅಷ್ಟರಲ್ಲಿ ಓರ್ವ ತರುಣನು ಅವಳ ಹಿಂದಿನಿಂದ ಬಂದು ಗಟ್ಟಿಯಾಗಿ ಕಂಣು ಮುಚ್ಚಿದನು. ಆಗ ಆ ತರುಣಿಯು 'ಅಪ್ಪಯ್ಯಾ ಅದಾರು?' ಎಂದು ಬೆಚ್ಚಿಬಿದ್ದು ಕೈಬಿಡಿಸಿ ಕೊಂಡು ಹಿಂತಿರುಗಿ ನೋಡುತ್ತಾಳೆ ಪತಿಯು—ಸದಾನಂದನ ಮುಗುಳುನಗೆ ಯಿಂದ ಯುಕ್ತವಾದ ಮುಖವನ್ನು ನೋಡಿದಾಕ್ಷಣವೇ ಲಜ್ಜೆಯಿಂದ ಅಧೋ ಮುಖಿಯಾಗಿ ದೂರ ಸರಿದುನಿಂತಳು. 'ದಾಮಿನಿ! ನಾನೆಷ್ಟು ಧನ್ಯನು! ನೋಡು! ನಿನ್ನಂತಹ ಸ್ವರ್ಗೀಯ ದೇವಿಯು ನನಗೆ ಲಭಿಸಿರುವಳೆಂದಮೇಲೆ ನನ್ನ ಪೂರ್ವ ಜನ್ಮದ ಪುಣ್ಯಫಲವಲ್ಲವೇ? ಪ್ರಿಯೆ! ದಾಮಿನಿ ಬಾ! ಇಲ್ಲಿ ಕುಳಿತುಕೊಳ್ಳುವಾ.' ಎಂದು ನುಡಿಯುತ್ತ ಸದಾನಂದನು ದಾಮಿನಿಯ ಕೈಹಿಡಿದು ಕರೆತಂದು ಆ ಜಗು ಲಿಯಮೇಲೆ ಕುಳಿತುಕೊಂಡನು.

'ಪ್ರಿಯಕರಾ! ನಾನು ತಮ್ಮ ಪಾದದಾಸಿಯು! ಇಷ್ಟೇಕೆ ನನ್ನನ್ನು ಸ್ತುತಿಸುವದು?'

'ದಾಮಿನಿ! ಇದು ಸ್ತುತಿ ಅಲ್ಲ! ನಿನ್ನ ಸೌಂದರ್ಯ ಸ್ವಭಾವಗಳೇ ಇದಕ್ಕೆ ಸಾಕ್ಷಿಯಾಗಿವೆಯಲ್ಲವೆ?'

'ಪ್ರಿಯಕರಾ! ಅಮೃತಸಾಗರದಲ್ಲಿ ನಾವು ಕುಳಿತ ಪ್ರೇಮದ ನಾವೆಯನ್ನು ತಾವು ಮುಳುಗಿಸಲಿಕ್ಕಿಲ್ಲವಷ್ಟೆ?'

'ಛೆ! ಛೆ! ದಾಮಿನಿ! ನಾನು ಹಾಗೇಕೆಮಾಡಲಿ!' ಎಂದು ಸದಾನಂದನು ಮಾತಾಡುತ್ತ ದಾಮಿನಿಯ ಕಪೋಲಗಳಿಗೆ ಮುತ್ತು ಕೊಡುವದಕ್ಕೂ ಇವನ ಸ್ನೇಹಿತನಾದ ಮೋಹನರಾಯನು ಅಲ್ಲಿಗೆ ಬರುವದಕ್ಕೂ ಗಂಟೆ ಬಿದ್ದಿತು.

'ನಲಿದಾಡು! ಸದಾನಂದಾ ಹೀಗೆಯೇ ಪ್ರೇಮಸಾಮ್ರಾಜ್ಯದಲ್ಲಿ ಅಖಂಡವಾಗಿ ನಲಿದಾಡು!' ಎಂದು ಒಂದು ತರಹದ ದ್ವೇಷಭಾವದಿಂದ ಮಾತಾಡಿದನು.

ಇದನ್ನು ಕೇಳಿದ ಸದಾನಂದನು ಎದ್ದು ಅವನ ಹತ್ತರ ಹೋದನು. ದಾಮಿನಿಯು ಅಲ್ಲಿರುವ ಬಂಗಲೆಯೊಳಗೆ ಹೊಕ್ಕಳು. 'ಏಕೆ ಮೋಹನಾ ಕೋಟು, ಬೂಟುಗಳನ್ನು ಹಾಕಿಕೊಂಡು ಸಿದ್ಧನಾಗಿ ಎಲ್ಲಿಗೆ ಹೊರಟಿದ್ದೆ?' ಸದಾನಂದನು ಅವನ ಬೆನ್ನು ಚಪ್ಪರಿಸಿ ನುಡಿದನು. 'ಎಲ್ಲಿಂದಲೋ ಬಂದ ಈ ಪ್ರಾಣಿಯು ಎಲ್ಲಿಗೋ ಹೊರಟಿರುವದು.' 'ಇಷ್ಟೇಕೆ ನಿರಾಶಾಮಯನಾಗಿರುವೆ ಮೋಹನಾ?'

'ನನ್ನ ಪಾಲಿಗೆ ಜಗತ್ತೇ ನಿರಾಶಮಯವಾಗಿ ತೋರುತ್ತಿದೆ. ನಿರಾಶಯ ವಿಷಯವು ನನ್ನ ದೇಹದಲ್ಲಿ ಛೇದಿಸತೊಡಗಿದೆ. ಸದಾನಂದಾ ನಿನ್ನಂತಹ ಸುಖಿ-ಪುರುಷನಿಗೆ ಅದುಹೇಗೆ ತಿಳಿದೀತು? ಆದಿರಲಿ ಬಿಡು ಸದಾನಂದ ಇಂದು ಏಕೋ ರಾಣಿಯವರ ಕೂಡ ಏಕಾಂತ ಭಾಷಣಗಳು ನಡೆದಿದ್ದವು? ನನ್ನಿಂದ ತಡೆಯಾಯಿತೇನು ನಿಮಗೆ? ಮೋಹನ ರಾಯನು ಕಿರುನಗೆಯಿಂದ ನುಡಿದನು.

'ಛೇ! ಅದೇನಿಲ್ಲ. ಏನೋ ಸಂಸಾರದ ವಿಷಯವಾಗಿ ಮಾತಾಡುತ್ತ ಕುಳಿತ್ತಿದ್ದೆವಿಷ್ಟೆ? ನಡೆ ಮೋಹನ ಸ್ವಲ್ಪ ಚಹವನ್ನು ತೆಗೆದುಕೊಳ್ಳುವಿಯಂತೆ ಸದಾ-ನಂದನು ಅವನನ್ನು ಮನೆಗೆ ಕರೆದುಕೊಂಡು ಬಂದನು.

## ೨.

ಮೋಹನರಾಯನು ಲಲಿತಪುರದ ಪ್ರಖ್ಯಾತ ವಕೀಲರಾದ ಭುಜಂಗರಾಯರ ಏಕ ಮಾತ್ರ ಪುತ್ರನು. ಸದಾನಂದನು ಅದೇ ಊರ ಇನಾಮದಾರ ರಂಗನಾಥ ರಾಯರ ಮಗನು. ಮೋಹನ ಸದಾನಂದರು ಒಂದೇ ಕಾಲೇಜದಲ್ಲಿ ಕಲಿತವರು.

ಒಬ್ಬರಮೇಲೊಬ್ಬರ ಪ್ರೇಮವು ವಿಶೇಷವಾಗಿತ್ತು. ಬಿ. ಎ. ದ ವರೆಗೆ ಕಲಿತು ಇಬ್ಬರೂ ಕಾಲೇಜಕ್ಕೆ ಶರಣು ಹೊಡೆದರು. ಸದಾನಂದನು ತನ್ನ ಹೊಲಮನೆಗಳ ಕಡೆಗೆ ಲಕ್ಷ್ಯಕೊಡಲಾರಂಭಿಸಿದನು. ಫ್ಯಾಶನ್ನಿಗೆ ಬಲಿಬಿದ್ದ ಮೋಹನ ರಾಯನು ದುರ್ವ್ಯಸನದ ಬೀಡಾದನು. ಆಧುನಿಕ ಸುಧಾರಣಾಯುಗದಲ್ಲಿ ದುರ್ವ್ಯಸನಗಳಿಗೆ ಅಳತೆಯೇ? ಈಗಿನ ತರುಣರಲ್ಲಿ ಒಂದಿಲ್ಲೊಂದು ಚಟವು ಇದ್ದೇ ಇರುವದು. ಚಹಕಾಫಿಗಳಿಗಂತೂ ಮೂಗು ಕೊಯಿಸಿಕೊಳ್ಳುವರು. ಆ ಅಪಾಯ ಪೇಯಗ ಳನ್ನು ಕುಡಿ ಕುಡಿದು ದೇಹ ಒಣಗಿ ಕ್ಷಯರೋಗಕ್ಕೆ ಬಲಿಯಾಗಿ ಅಕಾಲದಲ್ಲಿ ಮರಣ ಹೊಂದುವರು. ಬ್ರಾಂಡಿಯನ್ನು ಕುಡಿಯುವದೊಂದು ಫ್ಯಾಶನದ ಲಕ್ಷ-ಣವಂತೆ, ತಲೆಯಮೇಲೆ ಕೂದಲನ್ನು ಬಿಡುವದು, ಮೋರೆಗೆ ಪಾವಡರನ್ನು ಬಡಿ-ದುಕೊಳ್ಳುವದು, ಕಂಣಿಗೆ ಚಷ್ಮೆವನ್ನು ಹಾಕಿಕೊಳ್ಳುವದು, ಸಿಗರೇಟನ್ನು ಸೇದು-ವದು, ಬೂಟು, ಕೋಟು, ಹ್ಯಾಟುಗಳನ್ನು ಹಾಕಿಕೊಳ್ಳುವದು ಮೊಂಡಮಿಸಿ ಯನ್ನು ಬಿಡುವದು. ಟಿಸ್, ಫಿಸ್ ಎಂದು ಹರಕ-ಮುರಕ ಇಂಗ್ಲೀಷ ಮಾತಾ-ಡುವದು. ಇವೆಲ್ಲವು ಫ್ಯಾಶನ್ನದ ಲಕ್ಷಣಗಳಂತೆ; ಈಗಿನ ತರುಣರಿಗೆ! ಈತರಹದ ಫ್ಯಾಶನೇಬಲ್ಲರ ಮಾಲಿಕೆಯಲ್ಲಿ ನಮ್ಮ ರಾಯನೂ ಒಬ್ಬನಾಗಿದ್ದನು.

ದಾಮಿನಿಯು ಶಾಮರಾಯನ ಮಗಳು. ಶಾಮರಾಯನು ಭುಜಂಗರಾಯ ರಲ್ಲಿ ಕಾರಕೂನನಿದ್ದನು. ಈಗಿನ ಬೆಡಗಿನ ತರುಣಿಯಂತೆ ದಾಮಿನಿಯು ಒಣ ಆಡಂಬರದವಳಲ್ಲ. ೧೫—೧೬ ವರುಷದವಳು. ಇದೀಗ ತಾರುಣ್ಯಮಂದಿರದಲ್ಲಿ ಕಾಲಿಟ್ಟದ್ದಳು. ಬಹುಸುಂದರಳು. ಇವಳು ಎಂದಾದರೊಮ್ಮೆ ಭುಜಂಗರಾಯರ ಮನೆಗೆ ಹೋಗುತ್ತಿದ್ದಳು. ಇಂತಹ ತರುಣಿಯ ಮೋಹಪಾಶಕ್ಕೆ ಮೋಹನ ರಾಯನು ಬೀಳುವದು ತಡವೆ? ಅಲ್ಲದೆ ಕೈಕೆಳಗಿನ ಚಾಕರನ ಮಗಳು. ಮೋಹನ ರಾಯನು ಈ ಕೋಗಿಲೆವನ್ನು ಜುಲುಮೆಯಿಂದಾದರೂ ಬಿಡದೆ ತನ್ನ ಬಲೆಯಲ್ಲಿ ಹಿಡಿಯಬೇಕೆಂದು ಯೋಚಿಸಿ, ತಂದೆಯಾದ ಭುಜಂಗರಾಯರಿಗೆ ತನ್ನ ಮನೋಗತ ವನ್ನು ತಿಳುಹಿಸಿದನು. ಆದರೆ ದಾಮಿನಿಯು ಈ ಮೊದಲೇ ತನ್ನ ಪ್ರೇಮಧನವನ್ನು ಸದಾನಂದನಿಗರ್ಪಿಸಿ ಬಿಟ್ಟಿದ್ದಳು. ಮೋಹನರಾಯನು ಈ ವಿಷಯದಲ್ಲಿ ಈರ್ಷೆಗೆ ಬಿದ್ದನು. ಇವನಿಗೆ ತಿಳಿಯಲಸಾಧ್ಯವಾದ ಒಂದುಶಕ್ತಿಯು ತಾಪದಾಯಕವಾಗಿ ಬಾ ಧಿಸುತ್ತ ದಾಮಿನಿಯಮೇಲಿನ ಪ್ರೇಮವನ್ನು ಹೆಚ್ಚಿಸುತ್ತಲಿತ್ತು! ದಿನಕ್ಕೆ ಒಂದಾವ ರ್ತಿಯಾದರೂ ಮೋಹನರಾಯನು ಅವಳ ಮುಖವನ್ನು ನೋಡದಿದ್ದರೆ ಅವನಿಗೆ ಏನೋ ಒಂದುತರಹದ ಕಳವಳವಾದಂತಾಗುತ್ತಿತ್ತು. ಆ ಕಳವಳದಿಂದಲೇ ಒಮ್ಮೆ ಅವನು ದಾಮಿನಿಗೆ "ಪ್ರೇಮಮ್ಮಯಿ ದಾಮಿನಿ! ನಿನ್ನ ಹೃದಯದಲ್ಲಿ ನನಗೆ ಸ್ಥಳವನ್ನು ಕೊಡಲಾರಿಯಾ?" ಎಂದು ಆಶಾಪೂರ್ಣನಾಗಿ ನುಡಿದನು. 'ಇದು ನೋಡು ಮೋಹನಾ! ನಾನು ಸದಾನಂದನ ಕೊರಳಿಗೆ ಮನಸ್ಸಿನಿಂದಮಾಲೆಯನ್ನು

ಅರ್ಪಿಸಿದ್ದೇನೆ. ಅಂದಮೇಲೆ ಸುಮ್ಮನೆ ನನ್ನ ಆಶೆಯನ್ನು ಹಿಡಿಯುವದು ಹುಚ್ಚುತನವಲ್ಲವೇ?" ದಾಮಿನಿಯು ಆಶೆಯನ್ನು ಅವನು ಪೂರಾ ಬಿಟ್ಟರೂ ಅವನ ಅವಳ ವಿಷಯವಾಗಿ ದ್ವೇಷಾಸೂಯಗಳಿಗೆ ಆಸ್ಪದಕೊಟ್ಟಿತು. ಮೋಹನರಾಯನು ಶಾಮರಾಯನ ನೌಕರಿಯನ್ನು ಬಿಡಿಸಿ ತನ್ನ ಮನೆಯಿಂದ ತಳ್ಳಿದನು. ಪಾಪ ಆ ಶಾಮರಾಯನ ಹೊಟ್ಟೆ ಹೋಗುವದೇ ಕಠಿಣವಾಯಿತು. ಸದಾನಂದನೇ ಅವನಿಗೆ ಆಶ್ರಯಕೊಟ್ಟನು. ಮುಂದೆ ತುಸುದಿನಗಳಲ್ಲಿಯೇ ಸದಾನಂದ-ದಾಮಿನಿಯರ ವಿವಾಹವಾಯಿತು. ಇದರಿಂದ ಮೋಹನರಾಯನ ಹೃದಯದಲ್ಲಿ ದಾಮಿನಿಯ ಸೇಡನ್ನು ತೀರಿಸಿಕೊಳ್ಳುವ ಒಂದು ಕಿಡಿಯು ಪ್ರಜ್ವಲಿಸಹತ್ತಿತು. ಆ ಕಿಡಿಯೇ ಮುಂದೆ ದಾಮಿನಿಯ ಜೀವವನ್ನು ನಾಶಗೊಳಿಸಲು ಕಾರಣವಾಯಿತು.

೩.

ಸದಾನಂದ—ಮೋಹನರಾಯರು ಮನೆಯೊಳಗೆ ಬಂದು ಒಂದು ಕೋಣೆಯಲ್ಲಿ ಹೋಗಿ ಕುರ್ಚಿಯಮೇಲೆ ಬಂದು ಕುಳಿತರು. ತುಸು ಹೊತ್ತಿನಲ್ಲಿ ದಾಮಿನಿಯು ಎರಡುಕಪ್ಪು ಚಹಾವನ್ನು ತಂದು ಎದುರಿಗಿನ ಮೇಜಿನಮೇಲಿಟ್ಟಳು. ಮೋಹನರಾಯನು ಅವಳನ್ನು ವಿಲಕ್ಷಣವಾಗಿನೋಡಿ ನಕ್ಕನು. ನಗುವು ಬಹು ಭಯಂಕರವಾಗಿತ್ತು. ಆ ನಗುವಿನಲ್ಲಿ ಸೇಡು ತುಂಬಿಕೊಂಡಿತ್ತು ದಾಮಿನಿಯು ಮೋಹನರಾಯನ ಆ ಭೀಕರ ಮುಖವನ್ನು ನೋಡಿ ಅಂಜಿ ಒಳಗೆ ಹೋದಳು. ಚಹವನ್ನು ಕುಡಿಯುವದಾದಮೇಲೆ ಇಬ್ಬರೂ ವಾಯು ಸೇವನಾರ್ಥವಾಗಿ ಪುನಃ ಆ ಉದ್ಯಾವನಕ್ಕೆ ಬಂದರು.

\+ \+ \+ \+ \+

ಸದಾನಂದನು ತನ್ನ ಮೇಜಿನಮೇಲೆಬಿದ್ದ ಒಂದು ಹರಕ ಪತ್ರವನ್ನು ಕೈಯಲ್ಲಿ ಹಿಡಿದುಕೊಂಡು ಓದುತ್ತಲಿದ್ದನು. 'ಇದೇನು? ಈ ಪತ್ರವನ್ನು ಯಾರು ಯಾರಿಗೆ ಬರೆದಿರುವರು? ಮೋಹನನು ದಾಮಿನಿಗೆ ಬರೆದಿರುವನೆ? ದಾಮಿನಿಯು ನನ್ನ ಸಹಧರ್ಮಚಾರಿಣಿ! ದಾಮಿನಿಯು ವ್ಯಭಿಚಾರಿಣಿಯೆ? ಅವಳಿಂದ ಇಂತಹ ಪ್ರಮಾದವಾಗಲು ಶಕ್ಯವೆ? ಛೀ! ಇದು ಅಸಂಭವನೀಯವೇ ಸರಿ!' ಸದಾನಂದನನ್ನು ಈಸರಿ ಹೃದಯಕ್ಕೆ ಗಾಯಗೊಳಿಸಿದ ಆ ಪತ್ರದಲ್ಲಿದ್ದ ಸಂಗತಿಯಾದರೂ ಏನು? ವಾಚಕರೇ ಇದೋ ನೋಡಿರಿ. ಆ ಪತ್ರವನ್ನೇ ಇದ್ದಕ್ಕಿದ್ದಹಾಗೆ ಇಲ್ಲಿ ಬರೆದಿರುವೆವು.

" ಪ್ರೀ............ದಾಮಿನಿ, ನಾಳೆ ಐದುಗ........ಉದ್ಯಾನಕ್ಕೆ........ಬಾ.
ನಿನ್ನ ಮಾರ್ಗ ಪ್ರತೀಕ್ಷಿಸುತ್ತಿರುವ—

ಮೋ............"

ಸದಾನಂದನ ಹೃದಯವು ಸುಡಹತ್ತಿತು. ಹಾಗೆಯೇ ಕ್ರೋಧಾವೇಶದಿಂದ ದಾಮಿನಿಯ ಕೋಣೆಗೆ ಹೋದನು. ಆವಳು " **ವೀರಶೈವ ಚಂದ್ರಿಕೆ** " ಎಂಬ ಮಾಸಪತ್ರಿಕೆಯನ್ನು ಓದುವದರಲ್ಲಿ ತಲ್ಲೀನಳಾಗಿದ್ದಳು. ಪಾಪ ನಿರ್ಮಲ ಹೃದಯದ ದಾಮಿನಿಯು ಇದಾವದನ್ನು ಅರಿಯಳು. ಕಾಲಸಪ್ಪಳಕ್ಕೆ ಮುಖವನ್ನು ಮೇಲಕ್ಕೆ ಮಾಡಿದಳು. ಪತಿಯ ಆ ಭಯಂಕರ ರುದ್ರಾವತಾರವನ್ನು ನೋಡಿ ಅಂಜಿದಳು.

' ನಾಥ ಇ.........ಷ್ಟೇ.........ಕೆ ಕೋ.........ಪಿಸಿ.........ಕೊಂಡಿ....ರುವಿ? ಕಾರಣ.........ವಾ.........ದ.........ರೂ ಏ.........ನು ? ' ಎಂದು ಅಂಜುತ್ತ ಪ್ರಶ್ನೆ-ಮಾಡಿದಳು. ಸದಾನಂದನ ಕೋಪವು ಮೇಲಿನ ಕೊನೆಯ ಮೆಟ್ಟಲನ್ನು ಮುಟ್ಟಿತು.

' ದಾಮಿನಿ ! ದಾಮಿನಿ ! ಇದನ್ನೇನುಮಾಡಿದೆ ರಾಕ್ಷಸೀ ! ಕುಲಕಲಂಕಿಣಿ !'

" ಪತಿದೇವಾ ! ಇದರರ್ಥವೇನು ? ನನ್ನಿಂದ ಅಂತಹ ಘೋರ ಅಪರಾಧವಾದಗೂ ಏನಾಗಿರುವದು ? ನಾಥಾ ! ತಮ್ಮ ನಿರ್ಮಲ ಪ್ರೇಮುಜಲದಲ್ಲಿ ಆದಾವ ನೀಚನು ಭಯಂಕರ ವಿಷವನ್ನು ಕಲಿಸಿದನು ? ನಾಥಾ ! ನಿಮ್ಮ ಮಾತಿನ ಅರ್ಥ-ವೇ ನನಗೆ ತಿಳಿಯಲಿಲ್ಲ. ಆದದ್ದಾದರೂ ಏನು ? "

' ಜಾರಿಣೀ ! ಇದರ ಅರ್ಥವೆ ? ನನ್ನ ಬಾಯಿಂದಲೇ ಹೊರಡಿಸಬೇಕೆಂಬ ನಿನ್ನ ಇಚ್ಛೆಯೆ ? ವಂಚಕಳೇ, ಇದೋ ಈ ಪತ್ರವನ್ನು ಓದು. ಆ ಮೋಹನನನ್ನು ಕೂಡಿಕೊಂಡು ಸುಖವಾಗಿರು. '

' **ಮೋಹನ** ' ಎಂಬ ಶಬ್ದವನ್ನು ಸದಾನಂದನು ಉಚ್ಚರಿಸಿದ ಕೂಡಲೇ ದಾಮಿನಿಯ ಹೃದಯವು ಇಬ್ಭಾಗವಾದಂತಾಯಿತು. 'ಹಾಯ್ ! ಕೊನೆಗೆ ಅವನು ತನ್ನ ಭಯಂಕರವಾದ ಸೇಡನ್ನು ಈ ರೀತಿಯಾಗಿ ತೀರಿಸಿಕೊಂಡನೇ ? ಮೋಹನಾ, ಪತಿವ್ರತಾ ಸ್ತ್ರೀಯು ದುಃಖದಿಂದ ಉದರಿಸಿದ ಕಂಣೀರು ಸಾಮಾನ್ಯವೆಂದು ತಿಳಿದಿರುವಿಯಾ? ದುಷ್ಟ, ನಿಮ್ಮಂಥ ಸ್ವಾರ್ಥೀ ಹೃದಯ ಪಿಪಾಸೆಗೆ ಕೋಮಲ ತರುಣಿಯರೆಷ್ಟು ಆಹುತಿಯಾಗಿರುವರೋ ? ದೇವರೇ ಅದನ್ನು ನೀನು ನಿವಾರಣೆಮಾಡಲಾರೆಯಾ ? ಹಾಯ್ ! ಹಾಯ್ ! ಸ್ತ್ರೀ ಜೀವನಕ್ಕೆ ಧಿಃಕಾರ ! ಧಿಃಕಾರ ! ಪತಿಯ ಪ್ರೇಮಕ್ಕೆ ಹೊರತಾದ ಸ್ತ್ರೀಯು ಬದುಕಿದ್ದರೇನು ? ಸತ್ತರೇನು ? ಜಗತ್ತಿನಲ್ಲಿ ಅವಮಾನಿತಳಾಗಿ ಈ ಕೆಟ್ಟ ಮುಖವನ್ನು ತೋರಿಸುವದೇ ಬೇಡ ! ದೇವಾ ! ಎಂತಹ ವಿಪತ್ತನ್ನು ತಂದೆ ? ಕೃಷ್ಣಾ ! ಇನ್ನು ನಿನ್ನ ಹೊರತು ಮತ್ತಾರು ಈ ಕಷ್ಟದಿಂದ ಉದ್ಧರಿಸುವವರು ? ಕೃಷ್ಣಾ !'

"ನೀನೇ ಅನಾಥ ಬಂಧೋ | ಕಾರುಣ್ಯ ಸಿಂಧೋ || ಪಲ್ಲ ||
ಮದಗಜರೆಲ್ಲಾ ಕೂಡಿದರೇನು | ಅದರ ಸಮಯಕ್ಕೊದಗ
ಲಿಲ್ಲಾ | ಮದನಯ್ಯಾ ಮದಸೂದನೆಂದರೆ | ಮುದದಿಂದಲಿ
ಬಂದೊದಗಿದೆ ಕೃಷ್ಣಾ" || ೧ ||

ಹೀಗೆಯೇ ಒಂದೇಸವನೇ ಆಲಾಪಿಸಹತ್ತಿದಳು. ಸದಾನಂದನು ಅಲ್ಲಿಂದ ಯಾವಾಗಲೋ ಹೊರಟು ಹೋಗಿದ್ದನು. ಆ ಅಸಾಹಾಯ ದಾಮಿನಿಯು ಹಾಗೆಯೇ ಆ ಭೀಕರ ರಾತ್ರಿಯಲ್ಲಿ ಮನೆಯಿಂದ ಹೊರಬಿದ್ದಳು.

೪.

ಕೃಷ್ಣಾನದಿಯ ತೀರ! ಕಾರ್ಗತ್ತಲೆಯು ಸುತ್ತಲೂ ಪಸರಿಸಿದೆ! ಕ್ರೂರ ಶ್ವಾಪದಗಳಕೂಗು ಕತ್ತಲೆಗೆ ಮತ್ತಿಷ್ಟು ಭೀಕರತೆಯನ್ನು ಹೆಚ್ಚಿಸುತ್ತಲಿದೆ! ದಾಮಿನಿಯು ಹಾಗೆಯೇ ನದಿತೀರಕ್ಕೆ ಬಂದು ಕೈಮುಗಿದು ನಿಂತುಕೊಂಡು, 'ದೇವಾ! ಕಾಮಿನಿಯರ ಕೋಮಲಾಂತಃಕರಣವನ್ನರಿಯದೆ, ಅವರ ಹೃದಯಸಿಂಹಾಸನಗೂಥರಾಗಿ ಕಾಮನಾ ತೃಪ್ತಿಗೋಸ್ಕರ ಮತ್ತರಾಗಿ ತಾಂಡವನೃತ್ಯವಾಡುವ ಹಾಗೂ ನಾರಿಯರನ್ನು ನರಕಯಾತನೆಗೆ ಗುರಿಮಾಡುವ ಈ ಮೋಹನನಂತಹ ದುಷ್ಟ ಸ್ವಾರ್ಥೀ ಪುರುಷರ ಒಡಲಿಗೆ ಸಾವಿರಾರು ಸಹೋದರಿಯರು ಬಲಿಯಾಗುವದು ನಿನ್ನ ಕಂಣಿಗೆ ಬೀಳುವದಿಲ್ಲವೇ? ಹಾಯ್ ಪತಿದೇವಾ! ಸುಮ್ಮ ಸುಮ್ಮನೆ ನನ್ನಮೇಲೆ ಎಂತಹ ಘೋರ ಅಪರಾಧವನ್ನು ಹೊರಸಿದಿಯಲ್ಲ! ಆಗಲಿ ಮುಂದಿನ ಜನ್ಮದಲ್ಲಿಯಾದರೂ ನೀನೇ ಪತಿಯಾಗಲೆಂದು ಅನನ್ಯಭಾವದಿಂದ ದೇವರಲ್ಲಿ ಬೇಡಿಕೊಳ್ಳುವೆನು. ಕೃಷ್ಣಾಮಾತೆ! ನಿನ್ನ ಮಗಳನ್ನು ಒಡಲಲ್ಲಿ ಹಾಕಿಕೋ! ಜಯ ಕೃಷ್ಣಾಮಾತೆ' ಎಂದು ದಾಮಿನಿಯು ನದಿಯಲ್ಲಿ ಹಾರಿಕೊಂಡಳು. ಒಂದು ಕ್ಷಣ ಕೃಷ್ಣೆಯ ನೀರು ಅಲ್ಲೋಲಕಲ್ಲೋಲವಾಯಿತು.

\+ + + + + +

ಮರುದಿವಸ ಈ ದಾರುಣ ವಾರ್ತೆಯು ಸದಾನಂದನಿಗೂ ಶಾಮರಾಯನಿಗೂ ತಿಳಿಯಿತು. ಹಾಗೂ ಆ ಮೋಸದ ಪತ್ರವನ್ನು ಮೋಹನನೇ ಬರೆದಿರುವನೆಂಬದು ತಿಳಿಯಿತು. ಅವರಿಗೆ ದಾಮಿನಿಯು ನಿರ್ಮಲಳೂ ಪರಿಶುದ್ಧಳೂ ಇದ್ದಳೆಂಬದೂ ತಿಳಿದು ಬಹಳೇ ಪಶ್ಚಾತ್ತಾಪವಾಯಿತು. ಆದರೂ ಮಾಡುವದೇನು? ವಿಚಾರ ಮಾಡದಲೆ ಒಮ್ಮೆಲೆ ಧಾವಿಸಿದ್ದರ ಪರಿಣಾಮವು ಒಂದು ನಿರ್ಮಲಾಂತಃಕರುಣಹೃದಯದ ಜೀವವನ್ನು ಎಳೆದುಕೊಂಡು ಹೋಯಿತು!

— ಸಂಪೂರ್ಣಂ. —

# ಕನ್ನಡ ನುಡಿಯ ಪ್ರಾಚೀನತೆ.

( ಶ್ರೀ. ದ. ರಾ. ಬೇಂದ್ರೆಯವರು ಪುಣೆಯ ವಸಂತ ವ್ಯಾಖ್ಯಾನ ಮಾಲೆಯಲ್ಲಿ ಓದಿದ ಪ್ರಬಂಧ. )

( ಹಿಂದಿನಿಂದ ಮುಂದೆಸಾಗಿದ್ದು. )

## ವೀರಶೈವ ವಾಙ್ಮಯ.

ಈ ಭಾಗದಲ್ಲಿ ಉಂಟಾದ ಅತಿ ಮಹತ್ವವಾದ ಕ್ರಾಂತಿಗೆ ವೀರಶೈವರೇ ಕಾರಣರಾದರು. ಚಾಲುಕ್ಯ ಹಾಗೂ ಕಲಚೂರ್ಯ ರಾಜ್ಯಗಳು ಮುಳಗಿದವು. ಸಮಾಜದ ವ್ಯವಸ್ಥೆಯು ಬಹಳವಾಗಿ ಬದಲಿಸಿತು. ಸಾಮಾನ್ಯ ಜನರ ಅಭಿರುಚಿಗೆ ಯೋಗ್ಯವಾದ ಕಾವ್ಯಗಳು ಹುಟ್ಟ ಹತ್ತಿದವು. ಅಲ್ಲಮಪ್ರಭು, ಬಸವೇಶ್ವರ, ಚನ್ನಬಸವ, ಮಹಾದೇವಿಯಕ್ಕ, ಅಕ್ಕನಾಗಮ್ಮ, ಸಿದ್ಧರಾಮ ಮುಂತಾದ ಶರಣರು ಸ್ವತಂತ್ರ ರೀತಿಯಿಂದ ವಚನ ವಾಙ್ಮಯವನ್ನು ಪ್ರಚಾರದಲ್ಲಿ ತಂದರು. ಆಗಿನ ಕಾಲದ 'ಶೂನ್ಯಸಂಪಾದನೆ' ಎಂಬ ಗ್ರಂಥವು ಸಂಭಾಷಣಾತ್ಮಕವಾಗಿದ್ದು ಗ್ರೀಕರ ತತ್ವಜ್ಞಾನಿಯಾದ ಪ್ಲೇಟೋನ ಶೈಲಿಯನ್ನು ಹೋಲುತ್ತದೆ. ಆಧ್ಯಾತ್ಮಿಕ ಆನಂದವನ್ನೀಯುವ ಗ್ರಂಥಗಳಲ್ಲಿ ಅದೊಂದಾಗಿದೆಯೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಹರಿಹರ, ರಾಘವಾಂಕ ಇವರು ವಿಜಯನಗರದ ಅರಸರ ಆಶ್ರಯದಲ್ಲಿದ್ದುಕೊಂಡು ಷಟ್ಪದಿಯಲ್ಲಿ ಕಾವ್ಯಗಳನ್ನು ರಚಿಸುವದಕ್ಕೆ ಮೊದಲುಮಾಡಿದರು.

ಕರ್ನಾಟಕದ ಈ ರಾಜಕೀಯ,ಸಾಮಾಜಿಕ ಹಾಗು ಧಾರ್ಮಿಕ-ಕ್ರಾಂತಿಯಿಂದ ದೇವಗಿರಿ ಯಾದವರ ರಾಜ್ಯದಲ್ಲಿ ಮರಾಠಿ ಭಾಷೆಯನ್ನಾಡುವ ಸಮಾಜಕ್ಕೆ ಮಹತ್ವವು ಬಂತು. ಆಗ ಸಾಧು ಮತ್ತು ಮಹಾನುಭಾವ ಸಾಂಪ್ರದಾಯಗಳು ಹುಟ್ಟಿದ ಮೂಲಕ ಮರಾಠಿ ಭಾಷೆಗೆ ಮಹತ್ವವನ್ನು ಕೊಡುವ ಬ್ರಾಹ್ಮಣ ಲೇಖಕ ವರ್ಗವು ಅಸ್ತಿತ್ವಕ್ಕೆ ಬಂತು.

ಜೈನ, ವೀರಶೈವ ಮತ್ತು ರಾಮಾನುಜ ಸಾಂಪ್ರದಾಯಗಳಿಗೆ ವಿರೋಧವಾದ ಅದ್ವೈತ ಭಾಗವತ ಸಾಂಪ್ರದಾಯಕರಲ್ಲಿ ಉದಯಿಸಿದ ಕರ್ತೃತ್ವವಾನ್ ಪುರುಷರಿಗೆ, ದೇವಗಿರಿಯ ಯಾದವರ ದರಬಾರದಲ್ಲಿ ಪ್ರತಿಷ್ಠೆ ದೊರೆಯಿತು. ಮರಾಠಿ ಸಮಾಜದ ಹಾಗೂ ಭಾಷೆಯ ಅಭಿವೃದ್ಧಿಗೆ ಈ ಕಾಲವು ಒಳ್ಳೇ ಅನುಕೂಲವಾಗಿರಬೇಕೆಂಬದು ಸ್ಪಷ್ಟವಾಗುತ್ತದೆ. ಶಿಲಾಲೇಖಗಳಲ್ಲಿ ಮರಾಠಿ ಭಾಷೆಯನ್ನು ಉಪಯೋಗಿಸಿದುದು ಇದೇ ಕಾಲದಲ್ಲಿ ಕಂಡುಬರುತ್ತದೆ. ಕ್ರಿ. ಶ. ೧೧೮೮ ರಿಂದ ೧೨೯೦ ರ ವರೆಗೆ ಅಂದರೆ ಜ್ಞಾನೇಶ್ವರರು ತಮ್ಮ ಗ್ರಂಥವನ್ನು ರಚಿಸಿದ ಕಾಲವು

ಕನ್ನಡ ವಾಙ್ಮಯದ ಮೂರನೇ ಅವಸ್ಥೆಯದಾಗಿತ್ತೆಂದು ಹೇಳಲಿಕ್ಕೆ ಅವಕಾಶವಿದೆ.

ಹೊಯ್ಸಳದ ಕಾಲದಲ್ಲಿ ಜೈನ ವಾಙ್ಮಯಕ್ಕೆ ಪುನಃ ಒಂದು ಪ್ರಕಾರದ ಕಳೆಯು ಬಂತು. ಆ ಕಾಲಕ್ಕೆ ಅನೇಕ ರೂಪಗಳಿಂದ ಕನ್ನಡದಲ್ಲಿ ಉತ್ಕೃಷ್ಟವಾದ ಗ್ರಂಥಗಳು ರಚಿಸಲ್ಪಟ್ಟವು. ಜೈನ ಕವಿಚಕ್ರವರ್ತಿಗಳಲ್ಲಿ ನಾಲ್ಕನೇಯವನಾದ ಚನ್ನನು ಇದೇ ಕಾಲದಲ್ಲಿ ಎರಡನೆ ಬಲ್ಲಾಳ-ರಾಜನ ದರಬಾರದಲ್ಲಿ ಆಸ್ಥಾನ ಕವಿ-ಯಾಗಿ ಹೋದನು. ದ್ವೈತಮತ ಸ್ಥಾಪಕರಾದ ಮಧ್ವಾಚಾರ್ಯರು ಈ ಕಾಲದಲ್ಲಿಯೇ ಉದಯಿಸಿದರು. ಅವರ ಶಿಷ್ಯರಾದ ನರಹರಿ ತೀರ್ಥರು, ಪಂಢರಪುರದ ವಿಠ್ಠಲನ ಭಕ್ತರಿಗಾಗಿ, ದಾಸಕೂಟದ ಸಾಂಪ್ರದಾಯವನ್ನು ಸ್ಥಾಪಿಸಿ, ಅದಕ್ಕೊಂದು ಮೂರ್ತಸ್ವರೂಪ ಕೊಟ್ಟರು. ಮುಂದೆ ನಾಮದೇವ, ತುಕಾರಾಮ ಇವರು ಮೂಲತಃ ಕನ್ನಡ ವಿಠ್ಠಲನಿಗೆ ಪ್ರಿಯವಾದ, ಭಕ್ತಿ ಸಾಂಪ್ರದಾಯಕ್ಕೆ ತಮ್ಮ ಚರಿತ್ರೆಯಿಂದ, ಹಾಗೂ ಸಾಹಿತ್ಯದಿಂದ, ಪೂರ್ಣವಾದ ಮರಾಠಿ ಸ್ವರೂಪವನ್ನು ಕೊಟ್ಟುಬಿಟ್ಟರು. ಈ ಕಾಲದಲ್ಲಿನ ಮರಾಠಿ ಭಾಷೆಯಲ್ಲಿ ರಚಿತವಾದ 'ಓವಿ' ಹಾಗೂ 'ಅಭಂಗ' ಗಳಲ್ಲಿ ಕಂಡುಬರುವ, ಛಂದಸ್ಸಿನ ರಹಸ್ಯವನ್ನು ತಿಳಿದುಕೊಳ್ಳುವದಕ್ಕೆ ಕನ್ನಡ ಛಂದಶಾಸ್ತ್ರದ ಜ್ಞಾನವು ಅವಶ್ಯವಾಗಿ ಬೇಕಾಗುತ್ತದೆ.

ಮುಂದೆ ರಾಜಕೀಯ ಸ್ಥಿತ್ಯಂತರಗಳಿಂದ, ೧೩ ನೇ ಶತಮಾನದಲ್ಲಿ ಮರಾಠಿ ಭಾಷೆಗೆ ಒಮ್ಮಿಂದೊಮ್ಮೆ ಒಳ್ಳೆ ಪ್ರಾಶಸ್ತ್ಯವು ದೊರೆಯಿತು. ಹೊಯ್ಸಳ ರಾಜ್ಯದಲ್ಲಿನ ಮಾಲಂಗೀ ವಿದ್ಯಾಲಯದಲ್ಲಿ ನಾಗರೀ ಮತ್ತು ಆರ್ಯ ಈ ಭಾಷೆಗಳ ಶಿಕ್ಷಣದ ಉಪಕ್ರಮವನ್ನು ಆ ಕಾಲದ ರಾಜಕಾರಣಪಟುಗಳು ಪ್ರಾರಂಭಿಸಿದರು. ಶಿಲಾಲೇಖ ಹಾಗೂ ಬೇರೆ ವಾಙ್ಮಯದಲ್ಲಿ ಈ ಕಾಲದಿಂದ ಮರಾಠಿ ಶಬ್ದಗಳು ಕಂಡು ಬರಹತ್ತಿದವು.

ಒಟ್ಟಾರೆ ಜ್ಞಾನೇಶ್ವರಿ ಗ್ರಂಥವು ನಿರ್ಮಾಣವಾಗುವದಕ್ಕೆ ಆರೇಳು ನೂರು ವರುಷಗಳ ಹಿಂದೆ ಕನ್ನಡದಲ್ಲಿ ಅನೇಕ ಜನ ಗ್ರಂಥಕಾರರು ಆಗಿಹೋದರು. ಅವರಲ್ಲಿ ೧೦೦ ಜನ ಜೈನರು ೧೦೦ ಜನ ವೀರಶೈವರು, ೫೦ ಜನ ಬ್ರಾಹ್ಮಣರು ಹಾಗೂ ೫೦ ಜನ ಉಳಿದ ಜಾತಿಯವರಾಗಿದ್ದರು. ಆ ಕಾಲದಲ್ಲಿ ೩೫, ೩೬ ಜನ ಸ್ತ್ರೀಯರು ಕೂಡ ಗ್ರಂಥಗಳನ್ನು ಬರೆದ ಬಗ್ಗೆ ಇತಿಹಾಸದಲ್ಲಿ ಆಧಾರಗಳಿವೆ.



# ವೀರಶೈವ ಬಾಲೆ ಪಾರ್ವತಿ.

( ಹಿಂದಿನಿಂದ ಮುಂದೆಸಾಗಿದ್ದು, )

ಏನೋ ಅನ್ನುವ ಹಾಗೆ ಓರ್ವ ತರುಣನು ವೀರಾವೇಶದಿಂದ ಬಂದು. ಅನಾಥ ಕುವರಿಯಮೇಲೆ ಕೈ ಮಾಡುವ ದುರಾಚಾರಿಗಳೇ ನಿಲ್ಲಿ ! ನಿಮ್ಮ ಪ್ರಾಣವನ್ನೇ ಹೀರಿಬಿಡುತ್ತೇನೆಂದು ಆ ಯುವಕನು ತನ್ನ ಕೊರಳೊಳಗಿದ್ದ ಗುಂಡಗಳಿಗೆಯಿಂದ ಬೀಸಿ-ಹೊಡೆದನು. ಶಿವಾಂತರ್ಗತವಾದ ಅದು ಶಿವಶಕ್ತಿಯಂತೆ ಆವೇಶದಿಂದ ಹೋಗಿ, ಒಬ್ಬನ ತಲೆಯನ್ನೇ ಒಡೆದುಬಿಟ್ಟಿತು. ಮತ್ತು ಆ ಮನುಷ್ಯನನ್ನು ಭೂಮಿಗೆ ಉರುಳಿಸಿಬಿಟ್ಟಿತು. ಇದನ್ನು ನೋಡುತ್ತಿದ್ದ ಅವನ ಸಂಗಡಿಗನು ಯಾವಾಗಲೋ ಪಲಾಯನ ಮಾಡಿದ್ದನು. ಬಳಿಕ ಯುವಕನು ಸಮೀಪಕ್ಕೆಹೋಗಿ ಭೂಗತಳಾದ ಬಾಲೆಯನ್ನು ಕೂಗಿದನು. ಅವಳ ಮೈಮೇಲೆ ಎಚ್ಚರವೇ ಇದ್ದಿಲ್ಲ. ಗೊಂದಲದಲ್ಲಿ ಅವಳ ಹೆರಳು ಬಿಚ್ಚಿ ಹೋದದ್ದರಿಂದ ಕೇಶಕಲಾಪಗಳು ಅವಳ ಮುಖದಲ್ಲಿ ನರ್ತನ ಮಾಡಲಾರಂಭಿಸಿವೆ. ಲಲಾಟದಲ್ಲಿ ವಿಭೂತಿಯ ರೇಖೆಗಳು ಮಸ-ಮಸಕಾಗಿವೆ. ಮಧ್ಯದಲ್ಲಿಟ್ಟಿದ್ದ ಕುಂಕುಮ ತಿಲಕವು ಈಗಲೂ ಇವಳ ಮುಖಕಾಂತಿಯನ್ನು ಹೆಚ್ಚಿಸುತ್ತಲಿದೆ. ಯುವಕನು ಗಾಬರಿಯಾಗಿ ಮತ್ತೂ ಬಾಲೆಯನ್ನು ಕೂಗಿದನು. ಎಷ್ಟು ಕೂಗಿದರೇನು ? ಕುಮಾರಿಗೆ ಎಚ್ಚರಿದ್ದರಲ್ಲವೆ ? ಭಯದಿಂದ ಅವಳು ನಿಶ್ಚೇಷ್ಟಿತಳಾಗಿ ಬಿದ್ದು ಬಿಟ್ಟಿದ್ದಳು

೨.

ಸಾವುಕಾರರ ದರ್ಪೋಕ್ತಿಗಳನ್ನು ಕೇಳಿ ಚನವೀರಪ್ಪನು ಮನೆಗೆ ಬಂದನಷ್ಟೇ ಅಲ್ಲ; ಬಹಳೇ ವ್ಯಸನಾಕ್ರಾಂತನಾದನು. ಯಾಕಂದರೆ ಸಾವುಕಾರನು ಸಾಮಾನ್ಯನಲ್ಲ; ನೀಚರಲ್ಲಿ ಅಗ್ರೇಸರನು. ಹಿರಿಯರು ಎಷ್ಟೋ ಬಗೆಯ ಅಲ್ಲಸಲ್ಲದ ವ್ಯವಹಾರಗಳಿಂದ ಲಕ್ಷಾವಧಿ ಹಣವನ್ನು ಗಳಿಸಿಬಿಟ್ಟಿದ್ದರು. ಮನೆಯಲ್ಲಿ ಬೆಳ್ಳಿ-ಬಂಗಾರಕ್ಕೇನೂ ಕೊರತೆ ಇದ್ದಿಲ್ಲ. ಯೌವನದ ಪ್ರಾರಂಭದಲ್ಲಿಯೇ ಇವನಿಗೆ ಮನೆಯ ಹಿರೆತನಬಂತು. ಬಳಿಕ ಕೇಳುವದೇನು ? ಪುಂಡಜನರನ್ನು ಕಟ್ಟಿಕೊಂಡು ತಮ್ಮ ಅನುಮತಿಯಂತೆ ನಡೆಯುದವರನ್ನು ಬಡಿಸುವೆನೆಂದು ಬೆದರಿಸುವದು ಇವನ ನಿತ್ಯಕ್ರಮವಾಗಿತ್ತು. ದುಡ್ಡಿನ ಆಶೆತೋರಿಸಿ ಎಷ್ಟೋ ಕುಲಾಂಗನೆಯರನ್ನು ಬಾಳುವೆಗೇಡು ಮಾಡುವದಲ್ಲದೆ ಮುಂದೆ ಅವರ ಕಷ್ಟಾರ್ಜಿತ ದ್ರವ್ಯವನ್ನು ಅಪಹರಿಸತೊಡಗಿದ್ದನು.

ಊರ ಸೂಳೆಯರಂತೂ ಇವನ ಹೆಸರು ಕೇಳಿದರೆ ಗದಗದ ನಡಗುತ್ತಿದ್ದ ರಲ್ಲದೆ; ತಮ್ಮ ಉತ್ಪನ್ನದ ಕೆಲವಂಶವನ್ನು ಸಾವುಕಾರಪುತ್ರನಿಗೆ ಕಾಣಿಕೆಯಾಗಿ ಅರ್ಪಿಸುತ್ತಿದ್ದರು. ಇಲ್ಲವಾದರೆ ಬಂತೇ ಅವಳಮೇಲೆ ಕುಡಕರದಾಳಿ! ಈ ಪುಂಡರ ಉಪಟಳದಿಂದ ಓಣಿಯವರೆಲ್ಲರೂ ಬೇಸತ್ತು ಹೋಗಿದ್ದರು. ಇಂಥ ಸದ್ವರ್ತನದ ಸಾವುಕಾರ ಪುತ್ರನು ತನ್ನ ಮಗಳಮೇಲೆ ದೃಷ್ಟಿ ಇಟ್ಟಿದ್ದು, ಚನವೀರಪ್ಪನಿಗೆ ಸಮಾಧಾನಕಾರಕವಾಗಲಿಲ್ಲ. ಆದರೂ ಹೆಂಡತಿಯನ್ನೂ ಮಗಳನ್ನೂ ಕೇಳೋಣ ವೆಂದು ಮಲ್ಲಮ್ಮನನ್ನು ಕರೆದು, ಈ ವಿಚಾರವನ್ನು ತಿಳಿಸಿ ಅವಳ ಅಭಿಪ್ರಾಯ ವನ್ನು ಕೇಳಿದನು. ಅವಳಿಗೇನು. ಪಾಪ! ಪತಿ-ಸೇವೆಯ ಹೊರತು, ಅನ್ಯವಿಚಾ ರಗಳ ಲವಲೇಶವಿಲ್ಲದ ಮಲ್ಲಮ್ಮನು ತನ್ನ ಮಗಳನ್ನು ಸಾವುಕಾರರು ಕೇಳುವರೆಂಬ ಆನಂದದಲ್ಲಿಯೇ ಮುಳುಗಿದಳು. ವಿದ್ಯಾವಿಹೀನೆಯಾದ ಮಲ್ಲಮ್ಮನಿಗೆ ಸಾವುಕಾರ ರಲ್ಲಿ ಅಂತರ್ಯವಾಗಿರುವ ನೀಚ ಗುಣಗಳ ಕಲ್ಪನೆಯಾದರೂ ಹೇಗೆ ಬರಬೇಕು. ತನ್ನ ಮಗಳನ್ನು ಸಾವುಕಾರರು ಕೇಳಿದರೆಂದು ಆನಂದಾಶ್ಚರ್ಯದಿಂದ ಎಷ್ಟು ತೆರವನ್ನು ಕೊಡುತ್ತಾರೆಂದು ಕೇಳಿದಳು. ಅದಕ್ಕೆ ಚನವೀರಪ್ಪನು ಅವರು ಇನ್ನೂ ತೆರವಿನ ಸುದ್ದಿಯನ್ನೇ ತೆಗೆದಿಲ್ಲಾ. ನಿನ್ನ ಮತ್ತು ಪಾರ್ವತೆಮ್ಮನ ವಿಚಾರವನ್ನು ತಿಳಿದುಕೊಂಡು ಮುಂದಿನ ಮಾತು ಆಡಬೇಕೆಂದು ಸುಮ್ಮನೇ ಹೊರಟು ಬಂದೆನು. ಇವರಿಬ್ಬರ ಇಷ್ಟುಮಾತು ಮುಗಿಯುವಷ್ಟರಲ್ಲಿಯೇ ಶಾಲೆಗೆ ಹೋಗಿದ್ದ ಪಾರ್ವತಿಯು ಮನೆಗೆ ಬಂದೇಬಿಟ್ಟಳು. ತಂದೆಯ ವಿಚಾರವಶವಾಗಿದ್ದ ಮುಖಭಾವವನ್ನು ನೋಡಿ ತಾನಾಗಿಯೇ ತಂದೆಯನ್ನು ಕುರಿತು ವಿಚಾರಕ್ಕೆ ಕಾರಣವೇನೆಂದು ಕೇಳಿದಳು. ಕೂಡಲೆ ಚನವೀರಪ್ಪನು, ಮುದ್ದುಮಗಳ ಈ ಪ್ರಶ್ನೆಯಿಂದ ಆನಂದಿ ತನಾಗಿ "ಮಗು ಪಾರ್ವತೆಮ್ಮಾ, ಏನೆಂದುಸರಲಿ" ಅಪ್ಪಾ ಏನಿದ್ದದ್ದನ್ನು ನನ್ನ ಎದುರಿಗೆ ಹೇಳಬಾರದೇ ಅನುಮಾನವೇಕೆ? ಅದಕ್ಕೆ ಚನವೀರಪ್ಪನು ಮಗಳನ್ನು ಪ್ರೇಶಿಸಿ, "ಮಗು ಈ ಊರ ಸಾವುಕಾರ ಪುತ್ರನನ್ನು ಬಲ್ಲೆಯಾ" ಎಂದು ಕೇಳಿ-ದನು. ಅದಕ್ಕೆ ಪಾರ್ವತಿಯು "ಆ ಕುಡುಕನೇ ಹೌದು. ಅವನು ಸಾವುಕಾರ ಪುತ್ರನೆಂದು ಕೇಳಿದ್ದೇನೆ. ಮುಂದೇನು?" ಮಗಳ ಈ ಪ್ರಥಮ ವಾಗ್ಬಾಣವೇ ಚನವೀರಪ್ಪನನ್ನು ಚವರಿಸಿಬಿಟ್ಟಿತು. ಮುಂದೆ ಏನು ಮಾತಾಡಬೇಕೆಂಬದು ಅವನಿಗೆ ತೋಚದಾಯಿತು. ಆದರೂ ನಡೆದ ಸಂಗತಿಯನ್ನು ಒಮ್ಮೆ ಮಗಳಿಗೆ ತಿಳಿಸಿಬಿಡಬೇಕೆಂದು ನಿರ್ಧರಿಸಿದನು. ಚನವೀರಪ್ಪನು, ಮಗಳನ್ನುದ್ದೇಶಿಸಿ "ಪಾರ್ವತೆಮ್ಮಾ ಒಮ್ಮೆಲೆ ಹೀಗೆ ನಿಷ್ಠುರೋಕ್ತಿಗಳನ್ನಾಡಬೇಡ; ನನ್ನ ಮಾತನ್ನು ಪೂರಾಕೇಳು. ವಿಚಾರಮಾಡಿ ಉತ್ತರಕೊಡು. ಇಲ್ಲಿಕೇಳು, ಆ ಸಾವುಕಾರ ಪುತ್ರನು ನಿನ್ನನ್ನು ಲಗ್ನವಾಗಬೇಕೆಂದು ಇಚ್ಛಿಸುತ್ತಿದ್ದಾನೆ. ಇದಕ್ಕೆ ನಿನ್ನ ಅನು-ಮತಿಯು ಅವಶ್ಯವಲ್ಲವೇ" ಎಂದು ಕೇಳಲಾಗಿ ಪಾರ್ವತಿಯು ಸದಯಾಂತಃಕ

ರುಣದಿಂದ, ಅಪ್ಪಾ ಇಂಥಾ ದುರ್ಮಾರ್ಗಪ್ರವರ್ತನಾದ ನರಪಶುವಿನ ಕೊರಳಲ್ಲಿ ನನ್ನನ್ನು ಕಟ್ಟುವಿಯಾ? ಬೇಡಾ ನನಗೆ ಲಗ್ನವೇಬೇಡಾ. ನಾನು ಅವನನ್ನು ಮದುವೆಯಾಗಲು ಒಲ್ಲೆ." ಹೀಗೆ ನುಡಿದ ಪಾರ್ವತಿಯ ಮಾತುಗಳನ್ನು ಅಡಿಗೆಯ ಮನೆಯಲ್ಲಿದ್ದ ಮಲ್ಲಮ್ಮನು ಕೇಳಿ ಕೂಡಲೆ ಪಾರ್ವತಿಯನ್ನುದ್ದೇಶಿಸಿ "ಪಾರವ್ವಾ' ಹಾಗೆನ್ನಬೇಡ. ಅವರು ಸಾವುಕಾರರು. ನಮಗೆ ಬೇಡಿದಷ್ಟು ತೆರವನ್ನು ಕೊಡಲು ಸಿದ್ಧರಿರುತ್ತಾರೆ. ನಮ್ಮ ಬಡತನವನ್ನೇ ಹಿಂಗಿಸಿಬಿಡುತ್ತಾರೆ. ನಿನ್ನನ್ನು ಬಂಗಾರ ದಿಂದ ಮುಚ್ಚಿಬಿಡುತ್ತಾರೆ. ಹೀಗೆ ಒರಟು ಮಾತುಗಳಿಂದ ಅವರನ್ನು ಹೀಯಾಳಿ ಸಬೇಡ. ಅವರನ್ನು ಒರಿಸಲು ಒಪ್ಪಿಕೊ." ಹೀಗೆಂದು ಹೇಳಿದ ತಾಯಿಯ ಮಾತುಗಳನ್ನು ಕೇಳಿದ ಪಾರ್ವತಿಯು ತಾಯಿಯನ್ನು ಕುರಿತು "ಅಮ್ಮಾ ನೀನೂ ಹೀಗೆನ್ನುವಿಯಾ ಇದರಲ್ಲಿನಿನ್ನದೇನು ತಪ್ಪು! ವಿದ್ಯಾವಿಹೀನೆಯಾಗಿ ಅಡಿಗೆ ಮನೆಯ ವೈಭವದಲ್ಲಿ ಆಯುಷ್ಯವನ್ನು ಕಳೆದ ನಿನಗೆ ನೀತಿಯ ಮಹತ್ವದ ಕಲ್ಪನೆಯಾದರೂ ಹೇಗೆ ಬರಬೇಕು? ನೀನೂ ನನ್ನಂತೆ ಸಾಲೆಗೆಹೋಗಿ ಸ್ವಲ್ಪಾದರೂ ವಿದ್ಯಾವ್ಯಾಸಂಗ ವನ್ನುಮಾಡಿದ್ದರೆ ಈ ಸಾವುಕಾರರ ಹುರುಳೆಲ್ಲವೂ ನಿನ್ನ ಹೃತ್ಪಟಲದಲ್ಲಿ ಮೂಡಿ ನಿನ್ನ ಬಾಯಿಂದ ಇಂಥ ಮಾತುಗಳೇ ಹೊರಡುತ್ತಿದ್ದಿಲ್ಲ. ಅಮ್ಮಾ ಈಗ ನಮ್ಮ ಗಳಿಗೆ ಬಂದ ಬಡತನವೇನು? ತೆರವಿನ ರೂಪದಿಂದ ಬಂದ ದ್ರವ್ಯಕ್ಕೆ ನನ್ನನ್ನು ಮಾರಬೇಕೆಂದಿರುವಿರಾ? ಆಭರಣಗಳ ಆಶೆಗಾಗಿ ಓರ್ವ ದುರಾಚಾರಿಯ ಪಾದ-ಸೇವೆಯಲ್ಲಿ ನನ್ನ ಜೀವಿತಸರ್ವಸ್ವವನ್ನು ಹಾಳುಮಾಡಿಕೊಳ್ಳಲಾ? ಬೇಡಾ ಈ ತರಹದ ವೈಭವವನ್ನು ಅನಭೋಗಿಸುವದು ನನಗೆ ಬೇಡಾ. ಒಬ್ಬ ಸದಾಚಾರಿ ಯಾದ ತಿರುಪೆಯುವನಿಗೆ ನನ್ನನ್ನು ಕೊಟ್ಟರೂ ನಾನು ಅವನೊಡನೆ ಸುಖದಿಂದ ಸಂಸಾರ ಮಾಡುವನಲ್ಲದೆ ನಿಮ್ಮ ಉಪಕಾರವನ್ನು ನಿರಂತರವೂ ಸ್ಮರಿಸುವೆನು. ಎಂದು ದೈನ್ಯಾವಸ್ಥೆಯಿಂದ ಹೇಳಿದ ಪಾರ್ವತಿಯ ಮಾತುಗಳಿಂದ ಮಲ್ಲಮ್ಮನ ಅಂತಃಕರಣವು ಕಳವಳಗೊಂಡಿತು. ಮಗಳ ಈ ಬುದ್ಧಿವಂತಿಕೆಯ ಉಪದೇಶ ದಿಂದ ಅವಳ ಕಣ್ಣಲ್ಲಿ ಆನಂದಾಶ್ರುಗಳುದರಿದವು. ಕೂಡಲೇ ಮಗಳನ್ನು ಅಪ್ಪಿ-ಕೊಂಡು, "ಮಗು ಪಾರ್ವತಿ, ಬಿಡವ್ವಾ ನಿನಗೆ ಬೇಡಾದರೆ ಬಿಡು. ನಿನಗೆ ಸಮ್ಮತಿಯಾದವನಿಗೆ ನಿನ್ನನ್ನು ಮಾಡಿಕೊಡುವೆವು. ಚಿಂತಿಸಬೇಡ"ವೆಂದು ಮಲ್ಲಮ್ಮನು ಮಗಳನ್ನು ಉಪಚರಿಸತೊಡಗಿದಳು. ನೋಡಿದಿರಾ! ಮಲ್ಲಮ್ಮನ ಮಗಳಮೋಲಿನ ಪ್ರೇಮವನ್ನು! ಜಗತ್ತಿನಲ್ಲಿ ನಿಷ್ಕಾಮ ಪ್ರೇಮದ ವಾತ್ಸಲ್ಯವು ತಾಯಿಯ ಹೃದಯದಲ್ಲಿಯಲ್ಲದೆ ಮತ್ತೆಲ್ಲಿ ದೊರೆಯುವದು? ಇಂಥಾ ತಾಯಿಯನ್ನು ಕಳೆ-ದುಕೊಂಡವರಿಗೆ ಸುಖದ ಸ್ವಪ್ನವು ಸಹ ಬೀಳಲಾರವು. ಇರಲಿ, ನಮ್ಮ ಪಾರ್ವ-ತಿಯ ಸ್ಥಳದಲ್ಲಿ ಯಾವಳೊಬ್ಬ ವಿದ್ಯೆಕಲೆಯದ ಮೂಢ ಬಾಲೆ ಇದ್ದಿದ್ದರೆ ಈ ಸಾವು ಕಾರರ ಪಾಶದಲ್ಲಿ ಶಿಲುಕಿ ತನ್ನ ಜೀವಿತವನ್ನು ಹಾಳುಮಾಡಿಕೊಂಡು ಹಳೇ

ಮಾತಾಗುತ್ತಿತ್ತು. ಆದರೆ ಪಾರ್ವತಿಯ ವಿದ್ಯಾಪ್ರಭಾವವು ಸಾವುಕಾರರ ಬಲೆಗೆ ಭಲ್ಲಿಯಾಗಿ ಪರಿಣಮಿಸಿತು. ಕೊನೆಗೆ ಮಲ್ಲಮ್ಮನೇ ಪತಿಯನ್ನುದ್ದೇಶಿಸಿ- "ಸುಮ್ಮನೇ ಕುಳಿತಿರೇಕೆ? ಹೋಗಿ ನಾವು ಸದ್ಯಕ್ಕೆ ಮಗಳ ಲಗ್ನವನ್ನೇ ಮಾಡುವದಿಲ್ಲವೆಂದು ಆ ಸಾವುಕಾರರಿಗೆ ಹೇಳಿಬನ್ನಿ"ರೆಂದು ಕಳುಹಿಕೊಟ್ಟಳು. ಹೇಗಾದರೂ ಮಾತು ಮುಟ್ಟಿಸಿ ಬಂದಾರಾಯಿತೆಂದು ಚನವೀರಪ್ಪನು ಸಾವುಕಾರರ ಮನೆಗೆ ಬಂದನು. ಸಾವುಕಾರರಾದರೋ ಮನೆಯಲ್ಲಿ ಬಹು ವೈಭವದಲ್ಲಿದ್ದಾರೆ. ಗಾಂಜಿಯನ್ನು ಮಿದ್ದುವರಾರೋ ಶರೆಯನ್ನು ಪೇಲೆಯಲ್ಲಿ ಹಾಕಿ ಬಾಯಿಗೆ ಹಿಡಿಯುವವರಾರೋ ಈ ಸೌಕರ್ಯದಲ್ಲಿ ಸಾವುಕಾರ ಪುತ್ರನು ಲೋಡಿಗೆ ಆತು ಬಿದ್ದುಕೊಂಡಿದ್ದನು. ಇಂಥಾ ಸಮಯದಲ್ಲಿ ನಮ್ಮ ಚನವೀರಪ್ಪನು ಅಲ್ಲಿಗೆ ಹೋಗಿ ಸಾವುಕಾರ ಪುತ್ರನಿಗೆ ನಮಸ್ಕರಿಸಿ ದೂರದಲ್ಲಿ ಕುಳಿತುಕೊಂಡನು. ಬಳಿಕ ಸಾವುಕಾರನು ಚನವೀರಪ್ಪನನ್ನು ನೋಡಿ "ಏನು ಚನವೀರಾ, ನಿನ್ನ ಮಗಳನ್ನು ನನಗೆ ಕೊಡುವ ನಿಶ್ಚಯವನ್ನು ಮಾಡಿದೆಯೋ ಇಲ್ಲವೋ" ಎಂದು ಗದ್ದರಿಸಿ ಕೇಳಿದನು. ಅದಕ್ಕೆ ಚನವೀರಪ್ಪನು "ಸಾವುಕಾರರೇ, ನನ್ನ ಮಗಳ ಮದುವೆಯನ್ನು ನಾನು ಸದ್ಯಕ್ಕೆ ಮಾಡುವದಿಲ್ಲಾ. ಅವಳಿನ್ನೂ ಚಿಕ್ಕವಳು; ಈಗೇನು ಅಷ್ಟು ಅವಸರ." ಹೀಗೆಂದು ಹೇಳಿದನು ಚನವೀರಪ್ಪನ ಈ ಮಾತುಗಳಿಂದ ಸಾವುಕಾರರಿಗೆ ಮೀರಿದ ಕೋಪಬಂತು. ಕೂಡಲೇ ಅವನು "ಚನವೀರಾ ನೀನು ನನಗೆ ಮಗಳನ್ನು ಕೊಡುವದಿಲ್ಲವೇ? ಆಗಲಿ ನೋಡುತ್ತೇನೆ. ನೀನು ಈಗಿಂದೀಗಲೇ ನನ್ನ ಮನೆಯನ್ನು ಬಿಟ್ಟು ಹೊರಡು ಎಂದು ಆಕ್ರೋಶ ಮಾಡಿದನು. ಆ ಗಾಂಜಿಯ ಹೊಗೆಯನ್ನು ಸಹಿಸದೆ ತೃಸ್ತನಾಗಿದ್ದ ಚನವೀರಪ್ಪನಿಗೂ ಯಾವಾಗ ಇಲ್ಲಿಂದ ಹೋದೇನೋ ಅನ್ನುವಹಾಗೆ ಆಗಿತ್ತು. ಕೂಡಲೇ ಅವನು ಅಲ್ಲಿಂದ ಹೊರಟೇ ಹೋದನು. ಅದರೆ ಸಾವುಕಾರ ಪುತ್ರನಿಗೆ ಮಾತ್ರ ಪಾರ್ವತಿಯನ್ನು ಒರಿಸುವ ಮಹತ್ವಾಕಾಂಕ್ಷೆಯು ಇಮ್ಮಡಿಯಾಯಿತು. ಹೇಗಾದರೂ ಮಾಡಿ ಪಾರ್ವತಿಯನ್ನಪಹರಿಸಬೇಕೆಂದು ಹುಡಿಯುಹತ್ತಿದನು.

## ೩.

ವಾಚಕರೇ, ನಿಶ್ಚೇಷ್ಟಿತಳಾಗಿ ಬಿದ್ದಿರುವ ಬಾಲೆಯನ್ನು ನೀವು ಮರತೇ ಬಿಟ್ಟಿರೇನು? ಆ ವೀರಶೈವ ತರಣನು ಯಾರು? ಅಕಸ್ಮಾತ್ತಾಗಿ ಇಲ್ಲಿಗೆ ಹೇಗೆ ಬಂದನೆಂದು ಕೇಳುವಿರಾ? ಮೂರ್ಛಿತ ಮೂರ್ತಿಯು ಪಾರ್ವತಿಯೇ ಎಂಬದನ್ನು ಧೂರ್ತರಾದ ನೀವು ಯಾವಾಗಲೋ ತರ್ಕಿಸಿರಬಹುದು. ಯುವಕನಾದರೋ ದೂರಿನವನಲ್ಲ. ಇಲ್ಲಿಯೇ ಸಮೀಪದ ಹಳ್ಳಿಯವನು. ಇವನ ತಂದೆ-ತಾಯಿಗಳು ಬಡವರು. ತಮ್ಮ ಊರಲ್ಲಿ ಸಾಲೆ ಇಲ್ಲದ್ದರಿಂದ ಶಿರಹಟ್ಟಿ ಫಕ್ಕೀರ ಸ್ವಾಮಿಗಳವರಿಗೆ ಹೇಳಿಕೊಂಡು ಮಠದಲ್ಲಿಯೇ ಊಟದ ವ್ಯವಸ್ಥೆಯನ್ನುಮಾಡಿ, ವಿದ್ಯಕಲಿಯಲು

ಇಲ್ಲಿ ಇಟ್ಟಿದ್ದರು. ಹುಡುಗನಾದರೂ ಒಳ್ಳೆ ಸುಶೀಲನಿದ್ದನೆಂದು ಸ್ವಾಮಿಯವರಾದರೂ ಅವನನ್ನು ಒಳ್ಳೇ ಪ್ರೇಮದಿಂದ ಸಲುಹಿದ್ದರು ಮ.ಹಾಲಿಂಗಪ್ಪನಾದರೂ ಸಾಲೆಯಲ್ಲಿ ದಕ್ಷತೆಯಿಂದ ಅಭ್ಯಾಸಮಾಡಿ ಗುರುಗಳ ಪ್ರೇಮಕ್ಕೆ ಪಾತ್ರನಾಗಿದ್ದನು. ಇವನಿಗೆ ವ್ಯಾಯಾಮದಮೇಲೆ ಬಹಳೇ ಪ್ರೀತಿ. ಓರಿಗೆಯ ಹುಡುಗರಲ್ಲಿ ಇವನೇ ಬಲಿಷ್ಠನು. ಆದ್ದರಿಂದ ಎಲ್ಲ ಗೆಳೆಯರೂ ಇವನ ಅನುಮತಿಯಂತೆ ವರ್ತಿಸುತ್ತಿದ್ದರು. ಮಹಾಲಿಂಗನು ಪ್ರೇಮಲಸ್ವಭಾವದವನು. ಪರಪೀಡೆಯು ಇವನಿಗೆ ಎಳ್ಳಷ್ಟು ಸಹನವಾಗುತ್ತಿದ್ದಿಲ್ಲ. ಮಹಾಲಿಂಗನು ಬಡವನಾದರೂ ಇವನಲ್ಲಿದ್ದ ಗುರುಭಕ್ತಿ, ಮಾತೃಪ್ರೇಮ, ಆಚಾರಶೀಲತೆ ಮೊದಲಾದ ಗುಣಗಳನ್ನು ನೋಡಿ ಎಲ್ಲ ಜನಾಂಗದವರು ಇವನನ್ನು ಕಾಲೇಜದ ಅಭ್ಯಾಸಕ್ಕೆ ಕಳುಹಿಸಬೇಕೆಂದು ಯೋಚಿಸುತ್ತಿದ್ದರು. ಇವನೀಗ ಮುಲಕೀ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದನು. ಜಾತ್ರೆಯ ಉತ್ಸವವನ್ನು ಮುಗಿಸಿ ಮುಂದೆ ಕಲಿಯಲು ಹೋಗೆಂದು ಸ್ವಾಮಿಗಳು ಹೇಳಿದ್ದರಿಂದ ನಿರ್ವಾಹವಿಲ್ಲದೆ ನಿಂತಿದ್ದನು. ಇಂದು ಜಾತ್ರೆಯ ವೈಭವ ನೋಡುವದಕ್ಕೆಂದು ಅವನ ತಂದೆ-ತಾಯಿಗಳು ಬಂದಿದ್ದರು. ಅವರು ಸಾಯಂಕಾಲವಾಗುತ್ತಲೇ ಸ್ವಗ್ರಾಮಕ್ಕೆ ತೆರಳಲುದ್ಯುಕ್ತರಾದರು. ಅವರನ್ನು ಕಳಿಸಿ ತಿರುಗಿ ಬರುತ್ತಿದ್ದ ಮಹಾಲಿಂಗನಿಗೆ ಈ ದೃಶ್ಯವು ಕಣ್ಣಿಗೆ ಬಿತ್ತು. ಇತ್ತ ಚನವೀರಪ್ಪನು ಸಾವುಕಾರರಿಗೆ ಹೇಳಿಹೋದ ವೃತ್ತಾಂತದಿಂದ ಸಂತಪ್ತರಾದ ಸಾವುಕಾರರು ಸುಮ್ಮನೇ ಕೂಡ್ರಲಿಲ್ಲ. ಪಾರ್ವತಿಯನ್ನು ದೊರಕಿಸುವ ಪ್ರಯತ್ನವನ್ನು ಪ್ರಾರಂಭಿಸಿದರು ಕಾರ್ಯಕ್ಕೆ ತಕ್ಕ ಅನುಯಾಯಿಗಳನ್ನು ಹುಡಕಲಾರಂಭಿಸಿದರು. ಧರ್ಮಿಷ್ಠರಿಗೆ ದಾರಿದ್ರ್ಯ ತಪ್ಪುವದೇ ಇಲ್ಲ. ಅಧರ್ಮಿಗಳಿಗೆ ಮಾತ್ರ ಧನ-ಕನಕಗಳ ಬೆಳೆಯೇ ಇರುವದಿಲ್ಲ. ಸಾವುಕಾರರ ಪ್ರಯತ್ನಕ್ಕೆ ಕಾರ್ಯಕ್ಕೆ ತಕ್ಕ ಮುತ್ಸದ್ದಿಯಾದ ಮುದುಕಿಯೊಬ್ಬಳು ದೊರಕಿದಳು. ಇವಳಿಂದಲೇ ತಮ್ಮ ಕಾರ್ಯಕ್ಕೆ ಜಯವೆಂದು ಸಾವುಕಾರರು ನಂಬಿದರು. ಹೇಗಾದರೂಮಾಡಿ ಪಾರ್ವತಿಯ ಅಪಹಾರಕ್ಕೆ ಅನುಕೂಲಳಾಗೆಂದು ಮುದಕಿಯನ್ನು ಪ್ರಾರ್ಥಿಸಿ ಒಂದುನೂರು ರೂಪಾಯಿಗಳ ನೋಟನ್ನೇ ಅವಳ ಕೈಯಲ್ಲಿಟ್ಟರು. ರೂಪಾಯಿ ಕೈಗೆ ಬಂದಾಕ್ಷಣವೇ ಮುದುಕಿಯ ಮುರಕವು ಹೆಚ್ಚಾಯಿತು. ಅವಳು ಸಾವುಕಾರರಿಗೆ ನೀವು ಇದರ ಯೋಚನೇಯನ್ನೇ ಬಿಡಿರಿ. ನಾಳೆಯೇ ಅವಳನ್ನು ನಿಮ್ಮ ಸ್ವಾಧೀನಮಾಡುವೆನು. ಎಂದು ಪ್ರಮಾಣಗಳನ್ನು ತೂರಹತ್ತಿದಳು. ವಾಚಕರೇ, ಈ ಮುದಕಿಯೆಂದರೆ-- ಪ್ರಸಿದ್ಧ ಕುಂಟಲಗಿತ್ತಿಯಾದ ವೀರಾಸಾನಿಯು. ಇವಳೇನು ಸಾಮಾನ್ಯಳಲ್ಲ. ಮುದುಕಿಯನಾದರೂ, ಮುರುಕಕ್ಕೆ ಕೊರತೆ ಇದ್ದಿಲ್ಲ. ಇವಳು ತನ್ನ ತಾರುಣ್ಯದ ಭರದಲ್ಲಿ ಎಷ್ಟೋ ಯುವಕರ ಕೈಗೆ ಜೋಳಗೆಕೊಟ್ಟ ಧರ್ಮಶಾಲಿಯು. ಇಂಥವಳು ಪಾರ್ವತಿಯ ನ್ನ ಸಂಕಟವಲ್ಲಿ ನೂಕದೇ ಬಿಡುವಳೇ? ಇವಳು ಒಳ್ಳೆಯವಳೆಂದು ಕಾಮುಕರು ಕೊಂಡಾಡುತ್ತಲಿದ್ದರಾದ್ದರಿಂದ ಇವಳ ಅಂತಸ್ಥ ಗುಣಗಳನ್ನು ಕಂಡು ಹಿಡಿ

ಯುವದು ಅಸಾಧ್ಯವಾಗಿತ್ತು. ಆದ್ದರಿಂದಲೇ ಇವಳು ಬೇಕಾದವರ ಮನೆಯಲ್ಲಿ ನಿರಾತಂಕವಾಗಿ ಹೋಗಿಬರುತ್ತಿದ್ದಳು. ಇವಳ ಮನೆಯಾದರೂ ಪಾರ್ವತಿಯ ಮನೆಗೆ ಸಮೀಪಿಸಿತ್ತು. ಇರಲಿ, ವಾಚಕರೇ ಇಂದು ಎಲ್ಲರೂ ಜಾತ್ರೆಯ ಉತ್ಸವವನ್ನು ನೋಡಿ ಬರುತ್ತಿದ್ದರು. ಪಾರ್ವತಿಯು ಮನೆಯನ್ನು ಬಿಟ್ಟು ಎಲ್ಲಿಯೂ ಹೋಗಿರಲಿಲ್ಲ. ಸಾವುಕಾರನು ತನ್ನ ತಂದೆಗೆ ಆಡಿದ ನಿಷ್ಠುರೋಕ್ತಿಗಳ ವಿಚಾರದಲ್ಲಿ ಅವಳ ಮನಸ್ಸು ಖಿನ್ನವಾಗಿತ್ತು. ಯೋಗ್ಯ ಪತಿಯನ್ನು ಕೊಡೆಂದು ಫಕೀರೇಶ್ವರನನ್ನು ಮನದಲ್ಲಿಯೇ ಪ್ರಾರ್ಥಿಸುತ್ತಾ ಮನೆಯಲ್ಲಿಯೇ ಇದ್ದಳು. ಮೇಲಾಗಿ ಈಗ ಜನರ ಗದ್ದಲವು ಬಹಳವಿರುವದರಿಂದ ಮಠಕ್ಕೆ ಹೋಗಿ ಮಾಡಬೇಕೇನು? ಭಕ್ತಿಯಿಂದ ಫಕೀರೇಶ್ವರನಿಗೆ ಕೈ-ಮುಗಿಯಲುಕೂಡಾ ಅವಕಾಶವಾಗುವದಿಲ್ಲ. ಗದ್ದಲವು ಕಡಿಮೆಯಾದಮೇಲೆ ಹೋದರಾಯಿತೆಂದು ಸಮಾಧಾನ ತಾಳಿದ್ದಳು. ವೀರಾಸಾನಿಯೇನು ಇವಳಿಗೆ ಅರಿಯುವದವಳಲ್ಲ; ಓಣಿಯಲ್ಲಿಯೇ ಇರುವವಳಾದ್ದರಿಂದ ಯಾವಾಗಲಾದರೂ ಪಾರ್ವತಿಯ ಮನೆಗೆ ಬಂದೇ ಬರುತ್ತಿದ್ದಳು. ಆದರೆ ಸರಲ ಹೃದಯದ ಪಾರ್ವತಿಯು ಸವಿಮಾತಿನ ಸಾನಿಯ ಕಾಪಟ್ಯವನ್ನು ತಿಳಿಯದೆ ಹೋದಳು. ಸಾನಿಯು ವಯಸ್ಸು ಕಳೆದ ಮುದುಕಿಯೆಂದು ಕನಿಕರಪಡುವ ಅವಳ ಪ್ರೇಮಲ ಸ್ವಭಾವವೇ ಅವಳನ್ನುದುರ್ದೆಶೆಗೀಡುಮಾಡಿತು. ಆಗಲಿ, ಮುದಕಿಯು ಮುಂದೇನು ಮಾಡುವಳೋ ನೋಡುವಾ. ಪಾರ್ವತಿಯು ಈಗೇನು ಮಾಡುತ್ತಾಳೆ ಓಹೋ, ಮನಸ್ಸಿನ ದುಗುಡವನ್ನು ಹೋಗಲಾಡಿಸುವದಕ್ಕಾಗಿ ವಿಜಯನಗರದ ಸಾಮ್ರಾಜ್ಯವೆಂಬ ಪುಸ್ತಕವನ್ನು ಓದುತ್ತಲಿದ್ದಾಳೆ. ಅವಳ ತಾಯಿಯು ಒಳಗೆ ಏನೋ ಕೆಲಸದಲ್ಲಿ ತೊಡಗಿದ್ದಾಳೆ. ಚನವೀರಪ್ಪನು ಇನ್ನೂ ಹೊಲದಿಂದ ಬಂದಿರಲಿಲ್ಲ. ಇಳಿಬಿಸಲಾದ್ದರಿಂದ ಓಣಿಯವರೆಲ್ಲ ಜಾತ್ರೆಯಲ್ಲಿ ಹೋಗುತ್ತಲಿದ್ದಾರೆ. ಸಾನಿಯಾದರೂ ಜಾತ್ರೆಯ ನೆವಮಾಡಿ ಕಾರ್ಯಸಾಧನೆಗಾಗಿ ಮನೆಬಿಟ್ಟು ಹೊರಟಳು. ಚನವೀರಪ್ಪನ ಮನೆಗೆ ಎರಗಿದಳು. ಅವಳು ಚನವೀರಪ್ಪನ ಮನೆಗೆ ಬರುವಮುಂದೆ ಸಾವುಕಾರರ ಅನುಮತಿಯಿಂದ ಆರಿಸಲ್ಪಟ್ಟ ಈರ್ವ ಅಧಮರನ್ನು ನಿರ್ಧರಿಸಿದ ಸ್ಥಳದಲ್ಲಿರಲು ಸೂಚಿಸಿಯೇ ಇಲ್ಲಿಗೆ ಬಂದಿದ್ದಳು. ಓದುತ್ತ ಕುಳಿತಿದ್ದ ಪಾರ್ವತಿಯನ್ನು ನೋಡಿ "ಇದೇನು ಪಾರವ್ವಾ ಜಾತ್ರೆಯಲ್ಲಿ ಬರುವದಿಲ್ಲವೆ? ಫಕೀರೇಶನಂದರೆ ಇಷ್ಟು ಬೇಸರವೇ? ಅವನ ಅನುಗ್ರಹ ಪಡೆಯಲು, ಎಲ್ಲೆಲ್ಲಿಂದಲೋ ಜನರು ಬರುತ್ತಾರೆ. ಹೀಗಿದ್ದು ನೀನು ಅವನ ಉತ್ಸವವನ್ನು ನೋಡದೆ ಮನೆ-ಹಿಡಿದು ಕುಳಿತುಬಿಟ್ಟಿರುವೆಯಲ್ಲ." ಹೀಗೆಂದು ಭಕ್ತಿಪ್ರೇರಿತ ಜಾಲವನ್ನೊಡ್ಡಿದಳು. ಅದಕ್ಕೆ ಪಾರ್ವತಿಯು "ವೀರವ್ವಾ, ಇಂಥಾ ಜನಸಂದಣಿಯಲ್ಲಿ ಅಲ್ಲಿಹೋಗಿ ಮಾಡುವದೇನು? ಫಕೀರೇಶನ ದರ್ಶನವಾಗುವದೇ ಕಷ್ಟವೆಂ"ದು ನುಡಿದಳು. ಆದರೆ, ವೀರವ್ವನು ಇಷ್ಟಕ್ಕೇಬಿಡುವಳೆ? "ಅದೇಕೆ ಇವತ್ತೆಲ್ಲಿದೆ ಗದ್ದಲ? ಕಡಬಿನ ಕಾಳ

ಏನಿದ್ದ ಗವನ್ನು ತೀರಿಸಿಕೊಂಡು ಜನರೆಲ್ಲ ನಿನ್ನೆಯೇ ಹೊರಟು ಹೋಗಿದ್ದಾರೆ. ಬಳಿ-ರೂ ದನದಪೇಟೆಯಲ್ಲಿ ಗದ್ದಲ! ಹೆಂಗಸರಾದ ನಮಗೆ ಅಲ್ಲಿ ಕೆಲಸವೇನು? ಗಾರ ಅಂಗಡಿಯನ್ನು ನೋಡಿಕೊಂಡು ಗದ್ದಿಗೆಗೆ ನಮಸ್ಕಾರವನ್ನುಮಾಡಿ ಅಗಸೆಯ ಮಾರ್ಗವಾಗಿ ಮನೆಗೆ ಬಂದುಬಿಟ್ಟರಾಯಿತು." ಎಂದು ಹೇಳಿದ ಕಪಟೋಕ್ತಿಗಳು, ಸಹಜವಾಗಿ ಪಾರ್ವತಿಯನ್ನು ವಶಕ್ಕೆ ತೆಗೆದುಕೊಂಡವು. ಹಾಗಾದರೆ "ವೀರವ್ವಾ ನಿಲ್ಲು! ನಾನು ಒಳಗೆಹೋಗಿ ಅಪ್ಪನನ್ನು ಕೇಳಿ ಬರುತ್ತೇನೆಂ"ದು ಒಳಗೆ ಹೋಗಿ "ಅವ್ವಾ, ನಾನೂ ಜಾತ್ರೆಯಲ್ಲಿ ಹೋಗಲಾ" ಎಂದು ಕೇಳಿದಳು. ಅದಕ್ಕೆ ಮಲ್ಲ-ಮ್ಮನು "ಬೇಡವ್ವಾ ನೀನೊಬ್ಬಳೇ ಹೋಗಬೇಡಾ. ನಾಳೆ ನಾನೂ ಬರುತ್ತೇನೆ ಹೋಗೋಣವಂತೆ." ಪಾರ್ವತಿಯು ತಾಯಿಯ ಮಾತಿಗೆ "ಇಲ್ಲವ್ವಾ, ನಾನೊಬ್ಬಳೇ ಹೋಗುವದಿಲ್ಲ. ನೆರೆಮನೆಯ ಈರವ್ವನು ಕರೆಯಲು ಬಂದಿದ್ದಾಳೆ. ಈಗ ನಾಲ್ಕು ದಿವಸಗಳಿಂದ ನಾನು ಗದ್ದಿಗೆಯ ದರ್ಶನವನ್ನೇ ತೆಗೆದುಕೊಂಡಿಲ್ಲ; ಈ ಹೊತ್ತು ಈರಮ್ಮನೊಂದಿಗೆ ಹೋಗಿ ದರ್ಶನವನ್ನು ತೆಗೆದುಕೊಂಡು ಈಗ ಬರು-ತ್ತೇನೆ. ಹೋಗಿಬರಲೇನವ್ಮಾ" ಎಂದು ಕೇಳಿದ ಮಗುವಿನ ಮನಸ್ಸನ್ನು ನೋಯಿಸ ಲಾರದವಳಾದ ಮಲ್ಲಮ್ಮನು ಹೊರಗೆ ಬಂದು "ಏನು ಈರವ್ವಾ,ನೀನು ಪಾರ್ವತೆಮ್ಮ ನನ್ನು ಕರೆದುಕೊಂಡು ಹೋಗುವಿಯಾ; ಎಂದಳು. ಮಲ್ಲಮ್ಮನ ಮಾತಿಗೆ ವೀರವ್ವನು "ಹೌದು ನಾನು ಜಾತ್ರೆಯ ನೋಡಲು ಹೊರಟಿದ್ದೆ. ಬರುವಿಯೇನೆಂದು ಪಾರ್ವ-ತಿಯನ್ನು ಕೇಳಿದೆ. ಈಗ ಮೂರು ನಾಲ್ಕು ದಿವಸಗಳಿಂದ ಅವಳು ಮಠದ ಕಡೆಗೆ ಹೋಗಿಯೇ ಇಲ್ಲವಂತೆ; ಬರಲೊಲ್ಲಳೇಕೆ ಬಿಡು. ಈಗ ಬಂದುಬಿಡುತ್ತಾಳೆ" "ನಿನ್ನ ಮಾತೆಲ್ಲಾ ಸರಿ! ಆದರೆ ಅವರುಬೇರೆ ಮನೆಯಲ್ಲಿಲ್ಲಾ. ಅದಕ್ಕೆ ಅನುಮಾನಾ. "ಯಾರು ಚನವೀರಪ್ಪನೇ, ಅವನು ಹೊಲದಿಂದ ಬರುವಷ್ಟರಲ್ಲಿ ನಾವು ಮನೆಗೆ ಬಂದುಬಿಡುತ್ತೇವೆಂ" ದು ಕೊಚ್ಚಿದಳು. ಸರಿ! ಮಲ್ಲಮ್ಮನು ಒಪ್ಪಿಗೆಯನ್ನು ಕೊ-ಡಲೇ ಬೇಕಾಯಿತು. "ಆಗಲಿವ್ಮಾ, ಹೋಗಿಬನ್ನಿರೆಂದು" ಪಾರ್ವತಿಯ ಕೈಯಲ್ಲಿ ಎರಡು ಆಣೆ ರೊಕ್ಕವನ್ನು ಕೊಟ್ಟು "ಇನೋ ಅವರು ಹೊಲದಿಂದ ಬರುವಷ್ಟ-ರಲ್ಲಿ ನೀವು ಬಂದುಬಿಡಬೇಕು, ನೋಡು; ಇಲ್ಲವಾದರೆ ಇಬ್ಬರೂ ಛೀ, ಥೂ, ಅನಿಸಿಕೊಳ್ಳಬೇಕಾದೀತು. ಅಲ್ಲಿ-ಇಲ್ಲಿ ಹುಚ್ಚಿಯಹಾಗೆ ನೋಡುತ್ತ ನಿಲ್ಲಬೇಡ ಜೋಕೆಯೆಂ"ದು ಹೇಳಿ ಮಗಳನ್ನು ಕಳಸಿದಳು. "ಇಗೋ ವೀರವ್ವಾ, ಜಾಗ್ರತೆ ಯಾಗಿ ತಿರುಗಿ ಕರೆದುಕೊಂಡು ಬಾ,"ಎಂದು ಕೂಗಿಹೇಳಿದಳು. ಸರಿ ಇಷ್ಟರಲ್ಲಿಯೇ ಅವರು ಮನೆಬಿಟ್ಟು ಬಹಳ ದೂರ ಬಂದು ಬಿಟ್ಟಿದ್ದರು. ತನ್ನ ಕೆಲಸವಾಯಿತೆಂದು ಈರಾಸಾನಿಯು ಮನದಲ್ಲಿಯೇ ಮಂಡಿಗೆ ತಿನ್ನಹತ್ತಿದಳು. ಮೊದಲು ಅವಳು ಪಾ-ರ್ವತಿಯನ್ನು ಬಳೆಗಾರಅಂಗಡಿ ಸಾಲಿಗೆ ಕರೆದುಕೊಂಡು ಹೋದಳು. ಪ್ರತಿಯೊಂ-ದು ಅಂಗಡಿಯ ಮುಂದೆ ಸುಮ್ಮನೇ ಬಳೆಗಳ ವರ್ಣನೆಮಾಡುತ್ತ ನಿಲ್ಲುತ್ತಿದ್ದಳು. ಸುಳ್ಳು-ಸುಳ್ಳೇ ಬಳೆಯುನೆವದಿಂದ ಹೊತ್ತುಗಳೆಯಹತ್ತಿದಳು. ಇದನ್ನು ನೋಡಿ

ಪಾರ್ವತಿಯು "ಇರಲಿ, ನಡೆ ಈರವ್ವಾ; ಹೊತ್ತು ಬಹಳವಾಗುತ್ತದೆ. ಹೊತ್ತುಮುಳುಗುವದರೊಳಗಾಗಿ ಮನೆಗೆ ಬರಬೇಕೆಂದು ಅವ್ವನು ಹೇಳಿಕಳಿಸಿದ್ದಾಳೆ. ನೀನು ಇಷ್ಟು ತಡಮಾಡಿದರೆ ಹೇಗೆ ?" ಎನ್ನುತ್ತಿದ್ದಳು. ಇದಕ್ಕೆ ಈರಾಸಾನಿಯು—ಹೌದು ನಡೆಯೆಂದು ಪಾರ್ವತಿಯ ಮಾತಿಗೆ ಅವಸರಪಟ್ಟವಳಂತೆ ನಟಿಸಿ, ಮತ್ತೂ ತನ್ನ ಯುಕ್ತಿಯಲ್ಲಿಯೇ ಇದ್ದಳು. ಬಳಿಗಾರಸಾಲು ಮುಗಿಸಿ, ಮಿಠಾಯಿ ಅಂಗಡಿಗಳನ್ನಷ್ಟು ನೋಡುವಾ. ಬಾ; ಎಂದುಪಾರ್ವತಿಯನ್ನು ತಿರವಿದಳು. ಅದೂ ಹೀಗಿಯೇ ಮುಗಿಯಿತು. ಪಾರ್ವತಿಯು ಲಗುಬಗೆಯಿಂದ ನಡೆಯಹತ್ತಿದಳು. ಅದನ್ನು ಕಂಡು ಮುದಕಿಯು "ಇದೇನೆ? ಇಷ್ಟು ಅವಸರ ! ತೇರಿಗೆ ನಮಸ್ಕಾರ ಮಾಡುವದಿಲ್ಲಿನೇ? ಎಂದು ಅಧಿಕಾರದಿಂದ ಹೇಳಿದಳು. ಮುದಕಿಯು ಏನಾದರೂ ಮಾಡಿ ಹೊತ್ತು ಮುಳುಗುವತನಕ ಅಲ್ಲಿಯೇ ವೇಳೆ ಕಳೆಯಬೇಕಾಗಿತ್ತು. ಅಂತೆಯೇ ಸಮಯೋಚಿತ ಸೂಚನೆಯಿಂದ ಪಾರ್ವತಿಯನ್ನು ತಡೆದು ನಿಲ್ಲಿಸುತ್ತಿದ್ದಳು. ಆದರೆ ಇವಳು ರಚಿಸಿದ ಕಾಪಟ್ಯ ಜಾಲವು ಏನೂ ತಿಳಿಯದೆ, ಕೇವಲ ವಿಶ್ವಾಸದಿಂದ ಬೆನ್ನು ಹತ್ತಿ ಬಂದ ಮುಗ್ಧ ಕುಮಾರಿಯಾದ ಪಾರ್ವತಿಗೆ ಹೇಗೆ ಗೊತ್ತಾಗಬೇಕು ? ಇಷ್ಟಾಗುವದರೊಳಗೆ ಹೊತ್ತುಮುಳುಗಿಯೇ ಹೋಯಿತು.

ಪಾರ್ವತಿಯು ನಿಂತಲ್ಲಿ ನಿಲ್ಲದಾದಳು. ಮನೆಯ ಕಡೆಗೆ ಅವಳ ಮನಸ್ಸು ಹರಿಯತೊಡಗಿತು. ತೀವ್ರವಾಗಿಯೇ ಗದ್ದಿಗೆಯನ್ನು ಸಂದರ್ಶಿಸಿ ಭಕ್ತಿಪುರಸ್ಸರ ನಮಸ್ಕಾರವನ್ನು ಮಾಡಿ ಅಗಸೆಯ ಹಾದೀ ಹಿಡಿದಳು. ಇಷ್ಟಾದರೂ ಮುದಕಿಯು ಇವಳ ಬೆನ್ನುಬಿಟ್ಟರಲೇ ಇಲ್ಲ. "ನಾನೂ ಬರುವೆನು ನಿಲ್ಲು !" ಎಂದು ಕೂಗಿಕೊಳ್ಳುತ್ತಲೇ ಇದ್ದಳು. ನೋಡಲಿಕ್ಕೆ ಬಂದವರೆಲ್ಲ ತಮ್ಮ ತಮ್ಮ ಮನೆಗಳಿಗೆ ಹೋಗಿಬಿಟ್ಟಿದ್ದರು, ಮಬ್ಬುಗತ್ತಲವಾಗಿತ್ತು , ದೀವಿಗೆಯನ್ನು ಹಚ್ಚುವ ಸಮಯ. ಈರ್ವರೂ ಅಗಸಿಯನ್ನು ದಾಟಿ ಬಂದಿರಬಹುದು. ಇಷ್ಟರಲ್ಲಿ ಮುದಕಿಯು ಒಮ್ಮಿಂದೊಮ್ಮೆ ನೀರಡಿಕೆಯ ನೆವತೋರಿಸಿ, "ಪಾರ್ವತೀ,ನೀರಡಿಕೆ ಬಹಳವಾಗಿದೆ. ನೀನು ನೀರು ತಂದುಕೊಡದಿದ್ದರೆ ನಾನು ಉಳಿಯುವದಿಲ್ಲ" ವೆಂದು ಒಂದೇ ಸವನೇ ಬಾಯಿಬಿಡಹತ್ತಿದಳು. ಗಂಟಲನ್ನು ಹಿಡಿದುಕೊಂಡು ಮಾತಾಡಲು ಬಾರದವಳಂತೆ ನಟಿಸಿದಳು. ಅಯ್ಯೋ ! ಮೋಸದ ಮುದುಕೆಯೇ, ಏನೂ ಅರಿಯದ ಕುಮಾರಿಯ ಕುತ್ತಿಗೆ ಕೊಯ್ಯುವದಕ್ಕಾಗಿ ಇಷ್ಟೊಂದು ನಟನೆಯೇ ! ಥೂ ! ನಿನ್ನ ಜನ್ಮಕ್ಕೆ ಬೆಂಕಿಹಚ್ಚಲಿ ! ಇಂಥಾ ನಿನ್ನ ಹೀನಕೃತ್ಯಗೆ ಧಿಃಕಾರವಿರಲಿ.

ವಾಚಕರೇ, ಅವಳ ತಲೆಯಮೇಲೆ ಇಂಥ ಧಿಕ್ಕಾರದ ತೆರೆಗಳೆಷ್ಟು ಹಾಸಿ ಹೋಗಿದ್ದವೋ ಏನೋ. ಇರಲಿ, ಇವಳ ಕಾಪಟ್ಯವನ್ನು ತಿಳಿಯದ ಪಾರ್ವತಿಯು ಅವಳ ನಟನೆಯು ನಿಜವೆಂದು ಭಾವಿಸಿ, ಮುದುಕೆಯು ತಿರುಗಾಟದಿಂದ ದಣಿದು ನೀರಡಿಸಿರಬಹುದೆಂದು ಸಮೀಪದ ಭಾವಿಯಲ್ಲಿ ನೀರು ತರುವದಕ್ಕೆಂದು ಹೋದಳು.

ಕೂಡಲೇ ಅಲ್ಲಿಯೇ ಹೊಂಚು ಹಾಕಿ ಕುಳಿತಿದ್ದ ಮೋಸಗಾರರ ಬಲೆಯಲ್ಲಿ ಸಿಕ್ಕಳು. ಅಲ್ಲಿ ಮರೆಯಾಗಿ ಕುಳಿತಿದ್ದ ಆ ಮೋಸಗಾರರು ಪಾರ್ವತಿಯನ್ನು ಎತ್ತಿಕೊಂಡು ಹೋಗುವಷ್ಟರಲ್ಲಿಯೇ ತಂದೆ-ತಾಯಿಗಳನ್ನು ಕಳಿಸಲಿಕ್ಕೆ ಹೋಗಿ ಬರುತ್ತಿದ್ದ ಮಹಾಲಿಂಗನಿಗೆ ಪಾರ್ವತಿಯ ಆರ್ತಧ್ವನಿಯು ಕೇಳಿಸಿತು. ಅವನು ಧಾವಿಸಿಬರುವಷ್ಟರಲ್ಲಿಯೇ ಕುಮಾರಿಯು ಮೂರ್ಛಿತಳಾಗಿದ್ದಳು. ಎಷ್ಟು ಉಪಾಯ ಮಾಡಿದರೂ ಪ್ರಯೋಜನವಾಗಲಿಲ್ಲ. ಕೊನೆಗೆ ಸಮೀಪದ ಅಂಗಡಿಗೆ ಹೋಗಿ ಸ್ವಲ್ಪ ನೀರನ್ನು ತಂದು ನೆತ್ತಿಗೆ ಬಡಿದು, ಅಲ್ಲಿಯೇ ಸ್ವಲ್ಪ ಹೊತ್ತು ನಿಂತುಕೊಂಡನು. ತಂಪಾದ ಗಾಳಿಯು ಬೀಸಹತ್ತಿದ್ದರಿಂದ ಮುಂದೆ ಸ್ವಲ್ಪಾವಕಾಶದಲ್ಲಿಯೇ ಪಾರ್ವತಿಯು ಕೈ-ಕಾಲು ಅಲ್ಲಾಡಿಸಹತ್ತಿದಳು. ಕುಗ್ಗಿದ ಸ್ವರದಲ್ಲಿ "ಅವ್ವಾ, ಅವ್ವಾ" ಎಂದು ಒದರಿದಳು. ಅದಕ್ಕೆ ತರುಣನು "ನಿಮ್ಮ ಅವ್ವನು ಇಲ್ಲಿಲ್ಲ. ಕುಮಾರೀ, ನಿನ್ನ ಅವ್ವನು ಮನೆಯಲ್ಲಿದ್ದಾಳೆ. ನಿನ್ನ ಅವ್ವನ ಪ್ರತಿಯಾಗಿ ನಾನಿರುವೆನು. ನಿನಗೇನು ಬೇಕಾಗಿದೆ ಹೇಳು? ಗಾಬರಿಯಾಗಬೇಡ. ಏಳು, ನಾನು ನಿನ್ನನ್ನು ನಿನ್ನ ಮಾತೆಯ ಬಳಿಗೆ ಕರೆದೊಯ್ಯುವೆನು." ಎಂದನು. ಈ ಪ್ರಕಾರದ ಯುವಕನ ಮಾತುಗಳಿಂದ ಅವಳಿಗೆ ಸ್ಫೂರ್ತಿಯುಂಟಾಗಿ ಪೂರಾ ಶುದ್ಧಿಯಮೇಲೆ ಬಂದಳು. ಎದುರಿಗೆ ನಿಂತಿರುವ ಯುವಕನನ್ನು ನೋಡಿ ಲಜ್ಜೆಯಿಂದ ಅಸ್ತವ್ಯಸ್ತವಾಗಿದ್ದ ಮೈಮೇಲಿನ ವಸ್ತ್ರವನ್ನು ಸರಿಪಡಿಸಿಕೊಳ್ಳುತ್ತ ಎದ್ದು ಕುಳಿತಳು. ನನ್ನನ್ನು ದುರವಸ್ಥೆಗೆ ಗುರಿಮಾಡಿದ ಆ ನೀಚರೆಲ್ಲಿ ಹೋದರು? ನೀವು ಅಕಸ್ಮಾತ ಇಲ್ಲಿಗೆ ಹೇಗೆ ಬಂದಿರಿಂ"ದು ಕೇಳಿದಳು. ಆಗ ಯುವಕನು ಅಲ್ಲಿಯೇ ನರಳುತ್ತ ಬಿದ್ದಿರುವ ಅಧಮನನ್ನು ತೋರಿಸಿ ಎಲ್ಲ ವೃತ್ತಾಂತವನ್ನೂ ತಿಳಿಸಿದನು. ಮತ್ತು "ಕುಮರೀ ನೀನು ಬಹಳೇ ಎದೆಗುಂದಿದವಳಾಗಿ ಬಳಲಿರುವೆಯಾದ್ದರಿಂದ ನಡೆ; ನಿನ್ನನ್ನು ನಿನ್ನ ತಾಯಿಯ ಬಳಿಗೆ ಕಳಿಸುವೆನು." ಎಂದು ಅವಳ ಕೈಯನ್ನು ಹಿಡಿದು, ಸಾವಕಾಶವಾಗಿ ಚನವೀರಪ್ಪನ ಮನೆಯ ಹಾದೀ ಹಿಡಿದನು.

೪.

ಈ ಹೊತ್ತು ಊರಲ್ಲೆಲ್ಲ ಗಲಭೆ. ಯಾರೊಬ್ಬರು ಪಾರ್ವತಿಯ ಸುದ್ದಿಯನ್ನೇ ಮಾತಾಡುತ್ತಿದ್ದರು. ಅಬಲೆಯರು ಪ್ರತ್ಯಕ್ಷ ಮಾತಾಡಲು ಧೈರ್ಯವಾಗದೆ ಸಾವುಕಾರ ಪುತ್ರನದೇ ಈ ಕೃತಿಯೆಂದು ಒಬ್ಬರಿಗೊಬ್ಬರು ಕಿವಿ-ಕಚ್ಚಾಡುತ್ತಿದ್ದರು. ಕೆಲವರು ನಮಗೇಕೆ ಒಬ್ಬರ ಉಸಾಬರಿ? ಎಂದು ಮನೆಗೆಲಸಕ್ಕೆ ಹೋಗುತ್ತಿದ್ದರು. ಎಂದಿನಂತೆ ಚನವೀರಪ್ಪನು ಹೊಲದಿಂದ ಎತ್ತು ಬಿಟ್ಟುಕೊಂಡು ಮನೆಗೆ ಬಂದನು. ದನಗಳನ್ನು ಕಟ್ಟಿದನು, ಪ್ರತಿನಿತ್ಯದಂತೆ ಕೈಕಾಲಿಗೆ ನೀರು ತರುತ್ತಿದ್ದ ಮಗಳು ಕಾಣಲಿಲ್ಲ. ಕಾಲಿಗೆ ನೀರುತಂದ ಹೆಂಡತಿಯನ್ನು ಕುರಿತು ". ಪಾರಮ್ಮನೆಲ್ಲಿ?"

ಎಂದು ಕೇಳಿದನು. ಮೊದಲೇ ಗಾಬರಿಗೊಂಡಿದ್ದ ಮಲ್ಲಮ್ಮನು ಗಂಡನ ಪ್ರಶ್ನೆಗೆ-ಅಂಜುತ್ತಂಜುತ್ತ "ಜಾತ್ರೆಯಲ್ಲಿ ಹೋದವಳು ಇನ್ನು ಬಂದಿಲ್ಲ" ವೆಂದು ಹೇಳಿದಳು ಅದಕ್ಕೆ ಅವನು ಚಕಿತನಾಗಿ "ಯಾರಸಂಗಡ ಕಳಿಸಿರುತ್ತಿ" ಎಂದನು. ಅದಕ್ಕವಳು "ನೆರೆಮನೆಯ ಈರವ್ವನ ಸಂಗಡ" ಎಂದಳು ಇಷ್ಟರಲ್ಲಿಯೇ ಈರವ್ವನು "ಪಾರ-ವ್ವಾ, ಪಾರವ್ವಾ" ಎಂದು ಒದರುತ್ತ ಬಂದಳು. ಇವಳ ಕೂಗನ್ನು ಕೇಳಿ ಮಲ್ಲಮ್ಮನು "ಇದೇನೆ ಈರವ್ವಾ, ಪಾರ್ವತಿಯನ್ನು ಜಾತ್ರೆಯಲ್ಲಿ ಕರೆದುಕೊಂಡು ಹೋದ ನೀನೇ ಈಗ ಅವಳನ್ನು ಹುಡುಕುತ್ತ ಬಂದೆಯಲ್ಲ! " ಎಂದಳು. ಮುದು-ಕಿಯು ಈ ಅಪವಾದವು ನನ್ನಮೇಲೆ ಬರಬಾರದೆಂದೇ ಒಂದು ನೆವ ತೆಗೆದು ಬಂದಿದ್ದಳು. ಮಲ್ಲಮ್ಮನ ಮಾತಿಗೆ ಮುದುಕಿಯು—"ಇಲ್ಲವ್ವಾ, ಅವಳು ನನ್ನೊಬ್ಬಳನ್ನೆ ಬಿಟ್ಟು ಆಗಲೇ ಮನೆಗೆ ಹೋಗುತ್ತೇನೆಂದು ಹೇಳಿ ಬಂದುಬಿಟ್ಟಿರುವಳು ಎಂದಳು.

ಇವಳು ಹೇಳಿದ ಉತ್ತರವನ್ನು ಕೇಳಿ, ಗಂಡ-ಹೆಂಡರಿಬ್ಬರೂ ಗಾಬರಿಯಾಗಿ ಮಗಳು ಎಲ್ಲಿಹೋದಳೋ ಎಂದು ಅಳುತ್ತ ಜಾತ್ರೆಯ ಕಡೆಗೆ ಓಡಿದರು. ಮಲ್ಲಮ್ಮನಂತೂ "ಪಾರವ್ವಾ! ಪಾರವ್ವಾ!" ಎಂದು ಕೂಗ ಹತ್ತಿದಳು. ಈ ರೋದನ ಧ್ವನಿಯನ್ನು ಕೇಳಿ ನೆರೆ-ಹೊರೆಯವರು ಚನವೀರಪ್ಪನನ್ನು ನಿಲ್ಲಿಸಿ, ಸಮಾಧಾನ ಹೇಳಬೇಕನ್ನುವಷ್ಟರಲ್ಲಿಯೇ ಇಬ್ಬರೂ ಎಚ್ಚರಿಲ್ಲದೆ, ಓಡಲಾರಂಭಿಸಿದರು. ಇವರು ಮಠದ ಸಮೀಪಕ್ಕೆ ಹೋಗುವಷ್ಟರಲ್ಲಿ ಹಿಂದೆ ಹೇಳಿದ ಯುವಕನು, ಪಾ-ರ್ವತಿಯನ್ನು ಕರೆದುಕೊಂಡು ಬರುತ್ತಿದ್ದನು. "ಪಾರವ್ವಾ! ಪಾರವ್ವಾ! "ಎಂದು ಒದರುತ್ತ ಓಡುತ್ತಿದ್ದ ಮಲ್ಲಮ್ಮನ ಧ್ವನಿಯು ಗುರತು ಪಾರ್ವತಿಗೆ ಹತ್ತಿ, ಅವಳು "ಓ!" ಎಂದು ಒದರಿದಳು. "ಓ" ಎಂದು ಕೇಳಿಬಂದ ದಿಕ್ಕಿಗೆ ಇಬ್ಬರೂ ಹೋಗುಲಾರಂಭಿಸಿದರು. ಇವರಿಗೆ ಎದುರಾಗಿ ಯುವಕನೊಬ್ಬನ ಕೈ-ಮೇಲೆ ಹೃದಯ ಭಾರವನ್ನು ಹಾಕಿ ಕಾಂತಿಹೀನೆಯಾಗಿ ಬರುತ್ತಿರುವ ಮಗಳನ್ನು ನೋಡಿ ಮಲ್ಲಮ್ಮನು, ವೇಗದಿಂದ ಹೋಗಿ ಪಾರ್ವತಿಯನ್ನು ಬಿಗಿದಪ್ಪಿ ಅಳಹತ್ತಿದಳು. ಚನವೀರಪ್ಪನಾದರೂ ದುಃಖದಿಂದ ಪೀಡಿತನಾಗಿದ್ದನು. ಇದನ್ನೆಲ್ಲ ನೋಡು-ತ್ತಿದ್ದ ಯುವಕನು, ಮಲ್ಲಮ್ಮನಿಗೆ ಸಮಾಧಾನ ಹೇಳಿ, ಚನವೀರಪ್ಪನನ್ನು ಸಂತೈಸಿ "ಮನೆಗೆ ನಡೆಯಿರಿ, ನಾನು ನಿಮಗೆ ಎಲ್ಲ ವೃತ್ತಾಂತವನ್ನು ಹೇಳುವೆ" ನೆಂದು ಅವರೊಂದಿಗೆ ಮನೆಗೆ ಹೊರಟನು. ಎಲ್ಲರೂ ಮನೆಗೆ ಬಂದರು. ಚನವೀರಪ್ಪನು ಯುವಕನಿಗೆ ಕುಳಿತುಕೊಳ್ಳುವದಕ್ಕೆ ಕೋರಿಯೊಂದನ್ನು ಹಾಸಿದನು.

ಮಲ್ಲಮ್ಮನು ಪಾರ್ವತಿಗೆ ಮಲಗುವದಕ್ಕಾಗಿ ಹಾಸಿಗೆಯನ್ನು ಸಿದ್ಧಮಾಡಿ ಸಮೀಪದಲ್ಲಿಯೇ ಕುಳಿತಳು. ಮಲಗಿರುವ ಪಾರ್ವತಿಯು, ತಾಯಿಯನ್ನು ಕುರಿತು-"ಅವ್ವಾ ಇಂದು ಇವರು ಬರದಿದ್ದರೆ ನಾನು ಜೀವದಿಂದ ಉಳಿಯುತ್ತಿರಲಿಲ್ಲ!

ಇವರೇ ನನಗೆ ಪ್ರಾಣದಾನ ಕೊಟ್ಟವರು! ನಾನು ಏನು ಮಾಡಿದರೂ ಇವರ ಉಪಕಾರದ ಋಣವು ತೀರದೆಂ" ದು ಹೇಳಿ ಕಣ್ಣೀರು ಸುರಿಸಲಾರಂಭಿಸಿದಳು. ಆದಕ್ಕೆ ಮಲ್ಲಮ್ಮನು—"ಮಗು, ಮೊದಲೇ ವ್ಯಥಿತಳಾದ ನೀನು ದುಃಖಿಸಬೇಡ; ಸುಮ್ಮನೇ ಮಲಗು. ನಾವಿರಲು ನಿನಗೇನು ಬಂದಿದೆ?" ಎಂದು ಮಮತೆಯ ಮಾತಿನಿಂದ ರಮಿಸಿದಳು.

ಚನವೀರಪ್ಪನು ಸಮಾಚಾರವೇನೆಂದು ಕೇಳಲು—ಯುವಕನು ನಡೆದ ವೃತ್ತಾಂತವನ್ನೆಲ್ಲ ಹೇಳಿದನು. ಆಗ ಗಂಡ-ಹೆಂಡರಿಬ್ಬರೂ ಯುವಕನಿಗೆ ನಿಮ್ಮ ಉಪಕಾರವನ್ನು ಹೇಗೆ ತೀರಿಸಬೇಕೆಂದು ಧನ್ಯವಾದಗಳನ್ನು ಅರ್ಪಿಸಹತ್ತಿದರು. ಒಳಿಕ ತರುಣನು,ದಂಪತಿಗಳಿಗೆ ಸಮಾಧಾನ ಹೇಳಿ ಈ ದುಷ್ಟ ಕೃತ್ಯಮಾಡಿದ ಅಧಮರ ಶಾಶನಮಾಡದೆ ಬಿಡಬಾರದೆಂದೆಣಿಸಿ ಆವರ ಅನುಮತಿಯನ್ನು ತೆಗೆದುಕೊಂಡು ಆ ಅಧಮರ ಶೋಧಾರ್ಥವಾಗಿ ಹೊರಟು, ಈ ಅನರ್ಥ ನಡೆದ ಸ್ಥಲಕ್ಕೆ ಲಗುಬಗೆಯಿಂದ ಬಂದನು. ಆದರೆ ಇವನ ಹೊಡತದಿಂದ ತಲೆ ಒಡೆದುಬಿದ್ದುಕೊಂಡಿದ್ದ ಮನುಷ್ಯನು ಸಾವರಿಸಿಕೊಂಡು ಎದ್ದು ಹೋಗುವ ಹವಣಿಕೆಯಲ್ಲಿದ್ದನು. ಇಷ್ಟರಲ್ಲಿ ಮಹಾಲಿಂಗನು ಅವನ ಸಮ್ಮುಖದಲ್ಲಿಹೋಗಿ ನಿಂತನು. ಎದುರಿಗೆ ನಿಂತಿರುವ ತರುಣನನ್ನು ನೋಡಿ, ಆ ನೀಚನು ಗಾಬರಿಯಾಗಿ ಓಡಿಹೋಗಲು ಧೈರ್ಯಸಾಲದೆ ಸುಮ್ಮಗೆ ನಿಂತುಬಿಟ್ಟನು. ಕೂಡಲೇ ಮಹಾಲಿಂಗನು ಅವನ ಕುತ್ತಿಗೆಯಮೇಲೆ ಚನ್ನಾಗಿ ಗುದ್ದಿದನು. ಇವನ ಏಟನ್ನು ತಾಳದೆ ಆ ನೀಚನು, ಪುನಃ ನೆಲಕ್ಕೆ ಬಿದ್ದನು. ಮಹಾಲಿಂಗನು ಅವನ ಕೈ-ಹಿಡಿದು "ನೀಚಾ! ಹೇಳು! ಯಾವ ಉದ್ದೇಶದಿಂದ ಈ ನೀಚಕೃತ್ಯ ಮಾಡಿದೆ? ಹೇಳು! ಇಲ್ಲವಾದರೆ, ನಿನ್ನನ್ನು ಇಲ್ಲಿಯೇ ಕೊಂದುಹಾಕುತ್ತೇನೆಂ" ದು ಕೈ ಮೇಲಕ್ಕೆತ್ತಿದನು. ಮತ್ತೆಲ್ಲಿ ಹೊಡೆಯುವನೋ ಎಂಬ ಹೆದರಿಕೆಯಿಂದ "ಸ್ವಾಮಿ, ಹೊಡಿಯಬೇಡಿರಿ. ನಾನು ಈ ಕೆಲಸವನ್ನು ಮಾಡಿದವನಲ್ಲ! ಸಾವುಕಾರರು ಎರಡನೂರು ರೂಪಾಯಿ ಕೊಡುತ್ತೇವೆಂದು ಆಶೆ ಹಚ್ಚಿದ್ದರಿಂದ ದುಡ್ಡಿನ ಆಶೆಗೆ ಬಿದ್ದು ಈ ಕೆಲಸ ಮಾಡಿದೆನು. ನನ್ನನ್ನು ಕ್ಷಮಿಸಿರಿ. ಇನ್ನೊಮ್ಮೆ ಇಂಥ ಕೆಟ್ಟ ಕೆಲಸವನ್ನು ಎಂದಿಗೂ ಮಾಡುವದಿಲ್ಲ." ಎಂದು ಯುವಕನ ಪಾದಗಳಮೇಲೆ ಬಿದ್ದು ಬೇಡಿಕೊಳ್ಳಹತ್ತಿದನು. ಇದನ್ನು ನೋಡಿ ಮಹಾಲಿಂಗನು "ಒಳ್ಳೇದು ನಿನ್ನನ್ನು ಏನೂ ಮಾಡುವದಿಲ್ಲ. ಆದರೆ ಈ ಕಾರ್ಯದಲ್ಲಿ ಎಷ್ಟು ಜನರಿರುವಿರಿ? ಏತಕ್ಕಾಗಿ ಹೀಗೆ ಮಾಡಿದೆರೆಂಬದನ್ನು ಸವಿಸ್ತಾರವಾಗಿ ಹೇಳು. ಇಲ್ಲವಾದರೆ ನಿನ್ನನ್ನು ಪೋಲೀಸರ ಸ್ವಾಧೀನ ಮಾಡುವೆ" ನೆಂದು ಗದ್ದರಿಸಿದನು ಈ ಮಾತಿಗೆ ಬೆದರಿ ಆ ನೀಚನು "ನಿಜವಾದ ಸಂಗತಿಯನ್ನು ಹೇಳಿದರೆ ನನ್ನನ್ನು ಬಿಟ್ಟು ಬಿಡುವಿರಾ?" ಎಂದು ಕೇಳಿದನು.

ಮಹಾಲಿಂಗನು ಒಪ್ಪಿಗೆಯನ್ನಿತ್ತಿದ್ದರಿಂದ ತಲೆಯೊಡಕನು ಸಾವುಕಾರನೂ, ಮುದಕಿಯೂ, ತಾವೂ ಕೂಡಿ ಮಾಡಿದ ಸರ್ವ ಸಂಗತಿಯನ್ನು ಒಂದೂ ಬಿಡದೆ ಹೇಳಿದನು. ಈ ಎಲ್ಲ ಸಂಗತಿಯನ್ನು ಕೇಳಿದಮೇಲಂತೂ ಮಹಾಲಿಂಗನು ಮತ್ತಿಷ್ಟು ಸಂತಪ್ತನಾದನು. ಈ ಪುಂಡರ ಪುಂಡಾಟಿಕೆಯನ್ನು ತೆಗ್ಗಿಸದೆ ಬಿಡಬಾರದೆಂದು ನಿರ್ಧರಿಸಿ ಚನವೀರಪ್ಪನ ಮನೆಗೆ ಬಂದನು. ಯುವಕನು ಬಂದೊಡನೆ ಚನವೀರಪ್ಪನು ಆದರದಿಂದ ಅವನನ್ನು ಕುಳ್ಳಿರಿಸಿದನು. ಆಮೇಲೆ ಯುವಕನು ಪಾರ್ವತಿಯ ಛಲನೆ ಮಾಡಿದ ನೀಚನಿಗೆ ತಕ್ಕ ಶಾಸನ ಮಾಡುವದಕ್ಕೆ ಏನೇನು ಮಾಡಬೇಕೆಂದು ತಾನು ಯೋಚಿಸಿದ್ದನೋ ಅದೆಲ್ಲವನ್ನು ಚನವೀರಪ್ಪನಿಗೆ ತಿಳಿಸಿ ಅವನನ್ನು ಕಚೇರಿಗೆ ಕರೆದುಕೊಂಡು ಹೋಗಿ ಜಾತ್ರೆಗೆ ನೋಡಲು ಹೋಗಿದ್ದ ನನ್ನ ಮಗಳಮೇಲೆ ಯಾರೋ ನೀಚರು, ಬಲಾತ್ಕಾರ ಮಾಡಿದರೆಂಬ ಒಗ್ಗೆ ಫಿರ್ಯಾದಿಯನ್ನು ಕೊಡಿಸದನು.

೫.

ವಾಚಕರೇ, ಇತ್ತ ಪಾರ್ವತಿಯು ಸ್ವಲ್ಪ ಗುಣಮುಖದಲ್ಲಿದ್ದಾಳೆ. ಅವಳ ಮನಸ್ಸು ಮಾತ್ರ ಗಲಿಬಿಲಿಯಾಗಿದೆ. ಅವಳು ಏನೋ ಒಂದು ಗೂಢ-ವಿಚಾರದಲ್ಲಿ ಬಿದ್ದಾಳೆ. ತನನ್ನು ಆ ದುರುಳರ ಕೈಯಿಂದ ಬಿಡಿಸಿ ತನಗೆ ಪ್ರಾಣವನ್ನು ಕೊಟ್ಟ ಆ ಯುವಕನ ಪರೋಪಕಾರವನ್ನೂ, ಅವನ ವಿನಯ-ಶೀಲತೆಯನ್ನೂ, ಅವನ ಮಧುರ ಮಾತುಗಳನ್ನೂ ನೆನಿಸಿ, ಏನೊಂದು ಆಶೆ ಇಲ್ಲದೆ ಸಂಕಟದಲ್ಲಿ ಸಿಕ್ಕ ತನಗಾಗಿ ಆ ತರುಣನು ತೋರಿಸಿದ ಧೈರ್ಯ ಸಹಾಸಾದಿ ಗುಣಗಳ ಸ್ಮರಣೆಯಿಂದ ಆ ತರುಣನ ವಿಷಯವಾಗಿ, ಪಾರ್ವತಿಯಲ್ಲಿ ಪ್ರೇಮಾಂಕುರವು ಉದ್ಭವಿಸಿದೆ. ಇಷ್ಟು ಬೇಗನೇ ತನ್ನನ್ನು ಅಗಲಿ ಹೋದ ಆ ತರುಣನ ಮೂರ್ತಿಯು ಅವಳ ಕಣ್ಣೆದುರಿಗೆ ಕಟ್ಟಿದಂತೇ ಆಗಿತ್ತು. ಮತ್ತು ಇಂಥ ದಿವ್ಯ ಮೂರ್ತಿಯ ಸಹವಾಸದಲ್ಲಿಯೇ ತನ್ನ ಆಯುಷ್ಯವನ್ನು ಕಳೆಯಬೇಕೆಂದು ನಿರ್ಧರಿಸಿದಳು. “ಇದೇನು ಅಪರಿಚಿತ ತರುಣನ ವಿಷಯದಲ್ಲಿ ನನ್ನ ಮನಸ್ಸು ಹೀಗಾಗಲು ಕಾರಣವೇನು? ನಾನು ಹೀಗೆ ಮಾಡುವದರಿಂದ ಜಗತ್ತು ನನಗೆ ಹೆಸರಿಡಲಿಕ್ಕಿಲ್ಲವೇ? ಆದರೆ ಈ ಸ್ವಾರ್ಥಮಯ ಜಗತ್ತು ನ್ಯಾಯಾ-ನ್ಯಾಯದ ವಿಚಾರವನ್ನೆಲ್ಲಿ ಮಾಡುತ್ತದೆ? ದುಡ್ಡಿನ ದೊಡ್ಡಿಸ್ತಿಕೆಗೆ ಮರುಳಾಗುವ ಈ ಅಂಥ ಜಗತ್ತಿನ ಕಡೆಗೆ ಲಕ್ಷಕೊಟ್ಟರೆ, ನನ್ನ ಕಲ್ಯಾಣವಾಗುವದೆಂತು? ನನ್ನ ಒಳಿತು-ಹೀನತೆಯ ಕಲ್ಪನೆಯನ್ನು ಜಗತ್ತು ಮಾಡುವದೇ! ಛೀ! ಎಂದಿಗೂ ಇಲ್ಲ! ತನ್ನ ಸುಖ-ದುಃಖದ ವಿಚಾರವನ್ನು ತಾನೇ ಮಾಡಿಕೊಳ್ಳುವದು. ಪ್ರತಿ ಒಂದು ಜೀವನದ

( ಮುಂದೆ ಸಾಗುವದು. )

# ನಮ್ಮ ಮಾತು!

ನಮ್ಮ ವೀರಶೈವ ಚಂದ್ರಿಕೆಯಲ್ಲಿ ಪ್ರಸಿದ್ಧಗೊಳಿಸುವ ಸಾಹಿತ್ಯ, ಹಾಗೂ ಐತಿಹಾಸಿಕ ವಿಷಯಕ ಲೇಖಗಳು ಈ ವಿಷಯವಾಗಿ ಮಾನ್ಯರುಬರೆದ ಸಾಹಿತ್ಯ ಹಾಗು ಐತಿಹಾಸಿಕ ಉದ್ಗ್ರಂಥಗಳಲ್ಲಿಯ ಆಧಾರಗಳಮೇಲಿಂದ ಬರೆಯಲಾಗುವವು. ಒಂದುವೇಳೆ ಅವುಗಳಲ್ಲಿ ತಪ್ಪೆನಿಸುವ ವಿಧಾನಗಳೇನಾದರೂ ಕಂಡುಬಂದರೆ, ಯೋಗ್ಯ ಹಾಗು ಸಪ್ರಮಾಣವಾದ ಆಧಾರಗಳೊಂದಿಗೆ ಮಾನ್ಯರು ಸಲಹೆಕೊಟ್ಟಲ್ಲಿ, ಯೋಗ್ಯ ತಿದ್ದುಪಡೆಮಾಡಿ, ಹಾಗೆಮಾಡಿದ ಬಗ್ಗೆ ಚಂದ್ರಿಕೆಯಲ್ಲಿ "ವಾದ ಭೂಮಿ" ಎಂಬ ವಿಷಯದ ಕೆಳಗೆ ಸದರ ವಿಷಯವನ್ನು ಪ್ರಕಟಿಸಲಾಗುವದು.

ಹು. ರಾ ಅಗ್ನಿಹೋತ್ರಿ,

ಆಡಳತೆಗಾರರು.

# ಪ್ರೇಮಪೂರ್ವಕ ಅಭಿನಂದನೆ.

೧. ನಮ್ಮ ಚಂದ್ರಿಕೆಯಲ್ಲಿ ಪ್ರಕಟವಾಗುತ್ತಿರುವ "ಕನ್ನಡ ವಾಙ್ಮಯದಲ್ಲಿ ವೀರಶೈವರ ಮಹತಿ" ಎಂಬ ಲೇಖವನ್ನು ಬರೆಯುತ್ತಿರುವ ನಮ್ಮ ಮಿತ್ರ ಬಾಲೆಹೊಸೂರ ರಾಮರಾಯರಿಗೆ ಧಾರವಾಡದ ಬಾಲಮಾರುತಿ ಸಂಸ್ಥೆಯಿಂದ ಇ. ಸ. ೧೯೩೨ ರಲ್ಲಿ ಜರುಗಿದ ಕಾವ್ಯ ಪರೀಕ್ಷೆಯಲ್ಲಿ ಬಹುಮಾನವು ದೊರೆತಿದೆ. ಹಾಗು ಇದೇ ವರುಷ ಕಳೆದ ಮೇ ತಿಂಗಳಲ್ಲಿ ಅಥಣಿಯಲ್ಲಿ ಜರುಗಿದ ಬೆಳಗಾಂವಿ ಜಿಲ್ಹೆಯ ಸಾಹಿತ್ಯ ಸಮ್ಮೇಲನದಲ್ಲಿ ಏರ್ಪಾಟಾದ ನಿಬಂಧ ಸ್ಪರ್ಧೆಯಲ್ಲಿ ಕೌಪ್ಯ ಪದಕವು ದೊರಕಿದೆ. ಸಾಹಿತ್ಯ ಭಕ್ತರ ಈ ಶ್ರೇಯೋಭಿವೃದ್ಧಿಗಾಗಿ ಚಂದ್ರಿಕೆಗೆ ತುಂಬಾ ಆನಂದವೆನಿಸಿದೆ. ಕನ್ನಡ ಸಾಹಿತ್ಯದೇವಿಯ ಸೇವೆಕೈಕೊಂಡ ಶ್ರೀ ಬಾಲೆಹೊಸೂರರವರಿಗೆ ಹೀಗೆಯೇ ಪ್ರೋತ್ಸಾಹನ ದೊರೆಯಲೆಂದು ನಮ್ಮ ಹಾರೈಕೆ.

೨. ಕನ್ನಡ ವಾಙ್ಮಯ ದೇವಿಯ ಭಕ್ತರೂ, "ಲಂಚದಪ್ರಪಂಚ" ವೆಂಬ ಲೋಕಪ್ರಿಯ ಪುಸ್ತಕ ಕರ್ತರೂ ಆದ ಶ್ರೀ ಕಾಲವಾಡ ತಿರುಮಲ ರಾಯರು ನಮ್ಮ ವೀರಶೈವ ಚಂದ್ರಿಕೆಯನ್ನು ಎತ್ತಿ ಮುದ್ದಾಡಿ, ಲೇಖನರೂಪ ಅಲಂಕಾರಗಳನ್ನು ಚಂದ್ರಿಕೆಗೆ ಆಗಾಗ್ಗೆ ಕಳಿಸುವೆವೆಂದು ಅಭಿವಚನವನ್ನಿತ್ತಿರುವರು. ಈ

ಮೇರೆಗೆ ಕನ್ನಡ ನಾಡನುಡಿಯ ಸೇವೆಗೈಯ್ಯಲು ಸಿದ್ಧರಾದ ಶ್ರೀ ತಿರುಮಲ ರಾಯರಿಗೆ ನಮ್ಮ ಚಂದ್ರಿಕೆಯ ಮನಃಪೂರ್ವಕವಾದ ಅಭಿವಂದನಗಳು.

೩. ಕನ್ನಡ ಸರಸ್ವತಿಯ ಸೇವೆಯನ್ನು ಬಹುದಿವಸಗಳಿಂದ ಮಾಡುತ್ತ ಬಂದವರೂ, ಕರ್ನಾಟಕ ಸಾಹಿತ್ಯ ಪರಿಷತ್ತಿನಿಂದಲೂ, ಅನೇಕ ವಿಧ್ವಾಂಸರಿಂದಲೂ, ಉತ್ತಮಲೇಖಕರೆಂದು ಪ್ರಸಿದ್ಧಹೊಂದಿದವರೂ, ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದಿಂದ ಬಹುಮಾನವನ್ನು ಪಡೆದವರೂ, ವಿದ್ಯಾರಣ್ಯ ಗ್ರಂಥ ಮಾಲೆಯಲ್ಲಿ ಉತ್ತೋಮತ್ತಮ ಗ್ರಂಥಗಳನ್ನು ಬರೆದು ಸಾಹಿತ್ಯದಲ್ಲಿ ಮನ್ನಣೆ ಹೊಂದಿದವರೂ ಆದ ಕರ್ನಾಟಕ ವಿದ್ಯಾವಿನೊದಿ. ಶ್ರೀ. ಗೋ. ಹ. ಹೊಸೂರರವರ ಲಲಿತ ವಾಙ್ಮಯ ಪ್ರಸಾರದ ಲೇಖಗಳು ನಮ್ಮ ಕಾರ್ಯಾಲಯಕ್ಕೆ ಬಂದಿವೆ. ನಮ್ಮ ಚಂದ್ರಿಕೆಯ ವಾಙ್ಮಯ ಹಾಗು ರಾಷ್ಟ್ರೀಯ ಸೇವೆಗೆ ಮನಃಪೂರ್ವಕ ಸಹಾಯಮಾಡಲೆತ್ನಿಸುತ್ತಿರುವ ಈ ಮಹನೀಯರಿಗೆ ಚಂದ್ರಿಕೆಯ ಅನೇಕ ಧನ್ಯವಾದಗಳು.

ಹು ರಾ. ಅಗ್ನಿಹೋತ್ರಿ.
ಆಡಳತೆಗಾರ ವೀರಶೈವ ಚಂದ್ರಿಕೆ ಶಿರಹಟ್ಟಿ

---

# ಸರಸ್ವತಿ ಮಂದಿರ.

**ಕಮಲಾ (ಲೇ. ಹೊಮ್ಮರಡಿ ಮಲ್ಲನಗೌಡರು)** ಇದೊಂದು ಕಾಲ್ಪನಿಕ ಚಿಕ್ಕ ಕಾದಂಬರಿ. ಪತಿವ್ರತಾಧರ್ಮದ ಹಾದಿಯನ್ನು ತೋರಿಸುವದೇ ಇದರ ಹೆಗ್ಗುರಿಯು. ಸ್ತ್ರೀಯರು ಓದಲರ್ಹವಾಗಿದೆ. ಬೆಲೆ ೪ ಆಣೆ.

**ನಾರಿಯಲ್ಲ ಮಾರಿ ( ಲೇ. ಹೊಮ್ಮರಡಿ ಮಲ್ಲನಗೌಡರು )** ಇದಾದರೂ ಕಾಲ್ಪನಿಕ ಕಾದಂಬರಿಯೇ. ಸ್ತ್ರೀಯರು ಪುರುಷರನ್ನು ಹೇಗೆ ವಂಚಿಸುತ್ತಾರೆ, ಆದರ ಪರಿಣಾಮುವೇನಾಗುವದೆಂಬದನ್ನು ಚನ್ನಾಗಿ ಚಿತ್ರಿಸಿದ್ದಾರೆ. ಅವಶ್ಯವಾಗಿ ಓದುತಕ್ಕದ್ದಾಗಿದೆ. ಬೆಲೆ ೪ ಆಣೆ.

**ಆಯ್ದ ಹೂಗಳು ( ಕವಿತೆ )** ಬೆಲೆ ೩ ಆಣೆ. ಲೇ. ಹೊಮ್ಮರಡಿ ಮಲ್ಲನಗೌಡರು. ಭಾಷೆಯು ಸರಲವಾಗಿದೆ. ಕವಿತೆಗಳು ರಸವತ್ತಾಗಿವೆ. ಭಾವವು ಆಕರ್ಷಕವಾಗಿದೆ. " ನನ್ನ ಕನಸು " ಹಾಗೂ " ಕನ್ನಡಿಗರ ಕೂಗು " ಇವೆರಡು ಕವಿತೆಗಳಲ್ಲಂತೂ ಕನ್ನಡ ಭಾಷೆಯ ಸೊಬಗು ಬಹು ಅಂದವಾಗಿ ಹೊರಹೊಮ್ಮಿದೆ. ಕನ್ನಡ ಬಾಂಧವರು ನಮ್ಮ ಈ ಚಿಕ್ಕ ಕವಿತೆಗೆ ಉತ್ತೇಜನವಿನ್ನೀಯುವರಾಗಿ ನಾವು ಆಶಿಸುತ್ತೇವೆ.

ರಾ. ಬಾ. ಬಾ. ವಿಮರ್ಶಕಾರ.

ಇವು ಮುದ್ದಾದ ಮುದ್ರಣ. ಚಿಕ್ಕ ಪುಸ್ತಕಗಳಾಗಿರುವವು. ಓದಲು ಯೋಗ್ಯವಾಗಿರುವವು. ಪುಸ್ತಕಗಳು ಮಾಲಕರಲ್ಲಿ ದೊರೆಯುವವು.

ಹು. ರಾ. ಅ. ಕಾರ್ಯದರ್ಶಿ.

---

# ಸದ್ಬೋಧ ಚಂದ್ರಿಕೆ

**ಕಳೆದ ೨೫ ವರ್ಷಗಳಿಂದ ಕನ್ನಡ ಸೇವೆಯನ್ನು ಗೈಯುತ್ತಲಿರುವ ತಿಳಿಗನ್ನಡದ ಉಚ್ಚ ತರಗತಿಯ ಮಾಸಪತ್ರಿಕೆ.**

ವಾರ್ಷಿಕ ಚಂದಾ ೩ ರೂ. ಡೇಮಿ ಫುಟ ೬೪. **ಆನಂದವನ ಅಗಡಿ (ಪೋ. ಬೀ.)**

ಮೈಸೂರ ಸಂಸ್ಥಾನದ ವಿದ್ಯಾಶಾಖೆಯವರು ಶಾಲೆಗಳಿಗಾಗಿ ಮಂಜೂರ ಮಾಡಿದ್ದಾರೆ. ಹಾಗೂ ಮೈಸೂರ ಸಂಸ್ಥಾನದ ಕೋ. ಆ. ಸೋಸಾಯಿಟಗಳ ರಜಿಷ್ಟ್ರಾರರಿಂದಲೂ ಶಿಫಾರಸು ಹೊಂದಿದೆ.

ವೈದಿಕ ಧರ್ಮಾಭಿಮಾನಿಗಳೂ ಕನ್ನಡ ಭಾಷಾಭಿಮಾನಿಗಳೂ ಅವಶ್ಯವಾಗಿ ಆಶ್ರಯ ಕೊಡತಕ್ಕದ್ದು.

**ನೀತಿ ಬೋಧಿನಿ** ( ಕವಿ- ಶಿವಾನಂದ ದೀಕ್ಷಿತ ವಾಜಪೆ ಪೆನಶನ ವೂಾಸ್ತರ ) ಈ ಕವಿತಾ ಗ್ರಂಥವು ಅನೇಕ ಮಹನೀಯ ರಾದ ಪಂಡಿತರ ಸದಭ್ಹ್ರಾಯದಿಂದೊಡಗೂಡಿದೆ. ಪ್ರಪಂಚದಲ್ಲಿಯ ಅನೇಕ ವಿಷಯಗಳ ಬಗ್ಗೆ ನೀತಿಯನ್ನು ಬೋಧಿಸುವ ೩೩೦ ಪುಟಗಳು ಇದರಲ್ಲಿ ಸಮಾವೇಶವಾಗಿವೆ. ಪದ್ಯಗಳು ಲಲಿತವಾಗಿಯೂ ಸುಲಭವಾಗಿಯೂ ಇವೆ. ಇದು ವಿದ್ಯಾರ್ಥಿಗಳಿಗೂ ತರುಣರಿಗೂ ಬಹಳೇ ಉಪಯುಕ್ತವಿದೆ. ಬೆಲೆ ೬ ಆಣೆ.

**ರೇಣುಕಾಂಬಾ ಸ್ತೋತ್ರ** ( ಕವಿ: ಶಿವಾನಂದ ದೀಕ್ಷಿತ ವಾಜಪೆ ) ಶ್ರೀ ರೇಣುಕಾಂಬಾ ದೇವಿಯ ಸ್ತೋತ್ರರೂಪ ಪದ್ಯ-ಪುಸ್ತಕವಿದು. ಬಹಳ ಮನೋಹರವಾಗಿರುವದು. ಪದ್ಯಗಳು ಸೊಬಗುಳ್ಳವುಗಳಾಗಿರುವವು. ಶ್ರೀ. ವಾಜಪೇಯ ವೂಾಸ್ತರರು ವೃದ್ಧರಾದರೂ ಇವರ ಸಾಹಿತ್ಯಸೇವೆಯ ಉತ್ಸಾಹವು ತಾರುಣ್ಯಾವಸ್ಥೆಯಲ್ಲಿದೆ. ತರುಣ ಕನ್ನಡಿಗರಿಗೆ ಇವರ ಕೃತಿಯು ಮಾರ್ಗದರ್ಶಕವಾಗಿರುವದು, ಬೆಲೆ ೨ ಆಣೆ.

**ಶ್ರೀ ಸತ್ಯನಾರಾಯಣ ಪದ್ಯರೂಪ ಗ್ರಂಥ:** ಶ್ರೀ. ವಾಜಪೆ ವೂಾಸ್ತರರಿಂದ ರಚಿತವಾದ ಈ ಪುಸ್ತಕವಾದರೂ ಓದಲರ್ಹವಾಗಿದೆ. ವೈದಿ[...] ಧರ್ಮಿಗಳಿಗೂ ಆಸ್ತಿಕ ಕನ್ನಡಿಗರಿಗೂ ಸುಬೋಧವಾಗಿ ತಿಳಿಯುವಂತೆ [...] ಸಲ್ಪಟ್ಟಿದೆ. ಬೆಲೆ ೫ ಆಣೆ.

**ಲಂಚದ ಪ್ರಪಂಚ** ( ಲೇ. ತಿವ್ಮಾಜಿ ಲಿಂಗೋ ಕುಲಕರಣಿ, ಪ್ರ[...]ಶಕ- ನಾ. ಹ. ಹೊಸೂರ, ವಿದ್ಯಾರಣ್ಯ ಗ್ರಂಥಮಾಲೆ,ಮುಳಗುಂದ ) ಈ ಚಿ[...] ಪುಸ್ತಕದಲ್ಲಿ ಲಂಚದ ವಿಷಯವಾಗಿ ತಿರಸ್ಕಾರವನ್ನುಂಟುಮಾಡುವ ಚಿಕ್ಕ [...]ಗಳು ಅಡಕವಾಗಿವೆ. ಭಾಷೆಯು ಸುಲಭ ತಿಳಿಗನ್ನಡ. ಉಸ್ತಕವು ಬಹಳೇ ಉ[...]ಯುಕ್ತವಿದೆ. ಕನ್ನಡದಲ್ಲಿ ಇಂಥ ವಿವಿಧ ವಿಷಯಗಳ ಕಥೆಗಳು ಬೇಕು. ಕನ್ನ[...] ವಾಚಕರು ಆಶ್ರಯ ಕೊಡಲು ತಕ್ಕದ್ದಾಗಿದೆ. ಬೆಲೆ ೩ ಆಣೆ.

ಹು. ರಾ. ಅಗ್ನಿಹೋತ್ರಿ.

---

ಇದನ್ನು ಗದಗ-ರಸಿಕರಂಜನ ಮುದ್ರಣಾಲಯದಲ್ಲಿ ಮುದ್ರಿಸಿ, ಗದಗ ತಾಲೂ[...] ಸೊರಟೂರ (ಪೋ. ಶಿರಹಟ್ಟಿ) ವೀರಶೈವ ಚಂದ್ರಿಕೆಯ ಆಫೀಸಿನಲ್ಲಿ ಪ್ರಸಿದ್ಧಪಡಿಸಿ[...]

ಶಿರಹಟ್ಟಿ.

ಶ್ರೀ ಫಕ್ಕೀರೇಶ್ವರ ಸ್ವಾಮಿಗಳ ಕೃಪಾಛತ್ರದಲ್ಲಿ ನಡೆದ

# ವೀರಶೈವ ಚಂದ್ರಿಕೆ.

ನೈತಿಕ, ಸಾಮಾಜಿಕ, ಧಾರ್ಮಿಕ ವಿಷಯಗಳಿಂದೊಡಗೂಡಿದ
ತಿಳಿಗನ್ನಡ ಮಾಸಪತ್ರಿಕೆ.

ಕಡ್ಲಗಡಬಿನ ಹುಣ್ಣಿವೆ.

| ಸಂಪುಟ | ಪ್ರಾರಂಭ:— | ಸಂಚಿಕೆ |
|---|---|---|
| ೧ | ಶ್ರೀ ಬಸವಜಯಂತಿ ೧೮೫೭<br>ಜೇಷ್ಠ ೧೮೫೬ ಜೂನ ೧೯೩೪. | ೩ |

ಹರತನ್ನ ಭಕ್ತರ । ತಿರಿವಂತೆ ಮಾಡುವ । ಒರೆದು ನೋಡುವ । ಸುವರ್ಣದ ಚಿನ್ನದಂತೆ ।
ಅರೆದುನೋಡುವ ಚಂದನದಂತೆ । ಅರಿದು ನೋಡುವ ಕಬ್ಬಿನಕೋಲಿನಂತೆ ।
ಬೆದರದೆ ಬೆಚ್ಚದೆ ಇದ್ದಡೆ । ಕರವೆತ್ತಿಗೊಂಬ ನಮ್ಮ ರಾಮನಾಥಾ ॥

—ದೇವರ ದಾಸಿಮಯ್ಯಾ

ಸಂಪಾದಕರು ಹಾಗು ಪ್ರಕಾಶಕರು:

ಆಲೂರ ಮುರಿಗೇಂದ್ರ ಶೆಟ್ಟರು.

## ವಿಷಯಾನುಕ್ರಮಣಿಕೆ:



ವಾರ್ಷಿಕ ಚಂದಾ

ಸ್ಥಳದವರಿಗೆ ೧-೮-೦. ] ಬಿಡಿಸಂಚಿಕೆ ೦-೩-೦ [ ಅಂಚೇ ವೆಚ್ಚ ಸೇರಿ ೧-೧೧-೦

ಸಿರಿಗನ್ನಡಂ ಗೆಲ್ಗೆ.

# ವೀರಶೈವ ಚಂದ್ರಿಕೆ.

ಬಯಲುಮೂರ್ತಿಯಾಗಿನಿಂದನೊಬ್ಬಶರಣ. ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ. ಆತನ ಶಾಂತಿಸೈರಣೆಯಿಂದ ಹುಟ್ಟಿದಾತ ವಿಷ್ಣು. ಆತನ ಕೋಪಕ್ರೋಧದಿಂದ ಹುಟ್ಟಿದಾತ ರುದ್ರ. ಈ ಮೂರು ಸೀಶವಂತಿರಲಿ. ಆ ಶರಣನನರಿದು ಶರಣೆನುತಿರ್ದೆನು ಕೂಡಲ ಸಂಗಮದೇವಾ.

ಶ್ರೀ ಬಸವೇಶ್ವರ.


| ಸಂಪುಟ ೧ | ಶ್ರೀಮನ್ನೃಪಶಾಲಿವಾಹನ ಶಕೆ ೧೮೫೬<br>ಕಡ್ಲಗಡಬಿನ ಹುಣ್ಣಿವೆ. | ಸಂಚಿಕೆ ೩ |
|---|---|---|


## ಪದ್ಯಸೀಮೆ.

---

## ಮುಕ್ಕಣ್ಣನ ಮೋಲ್ಮೆ

ಕವನಗಾರ:- ಬಾಲೇಹೊಸೂರ ರಾಮರಾಯರು, ಶಿರಹಟ್ಟಿ.

ಕಂದ

ಅಂಬುಧಿ ಕಡೆವಾಸಮಯದಿ ।
ಸಂಭವಿಸಿದ ಜ್ವಲಿತಮಾದಹಾಲಾಹಲವಾ ॥
ಕೊಂಬುವ ಭೀಕರಸಾಹಸ ।
ಶಾಂಭವಿಪ್ರಿಯ ನಿನ್ನನುಳಿದುಗೈದವನಾವಂ ॥ ೧ ॥

ಅಂಬರದಿಂದಲಿ ಗಂಗೆಯು ।
ಕುಂಭಿಸಿಗೈತರಲುಭಯದಿ ಲೋಕವಡೆಲ್ಲಂ ॥

ಕಂಬನಿಗೈಯ್ಯುವ ಸಮಯದಿ |
ಶಂಭುವೆನೀ ದಯದಲಂದು ಪೊರೆದೆಯೊ ದೇವಾ || ೨ ||

ಚಿತ್ತಜಲೋಕವನೆಲ್ಲಂ ತೆ |
ಮತ್ತವತಾಭಂಗಿಸಲ್ಕೆ ನಿನ್ನಯತಪವ ||
ಸತ್ವನ ಹೀರುತಲವನಂ |
ನೆತ್ತಿಯಕಣ್ಣಿಂದ ಭಸ್ಮಗೈದಿಯೊ ದೇವಾ || ೩ ||

ಮೇಲಿನ ಪದ್ಯಗಳ ಭಾವವನ್ನೇ ಕ್ರಮದಿಂದ ವಾಚಕರಿಗಾಗಿ
ತಿಳಿಗನ್ನಡದಲ್ಲಿ ಕೊಡಲಾಗಿದೆ

೧. ಸಮುದ್ರಮಥನಕಾಲದಲ್ಲಿ ಅನೇಕಾನೇಕ ಉತ್ತಮೋತ್ತಮವಾದ ವಸ್ತುಗಳು ರತ್ನಾಕರನ ಉದರದಿಂದ ಹೊರಬಿದ್ದವು. ಆಗ ಅವುಗಳಲ್ಲಿ ದೇವತೆಗಳೆಲ್ಲರೂ ತಮತಮಗೆ ಇಷ್ಟವಾದವುಗಳನ್ನು ಕೊಂಡೊಯ್ದರು. ಆದರೆ ಮುಂದೆ ಹಾಲಾಹಲವೆಂಬ ವಿಷವು ಹೊರಡಲು, ಅದರ ಜ್ವಾಲೆಯಿಂದ ಸಮಸ್ತ ಲೋಕವೇ ದಹಿಸಹತ್ತಿತು. ಆಗ ಯಾವತ್ತೂ ದೇವತೆಗಳು ಈ ಹಾಲಹಲದ ಬಾಧೆಯನ್ನು ತಪ್ಪಿಸಿಕೊಳ್ಳಬೇಕೆಂಬ ಅಭಿಲಾಷೆಯಿಂದ ಮುಕ್ಕಣ್ಣನನ್ನು ಮೊರೆಹೊಕ್ಕರು. ಕೂಡಲೇ ಕರುಣಾಕರನಾದ ಶಂಭುವು ಅದನ್ನು ಸೇವಿಸಿ ತನ್ನಲ್ಲಿಯ ಅದ್ಭುತ ಶಕ್ತಿಯಿಂದ ಕಂಠದಲ್ಲಿಯೇ ತಡೆದುಬಿಟ್ಟನು. ಅದುಕಾರಣ ಹದಿನಾಲ್ಕು ಲೋಕಗಳು ಅಂದು ಒದಗಿದ ಮಹಾಸಂಕಟದಿಂದ ಪಾರಾದವು.

೨. ಭಗೀರಥನ ಉಗ್ರವಾದ ತಪಸ್ಸಿಗೆ ಮೆಚ್ಚಿ ಪವಿತ್ರವಾದ ಗಂಗೆಯು ತನ್ನ ಭಯಂಕರ ಪ್ರವಾಹದಿಂದೊಡಗೂಡಿ ಆಕಾಶದಿಂದಿಳಿಯಲು, ಪೃಥ್ವಿಯೇ ಅದರ ಆಘಾತದಿಂದ ಒಡೆದು ಛಿನ್ನವಿಚ್ಛಿನ್ನವಾಗುವ ಸಮಯವೇ ಆದಾಗಿತ್ತು. ಆಗ ರೌದ್ರಾವತಾರಿಯಾದ ಆ ಮಹಾದೇವನು ತನ್ನ ಭಯಂಕರವಾದ ಶಕ್ತಿಯಿಂದ ಅವಳನ್ನು ತಡೆದು ತನ್ನ ಶಿರದಲ್ಲಿ ಧರಿಸಿ ಲೋಕವನ್ನು ರಕ್ಷಿಸಿದನು.

೩. ಮನ್ಮಥನು ತಾನು ಲೋಕದಲ್ಲಿ ಅತಿಶಯವಾದ ರೂಪುಳ್ಳವನೆಂಬ ಹೆಮ್ಮೆಯಿಂದ ಸಕಲ ಜನಗಳನ್ನು ತನ್ನ ಪಾಶಕ್ಕೆಳೆದು ಅನೇಕಪರಿಯಾಗಿ ಅನರ್ಥಗಳನ್ನು ಮಾಡುವದರಲ್ಲಿಯೇ ಆಸಕ್ತನಾದನು. ಹಾಗು ಮುಂದೆ ಜಗತ್ತಿನ ಲಯಕ್ಕೆ ಕಾರಣನಾದ ಶ್ರೀಮನ್ ಮಹಾದೇವನ ತಪಸ್ಸನ್ನು ಭಂಗುಗೊಳಿಸುವಂತಹ ಘೋರವಾದ ಸಾಹಸಕ್ಕೆ ಪ್ರವೃತ್ತನಾಗಲು ಮುಕ್ಕಣ್ಣನು ಸಹಜವಾಗಿಯೇ ತನ್ನ ಉರಿಗಣ್ಣಿನಿಂದ ಅವನನ್ನು ದಹಿಸಿ ಬಿಟ್ಟನು. ಇದರಿಂದ ಲೋಕದ ಜನರು ಆ ಮನಸಿಜನ ಬಾಧೆಯಿಂದ ಮುಕ್ತರಾದರು.

ಈ ರೀತಿ ಒಟ್ಟರೆ ಮೂರು ಪ್ರಸಂಗಗಳಿಗೆ ಎದುರಾಗಿ ನಿಲ್ಲಲು, ಉಳಿದ ದೇವತೆಗಳಾರೂ ಸಮರ್ಥರಾಗದೆ ಭಯಭೀತರಾಗಿ ಶ್ರೀಮನ್ ಮಹಾದೇವನಿಗೆ ತಮ್ಮ ಸಂರಕ್ಷಣೆಗಾಗಿ ಮೊರೆಹೊಗಬೇಕಾಯಿತು. ಮಹಾದೇವನೇ ಆತನು! ಅಂದಬಳಿಕ ಕೇಳುವದೇನು ? ಲೋಕಕಲ್ಯಾಣವೇ ತನ್ನ ಕರ್ತವ್ಯವೆಂದು ಭಾವಿಸಿ ಒದಗಿದ ಸಂಕಟಕ್ಕೆ ತಲೆಗೊಟ್ಟು ಸಮಸ್ತ ಲೋಕಜನಗಳನ್ನು ಅವನು ಕಾಪಾಡಿದನು.

---

## — ವಾಚಕರಲ್ಲಿ ಬಿನ್ನಹ. —

ಹಳ್ಳಿಯಲ್ಲಿ ಪ್ರಸಾರವಿರುವ ಆಲ್ಹಾದಕರವಾದ ಕೆಲವು ಹಾಡುಗಳು ನೀತಿ ಬೋಧಕವೂ ಉಪದೇಶಪರವೂ, ನಮ್ಮ ಆಚಾರ ವಿಚಾರಗಳಿಗೆ ಪೋಷಕವೂ ಇರುವದರಿಂದ ಇಂಥ ಹಾಡುಗಳನ್ನು ಸಂಗ್ರಹಿಸಿ, ಅವುಗಳ ತಿದ್ದುಪಡಿಮಾಡುವ ಗೊಡವೆಗೆ ಹೋಗದೆ, ಅವು ಇದ್ದಂತೆ ಅಂದರೆ ಹಳ್ಳಿಗಾಡು ಜನರು ಅನ್ನುವ ರೀತಿಯಲ್ಲಿಯೇ ಇಲ್ಲಿ ಕೊಡುವೆನು. ಇವು ನಮ್ಮ ಪೂರ್ವಜರ ಪ್ರಸನ್ನ ಮನಸ್ಸಿನ ಆನಂದದ ತೆರೆಗಳಾಗಿರುವದರಿಂದ ವಾಚಕರು ಇವುಗಳಲ್ಲಿಯ ಭಾವಕ್ಕೆ ಲಕ್ಷ್ಯಗೊಡಬೇಕಲ್ಲದೆ ಉಳಿದ ವಿಷಯಗಳಿಗೆ ಅಂದರೆ, ಇವುಗಳಲ್ಲಿಯ ವ್ಯಾಕರಣ, ಛಂದಸ್ಸು, ಗ್ರಾಮ್ಯ ಭಾಷೆ ಇತ್ಯಾದಿಗಳಿಗೆ ಮಹತ್ವಗೊಡಬಾರದಾಗಿ ವಿನಂತಿ.

ಹು. ರಾ. ಅಗ್ನಿಹೋತ್ರಿ,
ಆಡಳತೆಗಾರರು.



— ಉಪದೇಶಪರ —

# ಹಳ್ಳಿಯ ಹಾಡುಗಳು.

ಸಂಗ್ರಾಹಕರು— ಶ್ರೀ ಕುಲಕರಣಿ ತಿಮ್ಮಣ್ಣ, ಕಾಲವಾಡ.

ಸಾರಿಗಂಡನಮಾತು ಮೀರಿ ನಡಿಯಲುಬೇಡ । ಸಾರಿಹೇಳಿದಿನಿ ಕೇಳವ್ವ ।
ಸಾರಿಹೇಳಿದಿನಿ ಕೇಳವ್ವ ಶಿವಭಗತಿ । ದಾರಿಬಿಡಬೇಡ ಕಡೆತನಕ ॥೧॥

ಕಡೆಗೆ ಗಂಡನಕೂಡ ಧೃಡದಿಬಾಳ್ವೆಮಾಡಿ। ಮಡದಿಪರಪುರುಷನೊಳಗೊಮ್ಮೆ॥
ಮಡದಿ ಪರಪುರುಷನೊಳಗೊಮ್ಮೆ ಕೂಡಿದರೆ। ಕೆಡವೂದ ನಿಮ್ಮ ಪತಿವ್ರತವು ॥೨॥

ಲಿಂಗವಂತರ ಮಗಳು ಹೆಂಗಸು ನೀಯಾಗಿ । ಲಿಂಗಪೆಟ್ಟಿಗಿ ಒಳಗಿಟ್ಟು ।
ಲಿಂಗಪೆಟ್ಟಗಿ ಒಳಗಿಟ್ಟು ತಿರುಗಿದವರ ಶಿವಭಕ್ತರು ಹ್ಯಾಂಗಮೆಚ್ಚುವರು ॥೩॥

ಗುರುವು ಕಟ್ಟಿದಲಿಂಗ ಮರೆತು ಮನಿ ಒಳಗಿಟ್ಟು । ಬರಿಗೊರಳಲೆ ತಿರುಗುವಳ ।
ಬರಿಗೊರಳಲೆ ತಿರುಗುವ ಬಾಲೆಗೆ । ನರಕ ತಪ್ಪದು ಕಡೆತನಕ ॥೪॥

ಗಂಡನಂದರ ಗಂಡ ಗುರುವು ಕಟ್ಟಿದ ಲಿಂಗ। ಪರವೂರ ಗಂಡರನ ನೆದರಿಟ್ಟು ।
ಪರಊರ ಗಂಡರನ ನೆದರಿಟ್ಟು ನೋಡದ ಬಾಲಿ । ನಿಲಬಾರನನಬದಿಯಲಿ ॥೫॥

ಹಡದರ ಚಾಕವ ಗಡಗಿ ಒಳಗಿಡಬ್ಯಾಡ ಮಡದಿನಿನಗಿಲ್ಲ ಮೈಲಿಗಿ ।
ಮಡದಿ ನಿನಗಿಲ್ಲ ಮೈಲಿಗಿ ಲಿಂಗವ । ಬಿಡದಲೆ, ಎಚ್ಚರಲಿ ಧರಿಸವ್ವ ॥೬॥

ಒಡೆಯ ಲಿಂಗಯ್ಯನ ಎಡಿಮಾಡಿ ಉಣ್ಣಾಗ । ಹಡದವ್ವನ ಕಂಡು ಶರಣೆಂದೆ ।
ಹಡದವ್ವನ ಕಂಡು ಶರಣೆಂದೆ ಪರಶಿವನ ಸಡಗರದ ಶರಣೆ ಇವಳಲ್ಲಿ ॥೭॥

ಕಟಗಿ-ಕಲ್ಲ-ಕಂಬ ಅಂಬಾಲಗಡಗೀಯೆ । ನಂಬೂಗಿ ಪೂಜಿಗೊಳಬೇಕು ।
ನಂಬೂಗಿ ಪೂಜಿಗೊಳಬೇಕ ಗುರುಕೊಟ್ಟಂಥ । ಶಂಭುಲಿಂಗನ್ನ ಬಿಡಬ್ಯಾಡ ॥೮॥

ಅಪ್ಪಬಸವೇಶ್ವರ ರವಿಚಿಕ್ಕಚನ್ನಯ್ಯನವರು । ಮಿಕ್ಕಿದರ ಶರಣು ಮಡಿವಾಳಿ ।
ಮಿಕ್ಕಿದರ ಶರಣು ಮಡಿವಾಳಿಯಾಚಾರ । ಅಕ್ಕರತೆಲಿಂದ ಹಾಡವ್ವ ॥೯॥

ಅಕ್ಕಲಿಂಗಕಟ್ಟಿ ಸಿಕ್ಕಾಂಗ ತಿರಗುವರು । ರಕ್ಕಳಿಸಿನಡದ ಹೆಣ್ಣಲ್ಲ।
ರಕ್ಕಳಿಸಿ ನಡದ ಹೆಣ್ಣಲ್ಲ ಇವಳಿಗೆ । ಮುಕ್ಕಣ್ಣ ಹ್ಯಾಂಗ ಮೆಚ್ಚುವನು ॥೧೦॥

ಗುರುವರೇಣಿಕನ್ಹಾಡು। ಗುರುವಪಂಡಿತನ್ಹಾಡು ಗುರುವಿಗೆಶರವೆದ್ದಿಮರುಳಾದೆ ।
ಗುರುವಿಗೆ ಶರವೆದ್ದಿ ಮರುಳು ಹರಿಹರನ್ಹಾಡಿ । ಹರಶಿಗೇಳಿಯವ್ವಬೈಗಳ ॥೧೧॥

ಬಾಳುವೆಮಾಡಿದರ ಬಾತಂಗಿಅನ್ನುವರ । ಬಾಳುವೆಗೆಟ್ಟು ಬಿಲೆಗೆಟ್ಟು ।
ಬಾಳುವೆಗೆಟ್ಟು ಬಲೆಗೆಟ್ಟು ತಿರುಗಿದರ। ಒಡಹುಟ್ಟಿದವರ ವೈರಾದಿ ॥೧೨॥

ಅತ್ತಿಮಾವಗಂಜಿಸುತ್ತೇಳುನರಿಗಂಜಿ । ಮತ್ತೆ ಆಳುವ ಧರಿಗಂಜಿ।

ಮತ್ತೆ ಆಳುವ ಘೊರೆಗಂಜಿತಂಗೆವ್ವ। ಅಯ್ಯಾಳ ಅತ್ತೆವರ ಮನಿಯಾಗ ||೧೩||

ಬೇಲಿವ್ಯಾಲಿನಹೂವು ಬೆಳ್ಳಗಿದ್ದರೇನ| ಮಲ್ಲಿಗಿಹೂವಿನಂಥ ಮನಿಗಂಡನಬಿಟ್ಟು।
ಮಲ್ಲಿಗಿಹೂವಿನಂಥ ಮನಿಗಂಡನಬಿಟ್ಟು ನಿಲ್ಲ ನೀ | ಹುಲ್ಲುಕೊಯ್ಯುವನ
ಬೆನ್ಹತ್ತಿ ಹೋಗಬೇಡ ||೧೪||

ವಾರೀಗಿರಾಯರು ಮಾರಿಮುಂದಿದ್ದರೆ| ಹಾಲುಕುಡಿದಂತೆ ಗರ್ತಿಗೆ |
ಹಾಲುಕುಡಿದಂತೆ ಗರ್ತಿಗೆ ವಜ್ರದ | ವಾಲಿ ಇಟ್ಟಂತೆ ಕಿವಿಯಾಗ ||೧೫||

ಅತ್ತಿಮಾವನಪಾದ ತೆಪ್ಪದಲಿ ಹಿಡಿದಾರ। ಮತ್ತನಾದುನಿ ಶಿರಿಪಾದ |
ಮತ್ತೆನಾದುನಿ ಶಿರಿಪಾದಹಿಡಿದರ | ತೊಟ್ಟಲಕ ಹರಕಿಕೊಡತಾರ ||೧೬||

ನಾಲ್ಕುಬಂಗಾರಬಳಿ ಸಾಕನನ ಬಲಗೈಗೆ | ನಾಕೊರದ ವಾಲಿಬುಗುಡಿ |
ನಾಕೊರದ ವಾಲಿಬುಗುಡಿ ಗೆಜ್ಜಟೀಕಿ | ಸಾಕತವರವರು ಬಡವರ ||೧೭||

ಮದ್ಯಾಣಕ ಮಳಿಬಡದು ಬಿದ್ದಾವನೀರಲ್ಹಣ್ಣ | ಗೆದ್ದಿನೆನಬೇಡ ಪತಿವರತಿ |
ಗೆದ್ದಿನೆನಬೇಡ ಪತಿವರತಿ ಅವ್ವಕ್ಕ ಬಿದ್ದೀಯ ಬೀಮನ ಬಲಿಯಾಗ ||೧೮||

ಕಡನಕಟ್ಟಮಾಡಿ ಕಡಲಿಹುಣ್ವಿಮಾಡಿ | ಕಡದವರುಬಂದು ಮನಿಮುಂದ |
ಕಡದವರುಬಂದು ಮನಿಮುಂದಕೂತರ। ಕಡಲಿಹೂವಿನಾಂಗ ಒಳಗಿದ್ದೇವ ||೧೯||

ಮುಗ್ಗುಜ್ವಾಳಾತಿಂದು ಮುಗ್ಯಾವನಮಜೀವ | ಎಗ್ಗಿಲ್ಲದಾಗಿಜಗಳಕ |
ಎಗ್ಗಿಲ್ಲದಾಕಿ ಜಗಳಕಬಂದರ। ಬುದ್ಧಿವಂತರ ಮಗಳ ಒಳಗಿದ್ದೆ ||೨೦||

ಸೊರಗಜ್ವಾಳಾತಿಂದು ಸೊರಗ್ಯಾವ ನಮ್ಮಜೀವ ಸಲವಲ್ಲದಾಕಿ ಜಗಳಕ |
ಸಲವಲ್ಲದಾಕಿ ಜಗಳಕ ಬಂದರೆ | ಸರದಾರನ ಮಡದಿ ಒಳಗಿದ್ದೆ ||೨೧||

ಅಡಿಕೊಂಬರಮುಂದ ಅತ್ತರೇನಾಗೂದ | ರಾಡೀಯಮ್ಯಾಲ ತಿಳಿನೀರ |
ರಾಡೀಯಮ್ಯಾಲ ತಿಳಿನೀರ ತಿಳಿದಂತೆ | ತಿಳಕೊಳ ನಿನ್ನಮನದಾಗ ||೨೨||

ಕಾಚುಕವು=ರಹೀನ | ನಾಚುನಾಲಿಗಿಹೀನ | ಆಚಾರಹೀನಗರ್ತಿಗೆ |
ಆಚಾರಹೀನಗರ್ತಿಯ ಮನಿಮುಂದೆ | ನಸುಗೆಂಪಿನವರ ನಗಿಹೀನ ||೨೩||

ಬಂಡಿಬಂಟಕಮೂಲ ಮಿಂಡಿಮುದಕಗಮೂಲ | ಹಿಂಬಂಡಿಮೂಲ ಬಸವಗ |
ಹಿಂಬಂಡಿಮೂಲ ಬಸವಗಹಾರೂರ್ಹ್ವಡಿಗಿ | ರಂಡ್ಯಾದರಮ್ಯಾಲ ತವರಿಗೆ ||೨೪||

ಈಚಲಪರಕೆವ್ವ ಏಟುದ್ದಬೆಳದೆವ್ವ | ಕ್ವಾಣನಮ್ಯಾಲೆ ಮೆರೆದವ್ವ |
ಕ್ವಾಣನಮ್ಯಾಲೆಮೆರದವ್ವ ಈವೂರ | ಶಾಣ್ಯಾರಮಾನ ಕಳಿದೆವ್ವ ||೨೫||

ಕರೆಯಗೊಂಗಡಿಬ್ಯಾಡ | ಬೆರಳಿಗುಂಗುರಬ್ಯಾಡ | ಸರಹೊತ್ತಿನಾಗಬರಬ್ಯಾಡ |
ಸರಹೊತ್ತಿನಾಗ ಬರಬ್ಯಾಡ ಹೆಣ್ಣೀಗೆ | ದುರ್ಲಭದಮಾತು ತರಬ್ಯಾಡ ||೨೬||

ಹಿಂದಮುಂದಾಡವಳ ಹಿಂಬಡ ತುಳದೇನ । ಎಳದೇನಮುಂದೆಲಿ ಹಿಡಿದು ।
ಎಳದೇನ ಮುಂದೆಲಿಹಿಡಿದು ಇನ್ನೊವ್ಮೆ । ಹಿಂದಮುಂದ ಮಾತಾಡದ್ಹಾಂಗ
ಮಾಡೇನ ||೨೭||

ಮುಗುತಿಗೆ ಮುತ್ತ್ಯಾಕ। ಚಲುವಿಗೆ ಬಂಗಾರ್‍ಯಾಕ। ಗುಣವಂತಿಗ್ಯಾಕ ಅಣಿಕಾರ
ಗುಣವಂತಿಗ್ಯಾಕ ಅಣಿಕಾರ ಜ್ವಾಳದ । ತೆನಿಬಿದ್ದಬಳಿಕ ಕವಣ್ಯಾಕ ||೨೮||

ಹಡದವ್ವ ಹಡದಪ್ಪ ಹಡದೇನು ಸುಡಬೇಕು ಅಲ್ಲೊಬ್ಬಾಕಿ ಇದಿಮಾಯಿ ।
ಅಲ್ಲೊಬ್ಬಾಕಿ ಇದಿಮಾಯಿ ಶಿಟಿಗೆವ್ವ । ನನಗಲ್ಲದ ಬರಿಯ ಬರಿದಾಳ ||೨೯||

ಸವತಿ ಸಣ್ಣವಳಲ್ಲ । ಭಾಗಾದಿ ಬಡವಲ್ಲ । ಚೇಳಿನ ಕೊಂಡಿರವಿಯಲ್ಲ ।
ಚೇಳಿನಕೊಂಡಿರವಿಯಲ್ಲ ರಾಜ್ಯದಿ । ಚಿಕ್ಕಪ್ಪನ ಮಗತವರಲ್ಲ ||೩೦||

ಆಕಳ್ಹೈನವಲ್ಲ । ಅಳಿಯ ಪುತ್ರನಲ್ಲ । ಕಾಡಿಗಿಜೋಳ ಬೆಳಸೆಲ್ಲ ।
ಕಾಡಿಗಿಜೋಳ ಬೆಳಸೆಲ್ಲ ರಾಜ್ಯದಿ । ಅತ್ತಿಗಿ ಅಲ್ಲ ಹೆತ್ತವ್ವ ||೩೧||

ಬಂಜೀಯ ಬಾಗಿಲದಾಗ ಬಂಗಾಳಿಮರಹುಟ್ಟಿ ಬಂಗಾರದೆರಡು ಗಿಳಿಬಂದು ।
ಬಂಗಾರದೆರಡು ಗಿಳಿಬಂದು ಹೇಳ್ಯಾವ ಬಂಜಿನಿನ್ನಬದಕು ಹೆರವರಿಗೆ ||೩೨||



# ಹದಿನಾರು ಸೋಮವಾರಗಳ ಕಥೆ.

## ಶ್ರೀ ಶಿವವ್ರತ.

**( ಶಿವಾನಂದ ದೀಕ್ಷಿತ ವಾಜಪೇಯ ವಿರಚಿತಂ. )**

( ಮುಂದೆ ಸಾಗಿದ್ದು )

**ಅರ್ಚಕನಳಲು-ಅಪ್ಸರೆಯರು ಈ ವ್ರತ ಹೇಳಿದ್ದು.**

ಭಾ. ಷಟ್ಪದಿ.

೮ ಏನು ಪೇಳಲದವ್ವಗಳಿರ! ಭ |
ವಾನಿಯುರುಶಾಪಕ್ಕೆ ಸತ್ತಪೆ |
ನಾನೆನುತಲಿರ್ದಿರವನೊರೆಯಲ್ಕಪ್ಸರೆಯರೆಲವೋ ! ||
ನೀನು ಪದಿನಾರಿಂದುವಾರದ |
ಮಾನಿತೇಶನ ವ್ರತವೆಸಗು ಗಿರಿ |
ಶಾನುರಾಗದೆ ಬೇನೆಯಳಿವುದು ಸುಖಿಸೆ! ಅಂಜಿವಿರ್ಕೈ ||

**( ಅರ್ಚಕನು ವ್ರತದ ವಿಧಿಕೇಳಿದ್ದು-ಅಪ್ಸರೆಯರು ಹೇಳಿದ್ದು )**

( ೧೨ ರ ವರೆಗೆ )

೯ ಬಳಿಕಲಾ ಅರ್ಚಕನು ತಾಯ್ಗಳಿ! |
ತಿಳುಪಿದಾವ್ರತ ವಿಧಿಯನೆಲ್ಲವ |
ನಳಸದೆಯುದನ್ನೊಲಿದು ಮಾಡುವೆನೆಂದು ಬಿನ್ನವಿಸೆ ||
ತಿಳಿಯೊ ! ಪ್ರತಿ ತಾನಿಂದುವಾಸರ |
ದೊಳಭವನನು-ಪ್ರದೋಷಕಾಲವ |
ತಿಳಿದು ಪೂಜಿಸಿ ಷೋಡಶವಿಧಾನಂಗಳಿಂ ಬಳಿಕ ||

೧೦ ಮಿರಗುವಕೆ ಸೇರ್-ಕಣಕದಲ್ಲಾ |
ಗಿರುವ ಕೆಂಡಕ ಸುಟ್ಟ-ಘೃತಗುಡ |
ವೆರೆದ ಮೂರುಪ್ರಸಾದದುಂಡಿಗಳನು ಹರನೊಳಿರಿಸಿ ||
ಸ್ಮರಿಸಿ-ಯರ್ಪಿಸಿ-ಹಂಚಿ-ತಿಂಬುದು |
ತೊರೆವುದೂಟವನು-ಪ್ಪನಂದೀ |
ತೆರದೆ ಪದಿನಾರಿಂದುವಾರ ವ್ರತವನಡೆಸುವುವು ||

೧೧ ಕಡೆಯುಪದಿನೇಳನೆಯವಾರಕೆ |
ಕಡುವಿಭವದಿಂದಿದನು ಪೂರ್ತಿಪು |
ದಿಡುವುದೈದೇ ಸೇರೊಳಹ ಮೂರುಂಡಿಗಳಸಲಿಸೆ ||
ಮೃಡನಿಗೊಂದಲ್ಲಿದ್ದವರಿಗೊಂ |
ದೊಡನೆ ಭಾಗಿಸಿಯುಳಿದುದೊಂದಂ |
ಬಿಡದೆ ತಾಂ ಸವಿದು ನಿಜಬಂಧುಗಳೊಡನೆ ಭುಂಜಿಪುದು ||

ಕಂದಪದ್ಯ

೧೨ ವ್ರತವಿಧಿತಿಳಿಯದೆ! ಅರ್ಚಕ ! |
ಕುತೂಹಲದೊಳೀಗ ವ್ರತವಪಿಡಿ ಪೂರ್ತಿಸೆಲೋ! ||
ಶಿತಿಗಳನ ದಯದೆ ನಿನ್ನಂ |
ಹತಿಪೀರುಜೆಯೋಡಿ ವಿಹಿತಮುಹುದಂಜದಿರೈ ! ||

ಭಾ. ಷ.

( ಅರ್ಚಕನು ವ್ರತಮಾಡಿದ್ದು-ಬೇನೆಹೋದದ್ದು )

೧೩ ಅಂತವಂ ವ್ರತವಿಡಿದೆಸಗಿ ಶಿವ |
ನಂ ತಣಿಸಲಾಭವನದಯದೆಸ ||
ಮಂತೆಯಾತನ ಬೇನೆಯೋಡಿರ್ದ್ದಂಗವೆಲ್ಲಾಗ ||
ಕಾಂತಿ ವೆರೆದಿಹ ಕನಕವೆನಿಸಿತು |
ತಾಂ ತಿಳಿದರಾರ್ ಭವಹರಣನ |
ತ್ಯಂತಮುಹಿಮೆಯುನಾತನಿಳೆಗುರು ಭಕ್ತವತ್ಸಲನು ||

( ಮತ್ತೆ ಶ್ರೀ ಪಾರ್ವತೀ ಪರಮೇಶ್ವರರು ಇಲ್ಲಿಗೆ ಬಂದದ್ದು )

ಶ್ರೀ ಪಾರ್ವತಿಯು ಹಾಗೂ ಅರ್ಚಕನ ಮಾತುಗಳು.

೧೪ ಮತ್ತೆಧರೆಗೀಶನುಮೆಯೊಡನೆ ಬ |
ರುತ್ತಲಾ ಅರ್ಚಕನ ಗಿರಿವರ |
ಪುತ್ರಿ ಕಂಡರ್ಚಕನೆ ಅಹ ! ನೀನೆಂತು ಸುಖಿಯಾದೆ |
ಎತ್ತಪೋದುದು ನಿನ್ನ ಕುಷ್ಠವು |
ವ್ಯರ್ಥವಾಯಿತೆ! ನಿನ್ನ ಶಾಪವು |
ಚಿತ್ರವಿದು ! ಕಾಣಿದರ ವಿವರವನರಹುದೆನಲವನು ||

(ಮುಂದೆಸಾಗುವದು.)

# ಕನ್ನಡ ಸಾಹಿತ್ಯದಲ್ಲಿ ವೀರಶೈವರ ಮಹತಿ:

ಲೇಖಾಂಕ ೩.

ಲೇಖಕರು :— ಶ್ರೀ. ಬಾಲೇಹೊಸೂರ ರಾಮರಾಯರು ಶಿರಹಟ್ಟಿ.

( ಹಿಂದಿನಿಂದ ಮುಂದೆ ಸಾಗಿದ್ದು. )

ಸಾಮಾನ್ಯವಾಗಿ ವಿಚಾರ ಮಾಡಿದರೆ ಭರತಖಂಡದಲ್ಲಿ ಪ್ರತಿವರುಷ ಅಚ್ಚಾಗಿ ಪ್ರಸಿದ್ಧಿಸಲ್ಪಡುವ ಬಹುತರ ಗ್ರಂಥಗಳು ಧರ್ಮದ ವಿಷಯಕ್ಕೆ ಬರೆದವೇ ಆಗಿರುತ್ತವೆ. ಪಾಶ್ಚಾತ್ಯರಲ್ಲಿ ಹೀಗೆ ಧರ್ಮದ ವಿಷಯಕ್ಕೆ ಬರೆಯುವ ಪರಿಪಾಠವು ಕಡಿಮೆ. ಇಂದು ಅತಿ ಸುಧಾರಣೆಯನ್ನು ಹೊಂದಿದ ೨೦ ನೇ ಶತಮಾನದ ಕಾಲದಲ್ಲಿ ಧರ್ಮದ ಭಾವನೆಯು ಹೀಗಿರುವಾಗ ಹಿಂದಿನ ಕಾಲದಲ್ಲಂತೂ ಭರತ ಖಂಡವು ಧರ್ಮದ ದಿವ್ಯ ಪ್ರಭಾವದಿಂದಲೇ ಅತಿಶಯವಾಗಿ ಕೀರ್ತಿಯನ್ನೂ ವೈಭವವನ್ನೂ ಪಡೆದಿತ್ತೆಂಬದು ಸ್ಪಷ್ಟವಾಗಿ ಕಂಡುಬರುವದು ಸಹಜ. ಇಂದಿಗೆ ೨೦೦೦ ವರುಷಗಳ ಹಿಂದೆ ಹಿಂದುಸ್ಥಾನಕ್ಕೆ ಬಂದುಹೋದ ಮೆಗ್ಯಾಸ್ಥನೀಸನು, ಆ ಕಾಲಕ್ಕೆ ಸಾಮ್ರಾಟನಾಗಿ ಆಳುತ್ತಿದ್ದ ಮೌರ್ಯವಂಶದ ಚಂದ್ರಗುಪ್ತನ ರಾಜ್ಯದ ವರ್ಣನೆಯನ್ನು ಬರೆದಿರುವನು. ಅದರಲ್ಲಿ ಅವನು:— " ಚಂದ್ರಗುಪ್ತನ ರಾಜಧಾನಿಯಾದ ಪಾಟಲೀಪುತ್ರವೆಂಬ ನಗರದಲ್ಲಿನ ಜನರು ಮನೆಗಳನ್ನು ಬಿಟ್ಟು ಹೊರಗೆ ಹೋಗುವಾಗ, ಅವುಗಳಿಗೆ ಕೀಲಿಗಳನ್ನು ಹಾಕುತ್ತಿರಲಿಲ್ಲ; ಅಲ್ಲಿನ ಜನರ ವ್ಯವಹಾರಕ್ಕೆ ಕಾಗದ, ಸಾಕ್ಷಿ, ಸಹಿ ಮುಂತಾದವುಗಳ ಅವಶ್ಯಕತೆಯಿರಲಿಲ್ಲ. " ಎಂಬವಾಗಿ ಹೇಳಿದ್ದಾನೆ. ಹೀಗೆ ನಿರ್ಭೀತರಾಗಿ ಅಡ್ಡಾಡುವಂತಹ ( ಜನರ ) ಪರಿಸ್ಥಿತಿಯೂ, ಕಾಗದ, ಸಾಕ್ಷಿ, ಸಹಿಗಳಿಲ್ಲದೆ ಸಾಗುವ ವ್ಯವಹಾರವೂ, ನಿರಾತಂಕವಾಗಿ ನಡೆಯುತ್ತಿದ್ದ ಆಗಿನ ರಾಜ್ಯದಾಡಳಿತವೂ, ಧರ್ಮಮಯವಾಗಿತ್ತೆಂಬದನ್ನ ಲಿಕ್ಕೆ ಆವ ಸಂದೇಹವೂ ಕಾಣುವದಿಲ್ಲ.

ಅದೇ ಮೇರೆಗೆ ಆವದೇ ಒಂದು ಭಾಷೆಯ ಸಾಹಿತ್ಯದ ಬಗ್ಗೆ ವಿಚಾರಮಾಡಿದರೆ, ಎಲ್ಲ ಭಾಷೆಗಳಲ್ಲಿರುವ ಮೊಟ್ಟಮೊದಲಿನ ವಾಙ್ಮಯವು ಧರ್ಮ ವಿಷಯಕವಾದುದೇ ಕಂಡುಬರುವದು. ಅಂದ ಬಳಿಕ ನಾವು ವರ್ಣಿಸುವ ಕಾಲದಲ್ಲಿಯ ವೀರಶೈವ ಶರಣರ ಕನ್ನಡ ಸಾಹಿತ್ಯದಲ್ಲಿಯಾದರೂ ಇದೇ ಲಕ್ಷಣವು ಕಂಡುಬರುತ್ತಿದ್ದಲ್ಲಿ ಆಶ್ಚರ್ಯವೇನು ? ಇನ್ನು ಕನ್ನಡ ನುಡಿಯ ಸೇವೆಯನ್ನು ಗೈದ ಜನಗಳನ್ನು ಅವರವರ ಧರ್ಮಕ್ಕನುಸಾರವಾಗಿ ವಿಂಗಡಿಸಿದರೆ ಜೈನರು ಮೊದಲಿಗರು. ವೀರಶೈವರು ಎರಡನೇಯವರು. ಬ್ರಾಹ್ಮಣರು ಮೂರನೆಯವರು. ಈ ಯಾವ-

ತ್ತರೂ ತಮ್ಮ ಪ್ರಾರಂಭದ ಸಾಹಿತ್ಯದಲ್ಲಿ ಧರ್ಮವೇ ತಳಹದಿಯಾಗಿರುವ ಗ್ರಂಥಗಳನ್ನು ರಚಿಸಿರುವರು. ಇರಲಿ, ನಮಗೆ ವೀರಶೈವರ ಬಗ್ಗೆ ಹೇಳಬೇಕಾದುದರಿಂದ ಅವರಲ್ಲಿ ವಿಶೇಷವಾದ ಕೀರ್ತಿಯನ್ನು ಪಡೆದವರ ಇತಹಾಸವನ್ನು ತಮ್ಮ ಮುಂದಿರಿಸುವದೇ ಉಚಿತವಾಗಿದೆ. ಚಂದ್ರಿಕೆಯ ಈ ಹಿಂದಿನ ಎರಡು ಸಂಚಿಕೆಗಳಲ್ಲಿ, ಶ್ರೀ ಬಸವಣ್ಣನವರ ಹಾಗೂ ಸರ್ವಜ್ಞರ ವಿಷಯಕ್ಕೆ ಹೇಳಿ ಆಯ್ತು. ಇಂದಿನ ನಮ್ಮ ಲೇಖದಲ್ಲಿ ೧೨ನೇ ಶತಮಾನದಲ್ಲಿ ಆಗಿಹೋದ ವೀರಶೈವ ಕವಿ ಸೊನ್ನಲಿಗೆಯ ಸಿದ್ಧರಾಮನ ವಿಷಯವಾಗಿ ಕೆಲವು ಸಂಗತಿಗಳನ್ನು ಕೊಡಲಾಗಿದೆ. ನಮ್ಮ ಲೇಖನದ ವಿಷಯವು ಬಹು ಮಟ್ಟಿಗೆ ಐತಿಹಾಸಿಕ ಆಧಾರಗಳ ಮೇಲಿಂದ ಬರೆಯಲಾಗಿರುವದರಿಂದ, ಆ ಬಗ್ಗೆ ಏನಾದರೂ ತಪ್ಪುವಿಧಾನಗಳು ಕಂಡುಬಂದಲ್ಲಿ, ಸಪ್ರಮಾಣವಾದ ಸಲಹೆಗಳನ್ನು ಕೊಡಲು ಅಡ್ಡಿ ಇಲ್ಲ. ನಾವು ಅವುಗಳನ್ನು ಸ್ವೀಕರಿಸಲು ಸಿದ್ಧರಿದ್ದೇವೆ.

## —: ಸೊನ್ನಲಿಗೆಯ ಸಿದ್ಧರಾಮ ಕವಿ :—

**ಕಾಲನಿರ್ಣಯ :—** ಸಿದ್ಧರಾಮನು ೧೨ ನೇ ಶತಮಾನಕ್ಕೆ ಸೇರಿದವನು. ಇವನು ವೀರಶೈವ ಕವಿಯು. ವೀರಶೈವ ಪಂಚಾಚಾರ್ಯರಲ್ಲಿ ಒಬ್ಬರಾದ ರೇವಣಸಿದ್ಧಾರ್ಯರು, ಸೊನ್ನಲಿಗೆ ಗ್ರಾಮಕ್ಕೆ ಒಡೆಯರಾದ ನನ್ನಪ್ಪನಾಯಿಕರ ಧರ್ಮಪತ್ನಿಯಾದ ಚಾಮಲಾದೇವಿಯರಿಮರಿನಲ್ಲಿ ಒಂದು ಸಮಯ ನಮ್ಮ ಚರಿತ್ರನಾಯಕನಾದ ಸಿದ್ಧರಾಮನ ಉದಯವನ್ನು ಸೂಚಿಸಿದ್ದರಂತೆ; ಮೇಲೆ ವಿವರಿಸಿದ ರೇವಣಸಿದ್ಧರು, ಶ್ರೀ ಬಸವೇಶ್ವರರ ಸಮಕಾಲೀನರೋ, ಅಥವಾ ಅವರಿಗಿಂತ ಪೂರ್ವದವರೋ ಎಂಬೀ ಸಂಗತಿಯನ್ನು ಧೃಡಪಡಿಸುವದು ಅತಿ ದುಸ್ತರವಾಗಿದೆ. ಕವಿಚರಿತಕಾರರಾದ ಪ್ರಾಕ್ತನ ವಿಮರ್ಶ ವಿಚಕ್ಷಣರಾದ ಶ್ರೀಮಾನ್ ಆರ್.ನರಸಿಂಹಾಚಾರ್ಯರು ಕೊಡುವ ಅಂಶಗಳ ಮೇಲಿಂದ ಚನ್ನಬಸವನು, ಸಿದ್ಧರಾಮನಿಗೆ ವೀರಶೈವ ಸಿದ್ಧಾಂತ ಉಪದೇಶವನ್ನು ಕೊಟ್ಟಿರುವದಾಗಿ ಕಂಡುಬರುವದು. ಅಂದಬಳಿಕ ಸಿದ್ಧರಾಮನು, ಚನ್ನಬಸವ ಅಥವಾ ಬಸವೇಶ್ವರರ ಸಮಕಾಲೀನನಾಗಿದ್ದನೆಂದೆನ್ನುವದಕ್ಕೆ ಅವಕಾಶವು ದೊರೆಯುತ್ತದೆ. ಇರಲಿ ಸಾಧಾರಣವಾಗಿ ಸಿದ್ಧರಾಮನ ಕಾಲವು ಹನ್ನೆರಡನೆ ಶತಮಾನವೆಂದಿಷ್ಟೇ ಹೇಳಿ, ಕಾಲನಿರ್ಣಯದ ಈ ವಿಷಯವನ್ನು ಮುಗಿಸುವದೇ ವಿಹಿತವಾಗಿ ತೋರುತ್ತದೆ.

**ಪೂರ್ವವೃತ್ತಾಂತ :—** ಸೊಲ್ಲಾಪುರ ಜಿಲ್ಹೆಯೊಳಗಿರುವ ಸೊನ್ನಲಿಗೆ ಅಥವಾ ಸೊನ್ನಲಾಪುರವೆಂಬ ಗ್ರಾಮದಲ್ಲಿ ಮುದ್ದಣಗೌಡನೆಂಬ ಒಬ್ಬ ಪರಮಸಾತ್ವಿಕನಾದ ವೀರಶೈವ ಗೃಹಸ್ಥನಿದ್ದನು. ಅವನ ಹೆಂಡತಿಯ ಹೆಸರು ಸುಗ್ಗವ್ವೆ

ಇವಳು ಒಳ್ಳೇ ಭಾವಿಕಳೂ ಶಿವಾಚಾರಸಂಪನ್ನಳೂ ಆಗಿದ್ದಳು. ಸೊನ್ನಲಿಗೆಯ ಒಡೆತನವು ಆ ಕಾಲಕ್ಕೆ ನನ್ನಪ್ಪನಾಯಿಕನೆಂಬ ಧೊರೆಯ ಕೈಯಲ್ಲಿತ್ತು. ಇವನಿಗೆ ಚಾಮಲಾದೇವಿಯೆಂಬ ರಾಣಿಯಿದ್ದಳು. ಒಂದುದಿನ ಪರಮ ತಪಸ್ವಿಯಾದ ರೇವಣಸಿದ್ಧಾರ್ಯನು ನನ್ನಪ್ಪಧೊರೆಯ ಓಲಗಕ್ಕೆ ಆಗಮಿಸಿದನು. ಆ ಕಾಲಕ್ಕೆ ಸೊನ್ನಲಿಗೆಯಲ್ಲಿ ನನ್ನಪ್ಪ ಧೊರೆಯು ಅವರಿಗೆ ಒಳ್ಳೇ ರೀತಿಯಿಂದ ಅತಿಥಿಸತ್ಕಾರ ವನ್ನಿತ್ತನು. ಆಗ ದೊರೆಯ ಆತಿಥ್ಯಕ್ಕಾಗಿ ಆನಂದಬಟ್ಟು ಅವನು:— " ಇದೋ ! ನಿಮ್ಮ ಈ ಸೊನ್ನಲಿಗೆ ಗ್ರಾಮದಲ್ಲಿ ಸಿದ್ಧರಾಮನೆಂಬ ಸತ್ಪುರುಷನೊಬ್ಬನು ಉದಯಿಸಿ, ವೀರಶೈವ ಮತದ ಉದ್ಧಾರವನ್ನು ಮಾಡುವನು. " ಎಂಬ-ದಾಗಿ ಹೇಳಿ ಹೊರಟು ಹೋದನು. ಈ ಮೇರೆಗೆ ಮಹಾಜ್ಞಾನಿಯಾದ ರೇವಣ ಸಿದ್ಧಾರ್ಯನ ಭವಿಷ್ಯದಂತೆ ಯೋಗ್ಯ ಕಾಲದಲ್ಲಿ ಸುಗ್ಗಿವ್ವನ ಉದರದಲ್ಲಿ ನಮ್ಮ ಕಥಾನಾಯಕನಾದ ಸಿದ್ಧರಾಮನು ಜನಿಸಿದನು.

**ಸಿದ್ಧರಾಮನ ಧಾರ್ಮಿಕ ಜೀವನ :—** ಸಿದ್ಧರಾಮನು ಯೋಗ್ಯ ಕಾಲದಲ್ಲಿ ಬಸವೇಶ್ವರರ ಶಿಷ್ಯರಾದ ಚನ್ನಬಸವರಿಂದ ಲಿಂಗದೀಕ್ಷೆಯನ್ನು ಹೊಂದಿ ತತ್ತ್ವೋಪದೇಶವನ್ನು ಪಡೆದನು. ಹಾಗೂ ಮುಂದೆ ಅನೇಕ ಬಗೆಯಾಗಿ, ವೀರ-ಶೈವ ಧರ್ಮದ ಗ್ರಂಥಗಳನ್ನು ಅಭ್ಯಾಸಿಸಿ ಉತ್ತಮವಾದ ಜ್ಞಾನವನ್ನೂ, ಪರಮ ವೈರಾಗ್ಯವನ್ನೂ ಪಡೆದನು. ಜನ ಸಾಮಾನ್ಯರಲ್ಲಿ ಧರ್ಮದ ಭಾವನೆಯು ಹೆ-ಚ್ಚಾಗಿ ಅಂಕುರಿಸಲೆಂದು ಸಿದ್ಧರಾಮನು ಸೊನ್ನಲಿಗೆಯಲ್ಲಿಯೂ ಹಾಗೂ ಬೇರೆ ಅನೇಕ ಸ್ಥಳಗಳಲ್ಲಿಯೂ, ಲಿಂಗಗಳನ್ನು ಪ್ರತಿಷ್ಠೆ ಮಾಡಿದನು. ಈ ಬಗೆಯಾಗಿ ಧರ್ಮ ಪ್ರಸಾರಣೆಯ ಕಾರ್ಯವನ್ನು ಕೈಕೊಂಡು ಲೋಕಾರಾಧನೆ ಮಾಡುತ್ತ ಕಾಲವನ್ನು ಕಳೆಯುತ್ತಿರಲು, ಒಂದು ಸಮಯ ವಿದ್ಯಾಸಮುದ್ರನೆಂಬ ಬಿರುದು ಪಡೆದ ಕರ್ಪರನೆಂಬ ಜೋಗಿಯು, ಸಿದ್ಧರಾಮನ ಕೂಡ ವಾದಮಾಡಲು ಅಣಿ-ಯಾದನು. ಆಗ ಸಿದ್ಧರಾಮನು ಸ್ವಲ್ಪವೂ ಹೆದರದೆ, ತನ್ನಲ್ಲಿಯ ಅಗಾಧವಾದ ಜ್ಞಾನದಿಂದ ಕರ್ಪರನನ್ನು ವಾದದಲ್ಲಿ ಪೂರ್ಣವಾಗಿ ಸೋಲಿಸಿಬಿಟ್ಟನು. ಮುಂದೆ ಕರ್ಪರನು ಪರಮ ದುಃಖಿತನಾಗಿ ಸಿದ್ಧರಾಮನಿಗೆ ಜಯಪತ್ರವನ್ನು ಬರೆದುಕೊಟ್ಟು ಹೊರಟು ಹೋದನು.

**ಸಿದ್ಧರಾಮನ ಸಾಹಿತ್ಯಸೇವೆ :—** ಸಿದ್ಧರಾಮನು ವಚನ ಗ್ರಂಥಗಳನ್ನೂ ಮಿಶ್ರಸ್ತೋತ್ರ-ತ್ರಿವಿಧಿ, ಬಸವಸ್ತೋತ್ರ-ತ್ರಿವಿಧಿ, ಕಾಲಜ್ಞಾನ, ಮಂತ್ರಗೋಪ್ಯ ಮುಂತಾದ ಗ್ರಂಥಗಳನ್ನೂ ಬರೆದಿದ್ದಾನೆ. ಅವುಗಳಲ್ಲಿಯ ಸೊಬಗನ್ನಷ್ಟು ನೋ-ಡುವಾ; ನಡೆಯಿರಿನ್ನು! ವಾಚಕರೇ, ಧಾರ್ಮಿಕ ಗ್ರಂಥಗಳಲ್ಲಿ ಸೊಬಗೇನಿರುವ ದೆಂದು ನೀವು ಯೋಚಿಸುತ್ತಿರಬಹುದು. ಆದರೆ ಅಂತರ್ಜ್ಞಾನಿಗಳಾದ ಶಿವಶರಣರ

ವಾಣಿಯು ಪ್ರಾಸಾದಿಕವಾದುದು. ಅವರ ಗ್ರಂಥಗಳಲ್ಲಿ ಸಾಹಿತ್ಯದ ಅನೇಕ ರಸ-ಗಳಿಂದ ಕೂಡಿದ ವಾಙ್ಮಯವು ತಾನಾಗಿಯೇ ಬಂದು ಸೇರಿಹೋಗಿದೆ. ಅದು ಕಾರಣವೇ ಇಂದಿನ ಪ್ರಗತಿಯ ಕಾಲದಲ್ಲಿ ಕೂಡ ಅವುಗಳಿಗೆ ಅತಿ ಮಹತ್ವವು ಬಂದಿರುವದು.

**ವಚನಗಳು :—** ಸಿದ್ಧರಾಮನು ಅನೇಕ ವಚನಗಳನ್ನು ರಚಿಸಿ ವೀರಶೈವ ಧರ್ಮದ ತತ್ವಗಳನ್ನು ಜನಗಳಿಗೆ ತಿಳುಹಿಸಿ ಕೊಟ್ಟಿರುವನು. ವಚನಗಳ ಕೊ-ನೆಯಲ್ಲಿ 'ಕಪಿಲಸಿದ್ಧಮಲ್ಲಿಕಾರ್ಜುನ' ಎಂಬ ಅಂಕಿತವು ಕಂಡುಬರುವದು. ಸಿದ್ಧರಾಮನ ವಿಷಯವಾಗಿ ಒಳ್ಳೇ ಮಹತ್ವವಾದ ಶಾಸನಗಳೆರಡು ಸೊರಬದಲ್ಲಿ ದೊರ-ಕಿದ ಬಗ್ಗೆ ಕವಿಚರಿತಕಾರರು, ತಮ್ಮ ಕವಿಚರಿತೆಯ ೧ ನೇ ಸಂಪುಟದ ೧೮೫ ನೇ ಪುಟದಲ್ಲಿ ಉಲ್ಲೇಖಿಸಿರುತ್ತಾನೆ. ಶಾಸನಗಳೆರಡೂ ವಚನರೂಪದಲ್ಲಿವೆ. ಅವುಗಳಲ್ಲಿ "ಶ್ರೀಶೈಲ ಕ್ಷೇತ್ರಕ್ಕೆ ಸಮಾನವಾದ ಸೊನ್ನಲಿಗೆಯಲ್ಲಿ 'ಕಪಿಲಸಿದ್ಧ ಮಲ್ಲಿಕಾರ್ಜುನ' ದೇವಸ್ಥಾನಕ್ಕೆ ಬೀರರಸನೆಂಬ ಧೊರೆಯು ದಾನಕೊಟ್ಟ ಸಂಗತಿಯ ವಿವರವಿದೆ.

ಇನ್ನು ಕೆಲವು ಮಹತ್ವದ ವಚನಗಳನ್ನು ವಾಚಕರಿಗಾಗಿ ಇಲ್ಲಿ ಕೊಡುವೆವು.

"ಸಂಸಾರವೆಂಬ ಸರ್ಪನ ಅಣಲೊಳಗಿಹೆನಯ್ಯಾ |
ಆವಾಗ ನುಂಗೀತೆಂಬದರಿಯೆ |
ಆವಾಗ ಉಗಳೀತೆಂಬದರಿಯೆ |
ಅದರ ಬಾಯಿಯಿಂದೆನ್ನ ತೆಗೆದು ಕಾಯಯ್ಯಾ |
ಕಪಿಲ ಸಿದ್ಧಮಲ್ಲಿಕಾರ್ಜುನಾ"

ಅಹಹಾ! ಎಂತಹ ನೈಜವಾದ ದೃಷ್ಟಾಂತವನ್ನು ಸಂಸಾರವೆಂಬ ಘೋರ-ವಾದ ಪಿಶಾಚಿಗೆ ಹೋಲಿಸಿರುವನು. ಸಿದ್ಧರಾಮನು ಕನ್ನಡ ಅಲಂಕಾರ ಶಾಸ್ತ್ರದಲ್ಲಿ ಒಳ್ಳೇ ನಿಷ್ಣಾತನಾಗಿದ್ದನೆಂಬದಕ್ಕೆ ಅವನ ವಚನಗಳೇ ಸಾಕ್ಷಿ! ಹರನ ಕರುಣದಿ, ಧರೆಯೊಳಗೆ ಜನಿಸಿ ಬಂದ ಪರಮ ಭಕುತನ, ಹೃದಯದಿಂದ ಹೊರಹೊಮ್ಮಿದ ವರಕವಿಯ ಪ್ರಾಸಾದಿಕ ವಾಣಿಯಿದು! ಪಾಮರರಾದ ನಮ್ಮಗಳಿಗೆ ಅದರೊಳಗಿನ ಗೂಢವು ತಿಳಿಯುವ ಬಗೆಯೆಂತು?

"ಧರೆಯ ದೆಸೆವಳಯವೆಲ್ಲ ತನಗಾದಡಂ ನಿಲ್ಲಳು |
ಎನಿತು ತ್ರಿಭುವನ ರಾಜ್ಯ ಪದಂಗಳು ತನಗಾದಡಂ ನಿಲ್ಲಳು
ಅನಿತರೊಳು ತೃಪ್ತಿ ಪಡೆಯಳು ||
ಈ ಆಶೆಯಿಂದಲೆ ನಿಮ್ಮೆಡೆಗಾಣದಿರ್ಪೆ

ಈ ಆಶೆಯೆಂಬ ಪಾತಕಿಯನೆಂದಿಗೆ ನೀಗಿ |
ನಿಮ್ಮನೊಡಗೂಡಿ ಬೇರಾಗದೆಂದಿರ್ಪೆನೋ |
ಕಪಿಲ ಸಿದ್ಧಮಲ್ಲಿಕಾರ್ಜುನಾ " ||

ಆಶೆಯೆಂಬ ಕೃತಘ್ನಳಾದ ವೇಶ್ಯೆಯ ಹೃದಯವನ್ನು ಎಷ್ಟು ಒಳ್ಳೇ ರೀತಿಯಿಂದ ಚಿತ್ರಿಸಿರುವನು. ನೋಡಿದಿರಾ! ಶಿವನೊಂದಿಗೆ ಐಕ್ಯವಾಗುವದಕ್ಕೆ ಜೀವಾತ್ಮನಿಗೆ ಈ ಆಶೆಯೆಂಬ ನೀಚಳಾದ ಸ್ತ್ರೀಯೇ ಹೇಗೆ ಅನೇಕ ವಿಧವಾಗಿ ಪ್ರತಿಭಂಧಿಸುವಳೆಂಬ ತತ್ವವನ್ನು ನಮ್ಮ ಕವಿಶಿದ್ಧರಾಮನು ಎಷ್ಟು ಮನೋಹರವಾಗಿ ಹೇಳಿರುವನು! ಇಂತಹ ವಚನಗಳು ಸಾಹಿತ್ಯದ ದೃಷ್ಟಿಯಿಂದ, ಎಷ್ಟು ಬೆಲೆಯುಳ್ಳವಾಗಿರುತ್ತವೆಂಬದನ್ನು ಹೇಳಲು ಸಾಧ್ಯವಿಲ್ಲ.

**ಮಿಶ್ರಸ್ತೋತ್ರ ವಿಧಿ :—** ಶಿಧ್ಧರಾಮಕವಿ ವಿರಚಿತವಾದ ಇದೊಂದು ಪದ್ಯ ಗ್ರಂಥವು. ಪರಶಿವನನ್ನು ಅನೇಕ ಬಗೆಯಾಗಿ ವರ್ಣಿಸುವ ಹಾಗು ಅವನ ಚರಣದಲ್ಲಿ ಅನೇಕ ವಿಧವಾಗಿ ಪ್ರಾರ್ಥಿಸುವ, ಅಂದವಾದ ಪದ್ಯಗಳಿಂದ ಕೂಡಿದ್ದಾಗಿದೆ. ಇದರಲ್ಲಿ ಸುಮಾರು ಒಂದುನೂರು ಪದ್ಯಗಳಿವೆ. ಅವುಗಳಲ್ಲಿ ಒಂದೆರಡನ್ನು ವಾಚಕರಿಗಾಗಿ ಇದರಲ್ಲಿ ಕೊಡಲಾಗಿದೆ.

" ಇಹ ಪರದ ಪರಿಯನು ಅಯ್ಯ ನೀನೆ ಬಲ್ಲೆ |
ನಿಮ್ಮ ಶರಣನು ಬಲ್ಲ ಪ್ರಭುರಾಯನು |
ಆತನನುಮತದಿಂದ ಮಾಯೆಯನು ಗೆಲುವುದನು |
ನೀನೆಗೆ ಕಲಿಸುವದು ಯೋಗಿನಾಥಾ " ||

ವೀರಶೈವ ಮತದಲ್ಲಿ ಯೋಗ್ಯರಾದ ಜಂಗಮರಿಗೆ, ಅಂದರೆ ಪರಶಿವನ ನಿಜವಾದ ಶರಣರಿಗೆ ಧಾರ್ಮಿಕದೃಷ್ಟಿಯಿಂದ ಎಷ್ಟು ಮಹತಿಯಿದೆ ಎಂಬುದು ಮೇಲಿನ ಪದ್ಯದಿಂದ ಚನ್ನಾಗಿ ವ್ಯಕ್ತವಾಗುತ್ತದೆ. ಶಿದ್ಧರಾಮ ಕವಿಯ ಪದ್ಯಗಳಲ್ಲಿ ಎಂತಹ ಪದಲಾಲಿತ್ಯವೂ, ಅರ್ಥ ಗಾಂಭೀರ್ಯವೂ ಎಂಬುದನ್ನು ಕೆಳಗಿನ ಅವನದೊಂದು ಪದ್ಯದಿಂದ ಕನ್ನಡನುಡಿಯ ಅಭ್ಯಾಸಿಗರಿಗೆ ಸಹಜವಾಗಿ ಕಂಡು ಬರಬಹುದು.

" ಚನ್ನೆಯರ ಬಲೆಯಲ್ಲಿ ಎನ್ನನಿರಿಸಿದೆ ಪ್ರಭುವೆ |
ಇನ್ನಿದಕೆ ಭಾವಜನು ಬೇಂಟೆಗಾರ |
ಕುನ್ನಿಗಳು ತಾವೈದು ಎನ್ನ ಗ್ರಹಿಸದ ಮುನ್ನ |
ಚಿನ್ಮಯ ಪ್ರಭು ಸಲಹೊ ಯೋಗಿನಾಥಾ " ||

ಮಾನವ ಪ್ರಾಣಿಗಳಿಗೆ ಶಿವಸಾಯುಜ್ಯವನ್ನು ಪಡೆಯಲು ಅಥವಾ ಮುಕುತಿ ಮಾರ್ಗವನ್ನು ಕಂಡುಕೊಳ್ಳಲು ಪಂಚೇಂದ್ರಿಯ ರೂಪಿಗಳಾದ ಶತ್ರುಗಳು ಹೇಗೆ ಅಡ್ಡೈಸುವರೆಂಬ ಮಾತು ಎಲ್ಲರಿಗೂ ಅನುಭವದಿಂದ ತಿಳಿಯುವ ವಿಷಯವಾಗಿದೆ. ಅಂತಹ ಆ ವೈರಿಗಳು ನನ್ನನ್ನು ಗ್ರಾಸಿಸಿದ ಮೊದಲು, ಅನುಗ್ರಹಿಸಿ ನಿನ್ನ ಚರಣಗಳನ್ನು ದಯಪಾಲಿಸು ಎಂಬದಾಗಿ ಆ ಪರಶಿವನನ್ನು ನಮ್ಮ ಕವಿ ಶಿದ್ಧರಾಮನು ಎಷ್ಟು ಅನನ್ಯಗತಿಕನಾಗಿ ಬೇಡಿದ ಪರಿಯನ್ನು ನೋಡಿ! ಅವನ ಆ ಭಾಷೆಯಲ್ಲಿ ತುಂಬಾ ಜೀವಕಳೆಯಿದೆ; ಒಂದು ತರಹದ ದಿವ್ಯ ಶಕ್ತಿಯಿದೆ. ಆದುದರಿಂದಲ್ಲವೇ ಅವನು ಘನಪಾದ ಶರಣ! ವೀರಶೈವ ಜನದಾಭರಣ! ಸುಜನ ಮನೋಹರ ಕರುಣ !!

**ಬಸವಸ್ತೋತ್ರ ವಿಧಿ :—** ಇದಾದರೂ ಒಂದು ಪದ್ಯಗ್ರಂಥವೇ. ಆರಂಭದಲ್ಲಿ ಬಸವಾದಿ ಶಿವಶರಣರ ಸ್ತುತಿಪರವಾದ ಪದ್ಯಗಳಿವೆ. ಒಟ್ಟರೆ ಈ ಗ್ರಂಥದಲ್ಲಿ ಒಂದುನೂರು ಇಪ್ಪತ್ತೈದು ಪದ್ಯಗಳಿವೆ. ಲೋಕಕಲ್ಯಾಣದ ಮಹತ್ಕಾರ್ಯವನ್ನು ಮಾಡಿದ ಮಹಾನುಭಾವರಾದ ಶ್ರೀ ಬಸವಣ್ಣನವರ ತತ್ವಗಳನ್ನೂ ಮತ್ತು ಅವುಗಳನ್ನಾಚರಿಸಲು ಹೇಳಿದ ಸುಗಮವಾದ ಸಾಧನಗಳನ್ನೂ ಒಳಗೊಂಡ ವಿಷಯವೇ ಈ ಗ್ರಂಥದಲ್ಲಿ ಅಡಕವಾಗಿದೆ. ಮಾದರಿಗಾಗಿ ಅದರಲ್ಲಿಯ ಒಂದೆರಡು ಪದ್ಯಗಳನ್ನು ಇದರಡಿಯಲ್ಲಿ ಕೊಟ್ಟಿವೆ.

" ಹನ್ನೆರಡು ಮನೆಯೊಳಗೆ ಹದಿನಾರನಿರಿಸಿದನು |
ಉನ್ನಂತ ಶರಧಿಯನು ದಾಂಟಿಸಿಂದ ।
ಇನ್ನು ನಿರ್ಮಲವಾದ ಕಳೆಮಳೆಯನೊಳಗೊಂಡ |
ಚಿನ್ಮೂರ್ತಿ ಬಸವನ್ನೈ ಯೋಗಿನಾಥಾ " ||

ಮೇಲಿನ ಪದ್ಯದಲ್ಲಿಯ ವಿಷಯವು ತಿಳಿಗನ್ನಡದಲ್ಲಿದ್ದರೂ ಅದರಲ್ಲಿಯ ತತ್ವವು ಎಷ್ಟು ಗಹನವಾಗಿದೆ ನೋಡಿ! ತುಸು ಮಾತಿನಲ್ಲಿ ಬಹಳ ಹೇಳುವ ಈ ವೀರಶೈವ ಕವಿಗಳ ಕನ್ನಡದ ಶೈಲಿಯು ಅತ್ಯಂತ ಅಭಿನಂದನೀಯವಾಗಿದೆ. ಅಂತೇ ಅವರಿಗೆ ಸಾಹಿತ್ಯದಲ್ಲಿ ಮೇಲಿನ ಸ್ಥಾನವು ದೊರೆತದ್ದು.

" ಲೋಕಲೋಕವನೆಲ್ಲ ಲೋಕಿಸದೆ ನಿಂದಲ್ಲಿ |
ಬೇಕು ಮಾಡಿದನೆನ್ನ ಬಸವಲಿಂಗ |
ಮುಕುಟ ಮಂಡಲದಲ್ಲಿ ಮನೆಗಟ್ಟಿ ನಿಂದವನು |
ಅಕಳಂಕ ಬಸವನ್ನೈ ಯೋಗಿನಾಥಾ " ||

ಸಾಧಾರಣವಾಗಿ ಈ ಪದ್ಯದಿಂದ ಕವಿಸಿದ್ಧರಾಮನು ಬಸವೇಶ್ವರರ ಮಹಿಮೆಯನ್ನೂ ಅವರಲ್ಲಿಯ ಕರ್ತೃತ್ವ ಶಕ್ತಿಯನ್ನೂ ಎರಡೇ ಎರಡು ಸಾಲುಗಳಲ್ಲಿ ವಿಶದವಾಗಿ ಹೇಳಲೆತ್ನಿಸಿರುವನು. ಈ ತೆರನಾದ ಅವನ ರೀತಿಯು ಪಾಮರರಾದ ಅನ್ಯರಿಗೆ ಸಾಧ್ಯವಾಗುವ ಬಗೆಯೆಂತು ? ಇನ್ನು ಪದ್ಯಗಳಲ್ಲಿ ಪ್ರಾಸಬದ್ಧತೆಗೂ, ಪದಲಾಲಿತ್ಯಕ್ಕೂ ಕಡಿಮೆ ಇಲ್ಲ. ಧಾರ್ಮಿಕ ಜೀವಿಗಳಾದ ಇವರಲ್ಲಿ ಕನ್ನಡ ಭಾಷಾಪರಿಜ್ಞಾನವು ಎಷ್ಟು ಉಚ್ಚತರಗತಿಯದಾಗಿತ್ತೆಂಬದು ಕಂಡುಬರುವಂತಿದೆ.

**ಅಷ್ಟಾವರಣ ಸ್ತೋತ್ರ ವಿಧಿ :—** ಪದ್ಯರೂಪವಾದ ಈ ಗ್ರಂಥದಲ್ಲಿ ಒಟ್ಟಾರೆ ಒಂದುನೂರು ನಾಲ್ವತ್ತುನಾಲ್ಕು ಪದ್ಯಗಳು ಇವೆ. ಈ ಗ್ರಂಥದಲ್ಲಿ ವಿಶೇಷವಾಗಿ ವೀರಶೈವ ಧರ್ಮದ ಆಚಾರ, ಪದ್ಧತಿ ಮುಂತಾದ ವಿಷಯಗಳ ವಿವೇಚನೆಯಿದೆ. ಸಾಧಾರಣವಾಗಿ ಬಸವಣ್ಣನವರಿಂದ ಬೋಧಿಸಲ್ಪಟ್ಟ ಗುರು. ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ, ಪ್ರಸಾದ, ಪಾದೋದಕ ಈ ವಿಷಯಗಳ ಮಹತಿಯನ್ನೇ ಗ್ರಂಥದಲ್ಲಿ ಹೇಳಲಾಗಿದೆ. ಇಂತಹ ಗುರುಲಿಂಗ ಜಂಗಮರ ಚರಣದಾಸನಾದ ತಾನು ಎಂತಹನೆಂಬದನ್ನು ನಮ್ಮ ಕವಿಶಿದ್ಧರಾಮನು ತನ್ನ ಅಷ್ಟಾವರಣದಲ್ಲಿ—

“ ಶಿವಭಕ್ತಿ ಶರಧಿಯಲಿ ನೆಲೆಗೊಳಿಸಿದಾತ ಗುರು |
ಪರಕಿಸೆಯ ಭವವ ಹರಿದಾತ ಗುರುವೈ |
ಶ್ರೀಗುರುವೆ ಎಂಬ ನಾಮಾಕ್ಷರ ತ್ರಯದಲ್ಲಿ |
ಆನು ಪ್ರಜ್ವಲಿತನೈ ಯೋಗಿನಾಥಾ ” ||

ಮೇಲಿನ ಪದ್ಯದಲ್ಲಿ ಶಿದ್ಧರಾಮನು ಹೇಳಿರುವ ಗುರುವಿನ ಮಹತಿಯ ಬಗೆಯನ್ನಷ್ಟು ನಿರೀಕ್ಷಿಸಿರಿ ! ಪರಶಿವನ ಭಕ್ತಿಯೆಂಬ ಮಡುವಿನಲ್ಲಿ ಧುಮುಕಿ ಈಜಾಡುವನೊಬ್ಬ ಗುರು. ಸಂಸಾರ ರೂಪವಾದ ಭಯಂಕರವಾದ ಪಾಶವನ್ನು ಹರಿದೊಗೆಯುವನೊಬ್ಬ ಗುರು ! ಶುದ್ಧವಾದ ಆಚರಣೆಯಿಂದ ಜನರ ಮನವನ್ನು ತನ್ನಕಡೆಗೆ ಆಕರ್ಷಿಸುವನೊಬ್ಬನೇ ನಿಜವಾದ ಗುರುವು. ಎಂಬನಾಗಿ ಶಿದ್ಧರಾಮನ ಅಭಿಪ್ರಾಯ. ಇಂತಹ ಗುರುರೂಪನಾದ ಪರಶಿವನ ನಾಮಮಂತ್ರ ವೆಂಬ ಅಗ್ನಿಯಿಂದ ಶುದ್ಧನಾದವನೇ ನಿಜವಾದ ಶರಣ. ಈ ತೆರನಾದ ಗುರುವಿನ ಮಹತಿಯನ್ನು ಅರಿತುಕೊಂಡುದಕ್ಕಾಗಿಯೇ ತನಗೆ ವಿಶೇಷವಾದ ಜ್ಞಾನ, ಭಕ್ತಿ, ವಿರಕ್ತಿ ಮುಂತಾದವು ದೊರೆತಿವೆಯೆಂಬದನ್ನು ಹೇಳುವದೇ ನಮ್ಮ ಕವಿಶಿದ್ಧರಾಮನ ಮನೀಷೆ,

ಅಂಕಿತವನ್ನ ಹಾಕಿಕೊಂಡಿರುವನು. ಮೊದಲನೆ ಗ್ರಂಥದಲ್ಲಿ ತನ್ನ ಆದಿದೈಹವಾದ ಸೊನ್ನಲಿಗೆಯ ಸಿದ್ಧರಾಮೇಶ್ವರನಲ್ಲಿರುವ ಪೂಜ್ಯಭಾವವನ್ನು ವ್ಯಕ್ತಪಡಿಸಿರುವನು. ಉಳಿದ ಗ್ರಂಥಗಳಲ್ಲಿ "ಯೋಗಿನಾಥ" ಎಂಬ ಗೌರವದ ಬಿರುದನ್ನು ತನ್ನ ಗುರುವಾದ ಚನ್ನಬಸವಾರ್ಯನಲ್ಲಿ ಅತಿಶಯವಾದ ಭಕ್ತಿಭಾವವನ್ನು ದರ್ಶಿಸುವದಕ್ಕಾಗಿ ಕೊಟ್ಟು ಅದನ್ನು ತನ್ನ ಅಂಕಿತವನ್ನಾಗಿ ಇಟ್ಟುಕೊಂಡಿರುವನು.

---

"ಕನ್ನಡ ವಾಙ್ಮಯದಲ್ಲಿ ವೀರಶೈವರ ಮಹತಿ"

ಎಂಬ ಶಿರೋಲೇಖದಕೆಳಗೆ ಬರೆಯುವ ವಿಷಯದಲ್ಲಿ ಸೊನ್ನಲಿಗೆಯ ಸಿದ್ಧರಾಮೇಶ್ವರನ ಚರಿತ್ರೆಯು ಅಡಕವಾಗಿದೆ. ಸದರೀ ಶ್ರೀ ಸಿದ್ಧರಾಮೇಶ್ವರ ಚರಿತ್ರೆಯನ್ನು ಬರೆಯುವದಕ್ಕೆ ಕವಿಚರಿತೆ, ಸಿದ್ಧರಾಮೇಶ್ವರ ಪುರಾಣ ಮುಂತಾದ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು ಬರೆಯಲಾಗಿದೆ. ಆಬಗ್ಗೆ ನಾನು ಕವಿಚರಿತೆ ಕಾರರಿಗೂ ಹಾಗು ನನಗೆ ಸಿದ್ಧರಾಮೇಶ್ವರಪುರಾಣ ಕೈಬರಹದ ಪ್ರತಿಯನ್ನು ಕೊಟ್ಟ ನನ್ನ ಸ್ನೇಹಿತರಿಗೂ ತುಂಬಾ ಋಣಿಯಾಗಿದ್ದೇನೆ.

ರಾ. ಬಾ. ಬಾಳೇಹೊಸೂರ,
ಶಿರಹಟ್ಟಿ.

---

# ಎದುರು ನೋಡಿರಿ!

ಚಂದ್ರಿಕೆಯ ಈ ಮುಂದಿನ ಸಂಚಿಕೆಗಳಲ್ಲಿ ಪ್ರಕಟಸಲ್ಪಡುವ ಸಾಂಗಲಿ ಸಂಸ್ಥಾನದ ಇತಿಹಾಸದಿಂದ ಅಡಕವಾಗಿರುವ "ಪಟವರ್ಧನ" ವೆಂಬ ಅತಿಮನೋಹರವಾದ ಚಿಕ್ಕ ನಾಟಕದ ವಿಷಯವನ್ನು.

ನಾಟಕ ಕರ್ತರು:— ಬಾಲೇಹೊಸೂರ ರಾಮರಾಯರು,
ಶಿರಹಟ್ಟಿ.

# ಸ್ವಾರ್ಥತ್ಯಾಗ.

ಕಥೆಗಾರ:- ಶ್ರೀ. ವೆಂಕಟರಾವ ಫಡಣೀಸ, ಶಿರಹಟ್ಟಿ.

"ಸುಖವು ಇಚ್ಛಾಪೂರ್ತಿಯ ಆಭಾಸದಲ್ಲಿಲ್ಲ,
ಸ್ವಾರ್ಥತ್ಯಾಗದ ದಿವ್ಯ ಭಾವನೆಯಲ್ಲಿ ಉಂಟು."

೧

ಮಾಧವರಾಯರು ನನ್ನ ಸರ್ವಸ್ವದ ಸರ್ವೇಶ್ವರರು. ನನ್ನ ಪ್ರೇಮದ ಆರಾಧ್ಯದೇವತೆಯವರು. ಪ್ರೇಮದ ದಿವ್ಯಶಕ್ತಿಯಿಂದ ನಮ್ಮಿಬ್ಬರ ಜೀವವು ಏಕರಸವಾಗಿದ್ದಿತು. ನಾನು ಹದಿನೈದು ವರುಷದವಳಿದ್ದಾಗ ತಾಯಿಯು ನನ್ನನ್ನೂ ನನ್ನ ತಂಗಿಯನ್ನೂ ಈ ಜಗತ್ತೆಂಬ ಬೈಲಲ್ಲಿ ಬಿಟ್ಟುಕೊಟ್ಟು ಸ್ವರ್ಗಕ್ಕೆ ಹೊರಟು ಹೋದಳು. ಆಗ ನಾನು ಬಹುದುಃಖಪಟ್ಟೆನು. ಅನಾಥರಾದ ನಮ್ಮನ್ನು ರಕ್ಷಿಸುವವರಾರೆಂದು? ಮುಂದೆ ಕೆಲದಿನಗಳಮೇಲೆ ಮಾಧವರಾಯರು ನನ್ನನ್ನು ಲಗ್ನವಾದರು. ಇವರು ಸರಕಾರಿ ಆಫೀಸಿನಲ್ಲಿ ಕಾರಕೂನರಿದ್ದರು. ತಿಂಗಳಿಗೆ ನಾಲ್ವತ್ತು ರೂಪಾಯಿ ಸಂಬಳ. ಹಿರಿಯರು ಮಾಡಿಟ್ಟ ಆಸ್ತಿ-ಪಾಸ್ತಿಗಳೇನೂ ಇರಲಿಲ್ಲ ಅವರಿಗೆ. ನಾವಿರುವ ಊರು ಗದಗು. ಶಹರದಲ್ಲಿ ಇಷ್ಟು ಸಣ್ಣ ಸಂಬಳದಲ್ಲಿ ಸಂಸಾರ ಸಾಗಿಸುವದು ಬಲು ಜಡವಾಗುತ್ತಿದೆ. ಆದರೂ ಬಡತನದ ಸಂಸಾರದಲ್ಲಿ ನಾವು ಸುಖದಿಂದ ಕಾಲಕಳೆಯುತ್ತಲಿದ್ದೆವು, ನನ್ನ ತಂಗಿಯ ಸಂರಕ್ಷಣೆಯ ಭಾರವೊಂದು ನನ್ನಮೇಲಿತ್ತು. ಅವಳಿಗಾಗಲೇ ಹನ್ನೆರಡು-ಹದಿಮೂರು ವರುಷಗಳಾಗಿದ್ದವು. ಮಾಲತಿಯ ಲಕ್ಷವೆಲ್ಲ ಓದು-ಬರಹದ ಕಡೆಗೆ. ಅವಳು ಸುಶಿಕ್ಷಿತಳಾಗಬೇಕೆಂದು— ಸುಧಾರಿಸಿದವಳಾಗಬೇಕೆಂದು ನನ್ನ ಬಲವಾದ ಆಶೆ! ಅಂತೇ ನಾನು ಅವಳನ್ನು ಧಾರವಾಡದ ವನಿತಾ ವಿದ್ಯಾಲಯಕ್ಕೆ ಕಳುಹಿಸಿದೆನು. ಅವಳ ಖರ್ಚಿಗಾಗಿ ನಾನು ತಿಂಗತಿಂಗಳಿಗೆ ರೂಪಾಯಿಗಳನ್ನು ಸಹ ಕಳಿಸಿಕೊಡುತ್ತಲಿದ್ದೆ ಇಲ್ಲಿಂದ. ಮಾಲತಿಯು ಮೂರು-ನಾಲ್ಕು ವರುಷ ಇಲ್ಲಿಗೆ ಬಾರಲೇ ಇಲ್ಲ. ಕ್ಷೇಮ ಸಮಾಚಾರದ ಓಲೆಗಳನ್ನು ಮಾತ್ರ ಬರೆಯದೆ ಇರುತ್ತಿರಲಿಲ್ಲ ಅವಳು. ಪ್ರೇಮ! ಶುದ್ಧಪ್ರೇಮವಿದ್ದಲ್ಲಿ ಸುಖಶಾಂತಿಗಳು ನೆಲೆಗೊಂಡಿರುವವು. ಎಂಬ ಮಾತು ಸುಳ್ಳಲ್ಲ. ಈ ಪವಿತ್ರಪ್ರೇಮವೇ ನಮ್ಮ ಸಂಸಾರವನ್ನು ಸ್ವರ್ಗಸುಖದ ಮಾರ್ಗಕ್ಕೆ ಹಚ್ಚಿತ್ತು. ಈ ಮೂರು-ನಾಲ್ಕು ವರುಷಗಳು ಬಹು ಸೌಖ್ಯದಿಂದ

ಯಿಂದ ಇಷ್ಟೆಲ್ಲ ಕ್ರಾಂತಿಯುಂಟಾಗಿದೆ ನಮ್ಮ ದೇಶಗಲ್ಲಿ! ಮಾಲತಿಗೆ ಆಗಲೇ ಹೇಳಬೇಕೆಂದು ಮಾಡಿದ್ದೆನು. ಈ ತರಹದ ರೀತಿ ಒಳಿತಲ್ಲವೆಂದು. ಆದರೆ ಅವಳ ಮನಕೆ ದುಃಖವಾದೀತೆಂದು ನಾನೇ ಸುಮ್ಮನಿರಬೇಕಾಯಿತು. ತೋಟಕ್ಕೆ ಬಂದು ಮುಟ್ಟಿದೆವು. ಆ ಸುಂದರ ವನಶ್ರೀಯಿಂದ ಮನಕೆ ಆನಂದವಾಗುತ್ತಲಿದ್ದರೂ ನನಗೇಕೋ ಇಂದು ಒಂದು ತರಹವಾಗುತ್ತಲಿತ್ತು ಒಂದು ವಿಸ್ತೀರ್ಣವಾದ ವೃಕ್ಷದ ನೆರಳಲ್ಲಿ ನಮ್ಮ ಸಾಮಾನುಗಳನ್ನು ಇಳಿಸಿಕೊಂಡೆವು. ಹಿಡಿಸಲಾರದ ಆನಂದ ನನ್ನ ತಂಗಿಗೆ ಅಂದು! ಅದೆನೋ ಆನಂದದ ದಿವಸ ಅಂದು. ಆದರೆ ನನ್ನ ದಾರುಣಯಾತನೆಯನ್ನು ನನ್ನಂತೆಯೇ ಅನುಭವಿಸಿದ ಅಬಲೆಯರೆ ಬಲ್ಲರೆ ಹೊರತು, ಬೇರೆಯವರಿಗೆ ತಿಳಿಯಲಸಾಧ್ಯ! ಅಂದಿನಿಂದ— ಆ ವನಭೋಜನದ ದಿವಸದಿಂದ ನನ್ನ ಮನವು ಬಹಳೇ ಉದ್ವಿಗ್ನವಾಯಿತು! ಪ್ರೇಮದಿಂದ ಸಾಕಿ ಸಲುಹಿದ ನನ್ನ ತಂಗಿಯೇ ನನ್ನ ಅಂತರ್ಯ ಪ್ರೇಮಪಾಶಕ್ಕೆ ಕಲ್ಲು ಹೊಡೆಯಲು ಸಿದ್ಧಳಾದಳೆ? ಹಾಯ್! ಹಾಯ್! ಏನು ಮಾಡುವದು? ಉಂಡರೆ ಸಮಾಧಾನವಿಲ್ಲ! ಉಟ್ಟರೆ ಸಮಾಧಾನವಿಲ್ಲ! ಕುಳಿತರೆ ಸಮಾಧಾನವಿಲ್ಲ! ಮಲಗಿದರೆ ಸಮಾಧಾನವಿಲ್ಲ! ಒಂದು ದಿವಸ ಮಧ್ಯಾಹ್ನದಮೇಲೆ ವೀರನಾರಾಯಣ ದೇವರ ಗುಡಿಯಲ್ಲಿ ಪುರಾಣವಾಗುವದೆಂಬದನ್ನು ಕೇಳಿ ಅಲ್ಲಿಗಾದರೂ ಹೋದರೆ ಮನಸ್ಸು ಸಮಾಧಾನವಾಗಬಹುದೆಂದು ಹೋದೆನು. ಆದರೆ ಹೃದಯಾಂತರಾಳವು ಸುಡಹತ್ತಿದಾಗ ಸಮಾಧಾನವೆಲ್ಲಿಂದ ಬರಬೇಕು? ಅಲ್ಲಿ ತುಸು ಹೊತ್ತು ಕುಳಿತಂತೆ ಮಾಡಿ ಎದ್ದು ಮನೆಗೆ ಹೊರಟೆನು. ನಾನು ಬರುವದರೊಳಗಾಗಿಯೇ ನನ್ನೆದುರಿಗೊಂದು ಭಯಂಕರ ದೃಶ್ಯವು ಆ ಎಂದು ಬಾಯಿ ತೆರೆದು ಕುಳಿತು ಮಾರ್ಗಪ್ರತೀಕ್ಷಿಸುತ್ತಿರುವದನ್ನು ನಾನೇನು ಬಲ್ಲೆ? ಮನೆಗೆ ಬಂದೆನು. ಬಾಗಿಲು ಮುಂದಕ್ಕೆ ಮಾಡಿತ್ತು. ಆಗ ನನ್ನ ಮನಸ್ಸಿಗೆ ಚೇಳು ಕಡಿದಂತಾಯಿತು. ಬಾಗಿಲವನ್ನು ದೂಡಿ ಒಳಗೆ ದೃಷ್ಟಿಯನ್ನು ಚಲ್ಲಿದೆನು! ಹಾಯ್! ನೋಡಬಾರದ್ದನ್ನು ನೋಡಿದೆನು! ನನ್ನ ಮಾಲತಿಯು ಅವರ ಹೃದಯದಮೇಲೆ ಮಸ್ತಕವನ್ನಿಟ್ಟಿರುವಳು. ಅಸ್ತವ್ಯಸ್ತವಾದ ಅವಳ ಕೇಶಗಳನ್ನು ಸರಿಪಡಿಸುತ್ತಲಿರುವರು! ಅಯ್ಯೋ! ಇಂತಹ ಅಮಂಗಲ ದೃಶ್ಯವನ್ನು ಹೇಗೆ ನೋಡಲಿ? ಎಂಬ ಹಾಗಾಯಿತು ನನಗೆ! ನನ್ನ ಹೃದಯಕ್ಕೆ ಕೊಳ್ಳಿ ಇಟ್ಟಂತಾಯಿತು! ಪ್ರತ್ಯಕ್ಷ ನನ್ನ ತಂಗಿ ನನ್ನ ಸುಖದಲ್ಲಿ ವಿಷವನ್ನು ಬೆರಿಸಲು ಸಿದ್ಧಳಾದದ್ದನ್ನು ನೋಡಿ ನನ್ನ ಕೋಪವು ಮೇರೆದಪ್ಪಿತು! ಆದರೆ ಮರುಕ್ಷಣದಲ್ಲಿ ನನ್ನ ದುರ್ದೈವವನ್ನೇ ಹಳಿದುಕೊಂಡೆನು. ಕಣ್ಣಿಗೆ ಕತ್ತಲೆಗೂಡಿಸಿತು. ಏನೋ ಒಂದು ತರಹದ ಕಳವಳ ಉಂಟಾಗಿ ಬವಳಿ ಬಂದು ಬಾಗಿಲಲ್ಲಿಯೇ ಬಿದ್ದು ಬಿಟ್ಟೆನು!

## ೪.

ನನಗೆ ಕೆಲ ಹೊತ್ತಿನಮೇಲೆ ಎಚ್ಚರಾಯಿತು. ನಾನೊಂದು ಕೋಣೆಯೊಳಗೆ ಹಾಸಿಗೆಯಮೇಲೆ ಮಲಗಿಕೊಂಡಿದ್ದೆನು. ಅವರು ನನ್ನ ಬಳಿಯಲ್ಲಿ ಖಿನ್ನಮನಸ್ಕರಾಗಿ ಕುಳಿತಿದ್ದರು. ಅವರ ಮುಖವನ್ನು ನೋಡಹತ್ತಿದೆನು. ನನ್ನ ಮನದಲ್ಲಿ ಕಲ್ಪನೆಯ ದೊಂಬೆಗಾರಂಭವಾಯಿತು ! ನಾನು ಆಗಲೇ ನೋಡಿದ ನೋಟವು ನಿಜವೆ ? ಒಂದುವೇಳೆ ನಿಜವಿದ್ದರೂ ನನಗೆ ದುಃಖವೇಕೆ ? ಮತ್ಸರವೇಕೆ ? ಕೋಪವೇಕೆ ? ಪುರುಷರು ಸ್ವತಂತ್ರರಲ್ಲವೆ ? ಹೇಗೆ ನಡೆದರೂ ಅದು ಅವರಿಗೆ ಭೂಷಣವೆ ! ಹೇಗೊ ತಿಳಿದುಕೊಂಡು ಮನಸ್ಸು ಶಾಂತಗೊಳಿಸಲು ಪ್ರಯತ್ನಿಸಿದೆ ! ಆದರೆ ಅದು ಕಷ್ಟಸಾಧ್ಯವಾಯಿತು ! ಮಾಲತಿಯು ನನ್ನ ಬಳಿ ಇರುವಳೆ ? ಎಂದು ಸುತ್ತಲೂ ನೋಡಿದೆ. ಆದರೆ ಅವಳು ನನ್ನ ಕಣ್ಣಿಗೆ ಬೀಳಲಿಲ್ಲ. 'ಅವಳೆಲ್ಲಿ ?' ಅವರನ್ನು ಕೇಳಿದೆ. 'ಅವಳು ತನ್ನ ಸಾಮಾನುಗಳನ್ನು ಕಟ್ಟುವದರಲ್ಲಿ ತೊಡಗಿರುವಳು. ಅವಳು ಇಂದು ಊರಿಗೆ ಹೋಗುವಳಂತೆ' ಅವರು ಉತ್ತರವಿತ್ತರು. 'ಯಾವೂರಿಗೆ' ನಾನು ಕೇಳಿದೆ. 'ಹಾವೇರಿಗೆ' ಅವರು ನುಡಿದರು. ನಾನು ಅವರ ದೃಷ್ಟಿಯಲ್ಲಿ ದೃಷ್ಟಿಯನ್ನು ಬೆರಿಸಿದೆನು. ಕುತ್ತಿಗೆಯ ಶಿರಗಳು ಉಬ್ಬಿದವು ! ಕಂಬನಿಗಳು ಉಮರಹತ್ತಿದವು ! ನಾನು ಅವರ ಕೈಹಿಡಿದು ಸದ್ಗದಿತಳಾಗಿ ಕೇಳಿದೆನು 'ನಾಥ ! ಹೇಳಿರಿ ! ನಿಜಸಂಗತಿಯನ್ನು ಹೇಳಿರಿ ! ಬಚ್ಚಿಡಬೇಡಿರಿ ! ಇಂದಿಲ್ಲ ನಾಳೆಯಾದರೂ ಅದು ಹೊರಬೀಳಲಿಕ್ಕಿಲ್ಲವೆ? ಅಂದಮೇಲೆ ವಿಶ್ವಾಸಘಾತಕದ ಪಾಪಕ್ಕೇಕೆ ಗುರಿಯಾಗುವಿರಿ'? ನನ್ನೀ ಬಿಚ್ಚುಮಾತುಗಳು ಅವರ ಹೃದಯಕ್ಕೆ ಚುಚ್ಚಿದಂತಾಗಿ ಕಂಬನಿಗಳನ್ನುದುರಿಸಿ ತಮ್ಮ ಪಾಪಕ್ಷಾಲನೆಯನ್ನು ಮಾಡಿಕೊಳ್ಳಹತ್ತಿದರು ! ಹಾಗು ನನ್ನ ಮನಸ್ಸಿನ ಸಮಾಧಾನಕ್ಕಾಗಿ ಸತ್ಯವನ್ನು ಮುಚ್ಚಿಡಲು ಬಹುರೀತಿಯಾಗಿ ಪ್ರಯತ್ನಿಸಿದರು. ಆದರೆ ಅದರಿಂದ ನನ್ನ ಮನಸ್ಸು ಶಾಂತವಾಗದೆ ಹೆಚ್ಚು ಪ್ರಕ್ಷುಬ್ಧತೆಯನ್ನು ಹೊಂದಿತು ! ಈ ವಿಷಯವಾಗಿ ಮಾಲತಿಯನ್ನೇ ವಿಚಾರಿಸುವದುತ್ತಮವೆಂದು ಅವಳನ್ನು ಕರತರಲು ಹೇಳಿದೆನು ಅವರಿಗೆ. ನನ್ನ ಹೃದಯ-ಮಂದಿರದೊಳಗಿನ ಪ್ರೇಮಧನವನ್ನು ಅಪಹರಿಸಿದ ಅವಳು ಅಧೋಮುಖಿಯಾಗಿ ಬಂದು ನಿಂತಳು ನನ್ನ ಬಳಿ ! ಅವಳ ಕಣ್ಣುಗಳೊಳಗಿಂದ ಒಂದೇ ಸವನೆ ಅಶ್ರುಗಳು ಉದರುತ್ತಲಿದ್ದವು ! ಬೇಸಿಗೆಯ ಮಧ್ಯಾಹ್ನದ ಬಿಸಿಲಲ್ಲಿಯ ಹೂವಿನಂತಾಗಿತ್ತು ಅವಳ ಕೋಮಲ ಮುಖವು ! ನನ್ನ ಸುಖದ ಸಂಸಾರವನ್ನು ಹಾಳು ಮಾಡಿದರೂ ನನ್ನ ಪ್ರೇಮದ ತಂಗಿಯಲ್ಲವೇ ? ಅವಳು ? ಓರ್ವ ಅನಾಥ ಬಾಲಿಕೆಯಲ್ಲವೆ ? ಜಗದ ಬೈಲಲ್ಲಿ ಒಂಟಿಗಳಾಗಿ ಅಲೆದಾಡುವ ಬಿಕ್ಷುಕಳಲ್ಲವೆ ? ಅವಳ ಆ ದುಃಖಪೂರ್ಣವಾದ ಮುಖವನ್ನು ನೋಡಿದಾಕ್ಷಣವೇ ನನ್ನ ಹೃದಯಕ್ಕೆ ಬರೆಕೊಟ್ಟ ಹಾಗಾಯಿತು !

ಪತ್ರವನ್ನೇನೋ ನಾನು ಬರೆಯುತ್ತಲಿದ್ದೆ! ಆದರೆ ಕಂಬನಿಗಳು ಒಂದೇ ಸವನೇ ಉದರುತ್ತಲಿದ್ದವು. ಹೃದಯದಲ್ಲಿ ಭಯಂಕರವಾದ ಜ್ವಾಲೆಯು ಪ್ರಜ್ವಲಿಸುತ್ತಲಿತ್ತು! ಅಕ್ಕನ ಸಂಸಾರದಮೇಲೆ ಕಿಡಿಯನ್ನಿಡುವವಳು ತಂಗಿಯೆ? ಅದೆಂತಹ ತಂಗಿಯು? ಅಕ್ಕ-ತಂಗಿಯರ ಪ್ರೇಮವೆ ಇದು? ಸುಟ್ಟರೆ ಸರಿ ಇಂತಹ ಪ್ರೇಮವನ್ನು! ಅಲ್ಲ ಶಾಂತಾ! ಮತ್ತೇಕೆ ಸ್ವಾರ್ಥದಲ್ಲಿ ಬಿದ್ದು ಹೊರಳಾಡುವೆ? ಇದು ಕ್ಷಣಿಕ ಸುಖವು! "ಸುಖವು ಇಚ್ಛಾತೃಪ್ತಿಯ ಆಭಾಸದಲ್ಲಿಲ್ಲ! ಸ್ವಾರ್ಥತ್ಯಾಗದ ದಿವ್ಯ ಭಾವನೆಯಲ್ಲಿ ಉಂಟು!" ಎಂಬ ಆರ್ಯ ಸಂದೇಶವನ್ನು ಇಷ್ಟರಲ್ಲಿ ಮರೆತೆಯಾ? ಹಿಂದೆಗೆಯಬೇಡ! ಕರ್ತವ್ಯಚ್ಯುತಳಾಗಬೇಡ! ಇದೇ ಆರ್ಯ ಲಲನಾಮಣಿಗೆ ಒಪ್ಪುವವಮಾತು!' ಹೀಗೆಯೇ ನನ್ನ ಮನದಲ್ಲಿ ಸಾಧಕ ಬಾಧಕ ವಿಚಾರಗಳ ತಾಕಲಾಟವು ನಡೆದಿತ್ತು! ಹೃದಯವನ್ನು ವಜ್ರದಂತೆ ಕಠೋರವಮಾಡಿ ನಾನೀ ಸಾಹಸಕ್ಕೆ ಕೈಹಾಕಿದೆನು! ನಾನು ಬರೆದ ಪತ್ರವನ್ನು ಅವರ ಕಣ್ಣಿಗೆ ಬೀಳುವಂತೆ ಇಟ್ಟು, ಅವರಿಬ್ಬರ ಕೊನೆಯ ದರ್ಶನವನ್ನು ತೆಗೆದುಕೊಂಡೆನು. ರಾತ್ರಿ ಒಂದು ಗಂಟೆಯಾಗಿರಬಹುದು ಎಲ್ಲೆಡೆಯಲ್ಲಿ ಶಾಂತತೆಯು ನೆಲೆಗೊಂಡಿತ್ತು! ಕೃಷ್ಣಪಕ್ಷ! ದೀಪಗಳು ಕತ್ತಲೆಯನ್ನು ಹೊಡೆದೋಡಿಸಿ ಹಾದಿಕಾರರಿಗೆ ಅಭಯವನ್ನು ಕೊಡುತ್ತಲಿವೆ! ಉಟ್ಟಸೀರೆಯೊಂದರಿಂದ ಮನೆಬಿಟ್ಟು ಹೊರಟು ನಿಲ್ದಾಣಕ್ಕೆ ಬಂದೆ. ಅಲ್ಲಿಯವರೆಗೂ ಎಲ್ಲಿಗೆ ಹೋಗಲಿ ಎಂಬ ವಿಚಾರದಲ್ಲಿಯೇ ಇದ್ದೆ. ಹಾವೇರಿಗೆ ಅಬಚಿಯ ಮನೆಗೇ ಹೋಗುವದನ್ನು ನಿಶ್ಚಯಿಸಿಕೊಂಡು ಪರವಾನಿಗೆಯ ಚೀಟಿ ( ತಿಕೇಟ್ ) ಯನ್ನು ತೆಗೆದುಕೊಂಡು ಗಾಡಿ ಬಂದಕೂಡಲೇ ಡಬ್ಬಿಯಲ್ಲಿ ಹೋಗಿ ಕುಳಿತುಕೊಂಡೆನು ಅಬಚಿಯು ವೃದ್ಧ ಮನುಷ್ಯಳು. ಯಾರೂ ದಿಕ್ಕಿಲ್ಲದವಳು! ಪರರಮನೆಯಲ್ಲಿ ಅಡಿಗೆಮಾಡಿ ಹೊಟ್ಟೆ ತುಂಬಿಕೊಳ್ಳುತ್ತಿದ್ದಳು. ಬಡತನದ ಒಡಲಿನ ಸಲುವಾಗಿ ಏನಾದರೂ ಮಾಡಿ ಜೀವನಯಾತ್ರೆಯನ್ನು ಮುಗಿಸಬೇಕಷ್ಟೆ? ನನ್ನನ್ನು ನೋಡಿದಕೂಡಲೇ ಅವಳಿಗೆ ಬಹಳೇ ಆನಂದವಾಯಿತು ಅವಳು ಕೇಳಿದ ಪ್ರಶ್ನೆಗಳಿಗೆ ಸಂಶಯಬಾರದಂತೆ ನಾನು ಉತ್ತರ ಕೊಟ್ಟು ಸಮಾಧಾನಬಡಿಸಿದೆ! ಆಗ ನನ್ನ ಹೃದಯದಿಂದ ಕಳವಳದ ಉಬ್ಬಳಿಕೆ ಬಂದಂತಾಗುತ್ತಿತ್ತು! ಬಾಯಿಯಿಂದ ಹೇಳಲಿಕ್ಕೆ ಬಾರದ ಕಳವಳವದು! ಕೈಗಡದ ನಗೆಯಿಂದ ಅವಳನ್ನು ಆನಂದಗೊಳಿಸುತ್ತ ಕಾಲಕಳೆಯ ಹತ್ತಿದೆನು. ಮನವು ಅತ್ತ, ದೇಹಮಾತ್ರ ಇತ್ತ. ಹೀಗೆ ನನ್ನ ಜೀವನದ ದಶೆಯೇ ಬೇರೆಯಾಯಿತು!

೭.

ನನಗೆ ಓದು-ಬರಹ ಬರುತ್ತಿತ್ತಲ್ಲದೆ, ವಸ್ತ್ರ ಹೆಣೆಯುವವರಲ್ಲಿ ನಾನು ಬಳಿದಳಿದ್ದೆನು. ಸ್ತ್ರೀಯರಿಗಾಗಿ ಒಂದು ವರ್ಗವನ್ನು ಆರಂಭಿಸಿ ಓದು-ಬರಹ, ವಸ್ತ್ರ

ಹೆಣೆಯುವಿಕೆ ಮೊದಲಾದ ಶಿಕ್ಷಣವನ್ನು ಕೊಡುತ್ತ ಹೊಟ್ಟೆಯ ಮಾರ್ಗವನ್ನು ಹುಡುಕಿಕೊಂಡೆನು. ಮುಂಜಾವಿನಿಂದ ಸಂಜೆಯುವರೆಗೂ ಇದೇ ಉದ್ಯೋಗವು. ಅನೇಕ ಶ್ರೀಮಂತ ಸ್ತ್ರೀಯರೂ ಬಾಲಿಕೆಯರೂ ನಮ್ಮ ಮನೆಗೆ ಬರುತ್ತಲಿದ್ದರು. ಅವರಕೂಡ ಮಾತುಕಥೆಗಳನ್ನಾಡುವದರಲ್ಲಿ ನನ್ನ ಹೃದಯವೇದನೆಯು ತುಸುಮುಟ್ಟಿಗೆ ಕಡಿಮೆಯಾಗುತ್ತಿತ್ತು. ನಾನು ಇಲ್ಲಿಗೆ ಬಂದು ಮೂರು ತಿಂಗಳುಗಳಾದರೂ ಅಲ್ಲಿಯ ಸುದ್ದಿಯು ಲವಲೇಶ ತಿಳಿಯಲಿಲ್ಲ. ನನ್ನ ಹೃದಯಸಾಗರದಲ್ಲಿ ಅನೇಕ ವಿಚಾರತರಂಗಗಳು ಉದ್ಭವಿಸಿ ಲಯಹೊಂದುತ್ತಲಿದ್ದವು! ಅವರು ಮಾಲತಿಯಕೂಡ ಲಗ್ನ ಮಾಡಿಕೊಂಡಿರಬಹುದೆ? ಇಬ್ಬರೂ ಸುಖದಿಂದ—ಪ್ರೇಮದಿಂದ ಸಂಸಾರ ಸಾಗಿಸುತ್ತಿರಬಹುದೆ? ಅವರಿಬ್ಬರ ಸುಖದಸಲುವಾಗಿ ಸರ್ವಸ್ವದ ತ್ಯಾಗ ಮಾಡಿ ಈ ವನವಾಸವನ್ನು ಭೋಗಿಸುತ್ತಿರುವದು! ಎತ್ತಲಾದರೂ ಅವರಿಗೆ ಸುಖವಾಗಲೆಂದು ಅನನ್ಯಭಾವದಿಂದ ಅನವರತ ಪರಮಾತ್ಮನನ್ನು ಬೇಡಿಕೊಳ್ಳುವೆನು. ನಾನಿಲ್ಲಿಗೆ ಬಂದ ಸುದ್ದಿಯನ್ನು ಅಬಚಿಯು ಈ ಮೊದಲು ಪತ್ರ ಹಾಕಿಸಿದ್ದು ನಾನರಿಯೆ. ಒಂದು ದಿವಸ ಮುಂಜಾನೆ ಪ್ರಾರ್ಥನಾದಿಗಳನ್ನು ತೀರಿಸಿಕೊಂಡು ನನ್ನ ಕೆಲಸದಲ್ಲಿ ತೊಡಗಿರಲು, ಅಂಚೆಯವನು ಬಂದು ಪತ್ರವನ್ನು ಕೊಟ್ಟು ಹೊರಟು ಹೋದನು. ಎಲ್ಲಿಯದೆಂದು ಆತುರತೆಯಿಂದ ಬಿಚ್ಚಿ ನೋ-ಡಲು ಮಾಲತಿಯ ಅಕ್ಷರಗಳು ಕಂಡವು. ನನ್ನ ಎದೆಯು ಝಲ್ಲೆಂದಿತು! ಪತ್ರವನ್ನು ಓದಲಾರಂಭಿಸಿದೆನು.

“ಅಕ್ಕಾ! ಈ ಪಾಪಿಷ್ಠ ಮಾಲತಿಯು ನಿನಗೆ ಅಕ್ಕಾ ಎಂದು ಕರೆಯಲು ಕೂಡಾ ನಾಚಿಕೆ ಬರುತ್ತಿದೆ! ಹಾಯ್! ಅಕ್ಕಾ! ನಾನಿದನ್ನೇನು ಮಾಡಿದೆ? ಈ ಚಾಂಡಾಲಿನಿಯ ಸುಖಕ್ಕಾಗಿ ನೀನೆಷ್ಟು ಕಷ್ಟಪಟ್ಟೆ? ಕೃತಘ್ನ ತಂಗಿಯಸಲುವಾಗಿ ಪ್ರೇಮ ಸನ್ಯಾಸವನ್ನು ಆನಂದದಿಂದ ಸ್ವೀಕರಿಸಿದೆಯಲ್ಲವೆ? ನನ್ನನ್ನು ಸಾಕಿ-ಸಲುಹಿ ದೊಡ್ಡವಳನ್ನಾಗಿಮಾಡಿದ್ದು ನಿನ್ನ ಸರ್ವಸ್ವದ ನಾಶಕ್ಕಾಗಿಯೇ ಏನು? ವಿಕಾರವಶಳಾಗಿ ಪವಿತ್ರಕುಲಕ್ಕೆ ಕಲಂಕ ಹಚ್ಚಿದ ರಾಕ್ಷಸಿ! ಮಾಲತಿ! ಅಘೋರಕರ್ಮಿ! ಮಾಲತಿ! ನೀನಿನ್ನೂ ಜೀವದಿಂದಿರುವೆಯಾ? ಅಯ್ಯೋ! ಹೃದಯಾಂತರಾಳವು ಸುಡುತ್ತಲಿದೆ. ಅಕ್ಕಾ! ನಾನಿದನ್ನು ಹೇಗೆ ಸಹಿಸಲಿ? ಅಕ್ಕಾ! ಸ್ವಸುಖಕ್ಕಾಗಿ ನಿನ್ನ ಪ್ರೇಮದ ಪತಿಯನ್ನು ನಿನ್ನ ಹೃದಯದಿಂದ ಬೇರ್ಪಡಿಸಿ ನಾನು ಪ್ರೇಮದಿಂದ ಮಾಲಾರ್ಪಣ ಮಾಡಿ ಸುರಕೊಂಡ ಸುಖವಾದರೂ ಏನು? ಹಗಲೂ ಇರುಳೂ ನಿನ್ನ ಚಿಂತನೆಯಲ್ಲಿಯೇ ನ್ನಾವಿಬ್ಬರು ಕಣ್ಣೀರುದುರಿಸುತ್ತ ಕಾಲಕಳೆಯುತ್ತಲಿರುವೆವು. ಅಕ್ಕಾ! ನನ್ನಿಂದ ಅವರಿಗೆ ತಿಲಾಂಶವಾದರೂ ಸುಖವಿಲ್ಲದಾಗಿದೆ. ನಿನ್ನಂತಹ ಪವಿತ್ರದೇವತೆಯ ವಿಶ್ವಾಸಘಾತಮಾಡಿದ ಹೃದಯಕ್ಕೆ ಸುಖವು ಹೇಗೆ ದೊರೆಯಬೇಕು? ಸಮಾಧಾನವು ಹೇಗಾಗಬೇಕು?

ಅಕ್ಕಾ! ನಿಜವಾಗಿಯೂ ನೀನು ಉಭಯಕುಲೋದ್ಧಾರಕ್ಕಾಗಿ ಅವತರಿಸಿದ ಅಸಮಾನ್ಯ ಸ್ತ್ರೀಯಾಗಿರುವೆ! ಸ್ವರ್ಗದೇವತೆ ನೀನು! ಅಕ್ಕಾ ನೀನಿದೆಂತಹ ಅಲೌಕಿಕ ಸ್ವಾರ್ಥಯಜ್ಞವನ್ನು ಮಾಡಿ ಸ್ತ್ರೀಯರಲ್ಲಿಯ ಔದಾರ್ಯವನ್ನು ಜಗತ್ತಿಗೆ ತೋರಿಸಿದೆ! ಅಕ್ಕಾ! ನಾನೀಗ ಮೃತ್ಯುಮುಖದಲ್ಲಿ ಬಿದ್ದಿರುವೆ! ನಿನ್ನ ದರ್ಶನವಾಗದಿದ್ದರೆ ಈ ಪಾಪಿಯ ಜೀವವು ಸುಖದಿಂದ ಹೋಗಲಾರದು! ಹಾಗಿ ಪರಮೇಶ್ವರನಾದರೂ ಸದ್ಗತಿಯನ್ನು ಕೊಡಲಾರನು! ಅಕ್ಕಾ ಬರುವೆಯಾ? ಜಗದ ಕೊನೆಯ ಅಪ್ಪಣೆಯನ್ನು ತೆಗೆದುಕೊಳ್ಳುವ ಈ ಪತಿತ ಆತ್ಮದ ಉದ್ಧಾರವನ್ನು ಮಾಡಲು ಬರುವೆಯಾ? ಅಕ್ಕಾ! ಸಹಿಸಲಸಾಧ್ಯವಾದ ದಾರುಣಯಾತನೆಯಾಗತೊಡಗಿದೆ!!! ಶಾಂತಮೂರುತಿಯಾದ ನೀನು!—ದೇವತಾಸ್ವರೂಪಿಣಿಯಾದ ನೀನು!— ಕೊನೆಯ ದರ್ಶನವನ್ನು ಕೊಡುವೆಯಾ? ಅಕ್ಕಾ! ಹೆಚ್ಚಿಗೆ ಬರೆಯಲಾರೆ! ಅಕ್ಕಾ! ಅಕ್ಕಾ! ಅಕ್ಕಾ!"

ನಿನ್ನ ಚಾಂಡಾಲಿನಿ ತಂಗಿ,

'ಮಾಲತಿ'

(ಮುಂದೆ ಸಾಗುವದು)

---

ಶ್ರೀ

ಶ್ರೀ ಶಿರಃಪುರ ಶೂನ್ಯ ಸಿಂಹಾಸನಾಧೀಶ್ವರ ಶ್ರೀ ಫಕೀರಸ್ವಾಮಿಗಳವರ

ನಿಜಶಿಷ್ಯರಾದ

## ಶ್ರೀಮನ್ನಿರಂಜನ ಬೂದಿಹಾಳ ಮರಿದೇವರುಗಳ

ಸದ್ಭಕ್ತಶಿಖಾಮಣಿಗಳಾದ ವೀರಶೈವ ಬಾಂಧವರೇ,

ನಮ್ಮ ಆಶ್ರಯದಲ್ಲಿ ಹೊರಡುವ ವೀರಶೈವ ಚಂದ್ರಿಕೆಗೆ ತನು-ಮನ-ಧನಗಳಿಂದ ಸಹಾಯಮಾಡಬೇಕು; ಹಾಗು ಲೇಖನಗಳನ್ನು ಬರೆಯುವ ತಜ್ಞರು ವೀರಶೈವ ಮತಸಂಬಂಧವಾದ ಲೇಖನಗಳನ್ನು ಒದಗಿಸಿಕೊಟ್ಟು ಚಂದ್ರಿಕೆಯನ್ನು ಹೆಚ್ಚು ಸುಶೋಭಿತವಾಗಿ ಮಾಡಿ, ಶ್ರೀ ಫಕೀರೇಶ್ವರರ ಕೃಪಾಪ್ರಸಾದವನ್ನು ಪಡೆಯಬೇಕು.

ಶಿರಹಟ್ಟಿ ಫಕೀರಸ್ವಾಮಿ ಮಠ
ಆಷಾಡ ವ|| ೩, ಶಕೆ ೧೮೫೭.

# ನಾದಭೂಮಿ.

ವೀರಶೈವ ಬಂಧುಗಳೇ,

ಚಂದ್ರಿಕೆಯ ಮೊದಲನೆ ಸಂಚಿಕೆಯ ವೀರಶೈವ ಮಹತಿಯಲ್ಲಿನ ವಿಧಾನದ ಬಗ್ಗೆ ನಾವು ಇಷ್ಟುಮಾತ್ರ ಹೇಳಬಲ್ಲೆವು:

ಸಾಮಾನ್ಯವಾಗಿ ಈ ವರೆಗೆ ಬರೆಯಲಾದ ಬಸವೇಶ್ವರರ ಚರಿತ್ರೆಗಳಬಗ್ಗೆ ವಿಚಾರ ಮಾಡಿದರೆ. ಬೆಂಗಳೂರ ಸೆಂಟ್ರಲ್ ಕಾಲೇಜದ ಕರ್ನಾಟಕ ಸಂಘದವರು ಪ್ರಸಿದ್ಧಿಸಿದ "ಭಕ್ತಭಂಡಾರಿ ಬಸವಣ್ಣನವರು" ಎಂಬ ಗ್ರಂಥವು ಎಲ್ಲ ರೀತಿಯಿಂದಲೂ ಶ್ರೇಷ್ಠವಾದುದಾಗಿದೆಯೆಂದು ಹೇಳಲು ಅಡ್ಡಿ ಇಲ್ಲ. ಯಾಕಂದರೆ, ಲೇಖಕರು ಬಸವೇಶ್ವರರ ಚರಿತ್ರೆಯಬಗ್ಗೆ ವಿಷಯವಿರುವ ವೀರಶೈವ ಹಾಗು ವೀರಶೈವೇತರ ಪೌರಾಣಿಕ ಹಾಗು ಐತಿಹಾಸಿಕ ಗ್ರಂಥಗಳನ್ನು ಒಳ್ಳೇರೀತಿಯಿಂದ ಪರಿಶೋಧಿಸಿ ಅವುಗಳಲ್ಲಿ ದೊರೆಯುವ ಯಾವತ್ತೂ ವಿಷಯಗಳ ಬಗ್ಗೆ ತಮ್ಮ ಗ್ರಂಥದಲ್ಲಿ ಚರ್ಚಿಸಿದ್ದಾರೆ. ಅದರಲ್ಲಿನ ಈ ಕೆಳಗಿನ ಅಂಶವನ್ನು ವಾಚಕರ ಅವಗಾಹನೆಗಾಗಿ ಕೊಟ್ಟಿರುವೆವು.

### ಪ್ರಕರಣ ೭ ಪುಟ ೬೯.

"ಬಸವಣ್ಣನವರ ಮೂರ್ತಿಸ್ವರೂಪವು ಇಂತಹುದು. ಅವರ ಆತ್ಮೋನ್ನತಿಯು ಇಷ್ಟು ಉಚ್ಚವಾದುದು. ಅವರ ಪ್ರಕೃತಿಯು ಸರಳವಾದುದು. ಹೀಗಿದ್ದರೂ ಬಸವಣ್ಣನವರಮೇಲೆ ದೋಷಾರೋಪಣೆಗಳಿಲ್ಲದೆ ಹೋಗಿಲ್ಲ."

"ಸಿಕ್ಕಿದ ಜನರಿಗೆಲ್ಲ ಹಣವನ್ನು ಕೊಟ್ಟು ಲಕ್ಷತೊಂಭತ್ತಾರುಸಾವಿರ ಜಂಗವೇಷಧಾರಿಗಳಾದ ಗುಪ್ತ ಸೈನಿಕಜನರನ್ನು ಪೋಷಿಸುತ್ತಿದ್ದರೆಂದು ಒಂದುಕಡೆ ಹೇಳುವರು, ಪುಂಡ-ಮಿಂಡ ಜನರನ್ನು ಸೇರಿಕೊಂಡು ಬಿಜ್ಜಳನ ಭಂಡಾರಾದಿಗಳನ್ನು ಸೂರಿ ಮಾಡಿಸಿ, ಸುಳ್ಳು ಲೆಕ್ಕಗಳನ್ನು ಬರೆಯಿಸಿ ಸ್ವಾಮಿವಂಚನೆ ಮಾಡಿದರೆಂದು ಮತ್ತೊಂದುಕಡೆ ಜರಿಯುವರು. ಹೀನಜಾತಿಯವರಿಗೂ ಲಿಂಗಧಾರಣೆಮಾಡಿ ವರ್ಣಸಂಕರ ದೋಷವನ್ನು ಪರಮಪವಿತ್ರ ಸಮಾಜವಲ್ಲಿ ತಂದು ಅಲ್ಲೋಲಕಲ್ಲೋಲಮಾಡಿದ ಮಹಾ ಪಾಪಿಗಳೆಂದು ಮಗದೊಂದುಕಡೆ ಜರಿಯುವರು. ಮಧುವಯ್ಯ, ಹರಳಯ್ಯಗಳ ನೆಪವನ್ನು ಮಾಡಿಕೊಂಡು ರಾಜ್ಯಾಧಿಸೂತ್ರಗಳನ್ನು ಹಿಡಿಯಬೇಕೆಂದು, ಸ್ವಾಮಿಯಾದ ಬಿಜ್ಜಳನನ್ನು ಕೊಲ್ಲಿಸಿದ ಸ್ವಾಮಿಘಾತುಕರೆಂದು ಸಾರುವರು."

" ಈ ರೀತಿ ದೋಷಾರೋಪಣೆಗಳನ್ನು ಮಾಡುವದಕ್ಕೆ ಮತಾಂತರದವರ ದ್ವೇಷಬುದ್ಧಿಯು ಎಷ್ಟರಮಟ್ಟಿಗೆ ಕಾರಣವಾಗಿರುವದೋ ಅದಕ್ಕಿಂತ ಹೆಚ್ಚಾಗಿ ಸ್ವಮತೀಯ ಪುರಾಣಕರ್ತೃಗಳ ಮೂಢ ಭಕ್ತಿಯೇ ಕಾರಣವಾಗಿದೆ. ಇದು ಬಹಳ ಶೋಚನೀಯವಾದ ವಿಷಯ. ಸಾಕ್ಷಿಗಳನ್ನು ಬೇರೆಕಡೆಯಿಂದ ತರಬೇಕಾದುದೇ ಇಲ್ಲ. ಬಸವ ಪುರಾಣಾದಿಗಳೇ ಸಾಕು. ಅವುಗಳಲ್ಲಿರುವ ಪವಾಡಗಳೇ ಸಾಕು ! "

ಮೇಲಿನ ಸಂದರ್ಭವೇ ಚಂದ್ರಿಕೆಯಲ್ಲಿ ಪ್ರಕಟವಾದ ವಿಧಾನಕ್ಕೆ ಅನ್ವಯಿಸುತ್ತದೆಂದು ಹೇಳಿದರೆ, ಅದೇನೂ ತೀರ ತಪ್ಪಾಗಲಿಕ್ಕಿಲ್ಲವೆಂದು ನಮ್ಮ ಸಾತ್ವಿಕ ಭಾವನೆ. ಮತ್ತು ಈ ವಿಷಯವು ಚಂದ್ರಿಕೆಯಲ್ಲಿಯೇ ಮಾತ್ರ ಇಂದು ಹೊಸದಾಗಿ ಬಂದಿರುವದೆಂದು ನಮ್ಮ ವೀರಶೈವ ಬಂಧುಗಳು ಬೆದರಿ-ಬೆಚ್ಚಿಬೀಳಲು ಕಾರಣವಿಲ್ಲ. ಐತಿಹಾಸಿಕ ದೃಷ್ಟಿಯಿಂದ ಈವರೆಗೆ ಬರೆಯಲಾದ ಬಸವ ಚರಿತ್ರೆಗಳಲ್ಲಿ ಈ ವಿಷಯಕ್ಕೆ ಚರ್ಚೆ ಇದ್ದೇ ಇದೆ. ಆದರೆ ಅವುಗಳಲ್ಲಾರೂ ಯಾವದೊಂದಕ್ಕೆ ತೀರ್ಮಾನಿಸಿರಲಿಲ್ಲ. ತಜ್ಞರಾದ ನಮ್ಮ ವೀರಶೈವ ಮಹಾನುಭಾವರು ಇಂತಹ ವಿಷಯಗಳನ್ನು ಪರಿಶೋಧಿಸಿ, ಯಾವದೊಂದು ನಿಶ್ಚಯಾತ್ಮಕವಾದ ನಿರ್ಣಯವನ್ನು ಕೊಡಲೆತ್ನಿಸದೆ ಹಾಗೆಯೇ ಕೂಡ್ರುವದು ವಿಷಾದಕರವಾದ ಸಂಗತಿಯಾಗಿದೆ.

ಇರಲಿ ಈ ಎಲ್ಲ ಸಂಗತಿಗಳು ಸಟೆಯಾಗಿರಲಿ ಅಥವಾ ದಿಟವಾಗಿರಲಿ ನಾವು ಈ ಮುಂದೆ ತಮ್ಮ ಸೂಚನೆಯಮೇರೆಗೆ ಚಂದ್ರಿಕೆಯಲ್ಲಿ ಪ್ರಕಟವಾಗುವ ಮತ ಸಂಬಂಧವಾದ ಲೇಖನಗಳನ್ನು ಹೆಚ್ಚು ಜಾಗರೂಕತೆಯಿಂದ ಪರಿಶೀಲಿಸಿ ಕೊಡುವದಕ್ಕೆ ಯತ್ನಿಸುವೆವು. ಅದರಲ್ಲಿಯೂ ನಮ್ಮ ಕಣ್ಮರೆಯಾಗಿ ಏನಾದರೂ ದೋಷಗಳು ಕಂಡುಬಂದಲ್ಲಿ ಸೂಜ್ಞರು ಸಾಧಾರವಾಗಿ ಲೇಖನಗಳನ್ನು ಒರೆದು ಕಳುಹಿದಲ್ಲಿ ನಾವದನ್ನು ಚಂದ್ರಿಕೆಯಲ್ಲಿ ಪ್ರಸಿದ್ಧಿಸುವೆವು.

ಒಟ್ಟಾರೆ, ಚಂದ್ರಿಕೆಗಾಗಿ ತಮ್ಮುಗಳಿಗೆ ಅಭಿಮಾನವಿರಲಿ, ಮಮತೆಯಿರಲಿ ಇಷ್ಟೇ ನಮ್ಮ ಬೇಡಿಕೆ.

ಶಿರಹಟ್ಟಿ,
ತಾ. ೧೦—೭—೧೯೩೪.

ತಮ್ಮ ವಿಧೇಯ,
ಸಂಪಾದಕ.

# ಚಂದ್ರಿಕೆಗಾಗಿ ಜನರು ಏನೆನ್ನುವರು ?

ನಿಮ್ಮ ವೀರಶೈವ ಚಂದ್ರಿಕೆಯು ಇಲ್ಲಿಯ ಸೂಜ್ಞಜನಗಳಿಗೆ ಮಾನ್ಯವಾಗಿದೆ. ಇಲ್ಲಿಯ ವ್ಯಾಕರಣತೀರ್ಥ ವೇ. ಚಂದ್ರಶೇಖರ ಶಾಸ್ತ್ರಿಗಳು, ಲಿಂಗರಾಜ ಸಂಸ್ಕೃತ ಕಾಲೇಜ ಮುಖ್ಯಾಧ್ಯಾಪಕ ಇವರ ಹೆಸರಿನಮೇಲೆ ತಮ್ಮ ಚಂದ್ರಿಕೆಯನ್ನು ಕಳಿಸ ಬೇಕು. ತಮಗೆ ಸಾಹಿತ್ಯದ ಈ ಕಾರ್ಯದಲ್ಲಿ ಯಶವು ದೊರೆಯಲೆಂದು ಶ್ರೀ ಫಕೀರೇಶ್ವರನನ್ನು ಬೇಡಿಕೊಳ್ಳುವೆನು.

ಹುಬ್ಬಳ್ಳಿ.
ತಾ. ೮—೭—೩೪. } ಗೂಳಪ್ಪಾ ಮಹಾದೇವಪ್ಪಾ ಪೂಜಾರ,
ಟ್ರೇಂಡಮಾಸ್ತರ.

---

ಕನ್ನಡ ಸಾಹಿತ್ಯಸೇವೆಗಾಗಿ ತಾವು ಹೊರಡಿಸಿದ "ವೀರಶೈವ ಚಂದ್ರಿಕೆ" ಯು ಮಾದರಿ ಸಂಚಿಕೆ ನೋಡಿದೆನು. ವಿಷಯಗಳು ಸರಸವಾಗಿವೆ. ಪುಸ್ತಕದ ಬಾಹ್ಯಾಂಗವು ಸೊಬಗಿನದಾಗಿದೆ. ಈ ಚಂದ್ರಿಕೆಯು ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದಲು ಶ್ರೀ ಫಕ್ಕೀರೇಶ್ವರನು ಅನುಗ್ರಹಿಸಲೆಂದು ಬೇಡುವೆನು.

ಮಾಗಡಿ.
ತಾ. ೧೨—೭—೩೪ } ಬಶೆಟ್ಟೆಪ್ಪನವರು ಕೋರಿಶೆಟ್ಟರ,
ಶಿಕ್ಷಕ—೨ನೇ ವರ್ಷ ಟ್ರೇಂಡರು.

---

ಶ್ರೀ ಫಕ್ಕೀರಸ್ವಾಮಿಗಳವರ ಕೃಪಾಛತ್ರದಲ್ಲಿ ಹೊರಡಿಸಿರುವ "ವೀರಶೈವ ಚಂದ್ರಿಕೆ"ಯ ಮಾದರಿಯ ಸಂಚಿಕೆಯು ತಲ್ಪಿತು. ಬಾಹ್ಯಾಂಗ ಅಂತರಂಗ ನೋಡಿ ಮನಸ್ಸಿಗೆ ಅತ್ಯಾನಂದವಾಯಿತು. ವಿಷಯಗಳು ಚನ್ನಾಗಿವೆ. ಎಷ್ಟೋ ವರ್ಷಗಳಿಂದ ಬೇರೂರಿದ ತಮ್ಮ ಮನೀಷೆಯು ವೃಕ್ಷವು ಈಗ ಉದ್ಭವಿಸಿದಂತಾಯಿತು. ಇರಲಿ. ಈ ರೀತಿ ಕನ್ನಡ ವಾಙ್ಮಯ ಸೇವೆಗೈಯ್ಯುವದರಲ್ಲಿ ತತ್ಪರರಾದ ತಮಗೆ ಶ್ರೇಯೋಭಿವೃದ್ಧಿಯಾಗಲೆಂದು ಹಾರೈಸುವೆ.

ಮೊರಬ,
ತಾ. ೧೨—೭—೩೪ } ತಮ್ಮ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾದ,
ರಾಮರಾವ ಮುಳಗುಂದ.

ನೀವು ಈ ಮಾಸಪತ್ರಿಕೆಯನ್ನು ಹೊರಡಿಸುವ ಮೊದಲು ಈ ನಮಗೆ ಸಹಾಯ ಮಾಡಲು ( ಲೇಖನರೂಪದಿಂದ ) ಅರುಹಿಕೊಂಡದ್ದನ್ನು ಮಾತೃಭಾಷೆಯ ( ಕನ್ನಡ ನುಡಿ ) ಸೇವೆ ನಮ್ಮಿಂದಾದನಿತು ಮಾಡುವದು ನಮ್ಮವಶ್ಯಕರ್ತವ್ಯ ವೆಂದು ನಾವು ಒಂದುವರೆಯವರು ( ಕೈ. ವಾ. ಎಮ್. ಎ. ದೇಶಪಾಂಡೇರಾಯರು ಮುಳಬಾಗಲರವರು ಈ ನಾನು ) ಎಂದಿನಿಂದೋ ನಿಶ್ಚಯಿಸಿಕೊಂಡುದರಿಂದ ಮಾನಿಸಿ ಸಹಾಯವಿತ್ತಿತು. ಅದರಂತೆ ಪತ್ರಿಕೆಯು ಹೊರಟು ಪ್ರಾರಂಭದ್ದು ಕೈಸೇರಿ ಆನಂದವಾಯಿತು. ಅದರ ಬಾಹ್ಯದ ಅಂದವಾದ ರೂಪವನ್ನೂ ಬಲ್ಲವರೂ-ಕುಶಲರೂ ಆದ ಲೇಖಕರು ಬರೆದ ಸರಸವೂ ಸುಬೋಧವೂ ತಕ್ಕುವೂ ಉಳ್ಳ ವಿಷಯಗಳ ಅಂತಸ್ಥಿತಿಯನ್ನೂ ಕಂಡು ಒಳ್ಳೇ ಆನಂದವೆನಿಸಿತು.

ನಮ್ಮ ತಾಯ್ನುಡಿಯು ಇಳಿತರದ ಸ್ಥಿತಿಯ ಏಳ್ಗಿಗೆ ಇಂಥ ಪತ್ರಿಕೆಗಳು ಹೊರಡುವದು ಸದ್ಯಸ್ಥಿತಿಯಲ್ಲಿ ಅತ್ಯವಶ್ಯಕವಿದೆ. ಆಕಾರಣ ನಮ್ಮಬಂಧುಗಳು ಕನ್ನಡಿಗರೆಂಬರು ಈ ಸುಪತ್ರಿಕೆಗೆ ತಪ್ಪದೆ ತನು-ಮನ-ಧನಂಗಳ ಉದಾರಾಶ್ರಯವಿತ್ತು ತಾಯ್ನುಡಿಯ ಸೇವೆಯ ಸುಶ್ರೇಯಗೊಳ್ಳುವರೆಂದು ತುಂಬ ಬಯಸಿ ವಿನಂತಿಸಿಕೊಂಡು ಪತ್ರಿಕೆಯು ಉತ್ತರೋತ್ತರ ಸುಧಾರಣೆಗಳಿಂದ ಲೋಕಹಿತಗೆಯ್ದು ಚಿರಂಜೀವಿಯಾಗಿ ಬಾಳಲು ಶ್ರೀ-ಶ್ರೀರನ್ನು ಅನನ್ಯಭಾವದಿಂದ ಬೇಡುವೆನು.

ಹಾವೇರಿ, } ಶಿವಾನಂದ ದೀಕ್ಷಿತ ವಾಜಪೇಯು.
ತಾ. ೧೭—೭—೩೪ } ಪೆನಶೆನರ ಮಾಸ್ತರ.

---

ತಮ್ಮ ಚಂದ್ರಿಕೆಯು ಕೈಸೇರಿ ಆನಂದವಾಯಿತು. ಪತ್ರಿಕೆಯು ಸರ್ವಾಂಗ ಸುಂದರವಾಗಿದೆ. ೨ನೇ ಸಂಚಿಕೆಯಸಲುವಾಗಿ “ ಹಳ್ಳಿಯ ಹಾಡುಗಳು ” ಎಂಬ ನೀತಿಪರಪದ್ಯಗಳನ್ನು ಕಳಿಸಿದೆ. ಮುಂದಿನ ಸಂಚಿಕೆಯ ಸಲುವಾಗಿ ಯೋಗ್ಯವಾದ ಕಥೆಯನ್ನು ಕಳುಹುವೆ. ಅಲ್ಲದೆ ಕ್ರಮಶಃ ಲೇಖಗಳನ್ನು ಕಳಿಸುತ್ತ ಹೋಗುವೆ.

ಕಾಲವಾಡ, } ತಮ್ಮವನೇ ಆದ,
ಶಿವಣ್ಣ.

ಈ ರೀತಿ ಚಂದ್ರಿಕೆಗೆ ಧನ್ಯವಾದಗಳನ್ನಿತ್ತ ಸರ್ವ ಮಹನೀಯರುಗಳಿಗೆ ಕೃತಜ್ಞತಾಪೂರ್ವಕ ಅಭಿನಂದನಗಳನ್ನರ್ಪಿಸುವ,

ಹು. ರಾ, ಅಗ್ನಿಹೋತ್ರಿ.
ಆಡಳತೆಗಾರ.

# ಅತ್ಯುತ್ತಮವಾದ ಕೆಲವು ಅನುಭವಸಿದ್ಧ

## — ಔಷಧಗಳು. —

ಕೇವಲ ಮೋಹಕವಾದ ಲೇಬಲುಗಳಿಂದ ಕೂಡಿದ ಹಾಗು ಆಡಂಬರದ ಜಾಹೀರಾತುಗಳಿಗೆ ಮೋಸಹೋಗಿ ಸಲ್ಲದ ಔಷಧಗಳನ್ನು ತರಿಸಿ ನಿಮ್ಮ ದೇಹಾರೋಗ್ಯದ ಹಾನಿಯನ್ನು ಮಾಡಿಕೊಳ್ಳಬೇಡಿ! ಕಸ್ತೂರಿಯ ವಾಸನೆಯನ್ನು ಬಾಯಿಂದ ಹೇಳಬೇಕಾದವಶ್ಯವಿಲ್ಲ. ಹಾಗೆ ನಮ್ಮ ಔಷಧಗಳಲ್ಲಿರುವ ಗುಣದಬಗ್ಗೆ ಖಾತ್ರಿ ಮಾಡಿಕೊಳ್ಳಬೇಕು.

### ಔಷಧಗಳ ವಿವರ :

(೧) ಕಾಲರಾಪಿಲ್ಸ ೧೦೦ಕ್ಕೆ ೫ ರೂ. (೨) ವ್ಯಾಧಿಗಜಕೇಸರಿ ೧ ರೂ ೨ ತೊಲಿ (೩) ಹುರಕಿನ ಚೀಟು ೧೦೦ಕ್ಕೆ ೫ ರೂ. (೪) ವ್ಯಾಧಿಹರಗುಟಿಕಾ ೧ ರೂ. ೨ ತೊಲಿ (೫) ಥಂಡಿಜ್ವರಕ್ಕೆ ೨೪ ಮಾತ್ರೆಗೆ ೧ ರೂ. (೬) ಬಚನಾಗಾದಿಗುಟಿಕಾ ೧ ರೂ ೨ ತೊಲಿ (೭) ಅಶ್ವಗಂಧಿಚೂರ್ಣ ೧ರೂ. ೪ ತೊಲಿ (೮) ಸಂಜೀವಿನಿ ಗುಟಿಕಾ ೧ ರೂ. ೨ ತೊಲಿ. (೯) ನಾಗಾರ್ಜುನಚೂರ್ಣ ೧ ರೂ. ೪ ತೊಲಿ (೧೦) ಹಿಂಗ್ವಾದಿಚೂರ್ಣ ೧ ರೂ. ೨ ತೊಲಿ (೧೧) ಪುಷ್ಯಾನುಗಚೂರ್ಣ ೧ ರೂ. ೪ ತೊಲಿ (೧೨) ಗುಲ್ಮಜಲೋದರಮಹೋದರ ಚೂರ್ಣ ೧ ರೂ. ೨ ತೊಲಿ (೧೩) ಭಾಸ್ಕರಲವಣ ೧ ರೂ. ೪ ತೊಲಿ (೧೪) ಅಗ್ನಿಕುಮಾರ ರಸ ೧ ರೂ. ೧ ತೊಲಿ (೧೫) ಮಹಾಜರಾಂಕುಶ ೨ ರೂ. ೧ ತೊಲಿ (೧೬) ವಾತವಿಧ್ವಂಸ ರಸ ೧ ರೂ. ೪ ತೊಲಿ (೧೭) ಮೃತ್ಯುಂಜಯ ರಸ ೨ ರೂ. ೧ ತೊಲಿ (೧೮) ಮಹಾಯೋಗರಾಜ ಗುಗ್ಗಳ ೪ ರೂ. ೧ ತೊಲಿ (೧೯) ಪ್ರದವಾದಿ ರಸ ೨ ರೂ. ೧ ತೊಲಿ (೨೦) ಕಾಮೇಶ್ವರ ೪ ರೂ, ೧ ತೊಲಿ (೨೧) ಗರ್ಮಿಗೆ ೧೪ ಮಾತ್ರೆಗೆ ೫ ರೂ. (೨೨) ಮೂಲವ್ಯಾಧಿಗೆ ೧೪ ಮಾತ್ರೆಗೆ ೧ ರೂ. (೨೩) ಶೂಲವಜ್ರಿಣಿ ೫ ರೂ. ತೊಲಿ ೧ (೨೪) ಯಾವತ್ತೂ ವ್ರಣಗಳಿಗೆ ಮಲಮು ಡಬ್ಬಿ ೨ ಆಣೆ (೨೫) ಸರ್ವವಾತಕ್ಕೆ ೫ ರೂ ೧ ತೊಲಿ (೨೬) ಪರಿಣಾಮಶೂಲಿಗೆ ೨ ರೂ. ೧ ತೊಲಿ (೨೭) ಸುದರ್ಶನ ಚೂರ್ಣ ೧ ರೂ. ೪ ತೊಲಿ (೨೮) ಶ್ಲೇಷ್ಮಿಗೆ ೧ ರೂ. ೨ ತೊಲಿ.

ಅನುಪಾನ— ಪಥ್ಯ ಔಷಧಗಳಕೂಡ ವಿವರಿಸುವದು. ಹೆಚ್ಚಿನ ಮಾಹಿತಿ ಬೇಕಾದಲ್ಲಿ ಕೆಳಗಿನ ವಿಳಾಸಕ್ಕೆ ಬರೆದು ತಿಳಕೊಳ್ಳಬಹುದು.

ನಮ್ಮ ವಿಳಾಸ:— **ಬಿ. ಕೆ. ಪಾಟೀಲ ಶಿರಹಟ್ಟಿ**

ಪೋ. ಶಿರಹಟ್ಟಿ

R. No. B. 3350

## ನೀತಿ ಬೋಧಿನಿ

ಕವಿ- ಶಿವಾನಂದ ದೀಕ್ಷಿತ ವಾಜಪೆ ಪೆನಶನರ ಮಾಸ್ತರ. ಈ ಕವಿತಾಗ್ರಂಥವು ಅನೇಕ ಮಹನೀಯರಾದ ಪಂಡಿತರ ಸದಭಿಪ್ರಾಯದಿಂದೊಡಗೂಡಿದೆ. ಪ್ರಪಂಚದಲ್ಲಿಯ ಅನೇಕ ವಿಷಯಗಳ ಬಗ್ಗೆ ನೀತಿಯನ್ನು ಬೋಧಿಸುವ ೩೩೦ ಪುಟಗಳು ಇದರಲ್ಲಿ ಸಮಾವೇಶವಾಗಿವೆ. ಪದ್ಯಗಳು ಲಲಿತವಾಗಿಯೂ ಸುಲಭವಾಗಿಯೂ ಇವೆ. ಇದು ವಿದ್ಯಾರ್ಥಿಗಳಿಗೂ ತರುಣರಿಗೂ ಬಹಳೇ ಉಪಯುಕ್ತವಿದೆ.

ಬೆಲೆ ೬ ಆಣೆ

## ರೇಣುಕಾಂಬಾ ಸ್ತೋತ್ರ

ಕವಿ- ಶಿವಾನಂದ ದೀಕ್ಷಿತ ವಾಜಪೆ. ಶ್ರೀ ರೇಣುಕಾಂಬಾದೇವಿಯ ಸ್ತೋತ್ರರೂಪ ಪದ್ಯ-ಪುಸ್ತಕವಿದು. ಬಹಳ ಮನೋಹರವಾಗಿರುವದು. ಪದ್ಯಗಳು ಸೊಬಗುಳ್ಳವುಗಳಾಗಿರುವವು. ಶ್ರೀ. ವಾಜಪೇಯ ಮಾಸ್ತರರು ವೃದ್ಧರಾದರೂ ಇವರ ಸಾಹಿತ್ಯಸೇವೆಯ ಉತ್ಸಾಹವು ತಾರುಣ್ಯಾವಸ್ಥೆಯಲ್ಲಿದೆ ತರುಣ ಕನ್ನಡಿಗರಿಗೆ ಇವರ ಕೃತಿಯು ಮಾರ್ಗದರ್ಶಕವಾಗಿರುವದು.

ಬೆಲೆ ೨ ಆಣೆ.

## ಶ್ರೀ ಸತ್ಯನಾರಾಯಣ ಪದ್ಯರೂಪ ಗ್ರಂಥ

ಶ್ರೀ ವಾಜಪೆ ಮಾಸ್ತರರಿಂದ ವಿರಚಿತವಾದ ಈ ಪುಸ್ತಕವಾದರೂ ಓದಲರ್ಹವಾಗಿದೆ. ವೈದಿಕ ಧರ್ಮಿಗಳಿಗೂ ಆಸ್ತಿಕ ಕನ್ನಡಿಗರಿಗೂ ಸುಬೋಧವಾಗಿ ತಿಳಿಯುವಂತೆ ರಚಿಸಲ್ಪಟ್ಟಿದೆ. ಬೆಲೆ ೫ ಆಣೆ.

---

### ವರ್ಗಣಿದಾರರಲ್ಲಿ ವಿನಂತಿ.

ಚಂದಾದಾರರೆಲ್ಲರೂ ಚಂದಾಹಣವನ್ನು ಮನಿಯಾರ್ಡರಮೂಲಕ ಕಳುಹಬೇಕು. ವ್ಹಿ. ಪಿ. ಯಿಂದ ಖರ್ಚು ಹೆಚ್ಚು ತಗಲುವದು. ಆದ್ದರಿಂದ ಸರ್ವ ಮಹನೀಯರು ಈ ವಿಷಯದಲ್ಲಾಗುವ ನಮ್ಮ ತೊಂದರೆಯನ್ನು ದೂರಮಾಡಬೇಕಾಗಿ ವಿನಂತಿ. ವ್ಹಿ. ಪಿ. ಯನ್ನು ಪರತ ಬಿಟ್ಟು ಚಂದ್ರಿಕೆಯ ಹಾನಿಯನ್ನು ಮಾಡಬಾರದೆಂಬದಾಗಿಯೂ ವಿನಂತಿ.

ಹು. ರಾ. ಅಗ್ನಿಹೋತ್ರಿ,
ಆಡಳತೆಗಾರರು.

---

ಇದನ್ನು ಗದಗ-ರಸಿಕರಂಜನಿ ಮುದ್ರಣಾಲಯದಲ್ಲಿ ಮುದ್ರಿಸಿ, ಗದಗ ತಾಲೂಕ ಸೊರಟೂರ (ಪೋ. ಶಿರಹಟ್ಟಿ) ಹಾಗು ಶಿರಹಟ್ಟಿ ವೀರಶೈವ ಚಂದ್ರಿಕೆಯ ಆಫೀಸಿನಲ್ಲಿ ಪ್ರಸಿದ್ಧಪಡಿಸಿತು.

ಶಿರಹಟ್ಟಿ.

ಶ್ರೀ ಫಕ್ಕೀರೇಶ್ವರ ಸ್ವಾಮಿಗಳ ಕೃಪಾಛತ್ರದಲ್ಲಿ ನಡೆದ

# ವೀರಶೈವ ಚಂದ್ರಿಕೆ.

ನೈತಿಕ, ಸಾಮಾಜಿಕ, ಧಾರ್ಮಿಕ ವಿಷಯಗಳಿಂದೊಡಗೂಡಿದ
ತಿಳಿಗನ್ನಡ ಮಾಸಪತ್ರಿಕೆ.

ಹುಟ್ಟು : ಶಕೆ ೧೮೫೬. ಶ್ರೀ ಬಸವ ಜಯಂತಿ.


| ಸಂಪುಟ | ನೂಲುಹುಣ್ಣಿವೆ. | ಸಂಚಿಕೆ |
|---|---|---|
| ೧ | ೨೪ — ೮ — ೧೯೩೪. | ೪ |


ಹರತನ್ನ ಭಕ್ತರ | ತಿರಿವಂತೆ ಮಾಡುವ | ಒರೆದು ನೋಡುವ | ಸುವರ್ಣದ ಚಿನ್ನದಂತೆ |
ಅರೆದುನೋಡುವ ಚಂದನದಂತೆ | ಅರಿದು ನೋಡುವ ಕಬ್ಬಿನಕೋಲಿನಂತೆ ;
ಬೆದರದೆ ಬೆಚ್ಚದೆ ಇದ್ದಡೆ | ಕರವೆತ್ತಿಗೊಂಬ ನಮ್ಮ ರಾಮನಾಥಾ ||

—ದೇವರ ದಾಸಿಮಯ್ಯಾ


ಸಂಪಾದಕರು ಹಾಗು ಪ್ರಕಾಶಕರು :

**ಆಲೂರ ಮುರಿಗೇಂದ್ರ ಶೆಟ್ಟರು.**


## ವಿಷಯಾನುಕ್ರಮಣಿಕೆ :




ವಾರ್ಷಿಕ ಚಂದಾ

ಸ್ಥಳದವರಿಗೆ ೧-೮-೦. ] ಬಿಡಿಸಂಚಿಕೆ ೦-೩-೦ [ ಅಂಚೇ ವೆಚ್ಚ ಸೇರಿ ೧-೧೧-೦




ಬಾಲಸುಧಾ ೪ ಔಂಸಿನ ಬಾಟ್ಲಿಗೆ ೦-೭-೦, ೮ ಔಂಸಿನ ಬಾ. ೦-೧೨-೦

ವಾಸಕ ೪ ಔಂಸಿನ ಬಾಟ್ಲಿ ಕಿಮ್ಮತ್ತು ೦—೬—೦.

## — ಬಾಲ ಸುಧಾ —

ಚಿಕ್ಕ ಮಕ್ಕಳ ಹೊಟ್ಟೆ ದೊಡ್ಡದಾಗುವದು, ಅಜೀರ್ಣದಿಂದ ಹೊಟ್ಟೆ ಉಬ್ಬುವದು. ಝಾಡಿಸುವದು, ಹೊಟ್ಟೆನೋವು, ಮಲಬದ್ಧತೆ ಮುಂತಾದ ಅಪಚನದ ವಿಕಾರಗಳು, ಮುಟ್ಟ ದೋಷಗಳು. ರಿಕೆಟ್ಸ. ಕೆಮ್ಮು, ನೆಗಡಿ ಮುಂತಾದ ಕಫವಿಕಾರಗಳು, ಯಕೃದಭಿವೃದ್ಧಿ ಪ್ಲೀಹಾಭಿವೃದ್ಧಿ ಮುಂತಾದ ಭಯಂಕರ ರೋಗಗಳು ತೀವ್ರ ಕಡಿಮೆಯಾಗಿ ಚಿಕ್ಕ ಬಾಲಕರು ಸಶಕ್ತರೂ, ಪುಷ್ಟರೂ, ಸುಂದರರೂ ಆಗುವರು.

## — ವಾಸಕ —

ಈ ಔಷಧದಿಂದ ಕಫಕ್ಷಯು. ದಮ್ಮು, ಕೆಮ್ಮು, ಸೆಗಡಿ, ಇನ್ಫ್ಲುಯಂಝಾ, ನ್ಯೂಮೋನಿಯಾ, ಸಣ್ಣ ಹುಡುಗರ ಪಕ್ಕೆ ಬಡಕೊಳ್ಳುವ ಭಯಂಕರ ರೋಗ ( ಬ್ರಾಂಕೋನ್ಯೂಮೊನಿಯಾ ) ಕೊಡಗ ಮ್ಮು, ಕಫಜ್ವರ, ಕಫ ಗಟ್ಟಿಯಾಗ ವದು, (ತ್ರಿದೋಷಜ್ವರದಲ್ಲಿ) ಮುಂತಾದ ತ್ರಾಸದಾಯಕ ಭಯಂಕರ ರೋಗಗಳು ಖಾತ್ರಿಯಿಂದ ಗುಣ. ಬಹುದಿವಸ ದಮ್ಮಿನಿಂದ ಬಳಲುವ ಎಷ್ಟೋ ಜನರು ಇದನ್ನು ಉಪಯೋಗಿಸಿ ಸುಖಹೊಂದಿದ್ದಾರೆ.

**ಕರ್ನಾಟಕ ಆಯುರ್ವೇದಿಕ ಫಾರ್ಮಸಿ,**

ಶಿರಹಟ್ಟಿ, ಜಿಲ್ಲಾ ...

ಉರಿಯೊಳಗಿನ ಕರ್ಪೂರಕೆ ಕರಿಯುಂಟೆ! ಅಯ್ಯ।
ಬಯಲಮರೀಚಿಜಲಕ್ಕೆ ಬಿಸಿಲುಂಟೆ! ಅಯ್ಯ॥
ವಾಯುವಿನಪ್ಪಿದ ಪರಿಮಳಕ್ಕೆ ನಿರ್ಮಾಲ್ಯವುಂಟೆ! ಅಯ್ಯ॥
ನೀವು ನೆರೆಒಲಿದಬಳಿಕ ಯನಗೆಭವವುಂಟೆ
ಕೂಡಲಸಂಗಮದೇವ! ನಿನ್ನಕರುಣವೆನ್ನನೆಡೆಗೊಂಡಿತ್ತಾಗಿ॥

—ಶ್ರೀ ಬಸವಣ್ಣನವರು.

# ಪದ್ಯಶ್ರೀಮೆ.

ತನುನಿಮ್ಮದೆಂದಬಳಿಕ ಎನಗೆ ಬೇರೆ ತನುವಿಲ್ಲ।
ಮನನಿಮ್ಮದೆಂದಬಳಿಕ ಎನಗೆ ಬೇರೆ ಮನವಿಲ್ಲ।
ಧನನಿಮ್ಮದೆಂದಬಳಿಕ ಎನಗೆ ಬೇರೆ ಧನವಿಲ್ಲ।
ಇಂತೀ ತ್ರಿವಿಧವು ನಿಮ್ಮದೆಂದರಿತಬಳಿಕ।
ಎನಗೆ ಬೇರೆ ವಿಚಾರವುಂಟೆ ಕೂಡಲಸಂಗಮದೇವ॥

— ಶ್ರೀ ಬಸವಣ್ಣನವರು.

ಸಿರಿಗನ್ನಡಂ ಗೆಲ್ಗೆ.

# ವೀರಶೈವ ಚಂದ್ರಿಕೆ.

ಬಯಲುಮೂರ್ತಿಯಾಗಿನಿಂದನೊಬ್ಬ ಶರಣ. ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ. ಆತನ ಶಾಂತಿಸ್ಥೈರಣೆಯಿಂದ ಹುಟ್ಟಿದಾತ ವಿಷ್ಣು. ಆತನ ಕೋಪಕ್ರೋಧದಿಂದ ಹುಟ್ಟಿದಾತ ರುದ್ರ. ಈ ಮೂರು ಪೀಠವಂತಿರಲಿ. ಆ ಶರಣನನರಿಮು ಶರಣೆನುತಿರ್ದೆನು ಕೂಡಲ ಸಂಗಮದೇವಾ.

ಶ್ರೀ ಬಸವೇಶ್ವರ.

| ಸಂಪುಟ ೧ | ಶ್ರೀಮನ್ನೃಪಶಾಲಿವಾಹನ ಶಕೆ ೧೮೫೬ ನೂಲುಹುಣ್ಣಿವೆ. | ಸಂಚಿಕೆ ೪ |
| --- | --- | --- |

## ಪ್ರಾರ್ಥನೆ.

ನೋಡು ನೀನೆನ್ನ ಪರಿಭವದ ಬಾಧೆಯನು ಕೃಪೆ |
ಮಾಡು ಬೇಗದೊಳಭಯವಿತ್ತು ಶಂಕರಾ ‖ ಪಲ್ಲ ‖
ಮಾಯಕರ್ಮದ ಬಾಧೆ ಕಾಯಕರುಣದ ಬಾಧೆ |
ವಾಯುವಿಷಯೇಂದ್ರಿಯ ಬಾಧೆ! ಶಂಕರಾ ‖
ಹೇಯವಹ ಜನನಮರಣದ ಬಾಧೆ ತಾಪ-ಸಮು |
ದಾಯದತಿಬಾಧೆ ಬಲುಹೆನಗೆ | ಶಂಕರಾ ‖ ೧ ‖
ಹಸಿವೆ ತೃಷೆಗಳ ಬಾಧೆ ವ್ಯಸನವೇಳರ ಬಾಧೆ |
ದೆಸೆಗೆಡಿಸುವರಿಕುಳದ ಬಾಧೆ | ಶಂಕರಾ ‖
ಕುಸುಮಬಾಣನ ಬಾಧೆ ಮದಶೋಕ-ಮೋಹರತಿ |
ಮೀಸರದುರುಬಾಧೆ ಘನವೆನಗೆ | ಶಂಕರಾ ‖ ೨ ‖
ಬೇರೆಬೇರಿನ್ನು ಮೈದೋರಿಕಾಡುವ ಬಾಧೆ |
ನೂರುಸಾಸಿರಕೋಟಿಯುಂಟು ಶಂಕರಾ ‖
ಮೀರಲರಿದಿದನೆನಗೆ ನೀನೆ ತೊಲಗಿಸಿ ಸುಖದ |
ಸೂರೆಗೊಡು ಗುರುಶಂಭುಲಿಂಗಾ | ಶಂಕರಾ ‖ ೩ ‖

ಶ್ರೀ ನಿಜಗುಣ ಶಿವಯೋಗಿಗಳು
(ಕವಿಸರ್ಪಭೂಷಣರು)

# — ಜನಪದ ಸಾಹಿತ್ಯ. —

## ಹಳ್ಳಿಯ ಹಾಡುಗಳು.

ಸಂಗ್ರಾಹಕರು :- ತಿರುಮಲರಾಯರು ಕಾಲವಾಡ ( ನವಲಗುಂದ )

ತೊಟ್ಟಿಲದ ಕೂಸಿಗೆ ದೃಷ್ಟಿತಾಕೀತೆಂದು | ಕಟ್ಟೀನ ನವಿಲಗರಿಗಳ ।
ಕಟ್ಟೀನ ನವಿಲಗರಿಗಳ ಗೋದಿಯ ಕಪ್ಪು ತಂದಿಟ್ಟೀನ ಆಸಲಿಗೆ ||೧||

ಮಗಳನನ ಶೀಖವ್ವ ಮದರೀಯ ಉಡಬಾರ | ಎಸಳಕ್ಯಾದಿಗಿ ಮುಡಿಬಾರ ।
ಎಸಳಕ್ಯಾದಿಗಿ ಮುಡಿಬಾರ ನಿಮರಾಯರು | ಕುಸುಮಾಲಿ ಎಂದು ಕರದಾರ ||೨||

ಅವನನ್ನ ಶಂಕರಣ್ಣ ಮಾತೀಲೆ ಶ್ಯಾಣ್ಯಾನ | ಮಾವಿನೆಲ್ಯಾಗ ಗಿಳಿಬರೆದು |
ಮಾವಿನೆಲ್ಯಾಗ ಗಿಳಿಬರೆದು ತೋರ್‍ಯಾನ | ಮಾವಚನ್ನಿಗನ ಮಗಳಿಗೆ ||೩||

ಆಕೀಯ ಮನಿಮುಂದ ಆಕಳ ಐನೂರ | ಗೋಪಿಚಂದನದ ಕಡಗೋಲ ।
ಗೋಪಿಚಂದನದ ಕಡಗೋಲ ಹಿಡಕೊಂಡು | ದ್ರೌಪದಿ ಮಸರಕಡಿದಾಳ ||೪||

ಕಠಾಣಿ ಬಂದಾವ ಕಟ್ಟಕೋ ಶೀಖವ್ವ । ಪಟ್ಟಬಂದಾವ ಇಡಬಾರ |
ಪಟ್ಟಬಂದಾವ ಇಡಬಾರ ಶೀಖವ್ವ | ಉಡಪೀಯಕೃಷ್ಣ ಬಂದಾನ ಮದವ್ಯಾಗ ||೫||

ಕರಿಯಹೊಲದಾಗ ಎಳಿಯ ಸವತಿಕಾಯಿ | ಹರಿಯಂದರ್‍ಹ್ಯಾಂಗ ಹರಿಯೇಲಿ |
ಹರಿಯಂದರ್‍ಹ್ಯಾಂಗ ಹರಿಯೇಲಿ ಹಡದವ್ವ | ಮರಿಯಂದರ್‍ಹ್ಯಾಂಗ ಮರೆಯೇಲಿ ||೬||

ಗಂಡನಮನಿಗ್ಹೋಗ ಗೊಂಬಿ-ತೊಟ್ಟಲ ಒಯ್ಯ | ಗಂಡಗ ಒಯ್ಯ ಶಿಳಿಮಂಚ |
ಗಂಡಗ ಒಯ್ಯ ಶಿಳಿಮಂಚ ಶೀಖವ್ವ | ಮುಂಗೈಯ ಗಿಳಿಯ ಕರದೊಯ್ಯ ||೭||

ಅಕ್ಕ-ತಂಗೆರಬಣ್ಣ ಅವರಿಹೂವಿನಬಣ್ಣ | ಕುಪ್ಪಸದ ಕುತನೀಯ |
ಕುಪ್ಪಸದ ಕುತನೀಯ ನನ ಶೀಖವ್ವನ | ವಾಲೀಯಬಣ್ಣ ರತ್ನದ ||೮||

ಬಣ್ಣದಕಪ್ಪಿಣ್ಯಾಗ ರನ್ನದ ಗಣಪತೀಯ | ವಜ್ರ-ಮಾಣಿಕದ ಹಲಗೀಯ |
ವಜ್ರ-ಮಾಣಿಕಗ ಹಲಗೀ ತೊಟ್ಟಲದೊಳಗ | ಮುದ್ದನನಕೊಮಾರ ಮಲಗ್ಯಾನ ||೯||

ತ್ಪಾಟಕ ನನಶಂಕ್ರಣ್ಣ ತೋಳುಬೀಸುತಲ್ಹ್ಯಾವದ | ಬಾಳಿ-ಗಜನಿಂಬಿ ನಗತಾವ |
ಬಾಳಿ-ಗಜನಿಂಬಿ ನಗತಾವ ಶಂಕ್ರಣ್ಣಗ | ಬಾ! ಜಾಣನೆಂದು ಕರದಾವ ||೧೦||

ಕೆಂಪನ್ನಕಾಲಿಗೆ ತಂತೀಯಮುಚ್ಛೆವ್ವ | ತಂಪ್ಹೊತ್ತಿನ್ಹಾದಿ ನಡೆದಾನ |
ತಂಪ್ಹೊತ್ತಿನ್ಹಾದಿ ನಡೆದಾನ ನನಶಂಕರಣ್ಣನ | ಎಂಥ ಸಂಪನ್ನಿ ಹಡದಾಳ ||೧೧||

# ಹದಿನಾರು ಸೋಮವಾರಗಳ ಪದ್ಯ ಕಥೆ.

## ಶ್ರೀ ಶಿವವ್ರತ.

( ಶಿವಾನಂದ ದೀಕ್ಷಿತ ವಾಜಪೇಯ ವಿರಚಿತಂ. )

( ಮುಂದೆ ಸಾಗಿದ್ದು )

ಭಾ. ಷಟ್ಪದಿಗಳು :

(ಅರ್ಚಕನು ಅಂದದ್ದು-ಶ್ರೀ ಪಾರ್ವತಿಯು ವ್ರತಮಾಡಲು ಮಾಡಿದ್ದು)

೧೫ ತಾಯೆ ! ಒಡೆಯನ ಶಿವನ ವ್ರತದಿಂ |
ಮಾಯವಾದುದು ನನ್ನ ಕುಷ್ಠವು |
ಜೀಯಳೇ ! ಶಿವಮಹಿಮೆ ! ಕಾಣೆನಲಾಗಳಾವುಮೆಯು ||
ತಾಯೊಳೆನ್ನೊಳು ಮುಳಿದು ಪೋದ ವಿ |
ಧೇಯಪುತ್ರನು ಗುಹನು ತಾಂ ಬರ |
ಲೀಯುರುವ್ರತವೆಸಪೆನಾನೆನಲಿತ್ತಲಾ ಗುಹನು ||

( ಗುಹನು ತಾಯಿ (ಶ್ರೀ ಪಾರ್ವತಿ) ಯನ್ನು ಕೂಡಿದ್ದು ವ್ರತ ತಿಳಿದದ್ದು )

೧೬ ಬಂದು ಜನನೀ! ನಿನ್ನನಾನಿ |
ನ್ನೆಂದುವೀಕ್ಷಿಸದಂತೆ ಮಾಡಿರ |
ಲಿಂದು ನಿನ್ನಂ ಬಯಸಿ ಬಂದೆನು ಕೌತುಕವಿದೆನಲು ||
ಕಂದನೇ ! ನೀನೊಲಿದು ಬರೆ ನಾ |
ನಿಂದುಧರನಾ ವ್ರತವ ಗೆಯ್ದುದ |
ರಿಂದಿದೆನ್ನಂ ನೆರೆದೆಯೆಂದುಮೆ ನುಡಿಯಲಾ ಗುಹನು ||

( ಮಿತ್ರನ ಸಲುವಾಗಿ ಗುಹನು (ಷಣ್ಮುಖನು) ವ್ರತಸಂಕಲ್ಪಿಸಿದ್ದು ಮಿತ್ರನು ಬಂದು ಕೂಡಿಕೊಂಡದ್ದು- ಈ ವ್ರತ ತಿಳಿದದ್ದು)

೧೭ ಅನ್ಯದೇಶಕೆ ಪೋಗಿ ಬಹುದಿನ |
ವಿನ್ನುಮೈತರದಿರ್ದ ಪ್ರಿಯಸಖ |
ನನ್ನುಕಾಣಲು ಮಾಳ್ಪೆನಾನೀವ್ರತವನೆಂದೆಣಿಸಿ ||

ತನ್ನಿರೀಕ್ಷಣದೊಳಿರೆ ಸುಖಸಂ |
ಪನ್ನಸಖನೈತಂದು ಕೂಡೀ |
ಸನ್ನುತವ್ರತವರಿತು ನಾನಾ ಮದುವೆಯಾಗಿರಲು ॥

**( ಗುಹಸಖನು ವ್ರತಬೇಡಿಕೊಂಡದ್ದು-ಕನ್ನೆಯ ಹುಡುಕ ಹೋದ ಸಂಗತಿ )**

೧೮ ವರಸಖನೆ ! ಗುಹನೇ ! ವ್ರತವಿದಾ |
ಚರಿಪೆನಾನೆಂದಾಡಿ ಕನ್ನೆಯ |
ನರಸ ಯೋಚಿಸಿ ಗುಹನ ಸಖನಾದ್ವಿಜನು ನಾಡುಗಳ ||
ಚರಿಸಿ ಮಾರ್ಗದೊಳೊಬ್ಬ ದೊರೆಯ ಕು |
ವರಿಯ ನಡೆದ ವಿವಾಹಸಂಭ್ರಮ |
ವರಿತು ಕೂಡಲೆಯಾ ಸ್ವಯಂವರದೆಡೆಗೆ ಬಂದಿರಲು ||

**( ಆ ವೊಬ್ಬ ದೊರೆಯ ಮಗಳ ಮದುವೆಯ ಸಮಾರಂಭ-ಗುಹ ಸಖನ ಮದುವೆಯಾದ ಸಂಗತಿ ೨೨ರ ವರೆಗೆ )**

೧೯ ಒಡೆಯನೀತನ ಮಗಳ ಮದುವೆಯ |
ನಡೆದ ಜಂಬರಕೆಲ್ಲ ಕಡೆಗಿನ |
ಪೊಡವಿಯಾಣ್ಮರು ಬಯಸಿ ಬಂದುರೆ ಕಳೆಯನೆಸಗಿರಲು ||
ಒಡನೆ ಸಿಂಗರಗೊಂಡ ನಲವಿನ |
ಕಡು ಚಲುವೆಯುಹ ದೊರೆಯಕುವರಿಯು |
ಪಿಡಿದ ಮಲ್ಲಿಗೆಮಾಲೆಯಾನೆಯ ಭೂಷಣಂಗೊಳಿಸಿ ||

---

## ಹದಿನಾರು ಸೋಮವಾರಗಳ ಪದ್ಯ ಕಥೆ

### ೩ನೇ ಸಂಚಿಕೆಯಲ್ಲಿ ಅಚ್ಚಿನ ದೋಷಗಳಾದ ಪದ್ಯಗಳ ತಿದ್ದುಪಡಿ.

| | | ತಪ್ಪು | ಒಪ್ಪು |
|---|---|---|---|
| ಪುಟ ೫ | ಪದ್ಯ ೮ | ಅಂಜಿದಿರ್ಪೈ | ಅಂಜದಿರ್ಪೈ |
| ,, ೫ | ,, ೯ | ತಿಳುವಿದಾವ್ರತ | ತಿಳುಪಿರಾವ್ರತ |
| ,, ೫ | ,, ೧೦ | ಕೆಂಡಕ | ಕೆಂಡಕೆ |
| ,, ೬ | ,, ೧೨ | ತಿಳಿಯುದೆ | ತಿಳಿಯಿದೆ ! |
| ,, ೬ | ,, ೧೪ | ನಿನ್ನಶಾಪವು | ನನ್ನ ಶಾಪವು |

ಕವಿಯು ಕೇವಲ ಸ್ವಾಭಾವಿಕ ಪದಾರ್ಥಗಳನ್ನೂ ತನ್ನ ಪ್ರತಿಭಾಮೂಲವಾದ ಉತ್ಪ್ರೇಕ್ಷಾದಿಗಳಿಂದ ಪುಷ್ಟೀಕರಿಸಿ ಈ ಸೃಷ್ಟಿಪ್ರಪಂಚದಲ್ಲಿ ಪರಮಾತ್ಮನ ಅನಂತ ಮಹಿಮೆಯು ಸಾಮಾನ್ಯ ವಾಚಕರಿಗೂ ಮನಮುಟ್ಟುವಂತೆ ವರ್ಣಿಸುತ್ತಾನೆ. ಉತ್ತಮ ಕಾವ್ಯಗಳು ಪ್ರತ್ಯಕ್ಷಸಿದ್ಧವಾದ ಐತಿಹಾಸಿಕ ವಿಷಯಗಳಲ್ಲಿ ಅಪ್ರಕೃತವಾಗಿರುವ ಧರ್ಮ-ನೀತಿಗಳನ್ನು ಕಾಣುವಂತೆಯೂ, ಅಪ್ರತ್ಯಕ್ಷವಾದ ಪರಮಾತ್ಮತತ್ವ ಮೋಕ್ಷತತ್ವಗಳನ್ನು ಪ್ರತ್ಯಕ್ಷವಾಗಿ ವಾಚಕರ ಅವಗಾಹನೆಗೆ ಬರುವಂತೆಯೂ ಮಾಡುತ್ತವೆ.

ಕರ್ಪೂರ ಶ್ರೀನಿವಾಸರಾಯರು,
ರಾಜಸಭಾ ಭೂಷಣರು, ಮೈಸೂರು ಆಸ್ಥಾನ

# ಕಾವ್ಯಕುಂಜ.

ಧರ್ಮ ಮೋಕ್ಷ ಮೊದಲಾದ ಅತೀಂದ್ರಿಯ ವಿಷಯಗಳಿಗೂ ಇತರ ಪ್ರತ್ಯಕ್ಷ ವಿಷಯಗಳಿಗೂ ವಿಲಕ್ಷಣವಾದ ಸಂಬಂಧವನ್ನು ಮಹಾತ್ಮರು ತೋರಿಸಿರುವದು ಉತ್ತಮವಾದ ಕಾವ್ಯಗಳಲ್ಲಿಯೇ!

ಅನ್ಯಾದೃಶವಾದ ಆನಂದವನ್ನುಂಟುಮಾಡಿ ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧಪುರುಷಾರ್ಥಗಳೂ ವಾಚಕನಲ್ಲಿ ಸಿದ್ಧವಾಗುವಂತೆ ಮಾಡುವದೇ ಕಾವ್ಯದ ಮುಖ್ಯಲಕ್ಷಣವು ಕೇವಲ ಶಬ್ದಮಯವಾಗಿ ಆಯಾ ಅರ್ಥಗಳನ್ನು ನಿರೂಪಿಸುವ ಗ್ರಂಥಗಳೆಲ್ಲವೂ ಕಾವ್ಯಗಳಾಗಲಾರವು.

ಕರ್ಪೂರ ಶ್ರೀನಿವಾಸರಾಯರು,
ರಾಜಸಭಾ ಭೂಷಣರು, ಮೈಸೂರು ಆಸ್ಥಾನ.

# ಕಮಲಿನಿಯ ಕನವರಿಕೆ.

ಕವನಗಾರರು:- ಶ್ರೀ. ಶಂಕರಭಟ್ಟ ಅಗ್ನಿಹೋತ್ರಿ, ನವಲಗುಂದ.

೧ ಬೆಳಗಾಗಬಂತೆನ್ನ ಬಳಿಗೆ ಬಾರೆಲೊ ಚನ್ನ
ತೊಳಲಿ ಬಳಲುವದೇಕೆ ತಿರುಕನಂದದಿ ಗೆಳೆಯ |
ಸುಳಿಗಾಳಿಯನ್ನು ನಾ ಕಳುಹಿದೆನು ಮೊದಲೆ
ಮುಂಬೆಳಗಿನೊಳು ನಿನ್ನ ಬಳಿಗೆ ||

ಮುಳಿಸೇಕೆ ಮಧುಪನೇ ಗೆಳತಿಯೊಡನೊಂದಿನಿತು |
ಕುಳಿತು ಸವಿಮಾತಾಡಿ ಬಳಲಿಕೆಯ ಕಳೆಯುವದು |
ನಿಳಯವಿದು ನಿನ್ನದೈಗಳಿಲನೈತಂದು ಕೋಮಲೆಯ
ಬಯಕೆಯ ಪೂರಿಸೊ ||

೨ ಮಲ್ಲಿಕಾನಾನಿನಿಯ ಮೈಗೆ ಬಿಳುಪಂಟಿಹುದು |
ಬಲ್ಲೆನಾನಾ ಗುಲಾಬಿಯು ಬಹಳ ಕಂಟಕಿಯು |
ಬಲ್ಲೆಯಾ ? ನೀಪಾದರಿಯನು ಕೇತಕಿನಿರಂತರ ಭುಜಂಗಮ
ಯುಕ್ತಳು ||

ಎಲ್ಲಿನೋಡಿದರೇನೊ ನಿನಗೆ ತಕ್ಕವರಲ್ಲ |
ಫುಲ್ಲನಯನೆಯರೆಲ್ಲರವರ ಗೊಡವೆಯದೇಕೆ |
ಬಲ್ಲವನು ನೀನಲ್ಲ ಬಾಬಾರೊ ಭೃಂಗನೇ ಬೇಗದಿಂ ನನ್ನಬಳಿಗೆ ||

೩ ನೋಡುತೆನ್ನೊಡನೆ ಗುಂಜಾರವದಿ ಸವಿಮಾತ |
ನಾಡಿ ಸಂತೋಷವನು ತಾಳ್ದಪ್ಪುಗೈದು ಮು |
ದ್ದಾಡಿ ಮೈಗಂಪ ಮೂಸಿಸುತೆ ಮಕರಂದವಂ ಕುಡಿಕುಡಿದು
ತೃಪ್ತಿಯಾಂತು ||

ಮೂಡುವೆಳನಗೆಯಿಂದ ಮೋಹಿಸುತ್ತೆನ್ನ ಕೂ |
ಡಾಡು ಪರಮಾನಂದ ಶರಧಿಲಹರಿಯೊಳುಳಿದ |
ಗಾಡಿಕಾರ್ತಿಯರಬಿಡು ಕೇಡುಂಟು ಪರಸತಿಯಕೂಡುತಿಹ
ಪಾಪಿಷ್ಠಗೆ ||

# ನಾನು ನೀನರ ಅರಿವು.

ಕವನಗಾರರು:- ಬಾಲೇಹೊಸೂರ ರಾಮರಾಯುರು, ಶಿರಹಟ್ಟಿ.

ನಾನು ನೀನರ ಅರಿವು | ಮಾನವನೆ ನಿನಗಿರಲಿ |
ನಾನೆಂದನರರೆಲ್ಲ | ಹಾನಿಪೊಂದಿಹರು ||
ನೀನಿಲ್ಲದಾನಾನು । ಏನು ಮಾಡಲುಬಹುದು ।
ನೀನಿರಲು ಮಾಡ್ವದದು ಸಕಲ ಕಾರ್ಯ ||೧||

ಸರಸಿಜಾಸನಬೊಮ್ಮ | ನೊಲಿಯಿಸುತೆಕಸ್ಸಿಪುವು |
ಉರೆ ಅಹಂಕಾರದಲಿ । ಬಾಲಕನ ಹಿಂಸಿಸಲು ||
ಗುರುಗುರುತೆ ಹರಿಯಾಗ | ಸ್ತಂಭದಿಂ ಹೊರಬಿದ್ದು |
ಗರುವ ಹರಿಸುತಲವನ | ಕರುಳಗಳ ಬಗೆದ ||೨||

ಕುರುಕುಲಾಗ್ರಣಿತಾನು | ಪಿರಿದೆನಿಸಿ ನಾನೆಂದು |
ಜರಿದು ಪಾಂಡವರನ್ನು । ಪೀಡಿಸಿದನಂದು ||
ಮುರಹರನು ತ್ವರಿತದಲಿ । ಕರುಣಿಸುತೆ ಪಾಂಡವರ |
ದುರುಳರನು ಕೊಲ್ಲಿಸಿದ | ಪರಿಯು ನೀನರಿಯೆ ||೩||

ಪಶುಪತಿಯನೊಲಿಸುತ್ತೆ | ಅಸುರ ರಾವಣನವನು |
ವಸುಧೆಯೊಳು ನಾನೆಂಬ | ಗರುವಿನಿಂದ ||
ದಾಶರಥಿರಾಮನೊಳು | ದ್ವೇಷತೊಡಲಾದಿನದಿ |
ಕ್ಲೇಶಪಡುತೀಡಾದ | ಮೃತ್ಯುಮುಖಕೆ ||೪||

ಇಂತುಹರಿಹರಬೊಮ್ಮ | ರೊಲಿಯಿಸುತೆ ನಾನೆಂದು |
ಸಂತತವು ಧರೆಯೊಳಗೆ | ಗರುವಿಸಲು ಅವರುಗಳ |
ಅಂತರಂಗದೊಳಿರುವ । ಪರಮ ಆತ್ಮನು ತಾನು (ನೀನು) ।
ಸಂತಸದಿ ದಮನಿಸಿದ.| ಪರಿಯುಪೇಳುವದೆನಿತು ? ||೫||

# ಜೋಕಾಲಿ.

( — ಶಂಕರಭಟ್ಟ ಅಗ್ನಿಹೋತ್ರಿ, ನವಲಗುಂದ )

ತಂಗಿ ತವಮ್ಮಾ, ಜೋಕಾಲಿಯನ್ನು ಜೋಕೆಯಿಂದ ಜೀಕು. ಜೋಲಿ ತಪ್ಪಿದರೆ ಜಾರಿ ಬಿದ್ದೀ ! ಝುುರು ಝುುರು ಜೀಕಿ. ಭರಭರನೆ ಮೇಲಕ್ಕೇರಿಸುವೆಯಾದರೂ ಅದು ಸರಸರನೆ ಮತ್ತೆ ಕೆಳಗಿಳಿಯುತ್ತಿರುವದು. ಈ ಏರಿಳಿತಗಳನ್ನು ನಿಟ್ಟಿಸಿ ನೋಡು. ಎಷ್ಟು ಏರುವೆಯೋ ಅಷ್ಟೇ ಇಳಿಯುವಿ. ಏರುವಿಕೆಯು ಆಯಾಸ ಕರವಿದ್ದಷ್ಟು ಇಳಿಯುವಿಕೆಯು ನಿರಾಯಾಸವಾಗಿರುವದು !

ಜೋಕಾಲಿಯನ್ನು ಒಬ್ಬನೇ ಜೀಕಬಹುದು. ಇಬ್ಬಿಬ್ಬರೂ ಜೀಕಬಹುದು. ಜೀಕುವವರು ಯಾರೇ ಇದ್ದರೂ ಜೋಕಾಲಿಯು ಒಂದೇ. ಜೀಕುವಿಕೆಯೂ ಒಂದೇ. ಎಚ್ಚರದಿಂದ ಜೀಕುವವರು ಅಧಃಪತಿತರಾಗುವದಿಲ್ಲ. ಆದರೆ, ಮೈಮ ರೆತು ಜೀಕುವವರು ಪೆಟ್ಟುತಿನ್ನದೆ ಇರುವದಿಲ್ಲ. ಮೈಮರೆಯಬೇಡ. ಕೈಯನ್ನುಬಿಡ ಬೇಡ. ಜೋಕೆಯಿಂದ ಜೀಕು.

ಜೀಕಲಿಕ್ಕೆ ಕಸುವು ಬೇಕು. ಕಸುವಿದ್ದಷ್ಟು ಜೋಕಾಲಿಯುಮೇಲೆಏರುವದು ಕಸುವಿಲ್ಲದೆ ಜೋಕಾಲಿಯನ್ನು ಜೀಕಲು ಬಾರದು. ಮೊದಲಿನವರು ಬಹಳ ಕಸು ವುಳ್ಳವರು. ಅವರು ಜೋಕಾಲಿಯನ್ನು ಬಹಳ ಮೇಲೆ ಏರಿಸುತ್ತಿದ್ದರು. ಈಗಿನ ವರಿಗೆ ಕಸುವು ಕಡಿಮೆ. ತುಸುಮಾತ್ರ ಜೀಕುವರು. ಅಷ್ಟಕ್ಕೇ ದಣಿಯುವರು. ಉಸ್ಸೆಂದು ಇಳಿದುಬಿಡುವರು. ಯಾಕಂದರೆ ಇವರಿಗೆ ಕಸುವು ಕಡಿಮೆ. ತವಮ್ಮಾ, ನೀನೂ ಈಗಿನವನೇ. ಜೋಕೆಯಿಂದ ಜೀಕು.

ಜೋಕಾಲಿಯನ್ನಾಡುವವರಿಗೆ ಆನಂದ. ನೋಡುವವರಿಗೆ ನಲಿವು. ಆಡು ವದು ಒಳ್ಳೆಯದೋ ನೋಡುವದು ನೆಟ್ಟಗೋ ಎಂಬ ವಿಚಾರವು ಬಗೆಯಲ್ಲಿ ಬಂದಿ ತು. ಬಹಳವಾಗಿ ವಿಚಾರಿಸಿದೆನು. ಆಡಿದೆನು. ನೋಡಿದೆನು. ನೋಡುವದೇ ಒಳಿತೆಂದು ಮನವರಿಕೆಯಾಯಿತು. ತವಮ್ಮಾ ನೀನಾಡುವದನ್ನು ನೋಡುತ್ತೇನೆ. ನೀನು ಮಾತ್ರ ಜೋಕೆಯಿಂದ ಜೀಕು.

ಬಹಳ ಎತ್ತರವಾದ ಮರದ ಕೊಂಬೆಗೆ ಈ ಜೋಕಾಲಿಯನ್ನು ಕಟ್ಟಿರುವರು. ಎಷ್ಟು ಜೀಕಿದರೂ ಕೊಂಬೆಗೆ ಕೈಮುಟ್ಟಲಾರವು. ಕೊಂಬೆಯು ಸ್ಥಿರವದೆ. ಅದರ ಕೆಳಗಡೆಯಲ್ಲಿ ಮಾತ್ರ ಹಗ್ಗವು ಅಲ್ಲಾಡುತ್ತದೆ. ಕೊಂಬೆಯ ಮೇಲೆ ಹೋಗುವದು ಅದಕ್ಕಾಗದು. ಕೆಳಗಡೆಯಲ್ಲಿಯೇ ಅಲೆಯುತ್ತಿರುವದು ಜೋಕಾಲಿಯ ಹುಟ್ಟು ಗುಣವು.

\+ \+ \+ \+ \+

ಸಂಸಾರವೆಂಬ ಎತ್ತರವಾದ ಮರದ ಕೊಂಬೆಗೆ ಮಾನವನ ಜೀವಿತವೆಂಬ ಜೋಕಾಲಿಯು ಕಟ್ಟಲ್ಪಟ್ಟದೆ. ದೈವರೂಪದ ಹಗ್ಗವನ್ನು ಹಿಡಿದು ಪ್ರಯತ್ನವೆಂಬ ಜೀಕುವಿಕೆಯಿಂದ ಮಾನವನು ಸುಖ ದುಃಖಗಳೆಂಬ ಏರಿಳಿತಗಳಿಗೆ ಒಳಗಾಗುತ್ತಾನೆ. ಜೀಕಿ ಜೀಕಿ ಬೇಸತ್ತರೂ ಜೀವನಿಗೆ ಜೋಕಾಲಿಯ ಮೋಹವೇನೂ ತಪ್ಪುವದಿಲ್ಲ. ಈ ಜೋಕಾಲಿಯು ಅನಾದಿಯಾಗಿದೆ. ಆಡುವ ಜೀವನೂ ಅನಾದಿಯಾಗಿದ್ದಾನೆ. ಅವನು ಹೊಸ ಹೊಸ ಶರೀರಗಳನ್ನು ಧರಿಸಿ, ಹೊಸಬನಾಗಿ ತೋರುತ್ತಿದ್ದಾನೆ. ಕೊಂಬೆಯ ಕೆಳಗಡೆಗೆ ಮೃತ್ಯುಲೋಕದ ಜೀವಿತವೂ ಮೇಲುಗಡೆ ಮೋಕ್ಷ ಸಾಮ್ರಾಜ್ಯವೂ ಉಂಟು.

---

ಸಾಂಗಲಿ ಸಂಸ್ಥಾನದ ಪ್ರಜಾಜನಕ್ಕೆ ಸಂಸ್ಥಾನದ ಇತಿಹಾಸವು ಗೊತ್ತಿರುವದು ಅವಶ್ಯವಾದ ಸಂಗತಿ. ಸಂಸ್ಥಾನದ ಪ್ರಜೆಗಳ ಹಿತಕ್ಕಾಗಿ ಕಾರ್ಯ ಮಾಡಲು ಯತ್ನಿಸುವದು 'ಚಂದ್ರಿಕೆ'ಯ ಉದ್ದೇಶ. ಮೇಲಿನ ಧ್ಯೇಯವನ್ನೇ ಮುಖ್ಯವಾಗಿಟ್ಟುಕೊಂಡು

"ಪ ಟ ವ ರ್ಧ ನ"

ಎಂಬ ಚಿಕ್ಕ ದೃಶ್ಯವೊಂದನ್ನು ಪ್ರಕಟಿಸಲಾಗಿದೆ.

—ಸಂಪಾದಕರು.

ನಮ್ಮಲ್ಲಿ ಸತ್ಯದ ಸಾಹಿತ್ಯವಿಲ್ಲ. ಸತ್ತ ಸಾಹಿತ್ಯವಿದೆ. ಸಾಹಿತ್ಯಕ್ಕೂ ಸಮಾಜಕ್ಕೂ ನಿಕಟವಾದ ಸಂಬಂಧವಿದೆ. ನಮ್ಮಲ್ಲಿನ ವ್ಯಕ್ತಿಗಳಲ್ಲಿ ಧೈರ್ಯವಿಲ್ಲ! ಪ್ರಾಮಾಣಿಕತೆ ಇಲ್ಲ! ಸಾಹಸವಿಲ್ಲ! ಸ್ವತಂತ್ರ ಭಾವನೆ ಇಲ್ಲ. ಈಗಿನ ಕಾವ್ಯಗಳಲ್ಲಿಯಾಗಲಿ, ಉಪನ್ಯಾಸಗಳಲ್ಲಾಗಲಿ ಸತ್ಯಾಂಶಗಳಿಲ್ಲ. ನವೀನತೆ ಕಡಿಮೆ. ಸ್ವತಂತ್ರ ಮನೋಭಾವವು ಕಾಣಿಸುವದಿಲ್ಲ. ಎಲ್ಲವೂ ಕೃತ್ರಿಮತೆ!

**ಪ್ರೊಫೇಸರ ಜಹಾಗೀರದಾರ,**

ಕರ್ನಾಟಕ ಕಾಲೇಜ ಧಾರವಾಡ.

# ವಿವಿಧ ಸಾಹಿತ್ಯ.

ಹೊಸ ಅಭಿಪ್ರಾಯಗಳನ್ನು ಹೇಳುವಾಗ ಭಾಷಾಮರ್ಯಾದೆಯನ್ನು ಕೆಡಿಸಬಾರದು. ಈಗಿನ ಕೆಲವು ಬರವಣಿಗೆಗಳು ಅನ್ಯದೇಶ್ಯ ಪದಗಳನ್ನೂ, ಅನ್ಯ ಭಾಷಾರೀತಿಗಳನ್ನೂ ಅನಾವಶ್ಯಕವಾಗಿ ಉಪಯೋಗಿಸಿ ಹದಗೆಡಿಸುತ್ತಿವೆ. ಅವಶ್ಯವಾಗಿದ್ದರೆ ಅನ್ಯದೇಶ್ಯ ಪದಗಳನ್ನು ತೆಗೆದುಕೊಳ್ಳಲು ಅಡ್ಡಿ ಇಲ್ಲ. ಆದರೆ ಭಾಷೆಯನ್ನು ಹೊಲಸುಮಾಡಬಾರದು. ಭಾಷೆಯನ್ನು ಶುದ್ಧವಾಗಿಡುವದು ನಮ್ಮ ಮುಖ್ಯ ಕರ್ತವ್ಯ.

**ಆರ್. ನರಸಿಂಹಾಚಾರ್ಯರು,**

ಪ್ರಾಕ್ತನ ವಿಮರ್ಶ ವಿಚಕ್ಷಣರು, ಮೈಸೂರು.

# ಕನ್ನಡ ಸಾಹಿತ್ಯದಲ್ಲಿ ವೀರಶೈವರ ಮಹತ್ತಿ:

## ಲೇಖಾಂಕ ೪.

ಲೇಖಕರು :— ಶ್ರೀ. ಬಾಲೇಹೊಸೂರ ರಾಮರಾಯರು ಶಿರಹಟ್ಟಿ.

ಜಗತ್ತಿನಲ್ಲಿ ಬದುಕಿ ಬಾಳುವ ಸಕಲ ಪ್ರಾಣಿಗಳಿಗೂ ಒಂದೇ ಒಂದು ತೆರನಾದ ಅವಸ್ಥೆಯಲ್ಲಿರುವದು ಎಷ್ಟುಮಾತ್ರವೂ ಸೇರಿಕೆಯಿಲ್ಲ. ಆಗಾಗ್ಗೆ ಮಾ-ರ್ಪಾಟುಗಳು ಬೇಕೆಂಬುದು ಇತಿಹಾಸದಿಂದ ಕಂಡುಬರುವ ವಿಷಯವಾಗಿದೆ. ಸಾಧಾರಣವಾಗಿ ಮನುಷ್ಯಪ್ರಾಣಿಯನ್ನೇ ಉದಾಹರಣೆಗಾಗಿ ಇಟ್ಟುಕೊಳ್ಳುವಾ ! ಉತ್ಕ್ರಾಂತಿ ತತ್ವಕ್ಕನುಸರಿಸಿ, ಅವನ ಸಧ್ಯದ ಸ್ಥಿತಿಯು ಹೇಗೆ ಪ್ರಾಪ್ತವಾಯಿತೆಂಬದನ್ನು ಸುಪ್ರಸಿದ್ಧ ತತ್ವಶೋಧಕರಾದ, ಅಮೇರಿಕೆಯ ಡಾರ್ವಿನ್ ರೆಂಬವರು ಒಳ್ಳೇ ಮನೋರಂಜಕವಾಗಿಯೂ ಜಗವು ಒಪ್ಪುವಂತೆಯೂ ಬರೆದಿರುವರು. ಹೀಗೆಯೇ ಬೇಕಾದ ವಿಷಯವನ್ನು ತಕ್ಕೊಂಡರೂ ಇದೇ ಸ್ಥಿತಿಯು ಕಂಡುಬರುವದು. ಜಗತ್ತಿನಲ್ಲಿ ಇಂದು ಪ್ರಬಲವಾಗಿರುವ ಧರ್ಮಗಳ ವಿಷಯವನ್ನು ಪರಿಶೀಲಿಸಿದಲ್ಲಿ ಅಲ್ಲಿಯಾದರೂ ಇದೇ ಸ್ಥಿತಿಯು ವ್ಯಕ್ತವಾಗುತ್ತದೆ. ಒಂದೊಂದು ಧರ್ಮದ ಕಟ್ಟುಗಳಲ್ಲಿ ಸಮಾಜದ ಬೇಸರಿಕೆಯುಂಟಾದಾಗಲೇ, ಮತ್ತೊಂದು ಧರ್ಮವು ಉದಯವಾದುದು ಇತಿಹಾಸಸಿದ್ಧವಾದ ಮಾತಾಗಿದೆ. ಇದೀಗ ಧರ್ಮದ ವಿಷಯವಾಯಿತು.

ಇನ್ನು ಶಾಸ್ತ್ರವನ್ನು ತಕ್ಕೊಳ್ಳುವಾ? ಅವುಗಳಲ್ಲಿಯಾದರೂ ಹೀಗೆಯೇ ಸ್ಥಿತ್ಯಂತರವಾಗುತ್ತ ಬಂದಿದೆಯೇ ವಿನಃ ಅವೆಂದಿಗೂ ಒಂದೇ ಸ್ಥಿತಿಯಲ್ಲಿಲ್ಲ. ಸಂಗೀತ ಶಾಸ್ತ್ರವನ್ನೇ ಉದಾಹರಣೆಗಾಗಿ ತಕ್ಕೊಳ್ಳುವಾ ! ಕರ್ನಾಟಕದಲ್ಲಿ ಎಂದಿನಿಂದಲೋ ನಮ್ಮ ಪೂರ್ವಿಕರು ಸಂಗೀತ ವಿಷಯದಲ್ಲಿ ಇಂತಹವೇ ಕೆಲವು ಕಟ್ಟುಗಳಿರಬೇಕು. ಒಂದು ರಾಗವನ್ನು ಇಂತಹದೊಂದು ಸಮಯದಲ್ಲಿ ಹೀಗೆಯೇ ಹಾಡಬೇಕು. ಸ್ವರಗಳನ್ನು ಆಯಾರಾಗಕ್ಕನುಗುಣವಾದವುಗಳನ್ನು ಮಾತ್ರ ಹಾಕಬೇಕು ಎಂಬುದಾಗಿ ನಿರ್ಬಂಧನೆಗಳನ್ನು ತೀರ್ಮಾನಿಸಿದ್ದರು. ಆದರೆ ಮುಂದೆ ಮುಸಲ್ಮಾನ ಬಾದಶಹರ ಕಾಲಕ್ಕೆ ನಮ್ಮಲ್ಲಿನ ( ದಕ್ಷಿಣದಲ್ಲಿನ ) ಗಾಯಕರು ಕೀರ್ತಿಸಂಪಾದನೆಗಾಗಿ ಉತ್ತರದ ಕಡೆಗೆ ಹೋಗಿ, ಬಾದಶಹರ ಆಶ್ರಯವನ್ನು ಪಡೆದರು. ಆಗ್ಗೆ ಅವರ ಸಂಗೀತದ ಮೊದಲಿನ ಪದ್ಧತಿಯೂ ಮಾಯವಾಗಿ ಹೋಗಿ, ಬಾದಶಹರಿಗೆ ಸೇರಿಕೆ

ಇದ್ದಂಥ ಹೊಸದೊಂದು ಪದ್ಧತಿಯನ್ನೇ ಅವರು ಅನುಸರಿಸಿದರು. ಮುಂದೆ ಅದೇ ಪದ್ಧತಿಯಲ್ಲಿ ಉತ್ತರದ ಮುಸಲ್ಮಾನ ಗಾಯಕರು ಅನೇಕ ವಿಧವಾಗಿ ಮಾರ್ಪಾಟು ಮಾಡಿದರು. ಅದೇ ನಮ್ಮ ಪೂರ್ವಿಕರಾದ ಕರ್ನಾಟಕ ಗಾಯಕರಿಂದ ಗಾಯನ ಶಾಸ್ತ್ರವೇ "ಹಿಂದುಸ್ತಾನಿ ಸಂಗೀತ" ವೆಂಬದಾಗಿ ಹೆಸರುಗೊಂಡಿತು. ಆಮುಂದೆ ಉತ್ತರದ ಗಾಯಕರು ನಮ್ಮ ಕರ್ನಾಟಕ ದೇಶಕ್ಕೆ ಬಂದು ತಮ್ಮ ಕಲಾ ನೈಪುಣ್ಯವನ್ನು ತೋರಹತ್ತಿದರು. ಅವರು ಕೆಲವು ವಿಶಿಷ್ಟ ರಾಗಗಳನ್ನು ಹಾಡು ವಾಗ, ಅವುಗಳಲ್ಲಿ ಮಾಧುರಿಯನ್ನು ಹುಟ್ಟಿಸುವದಕ್ಕಾಗಿಯೆಂದು ಬೇರೆ ರಾಗವನ್ನು ಬೆರೆಯಿಸಿ ಹಾಡತೊಡಗಿದರು. ಈ ಅವರ ಹೊಸ ಪದ್ಧತಿಯು ನಮ್ಮ ವರಿಗೆ ಬಹಳವಾಗಿ ಸೇರಿತು. ಈಗಲೀಗ ಸಂಗೀತ ಶಾಸ್ತ್ರದ ತವರೂರಾದ ಮೈಸೂ ರಿನಲ್ಲಿ ಕೂಡ ಈ ವಿಷಯಕ್ಕೆ ಭಿನ್ನ ಮತವು ಉಂಟಾಗಿ ಕಲಾಕೋವಿದರಲ್ಲಿಯೇ ಎರಡು ಪಂಗಡಗಳಾಗಿವೆ. ಹೀಗೆ ಶಾಸ್ತ್ರದಲ್ಲಿನ ಮಾರ್ಪಾಟಿನ ಈ ಝರಿಯು ನಿರಾ ತಂಕವಾಗಿ ಸಾಗಿದೆಯೆನ್ನಲು ಅಡ್ಡಿ ಇಲ್ಲ.

ಇನ್ನು ಸಾಹಿತ್ಯ ವಿಷಯಕವಾದ ಇತಿಹಾಸವಾದರೂ ಹೀಗೆಯೇ ಇದೆ. ಸಾಧಾರಣವಾಗಿ ಕನ್ನಡ ಭಾಷೆಯಲ್ಲಿ ಗ್ರಂಥ ರಚನೆಯ ಕಾರ್ಯವು ೬ನೇ ಶತಮಾ ನದಲ್ಲಿ ಪ್ರಾರಂಭವಾಗಿದೆಯೆಂದು ಹೇಳುವದಕ್ಕೆ ಸಾಕಷ್ಟು ಆಧಾರಗಳಿವೆ. ಅದಕ್ಕೂ ಪೂರ್ವದಲ್ಲಿ ಕೂಡ ಕನ್ನಡ ವಾಙ್ಮಯವು ಅಸ್ತಿತ್ವದಲ್ಲಿದ್ದ ಸಂಗತಿಯನ್ನು ಮೈಸೂರ ಸುಪ್ರಸಿದ್ಧ ಇತಿಹಾಸ ಸಂಶೋಧಕರಾದ ಪ್ರಾಕ್ತನ ವಿಮರ್ಶ ವಿಚಕ್ಷಣರಾದ ರಾವಬಹಾದ್ದೂರ ಆರ್. ನರಸಿಂಹಾಚಾರ್ಯರು ಕಂಡು ಹಿಡಿದು ಅದೇ ವಿಷಯ ವಾಗಿ ತಮ್ಮ ಕವಿಚರಿತೆಯಲ್ಲಿ ಚರ್ಚಿಸಿರುವರು. ಆದರೆ ಆಗಿನ ಆ ವಾಙ್ಮಯವು ಮಾತ್ರ ಅಚ್ಚ ಕನ್ನಡದಲ್ಲಿದ್ದುದು. ಸಾಮಾನ್ಯವಾಗಿ ವಿಚಾರಮಾಡಿದರೆ ೬ನೇ ಶತ ಮಾನದಲ್ಲಿ ಹಾಗೂ ಆ ಮುಂದಿನ ಕನ್ನಡ ಸಾಹಿತ್ಯದಲ್ಲಿ ಸಂಸ್ಕೃತದ ಮಿಶ್ರಣವು ಬಹಳವಾಗಿ ಕಂಡುಬರುತ್ತದೆ.ಸಂಸ್ಕೃತಜ್ಞರಾದ ಆಗಿನ ಕಾಲದ ಬ್ರಾಹ್ಮಣವರ್ಗವು ಸಂಸ್ಕೃತ ಭಾಷೆಯನ್ನೇ ತಮ್ಮ ಮಾತಿಗಾಗಿ ಇಟ್ಟುಕೊಂಡಿದ್ದರು. ಆಗಿನ ಕಾಲದ ಕವಿಗಳಾದರೂ "ಅಚ್ಚ ಕನ್ನಡದಲ್ಲಿ ಗ್ರಂಥಗಳನ್ನು ರಚಿಸಿದರೆ, ಆ ಕೃತಿಗೆ ಗಾಂ- ಭೀರ್ಯವು ಸಾಕಷ್ಟು ಬರುವದು ಸಾಧ್ಯವಿಲ್ಲ. ಅದುಕಾರಣ ಯಾವದೊಂದು ಕನ್ನಡ ಗ್ರಂಥದಲ್ಲಿ ಸಂಸ್ಕೃತದ ಮಿಶ್ರಣವು ಬೇಕೇ ಬೇಕು." ಎಂಬುದಾಗಿ ತೀರ್ಮಾನಿಸಿದರು. ಸಾಧಾರಣವಾಗಿ ೧೨ನೇ ಶತಮಾನದವರೆಗೆ ಉಂಟಾದ ಕನ್ನ ಡ ವಾಙ್ಮಯವು ಇಂತಹ ಸ್ವರೂಪದ್ದೇ ಆಗಿದೆಯೆಂದರೆ ಅದೇನೂ ತೀರ ತಪ್ಪಾಗಲಿ ಕ್ಕಿಲ್ಲ. ಆ ಮುಂದೆ ಮಾತ್ರ ಅಂದಿನ ಕವಿಗಳ ಆ ರೀತಿಯು ಕೆಲವರಿಗೆ ಸೇರಲಿಲ್ಲ. ಅವರಲ್ಲಿ ನಯಸೇನ ಆಂಡಯ್ಯ ಮೊದಲಾದವರೇ ಅಗ್ರೇಸರರು.

ಇವರು "ದೇಶಭಾಷೆಯಲ್ಲಿ ಮೃದುಮಧುರವಾದ ಪದಗಳು ಸಾಕಷ್ಟು ಇರಲು ಅದರಲ್ಲಿ ಸಂಸ್ಕೃತ ಮಿಶ್ರಣದ ಅವಶ್ಯಕತೆಯೇಕೆ ? ಅಂತಹದೊಂದು ಅನಿವಾರ್ಯ ಪ್ರಸಂಗದಲ್ಲಿ ಮಾತ್ರ, ಸಂಸ್ಕೃತ ಪದಗಳನ್ನು ಉಪಯೋಗಿಸಬೇಕಲ್ಲದೆ, ಸುಮ್ಮನೆ ಕನ್ನಡದಲ್ಲಿ ಸಂಸ್ಕೃತ ಪದಗಳನ್ನು ಬೆರೆಯಿಸುವದು ಎಷ್ಟು ಮಾತ್ರವೂ ಸರಿಯಲ್ಲ" ವೆಂದು ಆಗಿನ ಸಂಸ್ಕೃತಕ್ಕೆ ಮನಸೋತ ಕವಿಗಳನ್ನು ಹೀಯಾಳಿಸಿದರು. ಆದರೂ ಸಂಸ್ಕೃತ ಪದಗಳನ್ನು ಉಪಯೋಗಿಸುವ ರೀತಿಗೊಂದು ಕಟ್ಟು ಇಟ್ಟರು. ಅದಾವುದೆಂದರೆ, ಒಂದು ಸಮಯ ಸಂಸ್ಕೃತ ಪದಗಳನ್ನುಪಯೋಗಿಸುವ ಸಂದರ್ಭವೇ ಪ್ರಾಪ್ತವಾದಲ್ಲಿ ಅವುಗಳನ್ನು ಇದ್ದಕ್ಕಿದ್ದಹಾಗೆ ಮಾತ್ರ ಉಪಯೋಗಿಸಲಾಗದು. ಅವುಗಳ ಸ್ವರೂಪವನ್ನು ಬದಲಾಯಿಸಿ ಬೆರೆಯಿಸಬೇಕು. ಕನ್ನಡದಲ್ಲಿ ಸಂಸ್ಕೃತದ ಮಿಶ್ರಣದಿಂದ ಗಾಂಭೀರ್ಯವು ಪ್ರಾಪ್ತವಾಗುವದೆಂಬ ಕಲ್ಪನೆಯು ಮಿಥ್ಯವಾದುದೆಂಬ ವಾದ ಹೂಡಿ, ಅಂಡಯ್ಯ ಮೊದಲಾದವರು ಅಂದಿನ ಕವಿಗಳನ್ನು ಖಂಡಿಸಿದರು. 'ಕಬ್ಬಿಗರ ಕಾವ' ಎಂಬ ಅಚ್ಚಗನ್ನಡದ ಗ್ರಂಥವೇ ಅಂದಿನ ಅವರ ವಾದದ ಪರಿಣಾಮವಾಗಿ ರಚಿತವಾದ ಕಾವ್ಯ.

ಕನ್ನಡ ಶಬ್ದಗಳನ್ನಲ್ಲದೆ ಅನ್ಯ ಶಬ್ದಗಳನ್ನು ತನ್ನ ಗ್ರಂಥದಲ್ಲಿ ಉಪಯೋಗಿಸಲಿಕ್ಕಿಲ್ಲವೆಂಬ ಭೀಷ್ಮಪ್ರತಿಜ್ಞೆಯನ್ನು ಮಾಡಿಯೇ ಅಂಡಯ್ಯನು ಆ ಕಾವ್ಯವನ್ನು ಬರೆಯಲುಪಕ್ರಮಿಸಿದುದು. ಅಂತೇ ಅವನು ತಾನು ಬರೆದ ಕಬ್ಬಿಗರ ಕಾವದಲ್ಲಿ "ಸಂಸ್ಕೃತ ಪದಗಳನ್ನು ತೋರಿಸಿ ಕೊಡಿ" ಎಂಬುದಾಗಿ ಅಂದಿನ ಕನ್ನಡ ಕವಿಗಳಿಗೆ ಆಹ್ವಾನೆಗೈದಿರುವನು. ಸಾಧಾರಣವಾಗಿ ಅಂಡಯ್ಯನ ಈ ವಿಚಾರವು ಕೆಲವರಿಗೆ ರುಚಿಸಿತು. ಮತ್ತೆ ಕೆಲವರಿಗೆ ರುಚಿಸಲಿಲ್ಲ. ಆದರೂ ಅಂದು ಜನಿಸಿದ ಆ ವಿಚಾರದ ಬೇಗೆಯು ಮಾತ್ರ ಸಾಧಾರಣವಾಗಿ ೧೪ನೇ ಶತಮಾನದ ವರೆಗೆ ತನ್ನ ಜ್ವಾಲೆಗಳನ್ನು ಚಾಚಿ ನಿಂತುಕೊಂಡಿತ್ತು. ಆಮುಂದೆ ಪೂರ್ವಿಕರ ಪರಂಪರಾಗತವಾದ ಪದ್ಧತಿಯನ್ನೇ ಇತ್ತೀಚಿಗಿನ ಕವಿಗಳು ಅನುಸರಿಸತೊಡಗಿದರು. ಅದು ಕಾರಣವೇ ಇಂದಿನ ನಮ್ಮ ಕನ್ನಡ ಬಾಂಧವರಿಗೆ ತಮ್ಮ ಮಾತೃಭಾಷೆಯಾದ ಕನ್ನಡ ನುಡಿಯು ಸ್ವತಂತ್ರವೋ! ಅಸ್ವತಂತ್ರವೋ ? ಕನ್ನಡ ಸಾಹಿತ್ಯದಲ್ಲಿ ಸಂಸ್ಕೃತ ಪದಗಳನ್ನು ಸೇರಿಸಬಹುದೋ ಅಥವಾ ಸೇರಿಸಕೂಡದೋ ? ಎಂದು ಮೊದಲಾಗಿ ಸಂಶಯಗಳು ಬಾಧಿಸುತ್ತಲಿವೆ. ಇದೇ ವಿಷಯವಾದ ಚರ್ಚೆಯನ್ನು ಉತ್ತರ ಕರ್ನಾಟಕದಲ್ಲಿ ಪ್ರತೀತಿಯನ್ನು ಪಡೆದ, ಕವಿಸಾಮ್ರಾಟ ಶ್ರೀಮಾನ್ ಬೇಂದ್ರೆ ದತ್ತರಾಯರು ಹಿಂದೊಮ್ಮೆ ಜಯಕರ್ನಾಟಕದಲ್ಲಿ "ಕನ್ನಡ ನುಡಿಯು ಪಡೆ ಮಾತು" ಎಂಬ ತಲೆಬರಹದ ಕೆಳಗೆ ವಿಶದವಾಗಿ ಮಾಡಿರುವರು. ವಾಚಕರಿಗೆ ಈ ವಿಷಯವು ಗೊತ್ತಿರಲಿಕ್ಕೆ ಸಾಕು.

ಇದೆಲ್ಲ ಸಾಹಿತ್ಯದ ಮಾತಾಯಿತು. ಇನ್ನು ರಾಜಕಾರಣವನ್ನಷ್ಟು ಪರಿಶೀಲಿಸುವಾ! ಆವುದೊಂದು ರಾಷ್ಟ್ರದಲ್ಲಿ ಬಹುಕಾಲದವರೆಗೆ ಒಂದೇ ಒಂದು ತರಹದ ರಾಜ್ಯದಾಡಳಿತದ ಕ್ರಮವು ಕಂಡುಬರುವದಿಲ್ಲ. ಮೇಲಿಂದಮೇಲೆ ಅಭ್ಯಂತರಗಳಾದುದನ್ನು ಇತಿಹಾಸದಿಂದ ತಿಳಿಯಬಹುದಾಗಿದೆ. ಮೊಟ್ಟ ಮೊದಲು ಜಾತಿಗಳಲ್ಲಿ ನಾಯಕರಿರುತ್ತಿದ್ದರು. ಅವರದೇ ಎಲ್ಲವೂ ಅಧಿಕಾರವಾಗಿತ್ತು. ಆ ಬಳಿಕ ಗ್ರಾಮ ಪಂಚಾಯತಿ ಮುಂತಾಗಿ ಸಂಸ್ಥೆಗಳು ಹುಟ್ಟಿದವು. ಮುಂದೆ ಅವುಗಳಿಗೊಂದು ಮೂರ್ತಸ್ವರೂಪವನ್ನು ತಂದು ಕೊಡುವದಕ್ಕಾಗಿ ಮಧ್ಯವರ್ತಿ ಸಂಸ್ಥೆಯೊಂದು ಏರ್ಪಟ್ಟಿತು. ಹಾಗೂ ಅಂತಹ ಆ ಸಂಸ್ಥೆಗೆ ಕೆಲವು ಚಾಲಕರಿರಬೇಕು. ಮತ್ತು ಅವರೆಲ್ಲರೂ "ಒಬ್ಬ ಮುಖಂಡ"ನ ವಿಚಾರದಂತೆ ನಡೆಯಬೇಕು ಎಂಬುದಾಗಿ ನಿರ್ಣಯಿಸಲ್ಪಟ್ಟಿತು. ಅದೇ ಸ್ಥಿತಿಯ ಬದಲಾವಣೆಯೆಂದರೆ, ಹಿಂದೆ ವರ್ಣಿಸಿದ ಸಂಸ್ಥೆಯ ಮುಖಂಡನಿಗೇನೇ ರಾಜನೆಂಬ ಸಂಜ್ಞೆಯು ಪ್ರಾಪ್ತವಾಯಿತು. ಆದರೆ ಈ ಸ್ಥಿತಿಯಾದರೂ ಕಾಹೀಮವಾಗಿ ಉಳಿಯಿತೇ ? ಇಲ್ಲ! ರಾಜನು ಪ್ರಜೆಗಳಿಂದ ನಿರ್ಣಯಿಸಲ್ಪಟ್ಟ ತೀರ್ಮಾನುಗಳಮೇರೆಗೆ ಹೀಗೆಯೇ ವರ್ತಿಸಬೇಕೆಂದು ನಿರ್ಣಯಿಸಲಾಯಿತು. ಇತ್ತೀಚಿಗೆ ಸ್ವಾತಂತ್ರ್ಯದ ಬಲವಾದ ಬಿರುಗಾಳಿಯು ಬೀಸಿದ್ದರಿಂದ ಆವುದೊಂದು ರಾಷ್ಟ್ರಕ್ಕೆ ರಾಜನೇ ಇರಕೂಡದು. ರಾಜ್ಯಾಂಗದ ಎಲ್ಲ ಸೂತ್ರಗಳನ್ನು ಕೇವಲ ಪ್ರಜೆಗಳುಮಾತ್ರ ವಹಿಸಿರಬೇಕು. ಎಂಬ ಮೊಟ್ಟಮೊದಲಿನ ಸ್ಥಿತಿಯೇ ಪ್ರಾಪ್ತವಾಯಿತು. ಇಂದಿನ ೨೦ನೇ ಶತಮಾನದಲ್ಲಿಯಂತೂ ಸ್ವಾತಂತ್ರತೆಯ ಭಾವನೆಯು ಪ್ರತಿಯೊಂದು ವ್ಯಕ್ತಿಯವರೆಗೆ ನಿಲುಕಿದೆಯೆಂದರೆ ಸಲ್ಲುವಂತಿದೆ. ಅದುಕಾರಣವೇ ಸಮಾಜಕ್ಕೊಂದು ಇಂತಹದೇ ಕಟ್ಟು ಬಹುಕಾಲದವರೆಗೆ ಇದೆಯೆಂದು ಹೇಳಲಿಕ್ಕಾಗುವದಿಲ್ಲ. ಮಾನವ ಪ್ರಾಣಿಗಳಿಗೆ ಜೀವಿಸುವದಕ್ಕೆ ಅನ್ನ-ಪಾನಾದಿಗಳು ಹೇಗೆ ಅವಶ್ಯಕವೋ, ಹಾಗೆಯೇ ಅವರಿಗೆ ಸಂಬಂಧಿಸಿದ ಅನೇಕ ವಿಷಯಗಳಲ್ಲಿ ಸ್ಥಿಂತ್ಯರವಾದರೂ ಅವಶ್ಯಕವಾದುದು. ಎಂಬ ವ್ಯವಹಾರಿಕ ತತ್ವವನ್ನು ಒತ್ತಿ ಹೇಳುವದಕ್ಕಾಗಿಯೇ ಮೇಲಿನ ವಿವೇಚನೆಯನ್ನು ಮಾಡಲಾಗಿದೆಯೆಂದು ವಾಚಕರು ಊಹಿಸಲಿಕ್ಕೆ ಸಾಕು. ಇರಲಿ.

ಇನ್ನು ನಮ್ಮ ಲೇಖನದ ಗುರಿಯಾದ ವೀರಶೈವರ ಮಹತಿಯ ಕಾಲವನ್ನೇ ಸ್ವಲ್ಪ ಪರಿಕಿಸುವಾ! ೧೨ನೇ ಶತಮಾನವೆಂದರೆ ಮೇಲೆ ವಿವೇಚನೆ ಮಾಡಲ್ಪಟ್ಟ ಸ್ಥಿತ್ಯಂತರಗಳ ಸುಗ್ಗಿಯೇ ಇದ್ದುದೊಂದು ಕಾಲ. ಬೌದ್ಧಧರ್ಮದ ಹ್ರಾಸವಾಗಿ ಹಿಂದೂ ಧರ್ಮವು ಪುನರುಜ್ಜೀವಿತವಾದುದಕ್ಕೆ ಹಿಂದೂ ಜನಾಂಗಕ್ಕೊಂದು ತರಹದ ವಿಶೇಷವಾದ ಆನಂದವು ಪ್ರಾಪ್ತವಾಗಿದ್ದುದೇನೋ ನಿಜ! ಆದರೆ ಅದೇ ಸ್ಥಿತಿಯು ಕಾಹೀಮವಾಗುವ ಸಂದರ್ಭದಲ್ಲಿಯೇ ಮತ್ತೊಂದು ಭೀತಿಯು ಅಂಕುರಿಸಿತು. ಅದ್ವೈತವನ್ನು ಕಂಡುಕೊಳ್ಳುವದಕ್ಕೆ ಕರ್ಮಮಾರ್ಗದ ಒಂದೇ ಒಂದು

ಸಾಧನವು ಆ ಕಾಲದ ಬಹುಜನರಿಗೆ ರುಚಿಸಲಿಲ್ಲ. ಅದುಕಾರಣ ಇಂತಹ ಈ ಸ್ಥಿತಿಯೊಳಗಿಂದ ಪಾರಾಗುವ ಬಗೆಯೆಂತು ? ಎಂಬೀ ವಿಚಾರದ ದುಗುಡವು ಬಾಧಿಸುತ್ತಿರುವಾಗಲೇ ಬಸವಣ್ಣನವರು ಉದಯಿಸಿದರು. ಅವರು ಕೇವಲ ನೀತಿ, ಸದಾಚಾರಗಳ ತಳಹದಿಯಮೇಲೆ ನಿರ್ಮಿತವಾದ ಹೊಸದೊಂದು ತತ್ವವನ್ನು ಬೋಧಿಸಿ ಅನೇಕರನ್ನು ತಮ್ಮ ಮತಕ್ಕೆ ಬರಮಾಡಿಕೊಂಡರು. ಕರ್ಮಮಾರ್ಗದ ತಿರುಳು ಸಾಮಾನ್ಯ ಜನಜೀವನಕ್ಕೆ ಸಹಜವಾಗಿ ತಿಳಿಯಲು ದುಸ್ಸಾಧ್ಯವಿದ್ದುದಾದರೂ ನಿಜವೇ ! ಅದುಕಾರಣ ನಾವು ಈ ಮೊದಲು ವಿವೇಚಿಸಿದ ಸ್ಥಿತ್ಯಂತರದ ತತ್ವಕ್ಕನುಗುಣವಾಗಿ ಬಹುಜನರು ಬಸವಣ್ಣನವರ ಬೋಧೆಯಿಂದ ಲಿಂಗಾಂಗಿಗಳಾದರು. ಆ ಮುಂದೆ ವೇದಕಾಲದಿಂದ ನಡೆದುಬಂದ ಲಿಂಗಧಾರಣೆಯೇ ಮುಖ್ಯವಾಗಿದ್ದು ಬಸವಣ್ಣನವರು ಉದ್ಧರಿಸಿದ ವೀರಶೈವ ಮತದ ತತ್ವಗಳನ್ನೇ ತಿಳಿಗನ್ನಡದಲ್ಲಿ ಸಾಮಾನ್ಯಜನರಿಗಾಗಿ ತಿಳಿಸಿ ಹೇಳುವದಕ್ಕೆಂದು ಅನೇಕಜನ ಶರಣರು ಉದಯಿಸಿದರು. ಅವರೊಳಗನೇಕರು ವಚನರೂಪದಲ್ಲಿ ಗ್ರಂಥಗಳನ್ನು ರಚಿಸಿದರು ಅಲ್ಲದೆ ಸಮಾಜದ ರೀತಿ-ನೀತಿಗಳ ವಿಷಯವಾಗಿ ಗ್ರಂಥರಾಶಿಯನ್ನೇ ನಿರ್ಮಿಸಿದರು. ಅದುಕಾರಣವೇ ಶರಣರು ತಮ್ಮ ತಮ್ಮ ಧರ್ಮಕಾರ್ಯದ ಜೊತೆಯಲ್ಲಿಯೇ ಜನಜೀವನಕ್ಕೆ ಪರಿಪೋಷಕವಾದ ಕನ್ನಡದ ಸಾಹಿತ್ಯಕ್ಕೆ ಅಸ್ತಿಭಾರವನ್ನು ಹಾಕಿದರು. ಇಂತು ಮಹಾನುಭಾವರಾದ ವೀರಶೈವ ಶರಣರ ಮಹತಿಯನ್ನೆಷ್ಟು ಬಣ್ಣಿಸಿದರೂ ಸಾಲದು. ಇರಲಿ ವಿಷಯವಿಸ್ತಾರವು ಬಹಳವಾಯಿತು. ಅದು ಕಾರಣ ಸಾಂಪ್ರತಕ್ಕೆ ನಮ್ಮ ಲೇಖನದ ಗುರಿಯಾದ ವೀರಶೈವ ಮಹತಿಯ ವಿಷಯವನ್ನೇ ಪ್ರಸ್ತಾಪಿಸುವದಕ್ಕೆ ಮೊದಲು ಮಾಡುವದು ಕ್ರಮಪ್ರಾಪ್ತವಾಗಿದೆ. ಇರಲಿ.

ವಾಚಕ ಮಹಾಶಯರೇ, ಹಾಗೂ ನನ್ನ ವೀರಶೈವ ಬಂಧುಗಳೇ, ನಾನು ಇಂದಿನ ನನ್ನ ಲೇಖನವನ್ನು ಪ್ರಾರಂಭಿಸುವದಕ್ಕೆ ಮೊದಲು ತಮಗೆ ನನ್ನ ಬರಹದ ಧ್ಯೇಯದಬಗ್ಗೆ ನಾಲ್ಕು ಮಾತುಗಳನ್ನು ಹೇಳುವದು ಅತ್ಯವಶ್ಯಕವಾಗಿ ತೋರಿದ್ದರಿಂದ ಹೇಳಿರುವೆನು. ಆಬಗ್ಗೆ ತಾವು ಸಹಾನುಭೂತಿಯಿಂದ ವಿಚಾರ ಮಾಡುವಿರಾಗಿ ನಂಬಿದ್ದೇನೆ.

ಸಾಹಿತ್ಯ-ಸೇವಕನಾದ ನನಗೆ ಜಾತಿಕೋತಿಗಳ ಕ್ಷುದ್ರ ಭಾವನೆಯು ನನ್ನನ್ನು ಆಕ್ಷೈಪಿಸಲಾರದು. ಈ ಮಾತನ್ನು ಹಿಂದಿನ ಕವಿಗಳ ಕೃತಿಗಳಮೇಲಿಂದ ನಿರ್ಣಯಿಸುವದಕ್ಕೆ ಬರುವಂತಿದ್ದುದು ಹೇಗೆ ಸಹಜವೋ, ಹಾಗೆಯೇ ಇಂದಿನಗು. ಯಾಕಂದರೆ ಭಾರತೀಯರಾದ ನಮ್ಮಲ್ಲಿ ಪರಂಪರೆಯನ್ನನುಸರಿಸುವ ಗುಣವು ಬಹುಮಟ್ಟಿಗೆ ಇದೆಯೆಂಬದನ್ನು ಬೇರೆ ಹೇಳಬೇಕಾಗಿಲ್ಲ.

ಹಿಂದೊಮ್ಮೆ ಅತಿವೈಭವದಿಂದ ಮೆರೆದ ಕನ್ನಡ ತಾಯಿಯ ಇಂದಿನ ಹೀನಸ್ಥಿತಿಯನ್ನು ಹೋಗಲಾಡಿಸಿ, ಭಾಗ್ಯೋದಯವನ್ನವಳಿಗೆ ತಂದುಕೊಡುವ ಶಕ್ತಿಯು ನಮ್ಮಲ್ಲಿಲ್ಲವೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿದೆ. ಆ ಮಾತನ್ನು ಬದಿಗಿಟ್ಟರೂ ಕನ್ನಡಮ್ಮನ ಸವಿಯಾದ-ಶಕ್ತಿವರ್ಧಕವಾದ ಪಾಲನ್ನು ಸವಿದು ಬೆಳೆದ ನಾವು, ದಿಗಂತಕೀರ್ತಿಯುತರಾದ ನಮ್ಮ ಪೂರ್ವದ ಸಾಹಿತಿಗಳ ಸಾಹಿತ್ಯಸೇವೆಯ ಯನ್ನಾದರೂ ಜನತೆಯ ಮುಂದಿರಿಸಿ ಮಾತೃಋಣದಿಂದ ಮುಕ್ತರಾಗಬೇಕೆಂಬುದೇ ನಮ್ಮ ಮನಸ್ಸಿನ ಹಣ್ಣಾದ ಹಂಬಲ. ಆ ಹಂಬಲವೆಂಬ ಹಣ್ಣಿನ ಮಗುವೇ ನಮ್ಮ " ವೀರಶೈವರ ಮಹತಿ. "

ಇಂತಹ ದೊಡ್ಡ ಸಾಹಸವನ್ನು ಮಾಡಲುದ್ಯುಕ್ತನಾದ ನನ್ನಿಂದ ಅನೇಕ ತಪ್ಪು ತಡೆಗಳಾಗುವದು ನೈಜ ಧರ್ಮ. ಯಾಕಂದರೆ " ಓಡುಗನು ಮಾತ್ರ ಮುಗ್ಗುವನು." ಇನ್ನು ಅಂತಹ ಸಂದರ್ಭವೇ ಪ್ರಾಪ್ತವಾದಲ್ಲಿ ತಾವುಗಳು ನನಗಾಗಿ ಸ್ನೇಹಾರ್ದ್ರಭಾವವನ್ನು ವ್ಯಕ್ತಪಡಿಸುವ ಕಾರ್ಯವಾದರೂ ತಮ್ಮದೇಯೆಂದು ನಾನು ತಮ್ಮತನದಿಂದ ಹೇಳಬೇಕಾಗಿದೆ. ಇಂದಿನ ಯುಗದಲ್ಲಿ ಪುರಾಣಮತವಾದಿಗಳು ಒಪ್ಪದ ಅನೇಕ ಸಂಗತಿಗಳು ಬೇರೆ ಬೇರೆ ಮತದವರ ಸಂಬಂಧವಾಗಿ ಬೇರೆ ಬೇರೆ ಪಾತ್ರಗಳಲ್ಲಿ ಐತಿಹಾಸಿಕ ದೃಷ್ಟಿಯಿಂದ ಚರ್ಚಿಸಲ್ಪಡುವದನ್ನು ತಾವು ಕಾಣಬಹುದು. ಈ ವಿಷಯದಲ್ಲಿ ತಾವು ಗಮನಿಸತಕ್ಕ ಇನ್ನೊಂದು ಮಹತ್ವದ ಸಂಗತಿಯೇನಂದರೆ, " ಕತ್ತಲೆಯ ಅಭಾವದಲ್ಲಿ ಬೆಳಕಿನ ಹೆಚ್ಚಳವು ಹೇಗೆ ಸಾಧ್ಯವಲ್ಲವೋ, ಹಾಗೆಯೇ ನಮಗೆ ಬೇಡಾದ ಸಂಗತಿಗಳು ಹೊರಬಿದ್ದಾಗಲೆ ಅವುಗಳಬಗ್ಗೆ ನಿಜಸ್ವರೂಪವನ್ನು ಕಂಡು ಹಿಡಿಯುವದಕ್ಕೆ ನಾವು ಯತ್ನಿಸಬೇಕಾಗುವದು." ಹಾಗೆಮಾಡಲುದ್ಯುಕ್ತರಾದಾಗಲೇ ನಮಗೆ ಕರ್ತವ್ಯದ ಅರಿವು ಉಂಟಾಗುವದು. ಇಂತು ಮಾನವ ಸ್ವಭಾವಕ್ಕನುಗುಣವಾದ ಸತ್ಯಾನ್ವೇಷಣೆಯವಾದದಲ್ಲಿ ಕೊನೆಗೆ ಆವುದೊಂದು ಸಂಗತಿಯ "ನಿಜಸ್ವರೂಪವು" ಬೆಳಕಿಗೆ ಬರುವದು.

ಒಟ್ಟಾರೆ, ಪ್ರಾರಂಭದಲ್ಲಿ ಕೆಲವು ಸಂಗತಿಗಳು ಬೇಡಾದವೆಂದು ಕಂಡುಬಂದರೂ, ಅವೇ ವಿಷಯಗಳು ಹಿಂದುಗಡೆಯಲ್ಲಿ ಹಿತಕಾರಿಯಾದವುಗಳೆಂದು ಹೇಳುವ ಸಂದರ್ಭವು ಪ್ರಾಪ್ತವಾಗುವದು. ಇದೊಂದು ವ್ಯವಹಾರಶಾಸ್ತ್ರದಲ್ಲಿನ ತತ್ವ. ಈ ತತ್ವಕ್ಕನುಗುಣವಾದ ದೃಷ್ಟಾಂತಗಳನ್ನು ವ್ಯವಹಾರ ವೇಂದಾಂತ ಇವೆರಡರಲ್ಲಿಯೂ ಕಾಣಬಹುದು.

ಇರಲಿ! ಇಂತಹ ಸಂದರ್ಭವೇ ಹಿಂದೊಮ್ಮೆ ಬಸವಣ್ಣನವರಿಗೆ ಉಂಟಾದಾಗ ಅವರಂದುದನ್ನು ಕೇಳಿ!

ಉಂಬುವದು ಉಡುವದು ಶಿವಾಚಾರ |
ಕೊಂಬುವದು ಕೊಡುವದು ಕುಲಾಚಾರ |
ಎಂಬ ಅನಾಚಾರಿಯ ಮಾತು ಕೇಳಲಾಗದು |
ವಿಪ್ರ ಮೊದಲು ಅಂತ್ಯಜ ಕಡೆಯಾಗಿ
ಶಿವಭಕ್ತರು ಒಂದೇ ! ಕೊಟ್ಟು ಕೊಂಬುವದು ಸದಾಚಾರ ||೧||

ಈ ವಚನದಲ್ಲಿನ ಅವರ ಪರಮತ ಸಹಿಷ್ಣುತೆಯು ನಿಜವಾಗಿಯೂ ಹೊಗಳ ತಕ್ಕದಾಗಿದೆ. ಇನ್ನು ಆವನೇ ಆಗಲಿ ಅನ್ಯರಲ್ಲಿನ ಗುಣಾಂಶವನ್ನು ಗ್ರಹಿಸಿ, ಆ ಬಗ್ಗೆ ಆನಂದ ಪ್ರದರ್ಶಿಸುವ ಶಕ್ತಿಯುಳ್ಳವನು ಅನ್ಯರಿಂದ ಪ್ರತಿಫಲಾಪೇಕ್ಷೆಯಾಗಿರ ಬೇಕಲ್ಲದೆ, ಕೇವಲ ಸ್ವಾರ್ಥಿಯಾದವನು ಇಂತಹ ವಿಚಾರವಿನಿಮಯಕ್ಕೆ ಎಷ್ಟುಮಾ ತ್ರವೂ ಅರ್ಹನಲ್ಲವೆಂಬುದೇ ಬಸವಣ್ಣನವರ ವಚನದಲ್ಲಿನ ರಹಸ್ಯ. ಇಂತೀ ಮಹ ತ್ತರವಾದ ಅವರ ಬೋಧಾಮೃತವನ್ನು ಇಡೀ ಜಗತ್ತೇ ಗ್ರಹಿಸಬೇಕಾಗಿದೆ.

ಇರಲಿ. ನಮ್ಮ ಇಂದಿನ ಲೇಖನದಲ್ಲಿ ಮೊದಲು ಹೇಳುವ ಮಾತುಗಳೇ ಬಹಳವಾದವು ಇನ್ನೂ ನಮಗೆ ಹಿಂದುಗಡೆಯಲ್ಲಿ ಹೇಳತಕ್ಕುವು ಬಹಳವಾಗಿವೆ. ಆದುಕಾರಣ ನಮ್ಮ ಲೇಖನದ ಗುರಿಯಂತೆ ಇಂದು ನಾವು ಚರ್ಚಿಸಬೇಕಾಗಿರುವ ನಿಜಗುಣಿ ಶಿವಯೋಗಿವರ್ಯರ ಚರಿತ್ರೆಯ ವಿಷಯದ ಕಡೆಗೆ ಸಾಗುವಾ !

## —ಃ ನಿಜಗುಣಿ ಶಿವಯೋಗೀಂದ್ರರು. ಃ—

**ಕವಿಯ ವೃತ್ತಾಂತ :—** ಇವನು ವೀರಶೈವ ಕವಿ. ಕೆಲವರು ಇವ ನಿಗೆ ನಿಜಗುಣಿ ಶಿವಯೋಗೀಂದ್ರರೆಂತಲೂ ಕರೆವರು. ಶಂಭುಲಿಂಗದೇವನೇ ಈತನ ಇಷ್ಟ ದೈವತವು. ಇವನು ಶಂಭುಲಿಂಗ ಬೆಟ್ಟದ ಸುತ್ತುಮುತ್ತಲಿನ ನಾಡಿಗೆ ಅರಸನಾಗಿದ್ದನೆಂದು ಇತಿಹಾಸದಿಂದ ತಿಳಿದುಬಂದಿದೆ. ಮುಂದೆ ಕೆಲವು ಕಾಲದಮೇಲೆ ವಿರಕ್ತಿಯನ್ನು ತಾಳಿ ಅಲ್ಲಿಯೇ ಶ್ರೀ ಶಂಭುಲಿಂಗನ ಸೇವೆಯಲ್ಲಿ ಉಳಿದ ದಿನಗಳನ್ನು ಕಳೆದನೆಂತಲೂ ಆಖ್ಯಾಯಿಕೆಯಿದೆ. ೧೬೭೭ರಲ್ಲಿದ್ದ ಷಡಕ್ಷರ ದೇವನು ತನ್ನ ರಾಜಶೇಖರ ವಿಳಾಸದಲ್ಲಿ ನಿಜಗುಣಿಗಳನ್ನು ಸ್ತುತಿಸಿರುವದರಿಂದ ಆ ಕಾಲಕ್ಕೆ ಹಿಂದೆ ಇವನು ಇದ್ದಿರಬೇಕಾಗಿ ಊಹಿಸಲು ಅವಕಾಶವಿದೆ. ಎಷ್ಟು ಹಿಂದೆ ಎಂಬ ಸಂಗತಿಯು ಮಾತ್ರ ನಿಶ್ಚಯಾತ್ಮಕವಾಗಿ ತಿಳಿದುಬಂದಿಲ್ಲ. ಇನ್ನು ಚನ್ನಸದಾಶಿವಯೋಗಿಗಳ “ ಶಿವಯೋಗ ಪ್ರದೀಪಿಕೆ ” ವ್ಯಾಖ್ಯೆಯನ್ನು ಬರೆದು ಅದಕ್ಕೆ “ ಪರಮಾರ್ಥ ಪ್ರದೀಪಿಕೆ ” ಎಂಬ ಹೆಸರಿಟ್ಟಿದ್ದಾನೆ. ಆದರೆ ಮೇಲೆ ಕಾಣಿಸಿದ ಚನ್ನಸದಾಶಿವಯೋಗಿಗಳ ಕಾಲವೇ ಇನ್ನೂ ನಿರ್ಧರಿಸಲಾಗಿಲ್ಲವಾಗಿ ಕವಿ

ಚರಿತೆಕಾರರು ಬರೆಯುತ್ತಾರೆ. ಇನ್ನೊಂದು ವಿಷಯ "ವಿವೇಕ ಚಿಂತಾಮಣಿ" ತನ್ನದೇ ಮತ್ತೊಂದು ಗ್ರಂಥದಲ್ಲಿ ೧೫೫೦ರಲ್ಲಿದ್ದ "ಆಮುಲಾನಂದ" ಕವಿಯಿಂದ ರಚಿತವಾದ "ಕಲ್ಪತರು" ಎಂಬ ಗ್ರಂಥದ ಬಗ್ಗೆ ಹೇಳುವದರಿಂದ ಇವನು ೧೬ನೇ ಶತಮಾನದಿಂದೀಚೆಯವನೇ ಎಂಬದಾಗಿ ತರ್ಕಿಸಲೂ ಸ್ಥಲವಿದೆ. ಒಟ್ಟಾರೆ ೧೬ನೇ ಶತಮಾನದ ಪ್ರಾರಂಭವೇ ಇವನ ಕಾಲವೆಂದು ಹೇಳಿದರೇನೂ ತಪ್ಪಾಗಲಿಕ್ಕಿಲ್ಲ ವೆಂದು ತೋರುತ್ತದೆ.

**ಗ್ರಂಥರಚನೆ :—** ನಿಜಗುಣಿ ಶಿವಯೋಗೀಂದ್ರರು ಅನುಭವಸಾರ, ಅರನತ್ತುಮೂವರ ತ್ರಿಪದಿ, ಕೈವಲ್ಯಪದ್ಧತಿ, ಪರಮಾರ್ಥಗೀತೆ, ಪರಮಾತ್ಮ ಪ್ರಕಾಶಿಕೆ. ಪರಮಾನುಭವ ಬೋಧೆ ಮತ್ತು ವಿವೇಕ ಚಿಂತಾಮಣಿ ಮುಂತಾಗಿ ಏಳು ಗ್ರಂಥಗಳನ್ನು ಕನ್ನಡದಲ್ಲಿ ಬರೆದಿದ್ದಾನೆ. ಇವನು ತನ್ನ ಎಲ್ಲ ಗ್ರಂಥಗಳನ್ನು ಇಷ್ಟದೈವತವಾದ ಶ್ರೀ ಶಂಭುಲಿಂಗನ ಚರಣಕ್ಕರ್ಪಿಸಿದ್ದಾನೆ. ಆದ್ದರಿಂದ ತನ್ನ ಎಲ್ಲ ಕೃತಿಗಳನ್ನು ಶಂಭುಲಿಂಗನೆಂಬುದಾಗಿಯೇ ತನಗೆ ಅಂಕಿತವನ್ನಿಟ್ಟುಕೊಂಡಿದ್ದಾನೆ. ಈ ತೆರನಾದ ಅವನ ಮಹತ್ಕಾರ್ಯವು ಸಾಹಿತ್ಯದ ದೃಷ್ಟಿಯಿಂದ ಎಷ್ಟು ಬೆಲೆಯುಳ್ಳದ್ದಾಗಿದೆಯೆಂಬದನ್ನು ಶಬ್ದಗಳಿಂದ ಹೇಳಲು ಸಾಧ್ಯವಿಲ್ಲ.

**ಅನುಭವಸಾರ :—** ಇದೊಂದು ಧರ್ಮಗ್ರಂಥ. ಸಾಧಾರಣವಾಗಿ ವೀರಶೈವ ಧರ್ಮದ ತತ್ವಗಳನ್ನು ವ್ಯವಹಾರಿಕ ದೃಷ್ಟಾಂತಗಳಿಂದ ಇದರಲ್ಲಿ ಚರ್ಚಿಸಲಾಗಿದೆ. ವಿಷಯುವು ಗುರು-ಶಿಷ್ಯರ ಸಂವಾದ ರೂಪದಲ್ಲಿದೆ. ಇಂತಹ ಈ ಶಿಕ್ಷಣದ ನವೀನ ಪದ್ಧತಿಯನ್ನು ನಿಜಗುಣಿಗಳು ೫೦೦ ವರುಷಗಳ ಹಿಂದೆಯೇ ಹೇಳಿಬಿಟ್ಟಿದ್ದಾರೆ. ಗ್ರಂಥಾರಂಭದಲ್ಲಿ ಶಂಭುಲಿಂಗನ ಸ್ತುತಿ ಇದೆ. ಆ ಮುಂದೆ ಪಾರ್ವತಿದೇವಿ, ಶ್ರೀ ಮಹಾ ಗಣಪತಿ, ಷಣ್ಮುಖ, ಶ್ರೀ ವೀರಭದ್ರ, ನಂದಿಕೇಶ್ವರ ಮೊದಲಾದವರನ್ನು ಕವಿಯು ಕ್ರಮದಿಂದ ಸ್ತುತಿಸಿದ್ದಾನೆ. ಕವಿಯು ತನ್ನ ಗ್ರಂಥದ ಉತ್ಕೃಷ್ಟತೆಯನ್ನು ಹೇಳಿದುದನ್ನು ಕೇಳಿ !

ಇದು ವೇದಶಿರದರ್ಥ | ವಿದುಪುರಾತನರ ಮತವಿದು ಗುರೂಕ್ತಿ ಮ |
ತ್ತಿದು ರನ್ನಗನ್ನಡಿಯಲ್ಲಿ ತನ್ನಮೊಗದಂದಮಂ | ಚನ್ನಾಗಿ ಕಾಣ್ಬ
ತೆರನಂತೆ ನಿಜಪದರೊ। ಳಂ ನಾಡೆ ತೋರ್ಪುದಖಿಳರ್ಗೆ || ೧ ||

ನಿಜವಾಗಿಯೂ ಕವಿಯು ವರ್ಣಿಸಿದುದರಲ್ಲಿ ಅತಿಶಯೋಕ್ತಿಯಿಲ್ಲವೆಂದರೆ ಸಲ್ಲುವಂತಿದೆ. ನಿಜಗುಣಿಗಳು ಹೇಳುವಂತೆ ಕನ್ನಡಿಯಲ್ಲಿ ತನ್ನ ಮುಖದ ಸೌಂದರ್ಯದ ನಿಜಸ್ವರೂಪವನ್ನು ಮಾನವನು ಹೇಗೆ ಕಂಡುಕೊಳ್ಳುವನೋ ? ಅದೇ

ತೆರನಾಗಿ ಅನುಭವಸಾರದಲ್ಲಿನ ವಿಷಯಗಳಿಂದ ವೀರಶೈವ ಮಹಾಜನಗಳು ತಮ್ಮ ವೇದಾಂತದಲ್ಲಿನ ಸಕಲ ಪ್ರಮೇಯಗಳ ಜ್ಞಾನವನ್ನು ಕಂಡುಕೊಳ್ಳಲು ಅವಕಾಶವಿದೆ.

**ಪರಮಾರ್ಥಗೀತೆ :—** ಇದು ಕೂಡ ಮತಸಂಬಂಧವಾದ ಧರ್ಮದ ವಿಷಯಗಳನ್ನು ಹೇಳಿರುವ ಒಂದು ಗ್ರಂಥವು. ಇದರಲ್ಲಿನ ಬಹುತರ ಪದ್ಯಗಳು 'ಲಲಿತ ರಗಳೆ'ಯ ರೂಪದಲ್ಲಿವೆ. ಶ್ರುತಿ, ಸ್ಮೃತಿ, ಪುರಾಣೇತಿಹಾಸಿಗಳ ಸಾರವನ್ನೇ ನಿಜಗುಣಿಗಳು ಈ ಪದ್ಯದಲ್ಲಿ ಕನ್ನಡಿಸಿ ಕೊಟ್ಟಿದ್ದಾರೆ. ಸಂವಾದ ಪದ್ಧತಿಯಿಂದಲೇ ಈ ಗ್ರಂಥವಾದರೂ ಬರೆಯಲ್ಪಟ್ಟಿದೆ. ತನ್ನ ಗ್ರಂಥದ ವಿಷಯವಾಗಿ ಕವಿಯ ಅಭಿಪ್ರಾಯ ಹೀಗದೆ :

ಪದಲಕ್ಷಣವಿಲ್ಲದೊಡಾ | ತಿದು ಸೇವ್ಯ ಜಗದೊ
ಳರ್ಥ ಮುಳ್ಳದರಿಂದಂ। ವಿದಿತಂ ಪೊನ್ನುಳ್ಳಂ
ಗುಣ | ದೊದವಾವುದು ವಿಲ್ಲದಿರ್ದೊಡಂ ಗುಣಿಯುತ್ತಿ ||೧||

ನನ್ನ ಈ ಗ್ರಂಥದಲ್ಲಿ ಪದಲಕ್ಷಣ ಮುಂತಾದ ವಿದ್ವಜ್ಜನಮಾನ್ಯ ವಿಷಯಗಳು ಇಲ್ಲದಿದ್ದರೂ ಅದರಲ್ಲಿನ ಪದಗಳು ಅರ್ಥಪೂರ್ಣವಾಗಿವೆ. ಅದುಕಾರಣವೇ ಛಂದಸ್ಸಿನ ಶಾಸ್ತ್ರದೃಷ್ಟಿಯಿಂದ ಅದಕ್ಕೆ ಸಾಹಿತ್ಯದಲ್ಲಿ ತರಗತಿ ಇಲ್ಲವೆಂದು ಗ್ರಹಿಸಿದರೂ ಕೂಡ ವ್ಯವಹಾರಿಕ ದೃಷ್ಟಿಯಿಂದ ಸಾಕಷ್ಟು ಬೆಲೆಯಿದೆಯೆಂಬದನ್ನು ಬೇರೆ ಹೇಳಬೇಕಾಗಿಲ್ಲ. ಇದೀಗ ಮಹಾತಪಸ್ವಿಯಾದ ನಿಜಗುಣಿಗಳ ಸೌಜನ್ಯಕ್ಕೆ ತಕ್ಕುದಾದ ವಿನಯಕ್ಕೆ ಶೋಭಿಸುವಂತಹ ಸಂಗತಿಯಾಗಿದೆ. ಸಾಧಾರಣವಾಗಿ ಆಗಿನ ಕಾಲಕ್ಕೆ ಪ್ರಚಲಿತವಾದ ಬೇರೆಬೇರೆ ಧರ್ಮಗ್ರಂಥದಲ್ಲಿನ ತಿರುಳನ್ನು ಕನ್ನಡಿಸಿ ಅವಕ್ಕೂ ತಮ್ಮ ವೀರಶೈವ ಮತದಲ್ಲಿನ ತಿರುಳಿಗೂ ತಾರತಮ್ಯವೇನಿದೆಯೆಂಬ ಸಂಗತಿಯನ್ನು ಸಕಲ ಲೋಕ ಜನಗಳಿಗೆ ತಿಳುಹಿಸಿಕೊಡುವ ಮಹತ್ಕಾರ್ಯದ ಭಾರವನ್ನೇ ಶಿವಶರಣರು ವಹಿಸಿಕೊಂಡಿದ್ದರೆಂಬುದು ಅವರುಗಳು ಬರೆದ ಗ್ರಂಥರಾಶಿಗಳ ಮೇಲಿಂದ ಊಹಿಸುವಂತಿದೆ.

**ಪರಮಾನುಭವ ಬೋಧೆ :—** ಈ ಗ್ರಂಥವು ಪದ್ಯರೂಪದ್ದಾಗಿದೆ. ಪದ್ಯಗಳು ಸಾಂಗತ್ಯದಲ್ಲಿವೆಯೆಂದು ಹೇಳಬಹುದು. ಒಟ್ಟರೆ ಇದರಲ್ಲಿ ಆರುಸಂಧಿಗಳಿವೆ. ಅದ್ವೈತ ತತ್ವದ ರಹಸ್ಯವನ್ನು ಕವಿಯು, ಈ ಗ್ರಂಥದಲ್ಲಿ ಸಂವಾದದಲ್ಲಿ ಬರೆದಿದ್ದಾನೆ. ಸಾಮಾನ್ಯರಿಗೆ ಸಂಸ್ಕೃತ ಭಾಷೆಯು ತಿಳಿಯುವದಕ್ಕೆ ಸುಲಭವಲ್ಲ. ಅದುಕಾರಣವೇ ಆ ಭಾಷೆಯೊಳಗಿನ ವೇದಾಂತ ವಿಷಯಕವಾದ ಗ್ರಂಥಗಳನ್ನು ವೀರಶೈವ ಕವಿಗಳು ತಿಳಿಗನ್ನಡದಲ್ಲಿ ರಚಿಸಿ, ಮಹದುಪಕಾರ ಮಾಡಿರುವರೆಂಬದರಲ್ಲಿ ಸಂಶಯವಿಲ್ಲ. ಗ್ರಂಥದ ವಿಷಯವಾಗಿ—

ಇದು ವೇದಾಂತದೊಳು ಗೌಪ್ಯವಾದರ್ಥ | ವಿದು ಪುರಾ
ಣಾಗಮ, ಸ್ಮೃತಿಸಾರ। ಇದು ಪರಮಾರ್ಥದ ತಿರುಳು
ತತ್ವರಹಸ್ಯ | ವಿದು ಪ್ರಾಕೃತವೆ ಎಲ್ಲರರಿಯಲ್ಕೆ ||೧||

ಕವಿಯು ಗ್ರಂಥದ ಮೊದಲಲ್ಲಿ ಶಂಭುಲಿಂಗದೇವನನ್ನು ಸ್ತುತಿಸಿದ್ದಾನೆ. ಆ ಮುಂದೆ ಕ್ರಮದಿಂದ ಪಾರ್ವತಿ, ಗಣಪತಿ. ಗಣಗಳು, ಸಿರಭಾರಿಗುರು ಶುಕ, ವಾಮದೇವ, ಮುಂತಾದವರನ್ನು ಹೊಗಳಿದ್ದಾನೆ. ಗ್ರಂಥದಲ್ಲಿನ ಭಾಷೆಯು ಗಂಭೀರವಾಗಿದ್ದು ಅರ್ಥಪೂರ್ಣವಾಗಿದೆ. ಅದರಲ್ಲಿ ಕೆಲವು ಪದ್ಯಗಳನ್ನು ವಾಚಕರಿಗಾಗಿ ಕೊಟ್ಟಿರುವೆವು. ಕನ್ನಡ ಭಾಷೆಯ ಸರಲತೆಯನ್ನಷ್ಟು ನೋಡಿರಿ :—

ಕಾದ ಕಬ್ಬಿನದೊಂದು ಗಟ್ಟಿಯೊಳಗಣಿತ | ಮಾದ
ಕಿಡಕಿಗಳುದಯಿಸುವಂತೆ | ಭೇದರೂಪಿನ ಜಗಜ್ಜೀವರ
ಕಲ್ಪಿತಾ | ನಾದ ಓರ್ವನಲ್ಲಿ ಮುಸಕಿತೋರ್ಕುಂ ||೧||

ಮೇಲಿನ ಪದ್ಯದಲ್ಲಿ ಅದ್ವೈತ ತತ್ವದ ತಿರುಳನ್ನು ಕವಿಯು ಎಷ್ಟು ಒಳ್ಳೇ ರೀತಿಯಿಂದ ಕೇವಲ ವ್ಯವಹಾರಿಕ ದೃಷ್ಟಾಂತದಿಂದ ಚಿತ್ರಿಸಿರುವನು. ಇದೀಗ ಸಾಮಾನ್ಯ ಜನಕ್ಕಾಗಿ ಕವಿಯು ಮಾಡಿದ ಅತ್ಯಂತಪವಿತ್ರ ಹಾಗೂ ಮಹತ್ಕಾರ್ಯ.

**ವಿವೇಕಚಿಂತಾಮಣಿ :—** ನಿಜಗುಣಿಗಳು ಬರೆದ ಗ್ರಂಥಗಳಲ್ಲಿ ಇದೊಂದು ಅಮೌಲ್ಯವಾದ ರತ್ನವೆಂತಲೇ ಹೇಳಬಹುದು. ಕನ್ನಡ ಸಾಹಿತ್ಯದಲ್ಲಿ ಸರ್ವ ವಿಷಯ ಸಂಗ್ರಹವುಳ್ಳ ಗ್ರಂಥವು ಇದೊಂದಾಗಿದೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲವೆಂದು ನಮ್ಮ ಭಾವನೆ. ನಿಜಗುಣಿಗಳು ತಮ್ಮ ಈ ಗ್ರಂಥದಲ್ಲಿ ಮಾನವ ಪ್ರಾಣಿಗೆ ಲೋಕದಲ್ಲಿ ಅವಶ್ಯವಾದ ಸಕಲ ವಿಷಯಗಳ ಬಗ್ಗೆ ವಿವೇಚನೆ ಮಾಡಿದ್ದಾರೆ. ವಿಷಯಗಳು ಬಹಳವಾಗಿರುವದರಿಂದ ಗ್ರಂಥವು ಹತ್ತು ಪ್ರಕರಣಗಳಾಗಿ ವಿಭಾಗಿಸಲ್ಪಟ್ಟಿದೆ. ವೀರಶೈವರಿಗುಚಿತವಾದ ವೇದಾಂತ ಮುಂತಾಗಿ ಧಾರ್ಮಿಕ ವಿಷಯಗಳೂ, ಸಾಹಿತ್ಯ ಸಂಗೀತ ಕಲೆ, ಮುಂತಾಗಿ ವಿವಿಧ ಸಾಹಿತ್ಯ ವಿಷಯಗಳೂ, ಇದರಲ್ಲಡಕವಾಗಿದೆ. ಇವನ್ನುಳಿದು ಕವಿಯು ಭೂಗೋಳ, ಖಗೋಳ ವಿಚಾರವನ್ನು ಒಳ್ಳೇ ವಿಶದವಾಗಿ ಚರ್ಚಿಸಿದ್ದಾನೆ. ಗ್ರಂಥದಲ್ಲಿ ನಿಸ್ಸಂಶಯವಾಗಿ ವಿವೇಚನೆಗೈಯಲಾದ, ಯಾವತ್ತೂ ವಿಷಯದ ವಿಚಾರವು, ಇಂದಿನ ಪಾಶ್ಚಾತ್ಯ ಶಿಕ್ಷಣದ ಸಂಸ್ಕೃತಿಯನ್ನು ಹೊಂದಿ ಸ್ವತಂತ್ರ ವಿಚಾರಗಳಿಂದ ಪರಿಪಕ್ವರಾದ ವಿದ್ವಜ್ಜನಗಳಿಗೂ ಕೂಡ ಮಾನ್ಯವಾಗುವಂತಿದೆ. ಗ್ರಂಥವು ಪದ್ಯದಲ್ಲಿದೆ. ವಿಷಯ ವಿಮೋಚನೆ ಸಂವಾದ ರೂಪವಾಗಿ ಬರೆದಿದೆ. ಇಂದಿನ ಶೈಕ್ಷಣಿಕ ವಿಷಯದಲ್ಲಿ ಮುಂದುವರಿದ ವಿಚಾರವನ್ನೇ ನಮ್ಮ ಕವಿ ನಿಜಗುಣಿಯೋಗಿಯು ೧೬ ನೇ ಶತಮಾನದ ಪ್ರಾರಂಭದಲ್ಲಿಯೇ ಹೇಳಿಬಿಟ್ಟಿದ್ದಾನೆ.

ಇರಲಿ, ಕವಿಯು ತಾನು ಬರೆದ ಗ್ರಂಥದ ಉದ್ದೇಶವನ್ನು ಆದಿಯಲ್ಲಿಯೇ ಹೇಳಿದ್ದಾನೆ. ಅದನ್ನು ನಾವಿಲ್ಲಿ ವಾಚಕರಿಗಾಗಿ, ಕೊಟ್ಟಿರುವೆವು. ಸ್ಮೃತಿ, ಪುರಾಣೇತಿಹಾಸ, ಪುರಾತನೋಕ್ತಿಗಳಿಗನುಸಾರದಿಂದ ಅನುಭವಿಗಳಹುದೆಂಬಂತೆ, ಸ್ವಕಪೋಲ ಕಲ್ಪಿತವಲ್ಲದ— ಸಾರತರ ಸತ್ಯಾರ್ಥಂಗಳನೆ ಸಂಗ್ರಹಿಸಿ, ಮುನ್ನುಳ್ಳ ಮಣಿಪುಂಜವಂ, ರಂಜನೆಗೆಯ್ದು ತರವರಿತು, ಸರಂಗೊಳಿಸಿ, ನವೀನಕಂಠಾಭರಣವೆನಿಸುವಂತೆ, ಮುಮುಕ್ಷು ಜನಂಗಳೀಜಗತ್ತಿನ ಸ್ಥಿತಿಗತಿಗಳಾವಪ್ರಕಾರದಿಂದಿಹವೆಂದರಿಸಿ, ಬಳಲದಭಿವ್ಯಕ್ತವಾಗಿಲ್ಲಿಯೇ ಸಲೀಲೆಯಿಂದರಿತು ಕೃತಾರ್ಥರಾಗಲೆಂದು ನಿಜಗುಣಶಿವಯೋಗಿ ಬೆಳುಗನ್ನಡವಾದ ವಚನ ರಚನೆಗಳಿಂ ವಿವೇಕ ಚಿಂತಾಮಣಿಯೆಂಬ ಪ್ರಕರಣಂ ಪೇಳ್ದಂ ''

ಇರಲಿ ಇನ್ನು ಈ ಗ್ರಂಥವನ್ನೋದುವವರಿಗೆ ಮತ್ತು ಕೇಳುಗರಿಗೆ ಲೋಕದಲ್ಲಿ ಎಂತಹ ಫಲವನ್ನು 'ಶಂಭುಲಿಂಗದೇವನು' ಈಯುವನೆಂಬದನ್ನು ಕೇಳಿ ! ಇದುವೇ ನಿಜಗುಣಿಯು ತನ್ನ ಗ್ರಂಥದ ಉಪಯುಕ್ತತೆಯನ್ನು ಹೇಳುವ ಬಗೆ-

ಶ್ರೀಮದನಂತ ಸಸೂರಿ, ಜನಸನ್ಮತದಿಂದೆಸೆವ, ವಿವೇಕಚಿಂ।
ತಾಮಣಿಯೆಂಬ ಸತ್ಕೃತಿಯು ಸಾಲಿಸಿದರ್ಗೆಡೆಗೊಂಡ ಸಂಶಯ ॥
ಸೋಮುವಡಂಗಿ, ಬೇರೆ ಬಹುಶಾಸ್ತ್ರವ ನೋದುವ ಬಾಧೆ ಪಿಂಗಿಸ।
ತ್ಪ್ರೇಮದೆಳೊಕ್ಕುಂ ಇಷ್ಟಫಲ ಸಿದ್ಧಿಸಮುನ್ನತಿ ಶಂಭಲಿಂಗದಿಂ ॥೧॥

**ಪರಮಾರ್ಥ ಪ್ರಕಾಶಿಕೆ**— ಚನ್ನಸದಾಶಿವಯೋಗಿ ಕೃತ ಪ್ರದೀಪಿಕೆಗೆ ಮಾಡಲ್ಪಟ್ಟ ಕನ್ನಡ ವ್ಯಾಖ್ಯಾನವೇ ಮೇಲ್ಕಾಣಿಸಿದ ಗ್ರಂಥದ ವಿಷಯವು ಸಂಸ್ಕೃತವನ್ನರಿಯದ, ಸಾಮಾನ್ಯ ಜನರಿಗೆ ಮುಕುತಿ ಸಾಧನಗಳನ್ನು ಕಲ್ಪಿಸಿಕೊಟ್ಟ ವಿಷಯವನ್ನು ನಿಜಗುಣಿಗಳು ತಿಳಿಗನ್ನಡದಲ್ಲಿ ಹೇಳಿರುವರು, ಮಹಾಜನಗಳು ಆಧ್ಯಾತ್ಮಿಕ ಆನಂದಸಾಗರದಲ್ಲಿ ಮುಳುಗಿ ಅಂತಿಮಧ್ಯೇಯವನ್ನು ಕಂಡುಕೊಳ್ಳಲೆಂಬದೇ ಕವಿಯ ಉದ್ದೇಶ—

**ಅರವತ್ತುಮೂವರ ತ್ರಿಪದಿ**— ಈ ಗ್ರಂಥಕ್ಕೆ ಕೆಲವರು ಪುರಾತನರ ತ್ರಿವಿಧಿಯೆಂತಲೂ ಕರೆಯುವದುಂಟು. ಹಿಂದಿನ ಕಾಲದಲ್ಲಿ ಶಿವಭಕ್ತರಾದ ಅರವತ್ತುಮೂರು, ಶರಣರ ಸ್ತುತಿಯೇ ಗ್ರಂಥದ ವಿಷಯ. ಪ್ರಾರಂಭದಲ್ಲಿ ಶಂಭುಲಿಂಗ ಪಾರ್ವತಿ ಇನ್ನುಳಿದ ಗಣಗಳ ಸ್ತುತಿಯಿದೆ. ಅದರಲ್ಲಿರುವ ಪಾರ್ವತಿ ದೇವಿಯುವರ ಸ್ತುತಿಯನ್ನಷ್ಟು ನೋಡಿ !

ಇಂಗಡದೊಳಿಂಪು ಬೆಳ । ದಿಂಗಳೊಳು ತಂಪು ಕುಸು ॥
ಮಂಗಳೊಳು ಕಂಪು ಬೆರೆದಂತೆ । ಪಿಂಗದಗ ಸುತೆಗೆ ನತನಪ್ಪೆ ॥೧॥

**ಕೈವಲ್ಯಪದ್ಧತಿ**- ಭಕ್ತಿಮಾರ್ಗಾವಲಂಬಿಗಳಿಗೆ ಅನುಕೂಲವಾಗಿಯೂ, ಒಳ್ಳೇರಸವತ್ತಾಗಿಯೂ ಬರೆಯಲಾದ ಇದೊಂದು ಭಜಕಜನರ ಕೈದರ್ಪಣವಾಗಿದೆ. ಕವಿಯು ಗ್ರಂಥದಲ್ಲಿ ಪರಶಿವನನ್ನು ಮೆಚ್ಚಿಸುವದಕ್ಕಾಗಿ ಅನೇಕಭಾವಗಳಲ್ಲಿ ಪದ್ಯರೂಪದಿಂದ ಬೇಡಿಕೊಂಡಿರುವನು. ಪದ್ಯಗಳಲ್ಲಿ ಪದಲಾಲಿತ್ಯವೂ ಅರ್ಥಗಾಂಭೀರ್ಯವೂ ತುಂಬಿತುಳಕುವದಲ್ಲದೆ, ಅನ್ಯಾದೃಶ್ಯವಾದ ಆಧ್ಯಾತ್ಮಿಕ ವಿಚಾರಗಳು ಅವುಗಳಲ್ಲಿಡಕವಾಗಿದೆ. ಪ್ರತಿಯೊಂದು ಪದಾಂತ್ಯದಲ್ಲಿ 'ಶಂಭುಲಿಂಗವೆಂಬ' ಅಂಕಿತವಿದೆ. ಕವಿಯು ತನ್ನ ಗ್ರಂಥದ ಬಗ್ಗೆ ಹೀಗೆ ಅಭಿಪ್ರಾಯ ಪಟ್ಟಿರುವನು.

ಅಬಾಲವೃದ್ಧರಿಗಾಯಸವಿನಿತಿಲ್ಲದಂತೆ ಸಮ್ಯಕ್ ಜ್ಞಾನಿಗಳೊಡಂಬಡುವಂತೆ. ಸಕಲ ವೇದಾಂತಾಗಮ ಸ್ಮೃತಿ ಪುರಾಣೇತಿಹಾಸ, ಸೂತ್ರಾದಿ ಶಾಸ್ತ್ರಸಮ್ಮತದಿಂ ಪುರಾತನ ಗೀತಾನುಗುಣ್ಯವೆನಿಸಿ, ಮೃದು ಮಧುರ ಲಕ್ಷಣಯುಕ್ತವಾಗಿ, ರಚಿಸಿದುದಂ ||

ಇರಲಿ ಇಂತಹ ಮಹತ್ತರವಾದ ಭಕ್ತಿರಸ ಪೂರ್ಣವಾದ ಗ್ರಂಥದ ಒಂದು ಪದ್ಯವನ್ನು ವಾಚಕರಿಗಾಗಿ ಇಲ್ಲಿ ಕೊಡುವದು ಉಚಿತವಾಗಿ ಕಂಡುಬಂದದ್ದರಿಂದ ಕೊಟ್ಟಿರುವೆವು.

ರಾಗ— ತಾಳ—

ಕೂಡ ನೇಮಿಸಿದೆ ಹಿತವಹಿತವೆರಡನು ||
ನೊಡು ನಿನ್ನ ಬಲ್ಲತನವು ಘನಪಭವಾ || ಪ ||
ಕಡುಚಲ್ವೆಸೆವ ಜವ್ವನವನು ಜರೆಯನು |
ಬಿಡಲರಿದೆನಿಪ ಭೋಗವನು ರೋಗವನು ||
ತಡೆಯದಖಿಳ ವಿದ್ಯೆಯನು ದರಿದ್ರತೆಯನು |
ಪೊಡವಿಗಧಿಕ ಸಂಪದವನು ಲೋಭವನು ||೧||

ಪರಿತೋಷವನು ವಿತ್ತದತಿಯಾಶೆಯನು ಪರ |
ತರಶಮೆಯನು ಸೀರೆಯರ ವಿಲಾಸವನು ||
ಸೊಗಸಿನ ಜೀವನವನು ಮರಣವನು |
ವಿರತಿಯನಗಲದ ಅರಿವನು | ಗರ್ವವನು ||೨||

ಮನುಜತ್ವವನು ಮುಕ್ತಿಯೊಲವಿಲ್ಲದಿಹುದನು |
ತನುದಂಡನೆಯನು ಚಿತ್ತದೊಳು ಕಾಮುವನು ||
ಮುನಿವರ್ತನೆಯನು ಲೋಕದ ರಂಜನೆಯನು ಪಾ |
ವನ ಶಂಭುಲಿಂಗ ಎನ್ನ ಸಂಸ್ಕೃತಿಯನು ||೩||

ಮೇಲಿನ ಪದ್ಯದಲ್ಲಿನ ಭಾವವು ಎಷ್ಟು ವಿಚಾರಾರ್ಹವಾಗಿದೆ ಎಂಬದನ್ನು ಬೇರೆ ಹೇಳಬೇಕಾಗಿಲ್ಲ. ಆದರೂ ಹೇಳುವದು ಸರಿಯಾಗಿ ಕಂಡದ್ದರಿಂದ ಇಲ್ಲಿ ಹೇಳಲಾಗಿದೆ. ಪ್ರಪಂಚದಲ್ಲಿ ಮಾನವ ಪ್ರಾಣಿಗೆ ಜವ್ವನ ಜರೆ, ಭೋಗರೋಗ, ವಿದ್ಯೆ-ಅವಿದ್ಯೆ, ದಾರಿದ್ರ್ಯ-ಸಂಪದ, ಔದಾರ್ಯ-ಕೃಪಣತನ, ಸೊಗಸಿನ ಜೀವನ, ದುಃಖದಾಯಕ ಮರಣ, ಇತ್ಯಾದಿ ಸುಖ-ದುಃಖಮಿಶ್ರಿತವಾದ ಸ್ಥಿತಿಯನ್ನು ಕೊಟ್ಟಿರುವದರಲ್ಲಿ ದೇವನ ಜಾಣ್ಮೆಯನ್ನು ಎಷ್ಟುಹೊಗಳಿದರೂ ಸಾಲದು. ಕೇವಲ ಸೌಖ್ಯವನ್ನು ಕೊಟ್ಟರಲು ಮಾನವನು ಅಹಂಕಾರಿಯಾಗುವನೆಂಬ ಭೀತಿಯಿಂದಲೋ? ಕೇವಲ ದುಃಖವನ್ನು ಕೊಟ್ಟರಲು ಮಾನವನು ಧರ್ಮವನ್ನು ತ್ಯಜಿಸಿ ಹೊಟ್ಟೆಪಾಡಿಗಾಗಿ ಪಾಪಾಚರಣೆ ಗೈಯುವನೆಂತಲೋ? ಅದಾವ ಕಾರಣದಿಂದ ಶಂಭುಲಿಂಗದೇವನು ಹೀಗೆ ಮಾಡಿರಬಹುದೆಂಬ ಸಂದಿಗ್ಧ ಭಾವವು ಜನಿಸಿದಾಗಲೇ ಪರಮ ವಿರಕ್ತನೂ ಜ್ಞಾನಿಯೂ ಆದ ನಮ್ಮ ನಿಜಗುಣಿಯೋಗೀಂದ್ರನು ಇಂತು ವಿಚಾರಗೈದಿರಬಹುದೇ?

---

# ಅಭಿಪ್ರಾಯ.

ತಾವು ಹೊರಡಿಸುತ್ತಲಿರುವ "ವೀರಶೈವ ಚಂದ್ರಿಕೆ" ಯನ್ನು ಕಂಡು ಸಂತೋಷವಾಯಿತು. ಅದರಲ್ಲಿ ಇನ್ನೂ ಅನೇಕ ವಿಷಯಗಳು ಬೇಕಾಗಿದ್ದರೂ ಆರಂಭದಲ್ಲಿ ಇಷ್ಟು ಉತ್ತಮವಿಷಯಗಳಿಂದ ಹೊರಟದ್ದು ಸ್ತುತ್ಯವಾದ ಸಂಗತಿಯು. ಕನ್ನಡ ತಾಯಿಯ ಉದ್ಧಾರವಾಗುವದಲ್ಲದೆ, "ವೀರಶೈವ ಧರ್ಮ (ಮತ) ಚಂದ್ರಮನ" ಚಂದ್ರಿಕೆಯು, ಸಮಾಜದಲ್ಲುಂಟಾದ ಗಲಭೆಯನ್ನು ಶಾಂತಮಾಡುವದರಲ್ಲಿ ಸಹಾಯವಾದರೂ ಆಗುವದೆಂದು ನಂಬಿದ್ದೇನೆ.

ಮೂರುಸಾವಿರ ಮಠ
ಹುಬ್ಬಳ್ಳಿ,
ತಾ. ೨೮—೮—೩೩

ವೇ||
ನೀಲಕಂಠ ದೇಶಿಕರು
ಚಿಕ್ಕೋಡಿ.

# ಸ್ವಾರ್ಥ ತ್ಯಾಗ.



ಕಥೆಗಾರ— ಶ್ರೀ ವೆಂಕಟರಾವ ಫಡಣೀಸ, ಶಿರಹಟ್ಟಿ.

( ಹಿಂದಿನಿಂದ ಮುಂದೆಸಾಗಿದ್ದು. )

ಪತ್ರನನ್ನು ಓದಿ ಮುಗಿಸಿದಕೂಡಲೇ ಇಡೀ ಬ್ರಹ್ಮಾಂಡವೇ ನನ್ನ ಮೇಲೆ ಕಳಚಿಬಿದ್ದಂತೆ ಭಾಸವಾಯಿತು! ಕಂಬನಿಗಳುದುರಹತ್ತಿದವು! ಕಂಠವು ಸದ್ಗದಿತವಾಯಿತು! ನನ್ನ ಮಾಲತಿ! ನನ್ನ ಪ್ರೇಮದ ತಂಗಿ! ಯಾವಳ ಸುಖಕ್ಕಾಗಿ ನಾನೀವನವಾಸವನ್ನು ಭೋಗಿಸುತ್ತಿರುವೆನೋ ಅವಳು ಆ ನನ್ನ ಪ್ರೇಮದ ತಂಗಿಯು, ಸಾಯಲಾಗಿರುವದನ್ನು ಕೇಳಿ. ವಾಚಕರೇ ನನಗೆ ಹೇಗೆ ಆಗಿರಬೇಡ? ಅಬಚಿಗೆ ನಡೆದ ಸಂಗತಿಗಳನ್ನೆಲ್ಲ ಹೇಳಿ ಸಮಾಧಾನಪಡಿಸಿ ಹಾಗೆಯೇ ಹೊರಟೆನು.

## ೮.

ಮಾಲತಿಯು ನಿರ್ವಿಣ್ಣಳಾಗಿ ಹಾಸಿಗೆಯಮೇಲೆ ಬಿದ್ದುಕೊಂಡಿದ್ದಳು! ಅವಳ ಮೋರೆಯಮೇಲೆ ಪ್ರೇತಕಳೆಯು ಸುರಿಯುತ್ತಿತ್ತು! ಅವಳ ಬಳಿಯಲ್ಲಿ ಅವರೂ ಮ್ಲಾನ ಮುಖದಿಂದ ಕುಳಿತುಕೊಂಡಿದ್ದರು! ನನ್ನನ್ನು ನೋಡಿದ ಕೂಡಲೇ ಅವರು 'ಮಾಲತಿ! ಇದುನೋಡು ಶಾಂತೆಯು ಬಂದಳು.' ಅಂದರು ನನ್ನ ಹೆಸರು ಕಿವಿಗೆ ಬಿದ್ದಕೂಡಲೇ ಅವಳು ನನ್ನನ್ನು ಕಣ್ಣುತೆರೆದು ನೋಡಿದಳು ಇದೂ ವರೆಗೆ ತಡೆದ ನನ್ನ ದುಃಖವು ಒಮ್ಮೆಲೆ ಹೊರಹೊಮ್ಮಿತು! ಅವಳ ಹತ್ತರ ಹೋಗಿ ಕುಳಿತು ಪ್ರೀತಿಯಿಂದ ಮೋರೆಯಮೇಲೆ ಕೈಯಾಡಿಸುತ್ತ ಕೇಳಿದೆ. 'ಮಾಲತಿ ನಿನಗೇನಾಗುತ್ತಿದೆ? ಹೀಗೇಕೆ ಹೊರಳಾಡುತ್ತಿರುವೆ?' ಮಾಲತಿಯು ಕಣ್ಣು ತುಂಬಾ ನೀರುತಂದಳು! ನನ್ನ ಕೈಹಿಡಿದು ಮಾತಾಡಹತ್ತಿದಳು. 'ಅಕ್ಕಾ ಬಂದಿಯಾ? ನಿನ್ನನ್ನು ಒಮ್ಮೆ ಕಣ್ಣುತುಂಬಾ ನೋಡುವೆ! ಅಕ್ಕಾ ಇನ್ನು ನನ್ನ ಜೀವವು ಸುಖಸಮಾಧಾನದಿಂದ ಹೋಗುವದು! ಅಕ್ಕಾ ನನ್ನ ಘೋರ ಅಪರಾಧವನ್ನು ಕ್ಷಮಿಸುವಿಯಾ? ಚಾಂಡಾಲಿನಿಯಾದ ನಾನು ನನ್ನ ಪಾಪದ ಫಲವನ್ನು ಭೋಗಿಸಲು ಹೋಗುವೆನು! ಆದರೆ ಅದು ಮೊದಲು ಅಕ್ಕಾ ನಿನ್ನ ಬಳಿಯಲ್ಲಿ ಒಂದು ಭಿಕ್ಷೆಯನ್ನು ಬೇಡುವೆನು! ನಿಮ್ಮೆಲ್ಲರ ಕೊನೆಯ ನಿರೋಪವನ್ನು ತೆಗೆದುಕೊಳ್ಳಲಿರುವ ಈ ಪಾಪಿಷ್ಠ ಆತ್ಮದ ಕಡೆಯ ಇಚ್ಛೆಯನ್ನು ನೀನು ಪೂರ್ಣಮಾಡುವಿಯಾ?' ಅವಳ ಈ ದುಃಖಪೂರ್ಣವಾದ ಮಾತುಕೇಳಿ ನನಗೆ ಅಳುವು ಬಂತು! ನನ್ನನ್ನುನೋಡಿ ಅವರು ಸಹ ಅಳಹತ್ತಿದರು! ಮಾಲತಿಯಂತೂ ಬಹಳೇ ಭಯಂಕರವಾಗಿ ಅಳಹತ್ತಿದಳು! ಮೂವರು ಮನದಣೀಯಾಗಿ ಅತ್ತೆವು! ದುಃಖವು

ಹಗುರಾಯಿತು! ಕೆಲವು ಹೊತ್ತು ಭೀಕರ ಶಾಂತತೆಯು ನೆಲೆಗೊಂಡಿತು! 'ಮಾಲತಿ ಅಳಬೇಡ! ನಮ್ಮ ನಮ್ಮಗಳ ದೈವದಲ್ಲಿದ್ದಂತಾಯಿತು. ದುಃಖಿಸಬೇಡಮ್ಮಾ! ಅದಾವ ನಿನ್ನ ಇಚ್ಛೆ ಹೇಳು. ಪರಮೇಶ್ವರನನ್ನು ಸ್ಮರಿಸಿ ಅದನ್ನು ಪೂರ್ಣಮಾಡುವೆನು!' ನಾನು ಅಂದೆ 'ಅಕ್ಕಾ!' ಅವಳ ನಾಲಿಗೆಯು ಒಳಸೇರಹತ್ತಿತು! ಶಬ್ದಗಳು ಅರ್ಧಮರ್ಧ ಹೊರಬೀಳಹತ್ತಿದವು! ತೊದಲಹತ್ತಿದಳು! ಮಾಲತಿಯ ದುಃಖಮಯ ಜೀವನ ನಾಟಕದ ಕೊನೆಯ ಪ್ರವೇಶವಿದು! ಮತ್ತೆ ಮಾತಾಡಹತ್ತಿದಳು! 'ಅಕ್ಕಾ! ಅವರೆಲ್ಲಿ? ಇತ್ತಕರೆ!' ಅವರೂ ಅಲ್ಲಿಯೇ ಕಣ್ಣೀರುದುರಿಸುತ್ತ ಕುಳಿತ್ತಿದ್ದರು! ಹತ್ತರವೇ ಬಂದು ಮಾತಾಡಿದರು. 'ಮಾಲತಿ ನಾನಿಲ್ಲಿಯೇ ಇರುವೆ. ಹೆಚ್ಚಿಗೆ ಮಾತಾಡಿ ಶ್ರಮಗೊಳ್ಳುವಿಯೇಕೆ?'

'ಅಕ್ಕಾ! ನಾನು ನಿಮ್ಮಿಬ್ಬರಿಗೂ ಬಹುದುಃಖಕೊಟ್ಟೆನು! ಅದೆಲ್ಲವನ್ನು ಮರೆತು ಬಿಡಿರಿ! ನನ್ನಿಂದಾದ ಅಪರಾಧಗಳನ್ನು ಕ್ಷಮಿಸಿ ಅಕ್ಕಾ ಪುನಃ ಅವರನ್ನು ಹೊಂದಿ ಸುಖದಿಂದ ಸಂಸಾರ ಸಾಗಿಸು! ಅಂದರೇನೆ ನನಗೆ ಶಾಂತಿ! ಅ....ಕ್ಕಾ.... ನ..........ನ್ನ...........ನ್ನು............ಮರೆ...........ತು...........ಬಿ........ಡು?' ಮುಂದೆ ಅವಳಿಂದ ಮಾತಾಡಲು ಆಗಲಿಲ್ಲ! 'ಮಾಲತಿ! ನಿನ್ನಿಂದ ಅಂತಹ ಅಪರಾಧವಾದರೂ ಏನಾಗಿರುವದು ಕ್ಷಮಿಸುವಂತಹದು. ಆದರೂ ನಿನ್ನ ಇಚ್ಛೆಯಂತೆ ನಾನು ನನ್ನ ಸತಿ ಧರ್ಮಸಾಕ್ಷಿಯಾಗಿ ನಿನ್ನನ್ನು ಕ್ಷಮಿಸಿರುವೆನಲ್ಲದೆ ನಿನ್ನ ಜೀವನದ ಕೊನೆಯ ಇಚ್ಛೆಯಂತೆ ಪತ್ನೀ ಧರ್ಮವನ್ನು ಸ್ವೀಕರಿಸುವೆನು! ಈಗಾದರೂ ಆಯಿತೆ' ದುಃಖವು ತಡೆಯದೆ ಮತ್ತೆ ಅಳಹತ್ತಿದೆನು. ಮಾಲತಿಯು ಕೊನೆಗೊಮ್ಮೆ ನನ್ನನ್ನು ನೋಡಿದಳು! ಮಾತಾಡ ಹೋದಳು. ಬಾರಲಿಲ್ಲ! ಹಾಯ್!ಹಾಯ್! ಎಷ್ಟು ಕಷ್ಟವಾಗುತ್ತಿರಬಹುದು ನನ್ನತಂಗಿಗೆ? 'ಅ........ಅ........ಅ...........ಮಾ.... ...........ಧ...............!' ಮತ್ತೆ ನಾವಿಬ್ಬರೂ ಕೂಡಿಯೇ ಅಳಹತ್ತಿದೆವು. ಮಾಲತಿಯು ಮತ್ತೊಮ್ಮೆ ಕಣ್ಣು ತೆಗೆದು ನೋಡಿ ಮುಚ್ಚಿದವಳು ಮುಚ್ಚಿಯೇ ಬಿಟ್ಟಳು! ನನ್ನ ಪ್ರೇಮದ ತಂಗಿಯ ಜೀವಜ್ಯೋತಿಯು ನಂದಿ ಹೋಯಿತು! ನಾವಿಬ್ಬರು ಬಹು ಪರಿಯಾಗಿ ದುಃಖಿಸಿದೆವು! ಹಾಗೆಯೇ ಇನ್ನೆಷ್ಟು ದಿವಸ ದುಃಖಿಸುವೆವು? ದಿನ—ವಾರ—ತಿಂಗಳು—ವರುಷ ಹೋದವು! ದುಃಖದ ಮೋಡಗಳಿಂದ ಮರೆಯಾದ ನನ್ನ ಭಾಗ್ಯರವಿಯು ಪುನಃ ಸತೇಜನಾಗಿ ಪ್ರಕಾಶಿಸಲಾರಂಭಿಸಿದನು! ವಾಚಕರೇ! ಇಲ್ಲಿಗೆ ನನ್ನ ದುಃಖಪೂರಿತ ಕರ್ಮಕಥೆಯು ಮುಗಿಯಿತು. ನಿಮಗೆ ನಾನು ದುಃಖ ಕೊಟ್ಟದ್ದಕ್ಕೆ ಕ್ಷಮೆ ಬೇಡುವೆನು. ಮಾಲತಿಯನ್ನು ನಾನು ಎಂದೂ ಮರೆಯಲಿಲ್ಲ! ನನ್ನ ಹೃತ್ಪಟಲದಮೇಲೆ ಮೂಡಿಕೊಂಡಿದ್ದಾಳೆ ನನ್ನ ತಂಗಿ!

— ಸಂಪೂರ್ಣ. —

# ಅಭಿಪ್ರಾಯಗಳು.

ಚಂದ್ರಿಕೆಯಲ್ಲಿರುವ ವೀರಶೈವ ವಿಷಯಗಳನ್ನು ಓದಿ ಬಹಳ ಆನಂದವಾಯಿತು. ಅದರಲ್ಲಿನ ಲೇಖನಗಳು, ಕನ್ನಡಕ್ಕೆ ಚಂದ್ರಿಕೆಯು ಎಷ್ಟು ಸೇವೆಯನ್ನು ಮಾಡುತ್ತದೆಂಬದನ್ನು ತೋರಿಸುತ್ತಿದೆ. ಅದರೊಳಗಿನ ಬಸವೇಶ್ವರರ ವಿಷಯ, ಸಿದ್ಧರಾಮೇಶ್ವರರ ವಿಷಯ, ಸರ್ವಜ್ಞನ ವಿಷಯಗಳು ಅವರ ಅಂತಹೃದಯವನ್ನು ಜಗತ್ತಿಗೆ ತೋರಿಸಿಕೊಡುವಂತವುಗಳಾಗಿವೆ. ವೀರಶೈವ ಬಾಲೆ ಪಾರ್ವತಿ ಎಂಬ ಕಾದಂಬರಿಯು ವೀರಶೈವ ಸಮಾಜಕ್ಕೆ ಹಿತಬೋಧಕವಾದದ್ದಾಗಿರುತ್ತದೆ. ಚಂದ್ರಿಕೆಯು ವೀರಶೈವ ಸಂಬಂಧವಾದ ಸರ್ವವಿಷಯಪ್ರದರ್ಶಕವಾಗಿರುತ್ತದೆ. ವೀರಶೈವರೂ ಮತ್ತು ಎಲ್ಲ ಕನ್ನಡಿಗರೂ ಚಂದ್ರಿಕೆಯ ಕಾರ್ಯಕ್ಕೆ ಅತ್ಯಂತ ಆಭಾರಿಗಳಾಗಿರಬೇಕಾಗಿರುತ್ತದೆ.

ಅರಳೇಪೇಟೆ,
ಬೆಂಗಳೂರು,
೩೧-೮-೩೪. } ಜೀರಿಗೆ ಬಸಲಿಂಗಪ್ಪನವರು.

---

ಚಂದ್ರಿಕೆಯಲ್ಲಿ ವೀರಶೈವ ಮತತತ್ವಗಳು ಧಾರ್ಮಿಕ, ಸಾಮಾಜಿಕ, ನೈತಿಕ ವಿಷಯಗಳನ್ನೊಳಗೊಂಡ ಉತ್ತಮ ಲೇಖನಗಳು ಪ್ರತಿತಿಂಗಳಲ್ಲಿಯೂ ಪ್ರಕಟವಾಗುವವು. ಸಮಾಜಸೇವೆಯೇ ಪತ್ರಿಕೆಯ ಧೇಯವಾಗಿರುವದರಿಂದ ಸಂಪಾದಕರು ಮತದ ಮುಖ್ಯ ವಿಚಾರಗಳನ್ನು ಪ್ರಚುರಪಡಿಸಿ ತನ್ಮೂಲಕ ಮಹಾಜನರ ಪ್ರೋತ್ಸಾಹನಕ್ಕೆ ಪಾತ್ರರಾಗಲೆಂದು ಹಾರೈಸುತ್ತೇನೆ.

ಎನ್. ಶಿವರಾಮಶಾಸ್ತ್ರಿಗಳು,
ಸಂಪಾದಕರು 'ವಿಕಟ ವಿನೋದಿನಿ'
ಬೆಂಗಳೂರು ನಗರ.

ಸಿರಿಗನ್ನಡಂ ಗೆಲ್ಗೆ




ಲೇಖಕರು— ಶ್ರೀ ಬಾಲೇಹೊಸೂರ ರಾಮುರಾಯರು, ಶಿರಹಟ್ಟಿ.

ರಾಗ- ಕಾಪೋದ ತಾಳ ತ್ರಿವಿಟ

ನಮಿಸುವೆವು ನಾವು ಶಿವಜಾತಾ । ಅಮರನಿಕರದಿಂ
ಪೂಜೆಗೊಂಬುವಾ । ತನುಕೋಮಲಧರ ವಿಮಲಬಾಲ ||ಪ||
ಹರಿಸೆಮ್ಮಯ ನೀ ಪರಿತಾಪಗಳಾ । ನಿರುತ ಕರುಣಿಸಿ
ಭಕುತ ಜನವನೆ । ಚರಣದಿ ಬೇಡ್ವೆವು ಸುರತರವೇ ಗುರು ।
ಪರಕಿಸು ದಯದಲಿ ಅಭಯ ಪ್ರದನೆ || ೧ ||

## ೧ ನೇ ಅಂಕ

### ೧ ನೇ ಪ್ರವೇಶ

ಸ್ಥಳ— ಕೋತವಡೆ ಗ್ರಾಮದಲ್ಲಿಯ ಶ್ರೀ ಗಣಪತಿಯ ಗುಡಿ.

ದೃಶ್ಯ— ಪಟವರ್ಧನರ ಮೂಲ ಪುರುಷರಾದ ಹರಿಭಟ್ಟರು ಶ್ರೀ ಗಜಾನನನ್ನು ಕುರಿತು ತಪಸ್ಸು ಮಾಡುತ್ತಿರುವರು.

ಅರ್ಚಕ— ಪ್ರವೇಶಿಸಿ ಅಹಹಾ! ಎಂತಹ ನಿಸ್ಸೀಮವಾದ ಭಕ್ತಿ ಈ ಬ್ರಾಹ್ಮಣನದು. ದೇಹದ ಪರಿವೆ ಇಲ್ಲದೆ ಅನೇಕ ಕಷ್ಟಗಳನ್ನು ಸಹಿಸುತ್ತ ಶ್ರೀಗಜಾನನ ಚರಣಾರವಿಂದದ ಬಳಿ ಧ್ಯಾನಸ್ಥನಾಗಿ ಕುಳಿತಿರುವನು. ಈತನ ಈ ಅಚಲವಾದ ಭಕ್ತಿ, ಜಾಗ್ರತವಾದ ಭಾವನೆಗಳಿಗೆ ಅನುಗುಣವಾಗಿ ಶ್ರೀ ಗಜಾನನನಿಂದ ಯೋಗ್ಯವಾದ ಪ್ರತಿಫಲವು ದೊರೆಯದಿರದು. ನಿಷ್ಠಾವಂತರಾದ ಈ ಹರಿಭಟ್ಟರು ತಪಸ್ಸು ಮಾಡಹತ್ತಿ ಒಂದು ತಪವುಕೂಡ ಸಮೀಪಿಸಿತು. ಭೋ ಶ್ರೀ ಗಜಾನನಾ ಸುಮ್ಮನೆ ಆತನ ಸತ್ವಪರೀಕ್ಷೆಯನ್ನೇಕೆ ಮಾಡುತ್ತಿರುವಿ. ಅವರ ಮನದಿಷ್ಟವನ್ನು ದಯಪಾಲಿಸಬಾರದೆ?

ಹರಿಭಟ್ಟ— ಸ್ವಾಮಿ, ಅರ್ಚಕರೇ ಶ್ರೀ ಗಜಾನನ ಪಾದಾರವಿಂದದಲ್ಲಿ ನನಗಾಗುವ ಆನಂದವನ್ನು ಏನೆಂದು ಹೇಳಲಿ. ಅದು ವರ್ಣಿಸಲು ಕೂಡ ಬಾರದಂಥಾದ್ದು. ನನಗೆ ನನ್ನ ದೇಹ ಸಂಬಂಧವಾದ ಕಷ್ಟಗಳು ಎಷ್ಟು ಮಾತ್ರವೂ ಬಾಧಿಸವು. ಆದ್ದರಿಂದ ಪ್ರಭೋ ಹೀಗೆಯೇ ನಿನ್ನ ಸೇವೆಯಲ್ಲಿ ನನ್ನ ಮನವು ರತವಾಗುವಂತೆ ಮಾಡು. ಆ ಕಾರ್ಯವನ್ನು ಜರಗಿಸುವಾಗ ನಾನು ನನ್ನ ಪ್ರಾಣವನ್ನು ಕೂಡ ಅರ್ಪಿಸಲು ಸಿದ್ಧನಿರುವೆನು. ಅದುಕೂಡ ನನಗೆ ಶಾಶ್ವತ ಆನಂದವನ್ನೇ ಈಯಬಹುದಲ್ಲವೆ ?

( ಕೆಲವು ಗ್ರಹಸ್ಥರು ದೇವಾಲಯಕ್ಕೆ ಬರುವರು. )

ಗೃಹಸ್ಥ— ಸ್ವಾಮಿಾ ಅರ್ಚಕರೆ ಸ್ವಲ್ಪ ಕಾಯಿ ಒಡೆದು ಮಂಗಳಾರತಿ ಮಾಡಿಕೊಡುವಿರಾ ?

( ಗುಡಿಯ ಅಂತರ್ಭಾಗದಲ್ಲಿ ಪ್ರವೇಶಿಸಲು ಹೋಗುವನು. )

ಅರ್ಚಕ— (ಅವನನ್ನು ತಡೆದು) ಯಜಮಾನರೇ ಹಾಗೆ ಒಳಕ್ಕೆ ನುಗ್ಗಬೇಡಿ. ಅಲ್ಲಿ ಒಬ್ಬ ಬ್ರಾಹ್ಮಣನು ಶ್ರೀ ಗಜಾನನನನ್ನು ಕುರಿತು ತಪಸ್ಸುಮಾಡುತ್ತ ಧ್ಯಾನಸ್ಥನಾಗಿ ಕುಳಿತಿರುವನು. ಅವನ ಶಾಂತತೆಗೆ ಭಂಗಬರಬಹುದಲ್ಲವೇ. ಆದ್ದರಿಂದ ಹೇಳಿದೆನು. ಸಿಟ್ಟಾಗಬೇಡಿರಿ.

ಗೃಹಸ್ಥ— ಹೀಗೋ ಪರವಿಲ್ಲ.(ಬ್ರಾಹ್ಮಣನನ್ನು ನೋಡಿ) ಅಹಹಾ! ಎಂಥ ಭಾವಿಕನಿವನು ? ದೇಹ ಭಾನವಿಲ್ಲದೆ ಎಷ್ಟು ಪ್ರಶಾಂತ ಮನಸ್ಕನಾಗಿ ಕುಳಿತಿರುವನಲ್ಲ. ಬ್ರಹ್ಮತೇಜವು ಈತನ ಮೋರೆಯಮೇಲೆ ಉಕ್ಕುತ್ತಿರುವದು. ನಿಜವಾಗಿಯೂ ಈತನೇನೋ ಮಹಾ ತಪಸ್ವಿಯು.

ಅರ್ಚಕ— ಈತನು ಇಂದು ನಿನ್ನೆ ಇಲ್ಲಿ ಕುಳಿತವನಲ್ಲ.

ಗೃಹಸ್ಥ— ಅಂದರೆ—

ಅರ್ಚಕ— ಅವನು ಈ ಉಗ್ರ ತಪಸ್ಸನ್ನು ಪ್ರಾರಂಭಿಸಿ ಸುಮಾರು ಒಂದು ತಪವಾಯಿತು.

ಗೃಹಸ್ಥ— ಈತನ ಅನ್ನ-ಪಾನಾದಿಗಳ ಗತಿ ಹೇಗೆ ?

ಅರ್ಚಕ— ಈತನಿಗೆ ಅನ್ನವು ಬೇಡ ! ಪಾನವು ಬೇಡ ! ಮತ್ತು ಆ ಬಗ್ಗೆ ಆರನ್ನು ಕೇಳುವದೂ ಇಲ್ಲ. ಅದೋ ನೋಡಿ, ಅವನ ಬಳಿ ಇದ್ದ ಆ ಕರಕಿಯ ರಾಸಿಯನ್ನು. ಅದೇ ಕರಕಿಯ ರಸವನ್ನು ತೆಗೆದು ಶ್ರೀ ಗಜಾನನನಿಗೆ ನೈವೇದ್ಯ ಮಾಡಿ ಆ ಬಳಿಕ ಅದನ್ನೇ ಕುಡಿದು ಜೀವಿಸುವನು.

ಗೃಹಸ್ಥ— ಅಹಹಾ ! ಎಂತಹ ಉಗ್ರತರವಾದ ತಪಸ್ಸಿದು, ಈತನು ಈ ತಪಸ್ಸನ್ನು ಯಾಕೆ ಮಾಡುತ್ತಿರುವನು ?

**ಅರ್ಚಕ—** ಅದೇಕೋ ನಮ್ಮುಗಳಿಗೆ ಮಾತ್ರ ತಿಳಿಯದು.

**ಗೃಹಸ್ಥ—** ಏತಕ್ಕಾದರೂ ಇದ್ದೀತು. ಶ್ರೀಗಜಾನನನು ಈತನಿಗೆ ಮಹಾ ಪ್ರಸಾದವನ್ನೀಯುವನು. ಇದರಲ್ಲಿ ಏನೂ ಸಂದೇಹವಿಲ್ಲ. ( ಅರ್ಚಕನನ್ನು ಕುರಿತು ) ಮಹಾಸ್ವಾಮಿಾ, ನಾವು ಬಂದು ಬಹಳೇ ಹೊತ್ತಾಯಿತು. ಈ ಮಹಾನುಭಾವನ ಚರಿತ್ರೆಯನ್ನು ಕೇಳುವವರಲ್ಲಿ ಮಗ್ನರಾದ ನಮಗೆ ವೇಳೆಯು ತಿಳಿಯದೇ ಹೋಯಿತು ಇನ್ನು ಬೇಗ ಕಾಯಿಗಳನ್ನಷ್ಟು ಒಡೆದು ಕೊಡಿರಿ.

**ಅರ್ಚಕ—** ಪರಮೇಶ್ವರನ ವಿಷಯಕವಾದ ಭಾವನೆಯು ಜಾಗ್ರತವಾಗಿ ದೇಹಭಾವನೆಯಲ್ಲವನ್ನು ಮರೆತು ಸಂಸಾರದ ತಾಪದಿಂದ ಬೆಂದುಹೋದ ಮನಸ್ಸನ್ನು ಆನಂದಗೊಳಿಸುವದಕ್ಕಾಗಿಯೇ ಜಗದೀಶನು ಇಂತಹ ರಮ್ಯ ಸ್ಥಳಗಳನ್ನು ಭೂಮಿಯಮೇಲೆ ನಿರ್ಮಿಸಿರುವನು. ಅದರಲ್ಲಿಯೂ ನಿಸ್ಸೀಮಂತರಾದ ಹರಿಭಟ್ಟರಂತಹ ಬ್ರಾಹ್ಮಣರು ಇಲ್ಲಿ ವಾಸಿಸಿರುವದು ಬಂಗಾರಕ್ಕೆ ಕುಂದಣಹಾಕಿದಂತಾಗಿದೆ. ಅಂದ ಬಳಿಕ ಇಲ್ಲಿ ಹೊತ್ತು ಹೋಗುವದಕ್ಕೆ ಏನು ಅವಕಾಶ. ಆತ್ಮಶುದ್ಧಿಯಿಲ್ಲದವರಾದ ನಮ್ಮುಗಳ ಮನಸ್ಸು ಇಂತಹ ಸ್ಥಿತಿಯಲ್ಲಿಕೂಡ ಮನೆಯ ಕಡೆಗೆ ಎಳೆಯುವದು. ಆದ್ದರಿಂದಲ್ಲವೇ ಕಲಿಯುಗದಲ್ಲಿ ನಾಮಸಂಕೀರ್ತನವೊಂದಲ್ಲದೆ ಬೇರೊಂದು ತಪಸ್ಸು ಸಾಮಾನ್ಯರಿಗೆ ಸಾಧ್ಯವಿಲ್ಲೆಂದು ಭಗವಂತನು ಹೇಳಿದುದು. ಆಗಲಿ ಕಾಲವು ತಿರುಗಿದಹಾಗೆ ನಾವಾದರೂ ನಮ್ಮ ಆಚಾರ ಧರ್ಮಗಳಲ್ಲಿ ಬದಲಾವಣೆ ಮಾಡಲೇಬೇಕಲ್ಲವೇ ಮತ್ತೆ. (ಕಾಯಿ ಒಡೆದು ಮಂಗಳಾರತಿ ಮಾಡಿಕೊಡುವನು)

(ಎಲ್ಲರೂ ನಮಸ್ಕರಿಸಿ ಹೊರಡುವರು)

**ಹರಿಭಟ್ಟ—** ಆಯಿತು ಪ್ರಾತರಾಹ್ನಿಕವಾದಂತಾಯಿತು. ಇನ್ನು ಪೂಜೆ ಅರ್ಚಾದಿಗಳನ್ನು ಮಾಡಿ ನೈವೇದ್ಯ ಸಮರ್ಪಣೆ ಮಾಡೋಣ. (ಪೂಜಿಸಿ ಕರಕೀರಸವನ್ನು ನೈವೇದ್ಯಮಾಡಿ ಮಂಗಳಾರುತಿಮಾಡುವನು. ಕೊನೆಗೆ ಕರಕಿಯ ರಸವನ್ನು ಕುಡಿಯುವನು) ಅಹಹಾ, ಶ್ರೀ ಗಜಾನನನಿಗೆ ಅರ್ಪಿತವಾದ ಈ ರಸವು ಎಷ್ಟು ಮಧುರವಾಗಿರುವದಲ್ಲಾ ? ಭೋ ಶ್ರೀ ಗಜಾನನಾ ! ಇದಕ್ಕೂ ಹೆಚ್ಚು ಮಧುರವಾದ ನಿನ್ನ ಭಕ್ತಿರಸವನ್ನು ಸದಾವಕಾಲದಲ್ಲಿಯೂ ಕುಡಿಯುವ ಹುಚ್ಚು ನನಗೆ ಹಿಡಿಸು. ಇಷ್ಟೇ ನಿನ್ನನ್ನು ನಾನು ಬೇಡುವದು.

( ಧ್ಯಾನಸ್ಥನಾಗಿ ಕೂಡ್ರುವನು. )

## ೨ ನೇ ಪ್ರವೇಶ.

---

ಸ್ಥಳ—ರಾಜಬೀದಿ (ನಿರೀಶ್ವರ ಮತ್ತು ಅಖಂಡೇಶ್ವರ ಎದರುಬದರಾಗಿ ಪ್ರವೇಶಿಸಿ)

**ನಿರೀಶ್ವರ—** ನಮಸ್ಕಾರ. ಕುತರ್ಕನ್ಯಾಯಶಿಖಾಮಣಿಗಳೇ! ಇದೇನು ಎಲ್ಲಿಗೆ ಹೊರಡೋಣವಾಗಿತ್ತು?

**ಅಖಂಡೇಶ್ವರ—** ಎಲ್ಲಿಯೂ ಇಲ್ಲ. ಸಹಜವಾಗಿ ಹೊರಟಿದ್ದೆ. ನಮ್ಮ ಕಾವ್ಯ ಕುಲಕಲಂಕ ವಿದ್ಯಾಶೂನ್ಯ ಶಾಸ್ತ್ರಿಗಳ ಮನೆಗೆ.

**ನಿರೀಶ್ವರ—** ಹೀಗೋ ಚನ್ನಾಯಿತು. ಸ್ವಾಮಿ ನನಗೊಂದು ದೊಡ್ಡ ಗೂಢವು ಬಿದ್ದಿದೆ. ಆ ವಿಷಯವಾಗಿ ತಮ್ಮನ್ನೇ ಕೇಳಬೇಕೆಂದಿದ್ದೆ ಹೇಳಲೋ?

**ಅಖಂಡೇಶ್ವರ—** ಓಹೋ ಏನೂ ಪರವಿಲ್ಲ. ಹೇಳು ಅಷ್ಟೇಕೆ ಸಂಕೋಚಪಡುವೆ.

**ನಿರೀಶ್ವರ—** ಮತ್ತೇನು ಇಲ್ಲ. ಈ ಕಲಿಯುಗದಲ್ಲಿ, ಈ ಸುಧಾರಣೆಯ ಯುಗದಲ್ಲಿ ದೇವರು ದೇವರು ಎಂದು ಬಡಕೊಂಡು ಸಾಯುವ ಜನರು ಇನ್ನೂ ಜೀವಿಸಿರುವರಲ್ಲ ಇದು ಹೇಗೆ?

**ಅಖಂಡೇಶ್ವರ—** ಎಲ್ಲಿಯ ದೇವರೋ? ಇಂದ್ರಜಾಲ, ಮಹೇಂದ್ರಜಾಲ ಕಿಮಯಾ, ಮೊದಲಾದ ಗುಪ್ತವಿದ್ಯೆಗಳ ಸಹಾಯದಿಂದ ಮರುಳು ಸಮಾಜದಲ್ಲಿ ಏನಾದರೊಂದು ಕೃತಿಮಾಡಿತೋರಿಸಿ ದುಡ್ಡು ಎತ್ತುವ ಸಾಧನೆಮಾಡಿಕೊಂಡು ಅಡ್ಡಾಡುತ್ತಿರುವ ಜನರನ್ನೆ ನೀನೊಳ್ಳೇಭಾವಿಕರೆಂದು ಭಾವಿಸಿರುವಿಯಂಬಂತೆ ನನಗೆ ತೋರುವದು. ನಿಜವಾಗಿ ವಿಚಾರಮಾಡಿದರೆ ನಿನ್ನ ಆ ಕಲ್ಪನೆಯಲ್ಲಿ ಏನೂ ಅರ್ಥವಿಲ್ಲ.

**ನಿರೀಶ್ವರ—** ನಮ್ಮ ಆ ಹಾಳುಗಣಪತಿಯ ಗುಡಿಯಲ್ಲಿ ಕುಳಿತಿರುವ ಆ ಬ್ರಾಹ್ಮಣನ ವಿಷಯವನ್ನೇನು ಹೇಳಲಿ. ಊರಲ್ಲಿ ಎಲ್ಲ ಜಾತಿಯ ಜನಗಳು ಆತನು ಒಳ್ಳೇ ಭಾವಿಕನೆಂಬದಾಗಿ ನಿರ್ಣಯಿಸುವರು. ನೋಡಿ ಸ್ವಾಮಿ ಅನ್ನ-ಪಾನಾದಿಗಳನ್ನು ತೊರೆದು ಆತನೇನೋ ತಪಸ್ಸು ಮಾಡುತ್ತಿರುವನಂತೆ.

**ಅಖಂಡೇಶ್ವರ—** ಏನು ಹುಚ್ಚು ಕಲ್ಪನೆಯಪ್ಪಾ ನಿನ್ನದು. ಅನ್ನ ನೀರುಗಳಿಲ್ಲದೆ ಜೀವಿಸುವ ಬಗೆಯಾದರೂ ಹೇಗೆ? ಒಂದುಕ್ಷಣ ಊಟಕ್ಕೆ ತಡವಾದರೆ ಪ್ರಾಣಹೋಗುವಷ್ಟು ವೇದನೆಯಾಗುವದು, ಇದು ನಿಮ್ಮ-ನಮ್ಮ ಅನುಭವದಮಾತು. ಹೀಗಿದ್ದು ಆ "ಬ್ರಾಹ್ಮಣನು ಎಷ್ಟೋ ದಿವಸಗಳಿಂದ ಅನ್ನ-ನೀರುಗ

(ಮುಂದೆ ಸಾಗುವದು.)

ನಾವು ಸಾಂಗಲಿ ಸಂಸ್ಥಾನದ ಮೇಹರ್ಬಾನ ದಿವಾಣ ಸಾಹೇಬರವರಿಂದಲೂ, ಮೇಹರ್ಬಾನ ಕಲೆಕ್ಟರ ಸಾಹೇಬ ಧಾರವಾಡ ಇವರಿಂದಲೂ ಪರವಾನಿಗೆಯನ್ನು ಪಡೆದು, ಸೊರಟೂರ, ಶಿರಹಟ್ಟಿ ಹೀಗೆ ಎರಡೂ ಕಡೆಯಲ್ಲಿ ಚಂದ್ರಿಕೆಯನ್ನು ಪ್ರಸಿದ್ಧ ಮಾಡುವೆವು ಪತ್ರ ವ್ಯವಹಾರ ಮಾಡತಕ್ಕವರು "ಚಂದ್ರಿಕೆ ಆಫೀಸು" ಪೋಸ್ಟ ಶಿರಹಟ್ಟಿ ಎಂದು ಮಾಡಬೇಕು.

ಹು. ರಾ. ಅಗ್ನಿಹೋತ್ರಿ,
ಆಡಳಿತೆಗಾರರು.

# ನಮ್ಮ ಮಾತು.

ಜಾಹೀರಾತ ಕೊಡತಕ್ಕವರಿಗೆ ಅಮೂಲ್ಯ ಸಂಧಿ!
ದರ ಸುಲಭ! ಮುದ್ದಾದ ಮುದ್ರಣ! ಅಂದವಾದ ಕಾಗದ!

ನಮ್ಮ ಚಂದ್ರಿಕೆಯು ಹೊರಟು ತುಸು ದಿವಸವಾದರೂ ಎಲ್ಲ ಕಡೆಯಲ್ಲಿ ಪ್ರಚಾರವಾಗಿರುವದು. ಕನ್ನಡ ನಾಡಿನ ಹಳ್ಳಿಪಳ್ಳಿಗಳಲ್ಲಿ ಹಾಗು ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಚಂದ್ರಿಕೆಯು ಹೋಗುತ್ತಿರುವದರಿಂದ ಎಲ್ಲ ಕಡೆಯಲ್ಲಿಯೂ ಜಾಹೀರಾತ ಜಾಹೀರಾಗುವದು. ಆದ್ದರಿಂದ ತ್ವರೆ ಮಾಡಬೇಕು! ಜಾಹೀರಾತಿನ ದರವನ್ನು ಸಮಕ್ಷಮ ಇಲ್ಲವೆ ಪತ್ರದ್ವಾರದಿಂದ ತಿಳಿದುಕೊಳ್ಳಬೇಕು. —ಸಂಪಾದಕರು.

# ಪರಿಚಯು ಹಾಗು ಅಭಿನಂದನೆ.



ಪ್ರಾಕ್ತನ ವಿಮರ್ಶ ವಿಚಕ್ಷಣ, ರಾವಬಹಾದ್ದೂರ, ಪ್ರಾಚ್ಯವಿದ್ಯಾ ವೈಭವ, ಮಹಾ ಮಹೋಪಾಧ್ಯಾಯ

## ಶ್ರೀಮಾನ್ ರಾ. ನರಸಿಂಹಾಚಾರ್ಯರವರು

ಎಮ್. ಎ. ಎಮ್. ಆರ್. ಎ. ಎಸ್. ಮೈಸೂರು.

ಕನ್ನಡ ಸಾಹಿತ್ಯದ ವಿಚಾರವಾಗಿ ಅನೇಕಬಗೆಯ ಶೋಧಗಳನ್ನು ಮಾಡಿ ಕನ್ನಡ ನುಡಿಯ ಪ್ರಾಚೀನತೆ, ವೈಭವ, ಐತಿಹ್ಯ ಮುಂತಾಗಿ ವಿಷಯುಗಳಬಗ್ಗೆ ಇಂದು ನಾಲ್ವತ್ತು-ಐವತ್ತು ವರುಷಗಳಿಂದ ತನು-ಮನ-ಧನಗಳನ್ನು ವಹಿಸಿ ಸೇವೆ ಮಾಡಿ ಅದರಲ್ಲಿ ಮಹತ್ತರವಾದ ಯಶವನ್ನು ಸಂಪಾದಿಸಿದವರೂ, ಶಿಲ್ಪಾದಿಕಲೆ. ವಿಮರ್ಶೆ ಮತ್ತು ಕರ್ನಾಟಕ ಸಂಸ್ಕೃತಿಯ ಚರಿತ್ರೆ ಮುಂತಾಗಿ ವಿವಿಧವಿಷಯುಗಳಲ್ಲಿನ ಸಂದಿಗ್ಧಾಂಶಗಳನ್ನು ದೂರಿಕರಿಸಿ ನಮ್ಮ ಪೂರ್ವಜರ ಕೀರ್ತಿಯನ್ನು ಪ್ರಕಾಶಕ್ಕೆ ತಂದವರೂ, ಕನ್ನಡ, ತಮಿಳು, ಸಂಸ್ಕೃತ, ಇಂಗ್ಲೀಷ ಮುಂತಾಗಿ ನಾನಾ ಭಾಷೆಗಳಲ್ಲಿ ತಜ್ಞತೆಯುನ್ನು ಪಡೆದು, ಆಯಾ ಭಾಷೆಗಳ ಸಾಹಿತ್ಯದಲ್ಲಿ ತಮಗೆ ದೊರೆತ ಕಾವ್ಯಾನುಭವದ ಸೊಬಗನ್ನು ಕನ್ನಡಿಗರಿಗಾಗಿ ಪ್ರಬಂಧರೂಪದಲ್ಲಿ ಒದಗಿಸಿಕೊಟ್ಟವರೂ, ಕನ್ನಡ ಕವಿಗಳ ಕಾಲ, ಗುಣ, ಪಾಂಡಿತ್ಯಗಳಬಗ್ಗೆ ಇರುವ ವಿಷಯುಗಳನ್ನು ಪರಿಶೀಲಿಸಿ ಅವೆಲ್ಲವನ್ನೂ ಕ್ರೂಡೀಕರಿಸಿ ಕವಿಚರಿತೆಯುಂಬ ಗ್ರಂಥರೂಪದಲ್ಲಿ ಪ್ರಕಟಿಸಿ ಅಖಿಲ ಕನ್ನಡಿಗರಿಗೆ ಮಹದುಪಕಾರವನ್ನು ಮಾಡಿದವರೂ ಆದ ಶ್ರೀಮಾನ್ ನರಸಿಂಹಾಚಾರ್ಯರು ಕನ್ನಡ ರಾಜ್ಯರಮಾರಮಣರಾದ ಶ್ರೀಮಾನ್ ಮಹಿಶೂರ ಮಹಾರಾಜರವರಿಂದ ಅನೇಕಬಗೆಯಾಗಿ ಮನ್ನಣೆ ಹೊಂದಿರುವ ವಿಷಯುವಂತೂ ತಮ್ಮೆಲ್ಲರಿಗೆ ಗೊತ್ತಿರಲಿಕ್ಕೆ ಸಾಕು.

ಆದರೆ ಇದೇ ವರುಷ ಆಚಾರ್ಯರಲ್ಲಿನ ಅನೇಕ ಉತ್ತಮೋತ್ತಮವಾದ ಗುಣಗಳಿಗೆ ಲುಬ್ಧರಾಗಿ ಸಾರ್ವಭೌಮ ಸರಕಾರದವರು ಅವರಿಗೆ "ಮಹಾಮಹೋಪಾಧ್ಯಾಯ" ಎಂಬ ಬಿರುದನ್ನು ಸಲ್ಲಿಸಿರುವರು. ಅದಕ್ಕಾಗಿ ನಮಗೆ ತುಂಬಾ ಸಂತೋಷವಾಗಿದೆ. ಕನ್ನಡ ಸಾಹಿತ್ಯವಿಚಾರದಲ್ಲಿ ಆಚಾರ್ಯರು ಅಖಿಳ ಕರ್ನಾಟಕದಲ್ಲಿಯೇ ಒಂದು ಬಗೆಯ ಜಾಗ್ರತೆಯನ್ನುಂಟುಮಾಡಿರುವರು. ಆಚಾರ್ಯರಿಗೆ ಅವರ ಸಾಹಿತ್ಯದಲ್ಲಿನ ಅತುಲ ಸಾಹಸದ ಫಲವಾಗಿ ದೊರೆತ ಬಿರುದು ಅನ್ವರ್ಥಕವಾಗಿದೆಯೆಂದು ಹೇಳಬೇಕಾಗಿದೆ.

ಅಖಿಲ ಕನ್ನಡ ಜನತೆಯ ಹೃದಯಕ್ಕೆ ಈ ಸಂದರ್ಭವು ಅತ್ಯಾನಂದವನ್ನುಂಟು ಮಾಡಿದೆ.

ಇರಲಿ! ಇಂತು ಕನ್ನಡನುಡಿಗಾಗಿ ದೇಹ ಸವೆಯಿಸಿದ ಆಚಾರ್ಯರಿಗೆ ದೀರ್ಘಾಯುವನ್ನೂ ಹೊಸ ಹುರುಪನ್ನೂ ಕೊಟ್ಟು ಮತ್ತೆ ಅವರಿಂದ ಸೇವೆಗೊಳ್ಳುವದಕ್ಕೆ ನಾವು ನಮ್ಮುಗಳ (ಕನ್ನಡಿಗರ) ಹೃದಯೇಶ್ವರಿಯಾಗಿ ನಲಿಯುವ ಶ್ರೀ ಭುವನೇಶ್ವರಿಯಲ್ಲಿ ಅನನ್ಯಭಾವದಿಂದ ಪ್ರಾರ್ಥಿಸುವೆವು.

**ಮುರಿಗೇಂದ್ರ ಶೆಟ್ಟರು ಆಲೂರ,** ಸಂಪಾದಕರು.

**ಹು. ರಾ. ಅಗ್ನಿಹೋತ್ರಿ,** ಆಡಳತೆಗಾರರು.

---

# ಪ್ರ ಮಾ ದ ವು .

ಚಂದ್ರಿಕೆಯ ೩ ನೇ ಸಂಚಿಕೆಯ ಮುಖಪತ್ರದಲ್ಲಿ—

ಆಷಾಢ — ಜುಲಾಯಿ
೧೮೫೭ — ೧೯೩೪ } ಎಂದಿರುವದಕ್ಕೆ ಬದಲು

ಜೇಷ್ಠ — ಜೂನ
೧೮೫೭ — ೧೯೩೪ } ಎಂದು ಅಚ್ಚಾಗಿದೆ.

ಸಾಹಿತ್ಯದ ಈ ಪ್ರಪಂಚದಲ್ಲಿ ನಾವೆಷ್ಟು ಜಾಗರೂಕತೆಯನ್ನು ವಹಿಸಿದರೂ ನಮ್ಮ ಕಣ್ಣುನಗಳಿಗೆ ತಿಳಿಯದಹಾಗೆ ನಮ್ಮಿಂದಾಗಲಿ, ಅಚ್ಚುಖಾನೆಯವರಿಂದಾಗಲಿ ದೋಷಗಳು ಉಳಿಯುತ್ತವೆ. ಆದರೆ ಈಗಲೀಗ ಪ್ರಾಪ್ತವಾಗಿರುವ ಸಂದರ್ಭಕ್ಕೆ ದೋಷವೆಂದೆನ್ನುವದಕ್ಕಿಂತ "ಪ್ರಮಾದ" ವೆಂದೇ ಹೇಳಬೇಕಾಗಿದೆ. ಇರಲಿ, ವಾಚಕ ಮಹಾಶಯರು ನಮ್ಮನ್ನು ಈ ವಿಷಯವಾಗಿ ಕ್ಷಮಿಸಬೇಕಾಗಿ ಬೇಡುತ್ತೇವೆ.

—**ಸಂಪಾದಕರು.**

ನಮ್ಮ ಸಾಹಿತ್ಯಸೇವೆಯಲ್ಲಿನ ಗುಣಾಂಶಗಳನ್ನು ಗೃಹಿಸಿ ಈ ತೆರನಾಗಿ ಪ್ರೋತ್ಸಾಹಿಸಿದ ಉದಾತ್ತಹೃದಯಿಗಳಾದ ವೀರಶೈವ ಮಹಾಜನಗಳಿಗೆ ನಾವು ತುಂಬಾ ಋಣಿಯಾಗಿದ್ದೇವೆ.

—**ಸಂಪಾದಕರು.**

# ಆಭಾರ ಪ್ರದರ್ಶನ.

ಚಂದ್ರಿಕೆಯ ಸಂಚಿಕೆಗಳೂ ಮತ್ತು ನಮ್ಮ ವಿಜ್ಞಾಪನೆಯ ಓಲೆಯೂ ಕೈಸೇರಿದಾಗಲೇ ಪರಿಷತ್ ಪತ್ರಿಕೆಯ ಕಾರ್ಯದರ್ಶಿಗಳು ಬಂಡವಾಳವಿಲ್ಲದೆ ವ್ಯಾಪಾರದಲ್ಲಿ ಹೆಚ್ಚಿನ ಲಾಭಪಡೆಯಲು ಹೊರಟ ಆಶೆಬುರುಕ ಶೆಟ್ಟಿಯಂತೆ ಸಾಹಿತ್ಯ ಪ್ರಪಂಚದಲ್ಲಿ ಇಂದು ಹೊಸತಾಗಿ ಕಾಲಿಕ್ಕಿರುವ ನಮ್ಮುಗಳನ್ನು ಅತೀವ ದಯಾರ್ದ್ರದೃಷ್ಟಿಯಿಂದ ಕಂಡುಕೊಂಡು ತಮ್ಮ ಪತ್ರಿಕೆಯನ್ನು ಚಂದ್ರಿಕೆಯ ವಾಚನಾಲಯಕ್ಕೆ ವಿನಿಮಯವಾಗಿ ಕಳುಹಿಸಿ ಚಿರಋಣಿಯಾಗಿರುವಂತೆ ಮಾಡಿರುತ್ತಾರೆ. ಪರಿಷತ್ ಪತ್ರಿಕೆಯು ಇಂದಿನತನಕ ಮಾಡಿರುವ ಹಾಗು ಮುಂದೆ ಮಾಡಲಪೇಕ್ಷಿಸುವ ಸಾಹಿತ್ಯಸೇವೆಯನ್ನು ನೆನೆದರೆ, ಅಖಿಲ ಕರ್ನಾಟಕ ಜನಸಾಮಾನ್ಯರಲ್ಲಿ ಜ್ಞಾನಪ್ರಸಾರ, ಸಂಶೋಧನಕಾರ್ಯಕ್ಕೆ ಸೌಕರ್ಯ ಕಲ್ಪನೆ, ಶಾಸ್ತ್ರಾದಿ ಪ್ರೌಢವಿಚಾರಗಳ ಗ್ರಂಥರಚನೆ ಮುಂತಾಗಿ ಮಹತ್ಕಾರ್ಯಗಳು ನಮ್ಮ ಕಣ್ಣೆದುರಿನಲ್ಲಿ ಬಂದು ನಿಲ್ಲುತ್ತವೆ. ಅದುಕಾರಣ ಪ್ರತಿಯೊಬ್ಬ ಕನ್ನಡಿಗನು ಕನ್ನಡ ಮಾತಾಸೇವೆಯ ಪವಿತ್ರಕಾರ್ಯವನ್ನು ಕೈಕೊಂಡು ತನ್ನ ಶಕ್ತಿಮೀರಿ ಹೆಣಗುತ್ತಿರುವ "ಸಾಹಿತ್ಯ ಪರಿಷತ್ ಪತ್ರಿಕೆ"ಯ ಸಂಸ್ಥೆಗೆ ಪ್ರತಿಯೊಬ್ಬ ಕನ್ನಡಿಗನು ಉದಾರಹಸ್ತದಿಂದ ಸಹಾಯವನ್ನೀಯುವದು ಒಂದು ಬಗೆಯ ಕರ್ತವ್ಯವೆಂತಲೇ ನಾವು ಹೇಳದಿರಲಾರೆವು.

—ಸಂಪಾದಕರು.

---

ಸಾಕ್ಷರತೆಯ ಪ್ರಮಾಣವು ಹೆಚ್ಚುತ್ತಿರುವ ಕಾಲವು ಇಂದಿನದಾದರೂ, ಹೊಟ್ಟೆ ಪಾಡಿಗಾಗಿ ದುಡಿದು ದುಡಿದು, ದಣಿಯುವ ಜೀವಕ್ಕೆ, ಬೇರೆ ಬೇರೆ ವಿಷಯುಗಳಿಂದ ಕೂಡಿದ ಗ್ರಂಥಗಳನ್ನು ಓದುವದು ಸಾಧ್ಯವಿಲ್ಲ ಯಾಕಂದರೆ ಅವೆಲ್ಲವೂ ಒಂದು ಬಗೆಯ ಸಾಹಿತ್ಯದ ಕಟ್ಟುಗಳಿಗನುಗುಣವಾದ ರೀತಿಯಲ್ಲಿ ಬರೆಯಲಾಗಿರುತ್ತವೆ. ಅವುಗಳನ್ನು ಸುಲಭವಾದ ವಾಙ್ಮಯದಲ್ಲಿ ಕಥೆಗಳ ರೂಪವಾಗಿ ಬರೆದರೆ ಜನರವನ್ನು ಸಾನಂದದಿಂದ ಓದುವರು. ಎಂಬೀ ಸಂಗತಿಯನ್ನು ಅನುಭವದಿಂದ ಹೇಳಬೇಕಾಗಿದೆ. ಒಂದಿಲ್ಲೊಂದು ರೀತಿಯಿಂದ ಜನರಲ್ಲಿ ವಾಚನಾಭಿರುಚಿ ಹುಟ್ಟಿಸುವದೇ ಸಾಹಿತಿಗಳ ಕರ್ತವ್ಯ. ಅದು ಕಾರಣವೇ ಇಂದು ಸಾಮಾನ್ಯ ಜನಜೀವನದಲ್ಲಿ ಸಕಲ ವಿಷಯುಗಳ ಜ್ಞಾನದ ಪ್ರಸಾರ ಮಾಡುವದಕ್ಕೆ ಕಥೆಗಾರನು ಟೊಂಕಕಟ್ಟಿರುವದು ಸ್ತುತ್ಯವಾಗಿದೆ. ಅವನಿಂದು ಪ್ರಯತ್ನಪಟ್ಟು ಕರ್ನಾಟಕದ ಎಲ್ಲ ಭಾಗಗಳಲ್ಲಿನ ಒಳ್ಳೇ ಕಥೆಗಾರರನ್ನು ಕಲೆಹಾಕಿರುವನು. ಇಂತಹ ಅವನ ಸಾಹಸಕ್ಕೆ ಅಖಿಲ ಕನ್ನಡಿಗರು ಕೊಡುಗೈತನದಿಂದ ಪ್ರೋತ್ಸಾಹಿಸುವದು ನೈಜಧರ್ಮ.

ಬಾಲೇಹೊಸೂರ ರಾಮುರಾಯರು,
ಶಿರಹಟ್ಟಿ.

## ಅತ್ಯುತ್ತಮವಾದ ಕೆಲವು ಅನುಭವಸಿದ್ಧ

## — ಔಷಧಗಳು. —

ಕೇವಲ ಮೋಹಕವಾದ ಲೇಬಲುಗಳಿಂದ ಕೂಡಿದ ಹಾಗು ಆಡಂಬರದ ಜಾಹೀರಾತುಗಳಿಗೆ ಮೋಸಹೋಗಿ ಸಲ್ಲದ ಔಷಧಗಳನ್ನು ತರಿಸಿ ನಿಮ್ಮ ದೇಹಾರೋಗ್ಯದ ಹಾನಿಯನ್ನು ಮಾಡಿಕೊಳ್ಳಬೇಡಿ! ಕಸ್ತೂರಿಯ ವಾಸನೆಯನ್ನು ಬಾಯಿಂದ ಹೇಳಬೇಕಾದವಶ್ಯವಿಲ್ಲ. ಹಾಗೆ ನಮ್ಮ ಔಷಧಗಳಲ್ಲಿರುವ ಗುಣದಬಗ್ಗೆ ಖಾತ್ರಿ ಮಾಡಿಕೊಳ್ಳಬೇಕು.

**ಔಷಧಗಳ ವಿವರ :**

(೧) ಕಾಲರಾಪಿಲ್ಸ ೧೦೦ಕ್ಕೆ ೫ ರೂ. (೨) ವ್ಯಾಧಿಗಜಕೇಸರಿ ೧ ರೂ. ೨ ತೊಲಿ (೩) ಮರಕಿನ ಚೀಟು ೧೦೦ಕ್ಕೆ ೫ ರೂ. (೪) ವ್ಯಾಧಿಹರಗುಟಿಕಾ ೧ ರೂ. ೨ ತೊಲಿ (೫) ಥಂಡಿಜ್ವರಕ್ಕೆ ೨೪ ಮಾತ್ರೆಗೆ ೧ ರೂ. (೬) ಬಚನಾಗಾದಿಗುಟಿಕಾ ೧ ರೂ. ೨ ತೊಲಿ (೭) ಅಶ್ವಗಂಧಿಚೂರ್ಣ ೧ರೂ. ೪ ತೊಲಿ (೮) ಸಂಜೀವಿನಿ ಗುಟಿಕಾ ೧ ರೂ. ೨ ತೊಲಿ. (೯) ನಾಗಾರ್ಜುನಚೂರ್ಣ ೧ ರೂ. ೪ ತೊಲಿ (೧೦) ಹಿಂಗ್ವಾದಿಚೂರ್ಣ ೧ ರೂ. ೨ ತೊಲಿ (೧೧) ಪುಷ್ಯಾನುಗಚೂರ್ಣ ೧ ರೂ. ೪ ತೊಲಿ (೧೨) ಗುಲ್ಮಜಲೋದರಮಹೋದರ ಚೂರ್ಣ ೧ ರೂ. ೨ ತೊಲಿ (೧೩) ಭಾಸ್ಕರಲವಣ ೧ ರೂ. ೪ ತೊಲಿ (೧೪) ಅಗ್ನಿಕುಮಾರ ರಸ ೧ ರೂ. ೧ ತೊಲಿ (೧೫) ಮಹಾಜರಾಂಕುಶ ೨ ರೂ. ೧ ತೊಲಿ (೧೬) ವಾತುವಿಧ್ವಂಸ ರಸ ೧ ರೂ. ೪ ತೊಲಿ (೧೭) ಮೃತ್ಯುಂಜಯ ರಸ ೨ ರೂ. ೧ ತೊಲಿ (೧೮) ಮಹಾಯೋಗರಾಜ ಗುಗ್ಗಳ ೪ ರೂ. ೧ ತೊಲಿ (೧೯) ಪ್ರದವಾದಿ ರಸ ೨ ರೂ. ೧ ತೊಲಿ (೨೦) ಕಾಮೇಶ್ವರ ೪ ರೂ. ೧ ತೊಲಿ (೨೧) ಗರ್ಭಿಣಿಗೆ ೧೪ ಮಾತ್ರೆಗೆ ೫ ರೂ. (೨೨) ಮೂಲವ್ಯಾಧಿಗೆ ೧೪ ಮಾತ್ರೆಗೆ ೧ ರೂ. (೨೩) ಶೂಲವಜ್ರಿಣಿ ೫ ರೂ. ತೊಲಿ ೧ (೨೪) ಯಾವತ್ತೂ ವ್ರಣಗಳಿಗೆ ಮಲಮು ಡಬ್ಬಿ ೨ ಆಣೆ (೨೫) ಸರ್ವವಾತಕ್ಕೆ ೫ ರೂ. ೧ ತೊಲಿ (೨೬) ಪರಿಣಾಮಶೂಲಿಗೆ ೨ ರೂ. ೧ ತೊಲಿ (೨೭) ಸುದರ್ಶನ ಚೂರ್ಣ ೧ ರೂ. ೪ ತೊಲಿ (೨೮) ಶ್ಲೇಷ್ಮಿಗೆ ೧ ರೂ. ೨ ತೊಲಿ.

ಅನುಪಾನ— ಪಥ್ಯ ಔಷಧಗಳಕೂಡ ವಿವರಿಸುವದು. ಹೆಚ್ಚಿನ ಮಾಹಿತಿ ಬೇಕಾದಲ್ಲಿ ಕೆಳಗಿನ ವಿಳಾಸಕ್ಕೆ ಬರೆದು ತಿಳಕೊಳ್ಳಬಹುದು.

ನಮ್ಮ ವಿಳಾಸ :— **ಬ. ಕೆ. ಪಾಟೀಲ ಶಿರಹಟ್ಟಿ**

ಪೋ. ಶಿರಹಟ್ಟಿ

R. No. B. 3350 VEERSHAIVA CHENDRIKE.



---

**ವರ್ಗಣಿದಾರರಲ್ಲಿ ವಿನಂತಿ.**

ಚಂದಾದಾರರೆಲ್ಲರೂ ಚಂದಾಹಣವನ್ನು ಮನಿಯಾರ್ಡರಮೂಲಕ ಕಳುಹಬೇಕು. ವ್ಹಿ. ಪಿ. ಯಿಂದ ಖರ್ಚು ಹೆಚ್ಚು ತಗಲುವದು. ಆದ್ದರಿಂದ ಸರ್ವ ಮಹಸೀಯರು ಈ ವಿಷಯದಲ್ಲಾಗುವ ನಮ್ಮ ತೊಂದರೆಯನ್ನು ದೂರಮಾಡಬೇಕಾಗಿ ವಿನಂತಿ. ವ್ಹಿ. ಪಿ. ಯನ್ನು ಪರತ ಬಿಟ್ಟು ಚಂದ್ರಿಕೆಯ ಹಾನಿಯನ್ನು ಮಾಡಬಾರದೆಂಬದಾಗಿಯೂ ವಿನಂತಿ.

ಹು. ರಾ. ಅಗ್ನಿಹೋತ್ರಿ,
ಆಡಳತೆಗಾರರು.

---

ಇದನ್ನು ಗದಗ-ರಸಿಕರಂಜನಿ ಮುದ್ರಣಾಲಯದಲ್ಲಿ ಮುದ್ರಿಸಿ, ಗದಗ ತಾಲೂಕ ಸೊರಟೂರ (ಪೋ. ಶಿರಹಟ್ಟಿ) ಹಾಗು ಶಿರಹಟ್ಟಿ ವೀರಶೈವ ಚಂದ್ರಿಕೆಯ ಆಫೀಸಿನಲ್ಲಿ ಪ್ರಸಿದ್ಧಪಡಿಸಿತು.

ವಾರ್ಷಿಕ ಚಂದಾ ೧-೮-೦, ಅಂಚೇ ವೆಚ್ಚ ಸೇರಿ ೧-೧೧-೦.
ಬಿಡಿ ಸಂಚಿಕೆ ೦-೩-೦.

ಶಿರಹಟ್ಟ.
ಶ್ರೀ ಫಕ್ಕೀರೇಶ್ವರ ಸ್ವಾಮಿಗಳ ಕೃಪಾಛತ್ರದಲ್ಲಿ ನಡೆದ

# ವೀರಶೈವ ಚಂದ್ರಿಕೆ.

ನೈತಿಕ, ಸಾಮಾಜಿಕ, ಧಾರ್ಮಿಕ ವಿಷಯಗಳಿಂದೊಡಗೂಡಿದ
ತಿಳಿಗನ್ನಡ ಮಾಸಪತ್ರಿಕೆ.
ಹುಟ್ಟು : ಶಕೆ ೧೮೫೩. ಶ್ರೀ ಬಸವ ಜಯಂತಿ.

| ಸಂಪುಟ ೧ | ಅನಂತನ ಹುಣ್ಣಿವೆ. ೨೩ — ೯ — ೧೯೩೪. | ಸಂಚಿಕೆ ೫ |
|---|---|---|

ಕಂದ

ತನ್ನಯನಾಡ–ನಡೆನುಡಿಗ ।
ಳುನ್ನತಿಯಂ ಮಾಳ್ಪಕಜ್ಜ ಕಿನ್ನೆ ಡೆಯುಂಟೆ॥
ಕನ್ನಡದೇಳಿಯುಬಗೆಯಂ ।
ಕನ್ನಡಿಗರ್ ತಿಳಿದುಕೊಡಲಿದಕ್ಕಾಕ್ಷತ್ರ
ಯಂ ॥೧॥

ಕಂದ

ಬಂದವರಂಬರಿಸದಿಹಂ ।
ಸಂದವರಂಸಂತವಿಸನಹ! ತಾಯ್ನುಡಿಯಂ॥
ವಂದಿಸದಿರುವಂ ನರನೋ ! ।
ವಂಧ್ಯನೋ ! ಕಾಣೆಳಗೆ ಫುಟ್ಟಫಲವೆನಿಸಿಹ
ನೋ ! ॥೨॥

ಕವಿ– ವಾಜಿಪೇಯ ಶಿವಾನಂದಾರ್ಯರು.

ಕರ್ನಾಟಕ ಭಾಷಾಮಾತೆಯು ಮಹಾರಾಷ್ಟ್ರ ಭಗಿನಿಯ ಪ್ರಭಾವದಿಂದ ಲುಪ್ತಳಾಗದೆ, ಕಳೆಯೇರುವಳೆಂದು ಈಗ ಹೇಳಬಹುದು. ಪಂಪನೂ ಜ್ಞಾನೇಶನೂ ಭಾರತಮಾತೆಯ ಸುಪುತ್ರರೇ ಆಗಿರುವಲ್ಲಿ ಅಂಥ ಸಂದೇಹವೇನೂ ಇಲ್ಲವೆಂದು ಬೇರೆಯಾಗಿ ಹೇಳಬೇಕಾಗಿಲ್ಲ. ಪೂರ್ವಾವಲೋಕನವನ್ನು ಮಾಡುತ್ತಿರುವ "ಕರ್ನಾಟಕ ಸಿಂಹ"ವು ಎಚ್ಚತ್ತಿರುವಾಗ ಅದು ಲೋಕವನ್ನೇ ಗದಗದಿಸುವ ತನ್ನ ಸಾಮರ್ಥ್ಯದಿಂದ ಮುಂದಾದಲ್ಲಿ ಅದಕ್ಕೀಗ ಶತ್ರುಗಳು ಶತ್ರುಗಳಲ್ಲ.

ಕ. ಸಾಹಿತ್ಯಪರಿಷತ್ಪತ್ರಿಕೆ. ವಾಙ್ಮಯ ಸೇವಕ.
ಅಕ್ಟೋಬರ ೧೯೨೪.

ಸಂಪಾದಕರು ಹಾಗು ಪ್ರಕಾಶಕರು :
ಆಲೂರ ಮುರಿಗೇಂದ್ರ ಶೆಟ್ಟರು.

ಅನೀತಿ, ಕಳಂಕ ಅನುದಾರತೆಗಳಿಂದ ತಾತ್ಕಾಲಿಕ ಸುಖದಾಯುಕಗಳಿಂದ ಪದ್ಯಗಳು ಹುಟ್ಟಬಲ್ಲವೇ ಹೊರ್ತು ಸರ್ವಕಾಲ ದೇಶ ಸಮ್ಮತವಾದ ಆತ್ಮೋದ್ಧಾರಕವಾದ ಆನಂದದಾಯುಕವಾದ ಕವನಗಳು ಲಭಿಸುವದಿಲ್ಲ. ಆದ್ದರಿಂದ ಕವಿಯು ತನ್ನ ಜೀವನವನ್ನು ಸರ್ವವಿಧದಲ್ಲಿಯೂ ಪರೀಕ್ಷರಿಸಿಕೊಳ್ಳುವದು ಅತ್ಯಾವಶ್ಯಕ.

# ಪದ್ಯಶ್ರೀಮೆ.

ಭಾವ, ಕಲ್ಪನೆ, ಆಲೋಚನೆ ಎಲ್ಲದರಲ್ಲಿಯೂ ಆತನು ಸಮುದೂರವಾಗಿ ಬಹುದೂರ ಮುಂದುವರಿದು ಪ್ರತಿಭಾಶಾಲಿಯಾಗಿ ರಸಋುಷಿಯಾಗಿರಬೇಕು.

ಕೆ. ವ್ಹಿ- ಪುಟ್ಟಪ್ಪನವರು,
ಎಂ. ಎ. ಬೆಂಗಳೂರು.
ಹುಬ್ಬಳ್ಳಿ ಅಧಿವೇಶನ–ಕವಿಸಮ್ಮೇಲನದ ಅಧ್ಯಕ್ಷರು

ಸಿರಿಗನ್ನಡಂ ಗೆಲ್ಗೆ

# ವೀರಶೈವ ಚಂದ್ರಿಕೆ.

ಮಾಸಪತ್ರಿಕೆ.

ಬಯಲುಮೂರ್ತಿಯಾಗಿನಿಂದನೊಬ್ಬಶರಣ. ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ. ಆತನ ಶಾಂತಿಸೈರಣೆಯಿಂದ ಹುಟ್ಟಿದಾತ ವಿಷ್ಣು. ಆತನ ಕೋಪ ಕ್ರೋಧದಿಂದ ಹುಟ್ಟಿದಾತ ರುದ್ರ. ಈ ಮೂರು ಸೀಶವಂತಿರಲಿ. ಆ ಶರಣನನ ರಿದು ಶರಣೆನುತಿರ್ದೆನು ಕೂಡಲ ಸಂಗಮದೇವಾ. —ಶ್ರೀ ಬಸವೇಶ್ವರ.



| ಸಂಪುಟ ೧ | ಶ್ರೀಮನ್ನೃಪಶಾಲಿವಾಹನ ಶಕೆ ೧೮೫೬<br>ಅನಂತನ ಹುಣ್ಣಿವೆ. | ಸಂಚಿಕೆ ೫ |
|---|---|---|



## ಪ್ರಾರ್ಥನೆ.

ಎನಿಸನೋದಿ ಫಲವದೇನು ? ಎನಿಸಕೇಳಿ ಫಲವದೇನು ? |
ಮನಸುತನ್ನ ದುರ್ಗುಣಗಳ ಬಿಡದು ಶಿವಶಿವಾ ! ||ಪಲ್ಲ||
ಇಂದುಧರನ ಚರಣದಲ್ಲಿ | ಹೊಂದಿ ಸುಖದಲಿರದು ಮನವು |
ಕುಂದದನ್ಯ ವಿಷಯದತ್ತ ಹರಿವುದೆಂತೆನೆ |
ಒಂದು ಶುನಿಯ ಹಿಡಿದುತಂದು | ಅಂದಳವನು ಏರಿಸಿರಲು | ||೧||
ಮುಂದೆ ಹೇಸಿಕೆಯನು ಕಂಡು | ನೆಗೆವ ಮಾಳ್ಕೆಯಿಂ
ಸೊಗಸಿ ಶಿವನ ಮಂತ್ರವನ್ನು | ನೆಗಳುವುದಕೆ ಎನ್ನ ಜಿಂಹ್ವೆ |
ಸೊಗಡಿಸುವದು ಹಾಳುನುಡಿಗೆ ಒಲಿವುದೆಂತೆನೆ ||
ಹಗಲು ಇರುಳು ತನ್ನಬಾಯಿ | ಸಿಗಿವುದರಿಯದಂತೆಯೆಲುವ | ||೨||
ಜಗುಳುವುದಕೆ ನಾಯಿ ಯಲಸದಂತೆಅಲಸದು.
ಮಂಗಳಾತ್ಮ ಷಡಕ್ಷರಿಯ | ಲಿಂಗನಡಿಯ ಪೂಜಿಸುವೊಡೆ |
ಕೊಂಗಿ ಮನವು ಸುಸ್ಥಿರವನು ಐದದೆಂತೆನೆ ||
ಹಿಂಗದೊಲಿದು ಪ್ಮೈಗೆಗಂಧ | ಸಂಗಡಿಸುತೆ ತೊಡೆಯಲಲ್ಲಿ | ||೩||
ಭೃಂಗವಾಡಿಯಾಡಿ ಇರದೆ ಓಡುವಂದದಿ

ಶ್ರೀ ಷಡಕ್ಷರಿದೇವ.

# ಜನಪದ ಸಾಹಿತ್ಯ.

## ಹಳ್ಳಿಯ ಹಾಡುಗಳು.

ಸಂಗ್ರಾಹಕರು :— ತಿಮ್ಮಣ್ಣ ಕಾಲವಾಡ.

ತಾಯಿಯ ಹೊಟ್ಟೀಲೆ ಸಾಹೇಬ ಹುಟ್ಯಾನ | ಹಾಲಿಲ್ಲದನ್ನ ಉಣವಲ್ಲ |
ಹಾಲಿಲ್ಲದನ್ನ ಉಣವಲ್ಲ ಶಂಕ್ರಣ್ಣ | ಹಾಲುಳ್ಳಮಣಕ ಹೊಡದಟ್ಟೆ ||೧||

ಹೋಗುವರ ಎಡಕಾದ ಬರುವವರ ಬಲಕಾದ | ಊರಿಗ್ಹೋಗವರ ಇದಿರಾದ |
ಊರಿಗ್ಹೋಗವರ ಇದಿರಾದ ನನಶಂಕ್ರಣ್ಣ | ಬೆನ್ನ ವ್ಯಾಲದ ಬ್ರಹ್ಮಲಿಂಗ ||೨||

ಮಕ್ಕಳನೀಆಟ ನನ್ನ ಬಾಗಿಲಮುಂದ | ಪಕ್ಷಿನಿನ್ನ ಆಟ ವನದಾಗ |
ಪಕ್ಷಿನಿನ್ನ ಆಟ ವನದಾಗಉಡಪೀಯ | ಕೃಷ್ಣನಿನ್ನಾಟ ಕೊಳಲಾಗ ||೩||

ಕೂಸು ಕುಂಬಳಕಾಯಿ | ರಾಶಿ ಬಾಳೀಹಣ್ಣು | ದಾಶಾಳದಮುಗ್ಗಿ ನನಕಂದ |
ದಾಶಾಳಮುಗ್ಗಿ ನನಕಂದಶಂಕ್ರಣ್ಣನಬೇಡಿ | ಈಶ್ವರನ ಕೈಮುಗಿದೇನ ||೪||

ಹಸೀಯ ಹಾಲಿನಾಗ ಬಿಸೀಯ ಪಾಯಸಮಾಡಿ | ಕೂಸಿನ ಗೂಡನೊಡಕಳಸೇನ |
ಕೂಸಿನಗೂಡನೊಡಕಳಸೇನ ನನಶಂಕ್ರಣ್ಣನ | ಸಂತೋಷನೋಡ ಮನದಾಗ ||೫||

ಅಡಕಿ ಹುವ್ವಿನಶೀರಿ ಕಿಡಕಿಬಣ್ಣದ ಕುಬಸ | ಹೆಡಕೀನವ್ಯಾಲ ಮುಗಿದುಂಬ |
ಹೆಡಕೀನ ವ್ಯಾಲ ಮುಗಿದುಂಬ ನನಶೀಖವ್ವ | ಕಿಡಕಿ ಮಂಚ ಅಂತ ಇಳಿದಾಳ ||೬||

ಎಂಟುಸೇರು ಬೆಳ್ಳಿ ಟೊಂಕಕ ಉಡದಾರ | ವಂಟಗಾರ ಅಳಿಯ ಶಂಕ್ರಣ್ಣ |
ವಂಟಗಾರ ಅಳಿಯ ಶಂಕ್ರಣ್ಣ ಬರುವಾಗ ಸುಂಕದ ಕಟ್ಟಿ ನಡಗ್ಯಾವ ||೭||

ಕೂಸು ನನಬಗಲಾಗ ಕುಂಚಿ ನನಕೈಯಾಗ | ಏಸೊಂದು ದಗದ ಮನಿಯಾಗ |
ಏಸೊಂದು ದಗದ ಮನಿಯಾಗ ಹಿರಿಯಣ್ಣ | ಕೂಸೊಯ್ಯೋ ನಿಮ್ಮ ಸದರೀಗೆ ||೮||

ಕೂಸು ನನಶಂಕರಣ್ಣಗ ಕೂಸುಂಬಿ ಮುಂಡಾಸ | ಏಸ ಮಂದೆವ್ವ ಗೆಳೆಯಾರು ||
ಏಸ ಮಂದೆವ್ವ ಗೆಳೆಯರಕೂಡಿಕೊಂಡು |ದೀವಳಿಗಿ ಹಬ್ಬಕ ಬರತಾರ ||೯||

ಹರವು ಹಳ್ಳದ ನೀರು ಧರಿಯ ಸೀಗಿಕಾಯಿ | ದೊರಿ ನನ್ನ ಶಂಕ್ರಣ್ಣನ ಜಳಕಕ್ಕ |
ದೊರಿ ನನ್ನ ಶಂಕ್ರಣ್ಣ ಜಳಕ ಮಾಡಿದರ | ಹರದಾವ ನನ್ನ ಅರಿಷಣ ತ್ವಾಟಕೆ ||೧೦||

ಈ ವೂರ ಹೆಸರೇನ ಶ್ರೀ ರಾಮುಪಟ್ಟಣ | ದೇವರ ಹೇಸರೇನ ರಘುರಾಮು ||
ದೇವರ ಹೆಸರೇನ ರಘುರಾಮು ನನಶಂಕ್ರಣ್ಣ | ಹತ್ತುವ ಚೇಜಿಹಯುವದನ ||೧೧||

# ಹದಿನಾರುಸೋಮವಾರಗಳ ಪದ್ಯಕಥೆ.

## ಶ್ರೀಶಿವವ್ರತವು.

( ಶಿವಾನಂದದೀಕ್ಷಿತವಾಜಪೇಯವಿರಚಿತಂ. )

( ಮುಂದೆ ಸಾಗಿದ್ದು )

೨೧ ನಡೆದಿದಾನೆಯುದಾರ ಕೊರಳಲಿ |
ಪಿಡಿದ ಮಾಲೆಯು ತೊಡಕಿಸುವುದಾ |
ವೊಡೆಯನನೆ ತಾಂ ಕಯ್ಪಿಡಿವುದಂ ಬಯಸಿ ಸಾಗಿರಲು ||
ಗಡನೆಯಾ ವಿಪ್ರನನೆ ! ಆನೆಯು |
ಹುಡುಕಿ ಮಾಲೆಯನಿರಿಸಿತಾಗಹ! |
ನುಡಿವುದೆಂತೀ ದೈವಗತಿಯನು ತಿಳಿಯದೀಯರಿದು ||

ಕಂದ ಪದ್ಯಂ

೨೧ ಬಳಿಕವನೀಶಂ ತನ್ನ ಮ |
ಗಳಂ ದ್ವಿಜಂಗೆ ನಲಿದಿತ್ತು ಪರನೈಶ್ವರ್ಯಂ ||
ಗಳಿನೆಸಗಿದನಾ ಮದುವೆಯು |
ತಿಳಿಗೆ ! ಸಿರಿ ನತರೆಡೆನಡೆದು ಬಹಳೆಂಬರಿದೇ ||

೨೨ ಶೈವವ್ರತದೆ ಗುಹಸಖನ |
ವೈವಾಹಮುದಾದುದಿನ್ನವಂ ಪಡೆದಂ ನಾ ||
ನಾವಿಭವಸುಖಂಗಳ ಗಡ ! |
ದೇವನೆ ! ಕೈವಿಡಿಯೆ ನರನ ಭಾಗ್ಯಕ್ಕೆಣೆಯೇ ! ||

ಭಾ. ಷಟ್ಪದಿ

[ ರಾಜಪುತ್ರಿಯು ಪತಿಯಾದ ಗುಹಸಖ (ದ್ವಿಜ) ನನ್ನು ಈ ಮದುವೆಯ ಆಶ್ಚರ್ಯಕ್ಕೆ ಕೇಳಿದ್ದು ಆತನು ಹೇಳಿದ್ದು ]

೨೩ ಮುಂದೆ ದಂಪತಿಗಳೆನಿಪವರೊಲ |
ವಿಂದೆ ಕೂಡಿರೆ ಪತಿಗೆ-ಸತಿ; ಮನ |
ವೊಂದಿದೆಮ್ಮಯ ಮದುವೆ ನೀಂ ದ್ವಿಜಧರ್ಮದವನಿರಲು ||

ಎಂದಪೆನು ಸೋಜಿಗವಿರುವ್ರದಿದ |
ರಂದವನ್ನರುಹುದೆನೆ ಪತಿಯಾ |
ಗಿಂದುಧರನಾ ವ್ರತದ ಮಹಿಮೆಯಿದೆಂದು ಪೇಳಿದನು ||

[ ಇತ್ತ ಮಗನಬಗ್ಗೆ ರಾಜಪುತ್ರಿಯು ವ್ರತಬೇಡಿಕೊಂಡದ್ದು ಮಗನು ಹುಟ್ಟಿದ್ದು ಆತನು ಅಂದದ್ದು ]

೨೪ ವ್ರತಮಹಿಮೆಯಿದು ತಿಳಿಯೆ ಪರಮಾ |
ದ್ಭುತಕರವು ! ಸುತನೆನಗೆ ಭವಿಸಲು |
ಪತಿಯೆ! ವ್ರತವಿದನೆಸಪೆನಾನೆಂದಾಕೆ ನುಡಿದಿರಲು ||
ನುತಗುಣದ ಸುತನಂತೆಯುದಯಿಸಿ |
ಮತಿನಿಯುತಸಿರೆ ತಾಯೆ ! ಸದ್ಗುಣಿ |
ಸುತನು ನಿನಗಾಂ ದೊರೆದೆನೆಂತೆಂದವನು ಬಿನ್ನವಿಸೆ ||

[ ರಾಜಪುತ್ರಿಯು (ತಾಯಿ) ಮಗನಿಗೆ ತಿಳಿಸಿದ್ದು ಪುತ್ರನವನು ವ್ರತಸಂಕಲ್ಪಿಸಿದ್ದು. ]

೨೫ ಪರನುರುವ್ರತದಿಂದಲಿದೆನಗೆ |
ದೊರೆದೆ ನೀನೆಂದಾಕೆಯೊರೆದಿರ |
ಲರಿವುದಾ ! ತಾಯೆ ! ದೊರೆ ನಾನಾಗಿರಲು ವ್ರತವಿದನು ||
ಹರುಷದೊಳೆಸಪೆನೆಂದು ಸುತನವ |
ನುರುತರದ ವಿಶ್ವಾಸದಿಂ ನುಡಿ |
ದರಸನಾಗುವ ಕಾಲಮಂ ನೆನೆದೀಕ್ಷಿಸುತ್ತಿರಲು ||

[ ದ್ವಿಜಪುತ್ರನು ರಾಜಪುತ್ರಿಯನ್ನು ಮದುವೆಯಾಗಿ ರಾಜನಾದದ್ದು. ೨೭ರ ವರೆಗೆ ]

೨೬ ಮುಂದೆ ದೊರೆಯೊರ್ವಂಗೆ ಸಂತತಿ |
ನಂದಿನಿಯೆ ತಾನೆನಿಸೆಯುವನಾ |
ನಂದಿನಿಯ ವೈವಾಹಕಾರ್ಯವ ಮಾಳ್ಪವಧಿಯುರಿತು ||
ಸಂದವರನನು ಹುಡುಕೆ ಚಿತ್ತಕೆ |
ಬಂದನೀದ್ವಿಜತನಯನೀತನ |
ತಂದು ದೊರೆತನದೊಡನೆ ನಿಜಕನ್ನಿಕೆಯ ಸಲಿಸಿದನು ||

( ಮುಂದೆ ಸಾಗುವದು )

ಹೂವು ಅರಳುವಾಗ, ಹಾವು ಹರಿಯುವಾಗ, ಮರವು ಚಿಗರುವಾಗ, ಕುರಿಯು ಮೇಯುವಾಗ, ಹಕ್ಕಿ ಹಾರುವಾಗ, ಬೆಕ್ಕು ಮೆಂವ್ ಅನ್ನುವಾಗೆಲ್ಲ ನಮ್ಮ ಕವಿಗಳಲ್ಲಿ ಸ್ಫುರಿಸುವದು ಆ ತತ್ವಬೋಧೆಯೊಂದೇ !

# ಕಾವ್ಯಕುಂಜ.

ಆಗ ಆ ಪ್ರಕೃತಿಯ ಲೀಲೆಯೇ "ಕವಿವಾಕ್ಯ ಧಾರೆಯಲಿ ಸುರಿಯುತಿದೆ" ಇದಕ್ಕೆ ನಮ್ಮ ಕವಿಗಳು ಭಾವನೆಯೆಂದು ಹೇಳುವರು. ಎಂದು ನಾನು ಎಣಿಸಿಕೊಂಡಿದ್ದೇನೆ. ಇದೊಂದು ಹೊಸ ಚೈತನ್ಯವೆಂಬುದು ನಿಜ.

ಶ್ರೀಮಾನ್ ಕುಕ್ಕಿಲಕೃಷ್ಣಭಟ್ಟರು.

# ಹಾರುವ ಹಕ್ಕಿ.

ಲೇಖಕರು :— ಶಂಕರಭಟ್ಟ ಅಗ್ನಿಹೋತ್ರಿ, ನವಲಗುಂದ.

ಹಕ್ಕಿಯಾದರೆ ಎಷ್ಟು ಚಿಕ್ಕದು ! ಆದರೂ ಅದು ಅನಂತವಾದ ಆಕಾಶದಲ್ಲಿ ಅಲೆಯುತಿದೆ ! ಹಾರುವದರಲ್ಲಿಯೇ ಅದಕ್ಕೆ ಹಿಗ್ಗು ! ಎಷ್ಟು ಹಾರಿದರೂ ಮನದಣಿಯದು. ಸಣ್ಣ ಹಕ್ಕಿಯು ನುಣ್ಣನ್ನ ಗರಿದೆಗೆದು ಗಗನದಲ್ಲಿ ಹಾರುವದನ್ನು ನೋಡುವದು ಎಷ್ಟು ಸೊಗಸು ! ಮುಗಿಲನ್ನು ಮುದ್ದಿಕ್ಕಿ ಮೋಡಕ್ಕೆ ಮನಸೋತು ಸುತ್ತಲೆ ಅಲೆಯುತ್ತಿರುವ ಹಕ್ಕಿಯ ಹರುಷವನ್ನು ಹಿಡಿಯುವವರಾರು ! ಆ ಹಕ್ಕಿಯು ಹೀಂಗೇಕೆ ತಿರುಗುತ್ತಿರುವದು ? ಕಳಕೊಂಡ ಒಡವೆಯನ್ನು ಹುಡುಕುತಿರುವವರಂತೆ ಇದು ತಿರುಗುತಿರುವದು. ಕಳೆದು ಹೋದ ಚಿಕ್ಕೆಗಳನ್ನು ಹುಡುಕಬೇಕೆಂದು ಆ ಹಕ್ಕಿಯು ಹಾರುತಿರುವದೋ ? ಅಲ್ಲದಿದ್ದರೆ ಆಕಾಶವನ್ನು ಅಳೆಯುವದಕ್ಕಾಗಿ ಅಲೆಯುತ್ತಿರಬಹುದೋ ? ಇದೂ ಅಲ್ಲವೆಂದರೆ ಹಗಲೊಡೆಯನಿಗೆ ಪ್ರದಕ್ಷಿಣೆ ಹಾಕುತ್ತಿರಬಹುದು.

ಹುಟ್ಟುತ್ತಲೇ ಹಕ್ಕಿಯು ಆಕಾಶದಲ್ಲಿ ಹಾರುವ ಹಕ್ಕನ್ನೇ ಹೊಂದಿದೆ. ಬೇಕಾದಾಗ ಬೇಕಾದಕಡೆಗೆ ಹೋಗುವ ಸ್ವಾತಂತ್ರ್ಯವು ಅದಕ್ಕಿದೆ. ಅದು ದಾರಿಯಲ್ಲಿ ಯಾರಿಗೂ ಸುಂಕ ಕೊಡುವದಿಲ್ಲ. ಯಾಕಂದರೆ ಅದು ಸಂಚರಿಸುವದು ವಿಷ್ಣುಪದದಲ್ಲಿ ! ನೆಲಕ್ಕೂ ಅದಕ್ಕೂ ಮಹದಂತರವು. ನೆಲದಮೇಲಿನ ದಾರಿದ್ರ್ಯ-ದುಃಖ ತಾಪತ್ರಯಗಳು ವಿಷ್ಣುಪದದಲ್ಲಿರುವ ವಿಹಂಗಮಕ್ಕೆ ತಟ್ಟುವಂತೆಯೇ ಇಲ್ಲ. ನಾವು ಹಾರುವ ಹಕ್ಕಿಯನ್ನು ನೋಡುವೆವು. ಅಷ್ಟೇ ! ಆದರೆ ಅದರ ಹರುಷವನ್ನು ನಮ್ಮದನ್ನಾಗಿ ಮಾಡಿಕೊಳ್ಳುವದಿಲ್ಲ. ಹಕ್ಕಿಯ ಹೃದಯದಲ್ಲಿಯ ಆನಂದವನ್ನು ಅನುಭವಿಸುವದರ ಕಡೆಗೆ ನಮ್ಮ ಚಿತ್ತವಿಲ್ಲ. ಇದ್ದರೆ ನಾವಾದರೂ ಹಕ್ಕಿಗಳಂತೆಯೇ ಹಗಲೆಲ್ಲ ಆನಂದದಿಂದ ಹಾರುತ್ತಿದ್ದೆವು.

ನಮ್ಮೂರ ಪಂಡಿತ ಪದ್ಮನಾಭಮೂರ್ತಿಗಳು ಪ್ರಖ್ಯಾತ ಪ್ರಾಣಿಶಾಸ್ತ್ರಜ್ಞರು. ಅವರಿಗೆ ನಾನೊಂದು ಬಾರಿ “ ಹಕ್ಕಿಗಳಿಗೆ ಹಾರಲು ಹೇಗೆ ಬರುತ್ತದೆ?” ಎಂದು ಕೇಳಿದೆನು. ಆಗ ಅವರು ಹಕ್ಕಿಗಳು ಹಗುರು ಇರುತ್ತವೆ. ಮೇಲಾಗಿ ಅವಕ್ಕೆ

ಪಕ್ಷಿಗಳಿರುತ್ತವೆ ಎಂದರು. ಮನುಷ್ಯನು ಹಕ್ಕಿಯಂತಾದರೆ ಹಾರಲಾರನೇ ಎಂಬ ಕಲ್ಪನೆಯು ಕೂಡಲೇ ತಲೆಯಲ್ಲಿ ಬಂದಿತು. ನಾನು ಹಗುರಾಗಬೇಕು. ಪಕ್ಷ (ಪಕ್ಷಮಾಸ) ವಂತೂ ಇದ್ದೇ ಇದೆ. ಎಂದುಕೊಂಡು ಹಕ್ಕಿಯಾಗಲು ಹಾರೈಸಿದೆ. ಬಂಗಾಲೀದೇಶದ ಪೂರಾ ಎರಡೂವರೆ ಮಣ ತೂಕವುಳ್ಳ ನಾನು ಹಕ್ಕಿಯಷ್ಟು ಹಗುರು ಹ್ಯಾಗಾಗಬೇಕು? ಎಂಬ ಆಲೋಚನೆಯಲ್ಲಿ ನಿದ್ರೆ ಬಂದಿತು. ಕನಸಿನಲ್ಲಿ ಹಕ್ಕಿಯಂತೆ ಹಾರಿದೆನು. ಹಾರ ಹಾರುತ್ತ ಹೌಹಾರಿ ನೆಲಕ್ಕೆ ಬಿದ್ದೆನು. ಆಗ ನಾನು ಹಗುರಾಗಿಗಲಿಲ್ಲ. ಕಲ್ಲಿನಂತೆ ಜಡವಾಗಿದ್ದೆನು. ಹೋಗಲಿ, ಆ ಕನಸಿನ ಸಂಗತಿ. ಮನಸ್ಸಿನಲ್ಲಿದ್ದದ್ದೇ ಕನಸಿನಲ್ಲಿ ಬರುವದು. ಕನಸಿನಲ್ಲಿ ನಾನು ಹಕ್ಕಿಯಾದಾಗ ನನ್ನ ಮೈ ಹಗುರಾಗಿತ್ತು. ಅಂತೇ ಹಾರಿದೆನು. ಇವರಿಂದ "ಹಗುರಿದ್ದರೆ ಹಾರಲಿಕ್ಕೆ ಬರುವದೆಂ"ಬ ತತ್ವವು ಮನವರಿಕೆಯಾಯಿತು. ಗಾಳೀಪಟವೂ ಒಂದು ಹಕ್ಕಿಯಾಗಿರಲೇಬೇಕು. ಇಲ್ಲದಿದ್ದರೆ ಅದು ಹಾರುತ್ತಿರಲಿಲ್ಲ. ಮೇಲಾಗಿ ಪಟವು ಹಗುರಿಗುವದು. ನೋಡುವವರಿಗೆ ಮೋಡಗಳೂ ಹಕ್ಕಿಗಳಾಗಿಯೇ ಕಾಣುವವು. ಮೋಡದಲ್ಲಿ ಜೀವನವಿದೆ. ಹಕ್ಕಿಯಲ್ಲಿಯೂ ಜೀವನವಿದೆ. ಎರಡೂ ಮುಗಿಲಲ್ಲಿಯೇ ಚರಿಸುತ್ತವೆ. ಎರಡಕ್ಕೂ "ನೀರದ"ವೆಂದು ಸಂಜ್ಞೆ. ಅಂದಮೇಲೆ ಮೋಡಗಳು ಹಕ್ಕಿಗಳೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲಷ್ಟೆ?

ಹಗಲ ಚಿಕ್ಕೆಯು ಮುಗಿಲಚಿಕ್ಕಿಯನ್ನು ಹುಡುಕಹತ್ತಿದೆ. ಮುಗಿಲ ಚಿಕ್ಕಿಯು ಹಗಲ ಹಿಂದೆ ಅಡಗಿದೆ. ಎಷ್ಟು ಹುಡುಕಿದರೂ ಮರೆಯಲ್ಲಿದ್ದ ಮುಗಿಲಚಿಕ್ಕೆಯು ಕಾಣದಾಗಿದೆ. ಹಗಲಚಿಕ್ಕಿಯು ಹಾಡಿಹಾಡಿ ಕರೆಯುತ್ತಿದೆ. ಹಾರಿ ಹಾರಿ ಹುಡುಕುತ್ತಲಿದೆ. ಎಷ್ಟು ಹಾಡಿದರೇನು? ಎಷ್ಟು ಹಾರಿದರೇನು? ಮುಗಿಲಚಿಕ್ಕೆಯು ಮಿಸುಕದಾಗಿದೆ. ಆದರೂ ಹಗಲ ಚಿಕ್ಕೆಯು ನಿರಾಶವಾಗಲಿಲ್ಲ. ಹುಡಿಕಿಯೇ ತೀರುವೆನೆಂದು ಎದೆಗಟ್ಟಮಾಡಿ ಇಮ್ಮಡಿ ಮುಮ್ಮಡಿ ಹುರುಪಿನಿಂದ ಹಾರುತ್ತಲಿದೆ.

ಎಲೇ ಹಕ್ಕಿಯೇ ನೀನು ಹೀಗೇ ಹಾರುತಿರು. ಮುಗಿಲಚಿಕ್ಕೆಯು ಕಾಣುವವರೆಗೂ ಹಾರುವದನ್ನು ಬಿಡಬೇಡ. ನಿನ್ನ ಆನಂದಗೀತವು ನಮ್ಮ ಕಿವಿಗಳಿಗೆ ಹಬ್ಬವನ್ನು ಮಾಡಲಿ. ಅದು ನಮಗೆ ನಿನ್ನಂತೆ ಹಾರುವ ಬಲವನ್ನು ಕೊಡಲಿ. ನಿನಗೆ ಗೆಲವಾಗಲಿ!

---

ಜೀವನಕ್ಕೆ ಜೀವನನಾದ ನಾನು ಸರ್ವರಿಗೂ ಅಗತ್ಯವಾದದ್ದು ಅರಿದಲ್ಲ. ನನ್ನಿಂದಲೇ ಜೀವಿತಗಳ ಉತ್ಪತ್ತಿಯು. ಉತ್ಪತ್ತಿಯಂತೆ ನಾಶಕ್ಕೂ ಕಾರಣನು ನಾನೇ! ನಾನು ಸರ್ವರ ನೆಲೆಯನ್ನು ಅರಿತವನಾದರೂ ನನ್ನ ನೆಲೆಯನ್ನರಿತವರಾರಿಲ್ಲ. ನನ್ನಲ್ಲಿ ಜಾತಿಭೇದವಿಲ್ಲ. ಆದರೂ ಜಾತಿಭೇದವನ್ನು ಕಲ್ಪಿಸುವರು. ನಾನೆಲ್ಲರಿಗೂ ಬೇಕಾಗಿದ್ದರೂ ನನಗೆ ಬೆಲೆಯಿಲ್ಲ. ಬೆಲೆಯನ್ನು ಕೊಟ್ಟುಕೊಳ್ಳುವವರೂ ಉಂಟು. ನಾನು ಯಾರಮೇಲೂ ಅಧಿಕಾರವುದವನ್ನು ತೋರಿಸತಕ್ಕವನಲ್ಲ. ಆದರೆ ನನ್ನ ಮೇಲೆ ಮಾತ್ರ ಅಧಿಕಾರವನ್ನು ತೋರಿಸುವವರು ಬಹಳ. ನಾನು ಯಾರನ್ನೂ ಪ್ರತಿಬಂಧದಲ್ಲಿಟ್ಟುಕೊಳ್ಳತಕ್ಕವನಲ್ಲ. ಆದರೆ ನನ್ನನ್ನು ಮಾತ್ರ ಪ್ರತಿಬಂಧಮಾಡಲೆತ್ನಿಸುವರು. ಹಾಗೂ ಪ್ರತಿಬಂಧ ಮಾಡುವರು. ಆದರೂ ನಾನು ತಪ್ಪಿಸಿಕೊಂಡು ಸಂದಿಗೊಂದಿಗಳೊಳಗಿಂದ ಪಾರಾಗುವೆನು. ನನಗೆ ಬೇಡಾದ ಪದಾರ್ಥಗಳೊಂದೂ ಇಲ್ಲ. ಆದರೆ ನಾನು ಬೇಡೆಂಬುವವರೂ ಉಂಟು. ನನಗೆ ಆಕಾರ ರೂಪಗಳಿಲ್ಲದಿದ್ದರೂ ರೂಪಾಂತರವನ್ನು ಹೊಂದಿ ಆಕಾರವನ್ನೂ ಹೊಂದುವೆನು. ನಾನು ಗುಣಜ್ಞನಾದರೂ ನನ್ನಲ್ಲಿ ಅವಗುಣಗಳನ್ನು ಕಲ್ಪಿಸುವರು. ನನ್ನಲ್ಲಿದ್ದಷ್ಟು ಶಕ್ತಿಯು ಮತ್ತಾವುದರಲ್ಲಿಯೂ ಇಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಆದರೂ ನನ್ನಷ್ಟು ತಿಳುವಾದ ಪದಾರ್ಥ ಬೇರೊಂದಿಲ್ಲ. ನಾನು ಎಷ್ಟು ಭಾರವನ್ನು ಹೊರಿಸಿದರೂ ಹೊರುವೆನು. ನನ್ನ ಭಾರವನ್ನು ಮಾತ್ರ ಯಾರೂ ಸಹಿಸರು. ನಾನು ಪುರುಷನಾದರೂ ಸ್ತ್ರೀಯೆಂದು ಕರೆಯುವರು. ಹಾಗೂ ಉಂಟು. ನಾನು ಸರ್ವರ ಪಾಪಕ್ಷಾಲನೆ ಮಾಡಬಲ್ಲೆನು. ನನ್ನ ಪಾಪದೂರೀಕರಿಸುವವರೇ ಇಲ್ಲ. ನಾನು ಭೂವ್ಯೋಮಾಕಾಶ ಪಾತಾಳದಲ್ಲಿರುವೆನು. ಆದರೂ ಒಂದೆಡೆಯಲ್ಲಿಯೂ ನನಗೆ ಚಿರತಾಣವಿಲ್ಲ. ನಾನು ಸರ್ವರಿಗೂ ಆದರಣೀಯನಾದರೂ ಸರ್ವರನ್ನೂ ನುಂಗಿ ಕಡೆಯಲ್ಲಿ ನಾನೇ ನಾನಾಗುವೆನು.

ಇದರ ಶೀರ್ಷಕವನ್ನು ವಾಚಕರೇ ತರ್ಕಿಸಲಿ.

ಬರೆದವ:— ಭ್ರಾಂತೇಶ.

# ರಾಗ— ಕೇದಾರಗೌಳ.

ಆರೋಹ. ನಿ ಸಾರಿ ಮಪ ನಿ ಸಾರೆ

ಅವರೋಹ. ಸಾ ನಿ ಧ ಪ ಮ ಗ ರಿ ಸಾ

ಪ್ರಾರ್ಥನಾ ಪದ್ಯದ ನೋಟೇಶನ್. ರಾಗ. ಕೇದಾರಗೌಳ. ತಾಳ- ರೂಪ
(ಮಾತ್ರಾ- ೬)

| | | | | | | | | | | | | |
|---|---|---|---|---|---|---|---|---|---|---|---|---|
| ಎ | ನಿ | ಸ | ನೋ | ೦ | ದಿ | ಫ | ಲ | ವ | ದೆ | ೦ | ನು | |
| ಸಾ | ರಿ | ಮ | ಪ | ನಿ | ಸಾ | ಸಾ | ರೆ | ಸಾ | ನಿ | ಧ | ಪ | |
| ಎ | ನಿ | ಸ | ಕೆ | ೦ | ಳಿ | ಫ | ಲ | ವ | ದೆ | ೦ | ನು | |
| ರಿ | ರಿ | ಮ | ಪ | ನಿ | ಧ | ಪ | ಮ | ಗ | ರಿ | ನಿ | ಸಾ | |
| ಮ | ನ | ಸು | ತ | ಽ | ನ್ನ | ದು | ಽ | ರ್ಗು | ಣ | ಗ | ಳ | |
| ಪ | ನಿ | ಸಾ | ರೆ | ಮ | ಗ | ರೆ | ಸಾ | ಸಾ | ನಿ | ಧ | ಪ | |
| ಬಿ | ಡ | ದು | ಶಿ | ವ | ಶಿ | ವಾ | ಽ | ಽ | ಽ | ಽ | ಽ | ‖ಪ‖ |
| ರಿ | ರಿ | ಮ | ಪ | ನಿ | ಧ | ಪ | ಮ | ಗ | ರಿ | ನಿ | ಸಾ | |
| ಇ | ೦ | ದು | ಧ | ರ | ನ | ಚ | ರ | ಣ | ದ | ಽ | ಲ್ಲಿ | |
| ಪ | ಽ | ಪ | ನಿ | ಧ | ಮ | ಪ | ನಿ | ನಿ | ಸಾ | ಽ | ಸಾ | |
| ಹೊ | ೦ | ದಿ | ಸು | ಖ | ದ | ಲಿ | ರ | ದು | ಮ | ನ | ವು | |
| ನಿ | ನಿ | ಸಾ | ರೆ | ಮ | ಗ | ರೆ | ಸಾ | ಸಾ | ನಿ | ಧ | ಪ | |
| ಕು | ೦ | ದ | ದ | ಽ | ನ್ಯ | ವಿ | ಷ | ಯ | ದ | ಽ | ತ್ತ | |
| ಮ | ಪ | ನಿ | ಸಾ | ರೆ | ಸಾ | ನಿ | ಧ | ಪ | ನಿ | ಧ | ಪ | |
| ಹ | ರಿ | ವು | ದೆ | ೦ | ತಿ | ನೆ | ಽ | ಽ | ಽ | ಽ | ಽ | |
| ರಿ | ರಿ | ಮ | ಪ | ನಿ | ಧ | ಪ | ಮ | ಗ | ರಿ | ನಿ | ಸಾ | |
| ಓ | ೦ | ದು | ಕ್ಷು | ಣಿ | ಯ | ಹಿ | ಡಿ | ದು | ತ | ೦ | ದು | |
| ಪ | ಽ | ಪ | ನಿ | ಧ | ಮ | ಪ | ನಿ | ನಿ | ಸಾ | ಽ | ಸಾ | |
| ಅ | ೦ | ದ | ಳಿ | ವ | ನು | ಏ | ಽ | ರಿ | ಸಿ | ರ | ಲು | |
| ನಿ | ನಿ | ಸಾ | ರೆ | ಮ | ಗ | ರೆ | ಸಾ | ಸಾ | ನಿ | ಧ | ಪ | |
| ಮು | ೦ | ದೆ | ಹೆ | ೦ | ಸಿ | ಕೆ | ಯ | ನು | ಕ | ೦ | ಡು | |
| ಮ | ಪ | ನಿ | ಸಾ | ರೆ | ಸಾ | ನಿ | ಧ | ಪ | ನಿ | ಧ | ಪ | |
| ನ | ಗೆ | ದ | ಪ್ಪಾ | ಽ | ಕ್ಕೈ | ಯಿ | ೦ | ಽ | ಽ | ಽ | ಽ | ‖೧‖ |
| ರಿ | ರಿ | ಮ | ಪ | ನಿ | ಧ | ಪ | ಮ | ಗ | ರಿ | ನಿ | ಸಾ | |

ಮೇಲಿನ ನುಡಿಯಂತೆ ಎಲ್ಲ ಉಳಿದ ನುಡಿಗಳನ್ನು ಬಾರಿಸಬೇಕು.

ನಮ್ಮಲ್ಲಿನ ಸಂಗೀತಗಾರರೊಬ್ಬರು ರಾ। ರಾ। ನಾರಾಯಣರಾವ ವಿಜಾಪುರ ಅವರು ಚಾಂದ್ರಿಕೆಗಾಗಿ ತಮ್ಮ ಅಮೂಲ್ಯವಾದ ಕೃತಿಯನ್ನು ದಯಪಾಲಿಸಿದ್ದಕ್ಕಾಗಿ ನಾವು ಅವರಿಗೆ ತುಂಬಾ ಋಣಿಯಾಗಿದ್ದೇವೆ.

ಸಂಪಾದಕರು.

ಸಾಹಿತ್ಯದಿಂದ ಸಂಸ್ಕೃತಿಯು ಬೆಳೆಯುವದು. ಆ ಸಂಸ್ಕೃತಿಯಿಂದ ಸಮಾಜವು ಬೆಳೆಯುವದು. ಅಂತಹ ಸಮಾಜದಲ್ಲಿನ ಮನುಷ್ಯನು ಬೆಳೆಯುವನು. ಹೀಗೆಂದರೆ ಸಾಹಿತ್ಯದ ಅಭಿಮಾನವು ಅವಶ್ಯಕವಲ್ಲವೇ ?

# ವಿವಿಧ ಸಾಹಿತ್ಯ.

ಅಹುದು. ಆದರೆ ಸಂಸ್ಕೃತಿಯು ಬೆಳೆಯುವಂತಹ ಸಾಹಿತ್ಯದ ಅಭಿಮಾನವೇ ಅವಶ್ಯಕ. ಸಂಸ್ಕೃತಿಯು ಬೆಳೆಯುವದೆಂದರೆ ವಿಚಾರಧೋರಣೆಯು ಬೆಳೆಯುವದು. ವಿಚಾರಧೋರಣ ಬೆಳೆಯುವದೆಂದರೆ ಸರಿಯಾದ ಸಮಾಜಧೇಯದ ಸಾತ್ವಿಕವಾದ ವಿಚಾರ ಬೆಳೆಯುವದು.

ಪ್ರೊ. ಜಹಾಗೀರದಾರ.

# ಹೃದಯ ಸಂವೇದನೆ.

ಲೇಖಕ:— " ತಿಮ್ಮಣ್ಣ "

ಹೃದಯಕ್ಕಾದ ಹಲಕೆಲವು ವೇದನೆಗಳು, ಎಂದೂ ಮರೆಯದಂಥವಿರುತ್ತವೆ. ನನ್ನ ಆಯುಷ್ಯದೊಳಗಿನ ಒಂದು ಪ್ರಸಂಗ- ಛೇ! ಆ ಪ್ರಸಂಗದ ನೆನಪೇ ಬೇಡ. ನೆನಿಸಿದ ಕೂಡಲೇ, ಪಶ್ಚಾತ್ತಾಪದಿಂದ ನನ್ನ ಹೃದಯಕ್ಕೆ ಸಹಸ್ರಾರು ಚೇಳುಕಡಿದಂತಾಗುತ್ತದೆ. ದಾನಶೂರನೆಂದು ನನ್ನ ಖ್ಯಾತಿಯು ಎಲ್ಲ ಕಡೆಗೂ ಹಬ್ಬಿದೆ. ನಮ್ಮೀ ಭುವನೇಶ್ವರೀ ಪುರದಲ್ಲಿ ನನ್ನ ಸಹಾಯ ಮುಟ್ಟದ ಒಂದೂ ಸಾರ್ವಜನಿಕ ಸಂಸ್ಥೆಗಳಿಲ್ಲ. ಪ್ರತಿಯೊಂದು ಸಂಸ್ಥೆಯ ಕಟ್ಟಡದಲ್ಲಿ ನನ್ನ ಹೆಸರನ್ನು ಕಾಣಬಹುದು. ಆ ಕಟ್ಟಡದ ಶಿಲೆಯಲ್ಲಿ ಚಿತ್ರಿಸಿದ ಹೆಸರುಗಳು ಕಾಲಾಂತರದಿಂದ ಮಸಮುಸಕಾಗಿ ಕಾಣದಂತಾಗಬಹುದು. ಆದರೆ ನನ್ನ ಹೃತ್ಪಟಲದ ಮೇಲೆ ಚಿತ್ರಿತವಾದ ಒಂದು ನೋಟವು ಎಂದೂ ಮರೆಯುವಂತಿರುವದಿಲ್ಲ. ಆದರೆ ಆ ಭೀಕರ ಕರುಣಾಜನಕ ನೋಟದ ಸ್ಮರಣೆಯಾಯಿತೆಂದರೆ, ನನ್ನ ಹೃದಯಕ್ಕೆ ಬರೆಕೊಟ್ಟಂತಾಗುತ್ತದೆ.

\+ + + + +

ವಿರೂಪಾಕ್ಷಿಯೂ ನಾನೂ ಬಾಲ ಮಿತ್ರರು. ಸಣ್ಣವರಿದ್ದಾಗಿನಿಂದ ಒತ್ತಟ್ಟಿಗೆ ಕೂಡಿ ಆಡಿದವರು. ಕಲಿತವರು. ಆದರೆ ವಿರೂಪಾಕ್ಷಿ ಹಾಗೂ ನನ್ನ ಸಾಂಪತ್ತಿಕ ಸ್ಥಿತಿಯಲ್ಲಿ ಮಾತ್ರ ಬಹಳೇ ಅಂತರವಿತ್ತು. ನನ್ನ ತಂದೆಯವರು ಹೆಸರಾದ ವಕೀಲರಾಗಿದ್ದರು. ವಿರೂಪಾಕ್ಷಿಯ ತಂದೆಯವರು ಅವರ ಕೈಕೆಳಗೆ ಕಾರಕೂನರಿದ್ದರು. ಕುಟುಂಬ ವಿಸ್ತಾರವು ಬಹಳೇ ದೊಡ್ಡದಿದ್ದು ಪಗಾರವು ತೀರಕಡಿಮೆ ಇದ್ದುದರಿಂದ ವಿರೂಪಾಕ್ಷಿಯ ತಾಯಿ-ತಂದೆಗಳಿಗೆ ಸಂಸಾರ ಸಾಗಿಸಬೇಕಾದರೆ ಸಾಕುಬೇಕಾಗಿ ಹೋಗುತ್ತಿತ್ತು. ಆದ್ದರಿಂದ ವಿರೂಪಾಕ್ಷಿಯ ತಾಯಿಯು ಹಬ್ಬ-ಹುಣ್ಣಿವೆಯಲ್ಲಿ ಅಡಿಗಿಗೆ ನಮ್ಮ ತಾಯಿಯವರಿಗೆ ನೆರವಾಗುತ್ತಿದ್ದರು ಆ ಕಾಲಕ್ಕೆ ನಮ್ಮ ತಾಯಿಯವರು ವಿರೂಪಾಕ್ಷಿಯ ಯಾವತ್ತೂ ಕುಟುಂಬವನ್ನೇ ಊಟಕ್ಕೆ ಕರಿಯುತ್ತಿದ್ದರು. ಈ ಬಗ್ಗೆ ವಿರೂಪಾಕ್ಷಿಯ ತಾಯಿಯು ಬಹಳೇ ಕೃತ

ಜ್ಞತೆಯನ್ನು ವ್ಯಕ್ತಪಡಿಸುತ್ತಿದ್ದಳು. ಈ ಪ್ರಕಾರ ಸಾಂಪತ್ತಿಕ ಸ್ಥಿತಿಯಿಂದ ನನ್ನ ಮತ್ತು ವಿರೂಪಾಕ್ಷಿಯು ನಡುವೆ ಇಷ್ಟೊಂದು ಭೂವ್ಯಾಕಾಶದಷ್ಟು ಅಂತರವಿದ್ದರೂ ಉಭಯತರಲ್ಲಿ ನಿಜವಾದ ಪ್ರೇಮವಿತ್ತು. ವಿರೂಪಾಕ್ಷಿಯ ಮನೆಯವರೆಲ್ಲರೂ ದಿನಾಲೂ ಒಂದಿಲ್ಲೊಂದು ಕಾರ್ಯದ ನಿಮಿತ್ಯದಿಂದ ನಮ್ಮ ಮನೆಗೆ ಬಂದು ಹೋಗುತ್ತಿದ್ದದರಿಂದ ಅವರೆಲ್ಲರೂ ನನಗೂ ಹಾಗೂ ನಮ್ಮ ತಾಯಿಯವರಿಗೂ ಸಮೀಪದ ಆಪ್ತರಂತೆಯೇ ಆಗಿದ್ದರು. ವಿರೂಪಾಕ್ಷಿಯೂ ನಾನೂ ಕೂಡಿ ಮ್ಯಾಟ್ರಿಕದ ಅಭ್ಯಾಸಮಾಡುತ್ತಿರುವಾಗಲೇ ವಿರೂಪಾಕ್ಷಿಯ ತಂದೆಯವರು ಮೃತಪಟ್ಟರು. ಇದರಿಂದ ವಿರೂಪಾಕ್ಷಿಯ ಕುಟುಂಬದಮೇಲೆ ಆಕಾಶ ಕೊಡಲಿಯೇ ಬಿದ್ದಂತಾಯಿತು. ನನ್ನ ತಾಯಿಯವರ ಪ್ರೇಮವು ಈ ಕುಟುಂಬದಮೇಲೆ ಬಹಳ ವಿತ್ತಾದುದರಿಂದ ವಿರೂಪಾಕ್ಷಿಯುವರ ತಂದೆಯವರು ಮೃತವಾದುದನ್ನು ಕೇಳಿ ನನ್ನ ತಾಯಿಗೆ ಬಹಳೇ ಕೆಡಕೆನಿಸಿತು. ಅವಳು ನನ್ನ ತಂದೆಯವರಿಗೆ “ ವಿರೂಪಾಕ್ಷಿಯು ಹೇಗೋ ಕಲಿತವನಿರುವನು ತಂದೆಯ ಸ್ಥಳದಲ್ಲಿ ಆತನನ್ನು ನಿಯಮಿಸಿಕೊಂಡು ಹಿಂದಿನಂತೆ ಸಂಬಳಕೊಡುತ್ತ ಹೋಗಿರಿ. ಅಂದರೆ ಬಡವನ ಕಲ್ಯಾಣ ಮಾಡಿದಂತಾಗುವದು ” ಎಂದು ಅಂದಳು. ಆದರೆ ನಮ್ಮ ತಂದೆಯವರು ಒಳ್ಳೇ ಮುತ್ಸದ್ದಿಯಾಗಿದ್ದರು. ವಿರೂಪಾಕ್ಷಿಯ ತಂದೆ ಶಂಕರರಾಯರು ತೀರಿಕೊಂಡ ಸುದ್ದಿಯನ್ನು ನಮ್ಮ ತಂದೆಯ ಪ್ರತಿಸ್ಪರ್ಧಿ ವಕೀಲರ ಕಾರಕೂನಸುಕೇಳಿ, ನಮ್ಮ ತಂದೆಯವರಿಗೆ ಭೆಟ್ಟಿಯಾದನು. ಹಾಗೂ ತನಗೆ ಹೆಚ್ಚಿಗೇ ಪಗಾರ ಕೊಟ್ಟಲ್ಲಿ ಆ ಪ್ರತಿಸ್ಪರ್ಧಿ ವಕೀಲರ ಎಲ್ಲಪಕ್ಷಕಾರರನ್ನು ಒಡಕೊಂಡು ತರುವೆನೆಂದು ಹೇಳಿದನು. ಈ ಮೋಹಜಾಲಕ್ಕೆ ನನ್ನ ತಂದೆಯವರು ಬಲಿಬಿದ್ದು, ನನ್ನ ತಾಯಿಯ ಮಾತನ್ನು ಅಲ್ಲಗಳೆದರು. ಇದರಿಂದ ತಾಯಿಗೆ ಕೆಡಕೆನಿಸಿತು. ಆದರೆ ಪಾಪ! ಮಾಡುತ್ತಾಳೇನು ? ಕೆಲವು ದಿವಸಗಳ ನಂತರ ವಿರೂಪಾಕ್ಷಿಯು ಎಲ್ಲ ಕುಟುಂಬವು ಹತ್ತರವಿದ್ದ ಆತನ ಸೋದರ ಮಾವನ ಊರಿಗೆ ಆತನ ಆಶ್ರಯದಲ್ಲಿರಲು ಹೊರಟು ಹೋಯಿತು.

ತಾರುಣ್ಯದೊಳಗಿನ ಸ್ನೇಹವೆಂದರೆ ಎಷ್ಟೊಂದು ಚಂಚಲವಾದದ್ದು! ಎಷ್ಟೊಂದು ಕ್ಷಣ ಭಂಗುರವಾದದ್ದು !! ವಿರೂಪಾಕ್ಷಿಯು ನನ್ನ ಕಣ್ಣುಮುಂದಿರುವ ತನಕ, ಅವನನ್ನೊಂದು ಘಳಿಗೆ ಬಿಟ್ಟಿರುವಂತಾಗುತ್ತಿದ್ದಿಲ್ಲ. ಆದರೆ ವಿರೂಪಾಕ್ಷಿಯು ನನ್ನ ಕಣ್ಮರೆಯಾದ ಕೂಡಲೇ ದಿನದಿನಕ್ಕೆ ಅವನ ನೆನಪು ಕಡಿಮೆಯಾಗ ಹತ್ತಿತು. ನಾನು ಮುಂದೆ ಕಾಲೇಜದಲ್ಲಿ ಸೇರಿ ಹೊಸಗೆಳೆಯರ ಸಹವಾಸದಲ್ಲಿ ಮಗ್ನನಾದೆನು. ವಿರೂಪಾಕ್ಷಿಯು ಮಾತ್ರ ತನ್ನ ಸ್ನೇಹಸಂಬಂಧವನ್ನು ಹಾಗೇ ಕಾಯಮವಾಗಿ ಇಟ್ಟಿದ್ದನು. ಅವನು ಪ್ರತಿಸೋಮವಾರ ಸಂತೆಗೆಂದು ನಮ್ಮೂರಿಗೆ ಬಂದನೆಂದರೆ, ನನಗೆ ಹಾಗೂ ನನ್ನ ತಾಯಿಯವರಿಗೆ ಭೆಟ್ಟಿಯಾಗಿ, ಮಾತುಕಥೆಗ

ಳನ್ನಾಡಿ ಹೋಗುತ್ತಿದ್ದನು. ಹಾಗೆಯೇ ಎಂದೂ ಹೋಗುತ್ತಿದ್ದಿಲ್ಲ. ನಮ್ಮ ತಾಯಿಯವರಾದರೂ ಅವನಿಗೆ ಎಷ್ಟೋ ಸಣ್ಣ-ಪುಟ್ಟ ಸಹಾಯ್ಯಗಳನ್ನು ಮಾಡುತ್ತಿದ್ದರು. ಕೆಲವು ದಿವಸಗಳ ನಂತರ ಅವನಿಗೆ ಒಂದು ನೌಕರಿಯು ದೊರೆಯಿತು. ಆದ್ದರಿಂದ ಅವನು ಬೇರೆ ಊರಿಗೆ ಹೊರಟು ಹೋದನು. ನಾನು ಆಯ್. ಸೀ. ಎಸ್. ಪಾಸಾಗಿ ಬರಲು ತೀವ್ರವೇ ವಿಲಾಯತಿಗೆ ಹೊರಟು ಹೋದೆನು. ಮುಂದಿನ ನಾಲ್ಕೈದು ವರ್ಷಗಳಲ್ಲಿ ಒಮ್ಮೆಯೂ ವಿರೂಪಾಕ್ಷಿಯ ನೆನಪಾಗಲಿಲ್ಲ.

\+ \+ \+ \+

" ರಾವಸಾಹೇಬ ಹೊರಗ್ಯಾರೋ ತಮ್ಮನ್ನು ಕಾಣಲು ಕಾದುಕೊಂಡುನಿಂತಿದ್ದಾರೆ ಅಪ್ಪಣೆಯಾದಲ್ಲಿ ಒಳಗೆ ಕಳುಹಿಸುವೆನು " ಎಂದು ನನ್ನ ಪಟ್ಟೇವಾಲಾನು ಒಳ್ಳೇ ನಮ್ರಪೂರ್ವಕ ಮುಜರೆಮಾಡುತ್ತ ಅಂದನು.

" ಎಲ್ಲರಿಗೂ ಕಚೇರಿಯಲ್ಲಿ ಬಂದು ಭೆಟ್ಟಿಯಾಗಿರಿ " ಎಂದು ತಿಳಿಸಲು ಈ ಮೊದಲೇ ನಿನಗೆ ಎಚ್ಚರಿಕೆ ಕೊಟ್ಟಿಲ್ಲವೇ ?" ಎಂದು ನನ್ನಬಳಿ ಕುರ್ಚಿಯಮೇಲೆ ಕುಳಿತ ನನ್ನ ಪ್ರಿಯತಮೆಯು ಶಿಪಾಯಿಯನ್ನುದ್ದೇಶಿಸಿ ಒಳ್ಳೇ ದರ್ಪದಿಂದ ನುಡಿದಳು.

" ಈ ಶಿಪಾಯಿ ಜನರಿಗೆ ಬುದ್ಧಿ ಇದ್ದರಷ್ಟೇ ? ನಮ್ಮ ಡಾಯರ ಸಾಹೇಬರ ಮತದಂತೆ ಅವರಿಗೆ ಲತ್ತಾಪ್ರಹಾರವೇ ಮದ್ದು. ಅಂದರೇನೇ ಅವರು ಹಾದಿಗೆ ಬರುವರು " ಎಂದು ನಾನು ಅಂದೆನು. ಆಗ ಶಿಪಾಯಿಯು " ತಮ್ಮ ಹುಕುಂ ಅವರಿಗೆ ಕಚೇರಿಯಲ್ಲಿಯೇ ಭೆಟ್ಟಿಯಾಗಲು ಹೇಳಿದೆನು. ಆದರೆ ಅವರು ತಮ್ಮ ಪರಮಸ್ನೇಹಿತರೆಂದು ಹೇಳಿದರು " ಎಂದು ಒಳ್ಳೇ ನಮ್ರನಾಗಿ ನುಡಿದನು.

ಗೊತ್ತದ ? ಹೋಗೋ ! ಈ ಪ್ರಕಾರಾ ಪರಮ ಸ್ನೇಹ ಹೇಳತಕ್ಕವರು ನಾನುಡಿ. ಜಜ್ಜನಾಗಿರುವೆನೆಂಬದನ್ನು ತಿಳಿದಂದಿನಿಂದ ವರ್ಷಾನುವರ್ಷ ಬೆಳೆಯುತ್ತಿರುವ ಈ ಗುರ್ತೆಂಬ ವೃಕ್ಷಕ್ಕೆ ಹೊಸ ಟೊಂಗೆಗಳೇ ಒಡೆದಂತಾಗಿದೆ. ಮೊನ್ನೆ ಯಾವನೋ ಒಬ್ಬ ಮುದುಕ ಬಂದಿದ್ದ. ಅವನೆಲ್ಲಿಯೋ ನಮ್ಮ ಕಕ್ಕನ ದೂರಿನ ಆಪ್ತನಂತೆ. ಸಣ್ಣವನಿದ್ದಾಗ ನನ್ನೊಮ್ಮೆ ನೋಡಿದ್ದನಂತೆ. ಇಷ್ಟರ ಮೇಲಿಂದ ಸುರುಮಾಡಿದನಲ್ಲ ತನ್ನ ಹಳೇ ಗೆಳೆತನದ ರಗಳೆಯನ್ನು !

ಕಡೆಗೇನೋ ಅಂತಾನಲ್ಲ " ಈಗೇನೋ ನನಗೆ ವೃದ್ಧಾಪ್ಯಕಾಲ ಬಂದಿದೆ ತಮ್ಮಂಥವರ ಆಶ್ರಯಕ್ಕಿರುವೆನು. ತಮ್ಮಂಥ ಲಕ್ಷ್ಮೀಪುತ್ರರಿಗೆ ಧನ್ಯವಾದಗೈಯ್ಯುವೆನು.... .... .... .... .... .... ....ಮತ್ತೇನು ಕಂಡಂತೆ ಹಾಗೇ

ನಿಂತಿಯಲ್ಲ. ಬಂದದಾರಿಗೆ ಸುಂಕವಿಲ್ಲೆಂದು ಹೇಳಿ ಅರ್ಧ ಚಂದ್ರಾಕೃತಿ ಕೊಟ್ಟು ಕಳುಹು" ಎಂದು ನಾನು ಮೋರೆಕಿವುಚುತ್ತ ನುಡಿದೆನು.

"ಆದರೆ ಮೊದಲು ಬಂದವರವರು ಯಾರೆಂಬದನ್ನಾದರೂ ನೋಡಿರಿ ಇಲ್ಲವಾದರೆ, ಯಾರಾವರೂ ಹಳೇ ಸ್ನೇಹಿತರಿದ್ದರೆ ಮುಂದೆ ತೊಂದರೆಯಾದೀತು" ಎಂದು ನನ್ನ ಪತ್ನಿಯು ನುಡಿದಳು.

ಸಿಪಾಯಿಯು ಮಾತ್ರ ನಮ್ಮುಭಯತರ ಮೋರೆಯ ಕಡೆಗೆ ನೋಡುತ್ತ ಹೇಗೆಮಾಡಬೇಕೆಂಬ ವಿಚಾರದಲ್ಲಿ ಬಿದ್ದನು.

"ಅವರಿಗೆ ಬರಲಿಕ್ಕೆ ಹೇಳಹೋಗು". ಎಂದು ನನ್ನ ಪತ್ನಿಯು ಸಿಪಾಯಿಗೆ ಹೇಳಿದಳು. ನಾನು ಒಂದು ಶಿಗರೇಟು ಹೊತ್ತಿಸಿ ಅದೇ ಬಂದಟಾಯಿಮ್ಸ ತೆಗೆದು ಓದತೊಡಗಿದನು. ಅಷ್ಟರಲ್ಲಿ ಬಾಗಿಲದ ಬಳಿಯಲ್ಲಿ ಗಾಬರಿಯಾದ ಮುಖಮುದ್ರೆಯುಳ್ಳ ಒಬ್ಬ ಮನುಷ್ಯನು ಬಂದು ನಿಂತನು. ನಾನು ಸ್ವಲ್ಪವೇಳೆ, ಮತ್ತೆ ಟಾಯಿಮ್ಸದಲ್ಲಿ ಮುಖವನ್ನ ಸೇರಿಸಿದೆನು. ಆ ಮನುಷ್ಯನು ಕೆಲವೊಂದು ವೇಳೆ ಮಾತಾಡಬೇಕೋ ಬಾರದೋ ಎಂಬ ಸ್ಥಿತಿಯಲ್ಲಿದ್ದು, ಯಾವದಾದರೊಂದು ರೀತಿಯಿಂದ ಮಾತು ತೆಗೆಯುವಷ್ಟು, ಮನೋಧೈರ್ಯವಿಲ್ಲದ್ದರಿಂದ ತಿರುಗಿ ಹೋಗುವ ಹಂಚಿಕೆಯಲ್ಲಿದ್ದನು. ಆದರೆ ಸಣ್ಣಸ್ವರದಿಂದ "ರಾಮರಾವ" ಎಂದು ಕರೆದನು. "ರಾಮರಾವ" ಎಂಬ ಸಲಿಗೆಯ ಶಬ್ದವನ್ನು ಕೇಳಿ ನನಗೆ ಆಶ್ಚರ್ಯವಾಯಿತು! ಯಾಕಂದರೆ, ಈ ಭುವನೇಶ್ವರಿಯಲ್ಲಿ ಇಷ್ಟೊಂದು ಸಲಿಗೆಯ ಹೆಸರಿನಿಂದ ಕರೆಯುವ ಜೀವದ ಗೆಳೆಯರು ಒಬ್ಬರಾದರೂ ಇದ್ದಿಲ್ಲ. ನಾನು ನನ್ನ ಕನ್ನಡಕದೊಳಗಿಂದ ಒಂದು ತೀವ್ರದೃಷ್ಟಿಯನ್ನು ಅವನ ಮೇಲೆ ಚಲ್ಲಿದೆನು. ಇಷ್ಟರಲ್ಲಿ ಪುನಃ ಅವನು "ಏನು ರಾಮರಾವ ತಾವು ನನ್ನನ್ನು ಗುರ್ತಿಸಲಿಲ್ಲವೋ?" ಎಂದು ನಮ್ರ ಪೂರ್ವಕವಾಗಿ ನುಡಿದನು.

ಓಹೋ! ಯಾರು? ವಿರೂಪಾಕ್ಷಿಯೇನು? ಗೆಳೆಯಾ! ನಿಜವಾಗಿಯೂ ನಿನ್ನನ್ನು ಗುರ್ತಿಸಲಿಲ್ಲಾ. ಬಹಳದಿನಗಳಾದ ನಂತರ ಭೆಟ್ಟಿಯೊಯಿತಲ್ಲ! ನಿನ್ನಲ್ಲಿ ಬಹಳೇ ಸ್ಥಿತ್ಯಂತರವಾಗಿದೆ. ನಿನ್ನ ಕಣ್ಣು ಒಳನಟ್ಟಿವೆ. ಎಲವುಗಳು ಪ್ರತಿಯೊಂದು ಅವಯುವಗಳಲ್ಲಿ ಒಡೆದು ಕಾಣುತ್ತಲಿವೆ. ಒಟ್ಟನಮೇಲೆ ನಿನ್ನ ಮುಖಮುದ್ರೆಯೇ ಬದಲಾಯಿಸಿದೆ. ನಿಜವಾಗಿ ನಿನ್ನನ್ನು ನಿನ್ನ ಸ್ವರದಮೇಲಿಂದ ಗುರ್ತಿಸಿದೆ.

ವಿರೂಪಾಕ್ಷಿಯ ಮಲಿನ ಮುಖವನ್ನು ನೋಡಿ ನನ್ನ ಹೆಂಡತಿಗೆ ಹಿಡಿಸಲಾರದಷ್ಟು ನಗು ಬಂದಿತು. ಅದುಕಾಣಬಾರದೆಂದು ಅವಳು ಚಟಕ್ಕನೇ ಎದ್ದು ಒಳಗೆ ಹೊರಟು ಹೋದಳು. ಆದರೆ ಈ ಸಂಗತಿಯು ವಿರೂಪಾಕ್ಷಿಯ ದೃಷ್ಟಿಗೆ ಬೀಳದಿರಲಿಲ್ಲ.

" ನಾನು ಸುಮ್ಮನೇ ನಿಮ್ಮ ಭೆಟ್ಟಿಯಾಗಿ ಹೋಗೋಣ " ವೆಂದು ಬಂದೆನು." ಎಂದು ಅವನು ಖಿನ್ನನಾಗಿ ನುಡಿದನು. ಅಲ್ಲದೆ " ತಮಗೆ ತೊಂದರೆ ಬೇಡ" ಎಂದು ನಿಂತಿರುವಲ್ಲಿಯೇ ಮಾತಾಡಿದನು.

ಇಷ್ಟೊತ್ತಿನವರೆಗೆ ವಿರೂಪಾಕ್ಷಿಯು ನಿಂತಿಯೇ ಇದ್ದನು. ಆತನಿಗೆ ಕೂಡ್ರಲು ಹೇಳುವ ಪ್ರಜ್ಞೆಯು ನನಗೊಮ್ಮೆ ಬಂದಿತು. "ತೊಂದರೆ ಯಾತರದು? ಕೂಡ್ರಲ್ಲೋ! ವಿರೂಪಾಕ್ಷಿ?"

ಅಲ್ಲೋ! ನೀನು ಹಳೆಯ ಗೆಳೆಯ! ಬಹಳ ದಿವಸಗಳನಂತರ ಭೆಟ್ಟಿಯಾಗ್ತಿರುತ್ತಿ. ಹೀಗೇಕೆ ಅರಿಯುದವರಂತೆ ಮಾತಾಡುತ್ತಿಯೋ? ಸಿಗರೇಟು ತೊಗೋ! ಎಂದು ಕೈಚಾಚಲು ವಿರೂಪಾಕ್ಷಿಯು ಕೇವಲ ತಲೆಯನ್ನಲ್ಲಾಡಿಸಿ ನಕಾರಾರ್ಥವನ್ನು ಸೂಚಿಸಿದನು.

ವಿರೂಪಾಕ್ಷಿ! ಹಿಂದೊಮ್ಮೆ ನೀನು ನನಗೆ ಭೆಟ್ಟಿಯಾದದ್ದು ಮುಂಬಯಿಯಲ್ಲಿ ಅಲ್ಲವೇ? ನಾನು ವಿಲಾಯತಿಯಿಂದ ಬಂದಾಗ್ಗೆ ಬಂದರದಮೇಲೆ ಭೆಟ್ಟಿಯಾಗಲು ಬಂದಿದ್ದಿಯಷ್ಟೇ? ಇಂದು ಆ ಮಾತಿಗೆ ೬—೭ ವರ್ಷಗಳಾಗಲಿಲ್ಲವೇ? ಒಳ್ಳೇದು. ಎಲಿಯನ್ನಾದರೂ ಹಾಕಿಕೊಳ್ಳುತ್ತಿಯೋ ಇಲ್ಲವೋ?

ವಿರೂಪಾಕ್ಷಿಯು ಅಡಿಕೆಯ ಚೂರನ್ನೊಂದು ಮಾತ್ರ ಬಾಯಿಯಲ್ಲಿಹಾಕಿಕೊಂಡನು. " ವಿರೂಪಾಕ್ಷಿ " ನಿಜವಾಗಿಯೂ ಬಾಲಮಿತ್ರನು ಭೆಟ್ಟಿಯಾದನೆಂದರೆ ಬಹಳೇ ಆನಂದವಾಗುವದು ನೋಡು ಮನಸ್ಸಿಗೆ? ಈ ಆರೇಳು ವರ್ಷಗಳಲ್ಲಿ ನನ್ನ ಊರ್ಜಿತೆಯು ಚನ್ನಾಗಿದೆ.

ಭೆಟ್ಟಿಯು ಯೋಗಾಯೋಗವಿರದಿದ್ದರೂ, ತಮ್ಮ ಲೌಕಿಕವು ನನ್ನ ಕಿವಿಯ ಮೇಲಿ ಮೇಲಿಂದಮೇಲೆ ಬಂದೇಬರುವದು. ಎಂದು ವಿರೂಪಾಕ್ಷಿಯು ನಮ್ರತನದಿಂದ ನುಡಿದನು.

"ಮನಸ್ಸಿನಲ್ಲಿ ಒಮ್ಮೆ ತಮ್ಮನ್ನು ಕಾಣಬೇಕೆಂದೆನಿಸಿತು. ಪ್ರಯುಕ್ತಬಂದೆನು"

" ಬಂದದ್ದು ನೆಟ್ಟಗಾಯಿತು. ಇದೋ! ಇದೇ ನನ್ನ ಬಂಗಲೇ! ನೋಡು! ಮೊನ್ನೆ ಇಪ್ಪತ್ತುಸಾವಿರ ರೂಪಾಯಿಕೊಟ್ಟು ಕೊಂಡೆನು. ಮೇಲಾಗಿ ಅದಕೊಪ್ಪುವಂತೆ, ಫರ್ನೀಚರ ಮೊದಲಾದ ಸಾಮಾನುಗಳನ್ನೂ ತಂದಿದ್ದೇನೆ. ಇನ್ನೂ ಮುಂಬಯಿಯಿಂದ ಎರಡು ಕಪಾಟುಗಳ ಬರತಕ್ಕವು ಅವೆ. ವೈಭವವನ್ನನುಭೋಗಿಸಬೇಕಾದರೆ ಮುಸಲ್ಮಾನಬಾದಶಹರೇ, ಎಂದು ಜನರ ತಿಳುವಳಿಕೆ ಇರುವದು. ಅದನ್ನು ಹಿಂದೂ ಜನರೇಕೆ ಅನುಭೋಗಿಸಬಾರದು? ವಿರೂಪಾಕ್ಷಿ! ನಮ್ಮ ಕಮಿಶನರಸಾಹೇಬರು ಯಾವಾಗಲೂ ಈ ಬಗ್ಗೆ ನನಗೆ ಚುಚ್ಚಿ ಮಾತಾಡುತ್ತಿದ್ದರು.

ಆದರೆ ಮೊನ್ನೆ ಮೊನ್ನೆ ನಿಜವಾಗಿಯೂ ನೀನು ಅದನ್ನು ನೋಡಲು ಇರಬೇಕಾಗಿತ್ತು. ಇಂಥಾ ಮಜಾಸೀರ ಗಾರ್ಡನ್‌ಪಾರ್ಟಿ ಕೊಟ್ಟೆನಲ್ಲ! ಎಲ್ಲ ಅಥಿತಿಗಳು ಆನಂದಮಯರಾದರು. ಆ ಕೆಲಸಕ್ಕೆ ಐದುಸಾವಿರ ರೂಪಾಯಿಗಳು ಖರ್ಚಾದವು. ಈ ಫ್ಲಾವರ್‌ಪಾಟ್ ನೋಡಿದಿಯೇನು? ಇದನ್ನು ಮುದ್ದಾಮ ಪಾರ್ಟಿಯ ಸಲುವಾಗಿಯೇನು ತಂದಿರುವದಿಲ್ಲ. ಕೇವಲ ಹೌಸಿನಿಂದ ತರಿಸಿರುತ್ತೇನೆ. ನೋಡು! ಕೈಯಲ್ಲಿ ತೆಗೆದುಕೋ! ಹೀಗೆನ್ನುತ್ತ ಫ್ಲಾವರಪಾಟನ್ನು ವಿರೂಪಾಕ್ಷಿಗೆ ಕೊಡಲಿಕ್ಕೆ ಅವಸರದಿಂದ ನನ್ನಕೈಯಲ್ಲಿ ತೆಗೆದುಕೊಂಡೆನು. ಕೂಡಲೇ ಅದರೊಳಗಿನ ನೀರುಚಲ್ಲಿ ನನ್ನ ಕೋಟನಮೇಲೆ ಬಿದ್ದವು.

"ಓ ಡ್ಯಾಮ, ಕೋಟು ಕೆಟ್ಟಿತು. ವಿರೂಪಾಕ್ಷಿ, ಈ ಕೊಟನ್ನು ಮುದ್ದಾಮ ಪ್ಯಾರೀಸದಿಂದ ಹೊಲಿಸಿ ತರಿಸಿದ್ದೇನೆ."

"ಏ ಕೃಷ್ಣಾ"

"ಏನಪ್ಪಣೆ ರಾವಸಾಹೇಬ"

ಏನಪ್ಪಣೆಯೆಂದು ಕೇಳುತ್ತೀ ಏನು? ಈ ಕೋಟು ತೆಗೆದಿಡು. ಮತ್ತೊಂದು ಬ್ಲಾವುರ್ಝುರಕೋಟು ತೆಗೆದುಕೊಂಡು ಬಾ.

"ಓಹೋ? ವಿರೂಪಾಕ್ಷಿ, ಈಗನಾನು ಏನು ಹೇಳುತ್ತಲಿದ್ದೆ! ಆ ಹ! ಫ್ಲಾವರಪಾಟನ ವಿಷಯುಕ್ಕಲ್ಲವೇ! ಆ ಫ್ಲಾವರಪಾಟನಮೇಲೆ ಗತ್ನಕೆಚ್ಚಿರುತ್ತಾರೆ. ಅದಕ್ಕೆ ಐದುನೂರು ರೂಪಾಯಿ ಮುಟ್ಟಿರುತ್ತವೆ. ಪಾರ್ಟಿಯ ದಿವಸ ಅದನ್ನು ನೋಡಿ ಕಮೀಶನರವರ ಹೆಂಡತಿಯು ಬಹಳೇ ಆನಂದಿತರಾಗಿ ಅಂಥಾದ್ದೊಂದನ್ನು ತರಿಸಿಕೊಡಲು ಹೇಳಿಹೋದರು.

ಇಷ್ಟರಲ್ಲಿ ನಾನು ಮೇಲಕೆದ್ದು, ಬಂಗಲೆಯಲ್ಲಿಯ ಫರ್ನೀಚರ ಮೊದಲಾದ ಹೊಸ ಹೊಸ ವಸ್ತುಗಳನ್ನು ವಿರೂಪಾಕ್ಷಿಗೆ ತೋರಿಸಹತ್ತಿದೆನು. ಇದೋ! ಇಲ್ಲಿ ನೋಡು! ಈ ಪ್ಯಾರೀಸ್ ರಾಗಪೆಟ್ಟಿಗೆಯುನ್ನು! ಇದನ್ನು ಈಗೆರಡು ವರ್ಷಗಳ ಕೆಳಗೆ ತರಿಸಿರುವೆನು. ನಿನ್ನ ಅತ್ತಿಗೆಯು ಚನ್ನಾಗಿ ಬಾರಿಸುತ್ತಾಳೆ. ಒಂದು ದಿವಸ ಬಾರಲ್ಲೋ! ಕೇಳಲಿಕ್ಕೆ ಬರೋದುಬಂದಿ ಸ್ವಲ್ಪ ಬೇಗಬರಬಾರದಿತ್ತೇ? ಗಡಿಯಾಳದ ಕಡೆಗೆ ನೋಡಿ — ಆಗೋ ಹನ್ನೊಂದು ಬಡಿಯಿತು. ಆಫೀಸಿನ ಟಾಯಿಮು ಆಯಿತು.

ವಿರೂಪಾಕ್ಷಿಯು ಕೇವಲ ಸೂತ್ರದ ಗೊಂಬೆಯಂತೆ ನನ್ನ ಸಂಗಡ ತಿರುಗಾಡುತ್ತಿದ್ದನು. "ಹಾಗಾದರೆ ಈಗ ನಾನು ಹೋಗುತ್ತೇನೆ" ಎಂದು ಸಣ್ಣದನಿಯಿಂದ ಅಂದನು.

"ನಾವು ಕೂಡಿಯೇ ಹೋಗೋಣ ಅಂದರೆ ನನ್ನ "ರೋಲ್ಸರಾಯಿಸ್" ಮೋಟರ ನೋಡಲು ನಿನಗೆ ಅನುಕೂಲವಾಗುವದು."

ವಿರೂಪಾಕ್ಷಿಯು ಹಿಂದೆ ಮುಂದೆ ನೋಡತೊಡಗಿದನು. ಅಡ್ಡಿ ಇಲ್ಲ. ನಾನು ಹಾಗೆಯೇ ನಡೆಯುತ್ತ ಹೋಗುವೆನು. ದಾರಿಯಲ್ಲಿ ನನ್ನ ಬೇರೆ ಕೆಲಸಗಳೂ ಇರುತ್ತವೆ.

" ಅಲ್ಲೋ " ಕೆಲಸಾವಗ್ಯೆರೆ ತಗೊಂಡು ಏನುಮಾಡುತ್ತೀ? ಮೋಟಾರ ನಾದರೂ ನೋಡು! ಇಂಥ " ರೋಲ್ಸರಾಯಿಸ " ಇಡೀ ಮುಂಬಯಿ ಇಲಾಖೆ ಯಲ್ಲಿ ಎರಡೇ ಇರುತ್ತವೆ.

ಏ ಕೃಷ್ಣಾ! ಬೂಟುಹಾಕು.

ವಿರೂಪಾಕ್ಷಿ ನಿನ್ನ ಸಂಗಡ ಬಹಳಮಾತಾಡುವದದೆ. ಆದರೆ ಈಗ ಟಾಯಿಮು ಇಲ್ಲಾ. ಒಳ್ಳೇದು! ನೀನು ಆ ಗಂಗಾರಾಮು ಮಾರವಾಡಿ ಕೇಸು ಓದಿರುವಿ ಏನು?

ವಿರೂಪಾಕ್ಷಿಯು ಕೇವಲ ಗಾಬರಿಯಿಂದ ಮುಖವನ್ನು ನೋಡುತ್ತ ಹಾಗೇ ನಿಂತುಕೊಂಡನು.

ಏನು? ನೀನು ಓದಿಲ್ಲವೋ! ನಿನ್ನಿನದಿವಸ ಅದರ ಸಂಬಂಧೀ ಟಾಯಿ ಮ್ಸದಲ್ಲಿ ಎಲ್ಲ ಸಂಗತಿಯು ಬಂದಿರುವದು. ಅದರಲ್ಲಿ ನನ್ನ ಫೋಟೋಕೂಡಾ ಇರುವದು. ಹಾಯಕೋರ್ಟನಲ್ಲಿ ಗಂಗಾರಾಮುನು ನನ್ನ ಠರಾವಿನಮೇಲೆ ಅಪೀಲ ಮಾಡಿದ್ದನು. ಆದರೆ ಜಸ್ಟಿಸ್ ಬ್ರೂಮ ಫೀಲ್ಡರು ನನ್ನ ಜಜ್ಜಮೆಂಟು ಸರಿಯಾದ್ದೆಂದು ನಿರ್ಣಯ ಕೊಟ್ಟಿರುವರು.

ಇದು ನೋಡು! ಖಾಸಗಿಮಾತೆಂದು ನಿನಗೆ ಹೇಳುತ್ತೇನೆ. ಕಮಿಶನರ್ ಸಾಹೇಬರಿಂದ ಇಂದೇ ನನಗೆ ಪ್ರಾವ್ಹೇಟ ಪತ್ರಬಂದದೆ. ಅದರಲ್ಲಿ ಹೈಕೋರ್ಟ ಜಜ್ಜರು ತೀವ್ರವೇ ರಿಟಾಯರರಾಗುವರೆಂದೂ, ಹಾಗೂ ಆದೇ ಜಾಗೇಕ್ಕೆ ನನ್ನನ್ನೇ ಶಿಫಾರಸು ಮಾಡಿರುವರೆಂದೂ ಬಂದಿದೆ. ಈ ಸುದ್ದಿಯನ್ನು ಯಾರಮುಂದೆಯೂ ಒಡಿಯಬೇಡ. ನೀನು ನನ್ನ ಕೇವಲ ಜೀವದ ಗೆಳೆಯನೆಂದು ನಿನ್ನೆದುರಿಗೆ ತಿಳಿಸಿದ್ದೇನೆ.

ಪಾಂ. ಪಾಂ. ಅದುನೋಡು ಮೋಟಾರ ಬಂದಿತು. ನಡೆ ಇನ್ನು! ವಿರೂ-ಪಾಕ್ಷಿಯ ಮುದ್ರೆಯು ಚಿಂತಾಕ್ರಾಂತವಾಯಿತು. ಇಷ್ಟರಲ್ಲಿ ನನ್ನ ತಾಯಿಯು ಹೊರಗೆ ಬಂದು, ವಿರೂಪಾಕ್ಷಿಯನ್ನು ಕಂಡು " ವಿರೂಪಾಕ್ಷೀ " ಯಾವಾಗ ಬಂದಿ ಯಪ್ಪಾ! ಎಂದು ಅಂತಃಕರುಣಪೂರ್ವಕ ಕೇಳಿದಳು.

ಕೂಡಲೇ ವಿರೂಪಾಕ್ಷಿಯು ತಾಯಿಯ ಪಾದಗಳಮೇಲೆ ಮಸ್ತಕವನ್ನಿಟ್ಟನು.

ನಿನ್ನ ವೇಳೆಯಾಯಿತಲ್ಲವೇ? ಎಂದು ನನ್ನ ಕಡೆಗೆ ನೋಡುತ್ತ ತಾಯಿಯು ನುಡಿದಳು. ನಿನ್ನ ಮಿತ್ರ ವಿರೂಪಾಕ್ಷಿಯು ಬಹಳ ದಿವಸಗಳ ನಂತರ ಬಂದಿರು ತ್ತಾನೆ.

"ಮತ್ತೇನು ವಿರುಪಾಕ್ಷಿ ಬರುತ್ತೀಯಷ್ಟೆ ?" ಎಂದು ನಾನು ಅಂದೆನು.

ಅವನಿಗೆ ಯಾಕೆ ಸುಮ್ಮನೆ ಗಡಿಬಿಡಿಮಾಡುತ್ತೀ ? ನಿನ್ನ ವೇಳೆಯಾಗಿದೆ ಸುಮ್ಮನೇ ಹೊರಡು. ಅವನು ನನ್ನ ಹತ್ತರ ಮಾತಾಡುತ್ತ ಕುಳಿತುಕೊಳ್ಳಲಿ. ಎಂದು ತಾಯಿಯು ನುಡಿದಳು. ಒಳ್ಳೇದು ವಿರೂಪಾಕ್ಷಿ ಎಂದು ಅನ್ನುತ್ತ ನಾನು ಹೊರಟು ಹೋದೆನು.

+ + + +

ಸಂಜೆಯಮುಂದೆ ಕೋರ್ಟನಿಂದಬಂದು ನಾನು ಚಹಾ ಕುಡಿಯುತ್ತ ಕುಳಿತಾಗ್ಗೆ ತಾಯಿಯಂದಳು. ಪಾಪ ! ವಿರೂಪಾಕ್ಷಿ ಈಗ ಬಹಳ ಕಠಿಣಸ್ಥಿತಿ ಯಲ್ಲಿರುವನಂತೆ ! ನೀನು ಆತನ ಬಡತನದ ಸ್ಥಿತಿಯನ್ನು ಕೇಳಲಿಲ್ಲವೇನು. ಅಂಥ ಕಠಿಣಸ್ಥಿತಿಯು ಅವನಿಗೇನು ಬಂದಿದೆಯವ್ವಾ ! ಎಂದು ನಾನು ಚಹಾದ ಗುಟ-ಕನ್ನು ಕುಟಕರಿಸುತ್ತ ಆತುರತೆಯಿಂದ ಸೂಚಕದೃಷ್ಟಿಯಿಂದ ಕೇಳಿದೆನು.

"ಅಂದರೆ ಅವನು ತನ್ನ ಪರಿಸ್ಥಿತಿಯಬಗ್ಗೆ ನಿನಗೆ ಏನೂ ಹೇಳಲಿಲ್ಲವೇನು" ಎಂದು ಆಶ್ಚರ್ಯದಿಂದ ತಾಯಿಯು ವಿಚಾರಿಸಿದಳು. ವಿರೂಪಾಕ್ಷಿಯು ಮುಂಜಾನೆ ನನಗೆ ಭೆಟ್ಟಿಯಾಗಲು ಬಂದಿದ್ದನು. ಆದರೆ ಆಗ್ಗೆ ನಾನು ಅವನ ಸಂಬಂಧೀ ಕ್ಷೇಮಸಮಾಚಾರವನ್ನೇನೂ ಕೇಳಲಿಲ್ಲ. ಎಂಬ ವಿಚಾರವು ಈಗ ಮಾತ್ರ ನನ್ನ ತಲೆಯಲ್ಲಿ ಬಂದಿತು. ಆದರೆ ತಪ್ಪನ್ನು ಒಪ್ಪಿಕೊಳ್ಳುವಷ್ಟು ವಿನ-ಯದ ಮನಸ್ಥಿತಿಯು ಇರದ್ದರಿಂದ ನಾನು ಸಿಗರೇಟನ ಬೂದಿಯನ್ನು ಜಾಡಿಸುತ್ತ ಉದಾಸೀನತೆಯಿಂದ ಮಾತಾಡತೊಡಗಿದೆನು.

ತವ್ವಾ ! ಅವನು ಅನುಚಿತ ವೇಳೆಯಲ್ಲಿ ಬಂದನು. ಅರಾಮಿನ ವೇಳೆಯಲ್ಲಿ ಬಂದಿದ್ದರೆ, ಅವನ ಕ್ಷೇಮಸಮಾಚಾರ-ಗಿಮಾಚಾರ ತೆಗೆದುಕೊಳ್ಳುತ್ತಿದ್ದೆನು. ನನ್ನ ಬಂಗ್ಲೇ—ಸಾಮಾನ—ಮೊದಲಾದ ವಸ್ತುಗಳನ್ನು ತೋರಿಸಿ ಹಾಗೂ-ಹೀಗೂ ಮಾತಾಡುವಷ್ಟರಲ್ಲಿಯೇ ಹನ್ನೊಂದು ಬಡೆಯಿತು. ಆಫೀಸ ಟಾಯಮ್ ಆದ್ದರಿಂದ ಗಡಿ ಬಿಡಿಯಲ್ಲಿ ಹಾಗೆ ಹೋದೆನು.

ನಿಜವಾಗಿಯೂ ಅವನು ನಿನಗೆ ತನ್ನ ವಿಷಯದ ಬಗ್ಗೆ ಒಂದೂ ಮಾತಾಡ ಲಿಲ್ಲವೇ ! ಹೀಗೆಂದು ತಾಯಿಯು ಉಸುರುಗಳೆದಳು. ನನಗೂ ಅವನ ವರ್ತನದ ಬಗ್ಗೆ ಸ್ವಲ್ಪ ಚಮತ್ಕಾರವಾಗಿಯೇ ಹೊಳೆಯಹತ್ತಿತು. ಆದರೆ ವಿರೂಪಾಕ್ಷಿಯು ಎಲ್ಲ ರೀತಿಯಿಂದ ನೆಟ್ಟಗಿರುವನಷ್ಟೇ ? ನೆಟ್ಟಗೇನಿದ್ದಾನು ! ರಾಮಣ್ಣಾ ! ಪಾಪ! ವಿರೂಪಾಕ್ಷಿಯಮೇಲೆ ಕಠಿಣ ಪ್ರಸಂಗವಿರುವದು.

ಇದನ್ನು ಕೇಳಿದೊಡನೆಯೇ ನಾನು ಚಿಂತಾತುರನಾಗಿ ಕೇಳಿದೆನು: ಒಳ್ಳೇದು ಪ್ರಸಂಗವಾದರೂ ಏನು? ವಿರೂಪಾಕ್ಷಿಯು ನನ್ನ ಮುಂದೆ ಯಾಕೆ ಹೇಳಬಾರದಾಗಿತ್ತು?

ಹೊರಗಿನಿಂದ ನಾನು ಈ ಪ್ರಕಾರ ಮಾತಾಡಿದೆನೇನೋ ನಿಜ. ಆದರೆ ಈ ಬಗ್ಗೆ ನಾನು ನನ್ನ ಕರ್ತವ್ಯವನ್ನು ಮರೆತು, ವಿರೂಪಾಕ್ಷಿಯ ಕ್ಷೇಮಸಮಾಚಾರವನ್ನು ಕೇಳಲಿಲ್ಲ! ಅವನಿಗೆ ಎಳ್ಳಷ್ಟು ಅವಕಾಶ ಕೊಡದೆ ಮಾತಾಡಿದೆನು. ಎಂಬ ವಿಚಾರವು ಬಂದಕೂಡಲೇ ಅಂತಃಕರುಣಕ್ಕೆ ವೇದನೆಯಾಗಹತ್ತಿತು. ತಾಯಿ-ಯೆಂದಳು; "ನೀನು ಆಫೀಸಿಗೆ ಹೋದಕೂಡಲೇ ನಾನು ವಿರೂಪಾಕ್ಷಿಯ ಸಂಗಡ ಮಾತಾಡುತ್ತ ಕುಳಿತೆನು. ಮಾತಾಡುವಾಗ ಅವನ ಕಣ್ಣುಗಳಿಂದ ಅಶ್ರುಗಳು ಬಂದವು. ಆದರೆ ಅವನು ಅವನ್ನು ಕಷ್ಟದಿಂದ ಹತ್ತಿಕ್ಕಿದನು. ನಾನು ಅವನನ್ನು ಹತ್ತರಕ್ಕೆ ಕರೆದು ಬೆನ್ನಮೇಲೆ ಕೈಯಾಡಿಸಿದ ಕೂಡಲೆ, ಅವನ ದುಃಖವು ನಿಲ್ಲಲಿಲ್ಲ. ಮೊದಲು ಅವನು ತನ್ನ ಸಮಾಚಾರವನ್ನು ಹೇಳಲಿಲ್ಲ. ಆದರೆ ನಾನೇ ಅವನಿಂದ ಸಾವಕಾಶವಾಗಿ ಎಲ್ಲ ಸಂಗತಿಯನ್ನು ತಿಳಕೊಂಡೆನು. ವಿರೂಪಾಕ್ಷಿಗೆ ಒಟ್ಟಿಗೆ ತಿಂಗಳಿಗೆ ೩೦ ರೂಪಾಯಿ ಸಂಬಳ ಬರುವದಂತೆ; ಅದೇ ಹಣದಲ್ಲಿ ಮನೆಯಲ್ಲಿಯ ೬—೭ ಜನ ಕುಟುಂಬದ ಪೋಷಣೆಯಾಗಬೇಕಂತೆ, ಆತನ ಲಗ್ನ ಇನ್ನೂ ಆಗಿರುವದಿಲ್ಲ. ಇಂಥ ಪರಿಸ್ಥಿತಿಯಲ್ಲಿ ಲಗ್ನಮಾಡಿಕೊಳ್ಳುತ್ತಾನಾದರೂ ಹೇಗೆ? ಆದರೆ ತಂಗಿಯ ಲಗ್ನವನ್ನು ಮಾಡಬೇಕಷ್ಟೇ? ವಿರೂಪಾಕ್ಷಿಯ ಬೆನ್ನಮೇಲಿನ ಆ ಸೀತಾ ನಿನಗೆ ಗೊತ್ತದೆಯಷ್ಟೆ? ಆಕೆಯ ಲಗ್ನವನ್ನು ಮೊನ್ನೆ ಮಾಘದಲ್ಲಿ ಮಾಡಿದನಂತೆ. ಆ ಕಾಲಕ್ಕೆ ಮಾರವಾಡಿಯಲ್ಲಿ ಐದುನೂರು ರೂಪಾಯಿ ಸಾಲವಾಯಿತು. ಈಗ ಅವನ ಕಂತುಗಳು ನಿಯಮಿತವಾಗಿ ಮುಟ್ಟದ್ದರಿಂದ ಮಾಗವಾಡಿಯು ಜಪ್ತಿತಂದು ಮನೆಯಲ್ಲಿಯ ಭಾಂಡೀ-ಕೊಂಡೀ ಕಾಳು-ಕಡಿ ಒಯ್ದನಂತೆ!"

"ಅಯ್ಯೋ! ಎಂಥ ಕಠಿಣ ಪ್ರಸಂಗವಿದು" ಎಂದು ನನ್ನ ಬಾಯಿಂದ ಉದ್ಗಾರ ಹೊರಟಿತು. ವಿರೂಪಾಕ್ಷಿಗೆ ನಾನು ಮುಂಜಾನೆ ಏನೂ ಕೇಳಲಿಲ್ಲ. ಈ ಬಗ್ಗೆ ನನಗೆ ಬಹಳೇ ಪಶ್ಚಾತ್ತಾಪವಾಗಹತ್ತಿತು. ತಾಯಿ ಮತ್ತೆ ಹೇಳಹತ್ತಿದಳು.

"ಮಾರವಾಡಿಯು ಜಪ್ತೀಮಾಡಿಸಿ ಎಲ್ಲವನ್ನು ತೆಗೆದುಕೊಂಡು ಹೋದ ಮೇಲೆ ಹತ್ತರವೇ ಇದ್ದ ಒಬ್ಬ ದಯಾಳು ಕುಟುಂಬಸ್ಥನು ಅವರಿಗೆ ತನ್ನಲ್ಲಿ ನಾಲ್ಕು ದಿವಸ ಇರಲಿಕ್ಕೆ ಆಶ್ರಯಕೊಟ್ಟನು. ಆದರೆ ಪಾರ್ವತೀಬಾಯಿಯವರ ಮನಸ್ಸಿಗೆ ಇದರಿಂದ ಬಹಳೇ ವ್ಯಥೆಯಾಗಿ, ಹೃದ್ರೋಗದಿಂದ ಹಾಸಿಗೆ ಹಿಡಿದಿರುವರಂತೆ."

"ವಿರೂಪಾಕ್ಷಿಗೆ ಪುನಃ ಬರಲು ಹೇಳಿರುವಿಯಷ್ಟೆ?" ಈಗಮಾತ್ರ ನನ್ನ ಅಂತಃಕರುಣವು ನನಗೆ ಚನ್ನಾಗಿ ಚುಚ್ಚಹತ್ತಿತು. 'ಅವನು ತಾನು ಇಳಿದ

ಸ್ಥಳವನ್ನು ಹೇಳಿರುವನಷ್ಟೇ!" ವಿರೂಪಾಕ್ಷಿಗೆ ನಮ್ಮಲ್ಲಿಯೇ ಉಳಿಯಲು ಹೇಳ-ದ್ದಕ್ಕೆ ಈಗ ನನಗೆ ಅತಿಶಯ ಪಶ್ಚಾತ್ತಾಪವಾಯಿತು.

"ಪುನಃ ಬರುವೆನು" ಎಂದನು. ಆದರೆ ನನಗಂತೂ ದುಃಖದಿಂದ ಅವನು ಭ್ರಮಿಷ್ಟನಾಗಿರುವಂತೆ ಕಂಡುಬಂದಿತು. ಊಟಕ್ಕೆ ಸಹ ಮೊದಲು ಒಪ್ಪಲಿಲ್ಲ. ಆದರೆ ನಾನೇ ಬಹಳ ಆಗ್ರಹಮಾಡಿ ಅವನನ್ನು ಬಿಡಲಿಲ್ಲ. ಅವರ ತಾಯಿ ಪಾರ್ವತಿಬಾಯಿಯವರು ಈಗ ಹದಿನೈದು ದಿವಸಗಳಿಂದ ಜ್ವರದ ತಾಪದಮೂಲಕ ಬಹಳೇ ಒದ್ದಾಡುತ್ತಿರುವರಂತೆ. "ಆದರೆ ಅವನು ಇಳಕೊಂಡದ್ದಾದರೂ ಎಲ್ಲಿ?" ಎಂದು ನಾನು ಇಳಿದನಿಯಿಂದ ಕೇಳಿದೆನು.

"ನಾನು ಈಗಲೇ ಪಾರ್ವತೀಬಾಯಿಯವರ ಭೆಟ್ಟಿಯಾಗಲು ಬರುವೆನೆಂ"ದನು ಆದರೆ ಅವನು ನಾಳಿನ ಗಾಡಿಯಿಂದ ಹೋಗೋಣವೆಂದಂವನು. ಇಲ್ಲಿಂದ ಮೋಟರಿನಿಂದ ಅವನೂರಿಗೆ ಹೋಗಲು ಬರುತ್ತದಂತೆ.

"ಆದರೆ ಅವನು ಇಳಕೊಂಡಿರುತ್ತಾನೆಲ್ಲಿ?" ಎಂದು ನಾನು ಅಧೀರತೆಯಿಂದ ಕೇಳಿದೆನು.

ನಾನು ಇದನ್ನು ಮಾತ್ರ ಕೇಳಲು ಮರೆತೆನು. ಅವನು ಪುನಃ ಬರುವೆನೆಂದಂದನು. ಆದ್ದರಿಂದ ಕೇಳಲಿಲ್ಲ. ಇದು ತಪ್ಪಾಯಿತು. ನನ್ನ ಮರವೆಗೆ ಬೆಂಕೀ ಹಚ್ಚಲಿ!

ನಾನು ಏನೂ ಮಾತಾಡಲಿಲ್ಲ ನನ್ನ ಮನಸ್ಸು ನನ್ನನ್ನೇ ತಿನ್ನತೊಡಗಿತು. ಬಹಳದಿವಸಗಳಿಂದ ಬಾಲಮಿತ್ರನ ಭೆಟ್ಟಿಯಾಗಿದ್ದರೂ ಅವನ ಕ್ಷೇಮಸಮಾಚಾರವನ್ನು ವಿಚಾರಮಾಡುವಷ್ಟು ಬುದ್ಧಿಯು ಬರಬಾರದೆಂದರೆ ನನ್ನ ದುರ್ದೈವವೇಸರಿ! ನಾನು ನನ್ನ ಡೌಲಿನ ಮಾತುಗಳನ್ನೇ ಹೇಳಿದೆನು. ಅವನ ಕ್ಷೇಮಸಮಾಚಾರದ ಒಂದಾದರೂ ಮಾತಾಡಿದ್ದರೆ ಇಟ್ಟಂಥ ಆಣಿ. ಹೀಗೆ ವಿಚಾರಮಾಡುತ್ತ ಮಾಡುತ್ತ ನನ್ನ ಅಹಂಭಾವದ ಬಗ್ಗೆ ನನಗೆ ಬಹಳೇ ನಾಚಿಕೆಯುಂಟಾಯಿತು! ಆದರೆ ವಿರೂಪಾಕ್ಷಿಯು ಒಂದು ವೇಳೆ ನಾಳೆಗೆ ಬರಬಹುದು. ಎಂದು ಮನಸ್ಸಿನ ಸಮಾಧಾನಕ್ಕಾಗಿ ಅಂದುಕೊಂಡೆನು.

"ನಾಳೆ ವಿರೂಪಾಕ್ಷಿಯು ಬಂದನೆಂದರೆ ಅವನ ಕ್ಷಮೆಯನ್ನು ಬೇಡುವ," ಹಾಗೂ ಅವನ ಸಂಕಟವನ್ನು ದೂರಮಾಡುವಾ. ಅಂದರಾಯಿತು. ಹೀಗೆನ್ನುತ್ತ ಎದ್ದೆನು ಮತ್ತು ಮನಸ್ಸಿನ ಖಿನ್ನತೆಯನ್ನು ದೂರಮಾಡುವದಕ್ಕಾಗಿ ಪತ್ನಿಗೆ ಫೋನೋದ ಪ್ಲೇಟಹಚ್ಚಲಿಕ್ಕೆ ಹೇಳಿದೆನು. ಇತ್ತ ನಾನು ಸಿಗರೇಟು ಹೊತ್ತಿಸಿದೆನು. ಅತ್ತ ಪ್ಲೇಟ ಸುರುವಾಯಿತು.

"ಸುಖವು ಸದಾ ಯಾರಿಗೂ ಸಿಗುವದಿಲ್ಲ ಕಂಡ್ಯಾ ಮನವೇ" ಎಂಬ ಹಾಡನ್ನು ಕೇಳಿ ನನಗೆ ಹೇಗೇಗೋ ಆಯಿತು. ಸಿಗರೇಟು ಚಲ್ಲಿದೆನು. ಪ್ಲೇಟು ಬಂದುಮಾಡೆಂದು ಹೇಳಿ ಹೊರಗಿನ ತೋಟದಲ್ಲಿ ಅತ್ತಿಂದಿತ್ತ ತಿರುಗಾಡಹತ್ತಿದೆನು. ನಾನು ನನ್ನ ಮನಸ್ಸನ್ನು ಪ್ರಫುಲ್ಲಮಾಡಲು ಬಹು ಪ್ರಯತ್ನಮಾಡಿದೆನು. ಆದರೆ ಮನಸ್ಸಿಗೆ ಸ್ವಸ್ಥತೆಯುಂಟಾಗಲಿಲ್ಲ.

ಆ ದಿವಸ ರಾತ್ರಿ ನಾನು ನಿದ್ರೆಯಲ್ಲಿ ಕೂಡ ಎರಡುಸಾರೆ ಕಪ್ಪರಿಸಿಕೊಂಡು ಎದ್ದೆನು. ಮುಂಜಾವಿನ ವೇಳೆಯಲ್ಲಿ ನನಗೆ ಒಂದು ಸ್ವಪ್ನ ಬಿತ್ತು. ಅದರಲ್ಲಿ ನನ್ನ ಪತ್ನಿಯು ಪೀಯಾನು ಬಾರಿಸುತ್ತಾಳೆ. ಆಕೆಗೆ ನಾನು "ಇಂದು ವಿರೂಪಾಕ್ಷಿಯು ಬರತಕ್ಕವನಿದ್ದಾನೆ" ಎಂದು ಹೇಳುತ್ತಿದ್ದೆನು. ಇಷ್ಟರಲ್ಲಿ ವಿರೂಪಾಕ್ಷಿಯು ಭೀತ ಮುಖಮುದ್ರೆಯಿಂದ ಬಾಗಿಲದಲ್ಲಿ ಬಂದು ನಿಂತಂತಾಯಿತು. ಮತ್ತು ಅದೇ ಕಾಲಕ್ಕೆ ರಾಗದ ಪೆಟ್ಟಿಗೆಯು ಒಡೆದು ಚೂರುಚೂರಾಯಿತು.

\+ \+ \+ \+

ಮುಂಜಾನೆ ಎದ್ದಮೇಲೆ ಸಹ ಮನಸ್ಸಿನ ಖಿನ್ನತೆಯು ಹೋಗಿರಲಿಲ್ಲ. ಮನಸ್ಸಿಗೆ ಸ್ವಲ್ಪ ಸಮಾಧಾನವಾಗಬೇಕೆಂದು ಯೋಚಿಸಿ, ನಾನು ನನ್ನ ಪತ್ನಿಯಸಂಗಡ ಕ್ಲಬ್ಬಿನಲ್ಲಿ ಟೇನೀಸ್ ಆಡಲಿಕ್ಕೆ ಹೋಗುವದನ್ನು ನಿಶ್ಚಯಿಸಿದೆನು. ರೋಲ್ಸ-ರಾಯಿಸ್ ಪಾಂ. ಪಾಂ. ಎಂದು ಕೂಗಹತ್ತಿತು.

ಕ್ಲಬ್ಬಿನ ಕಡೆಗೆ ಹೋಗುವ ದಾರಿಯು, ಭುವನೇಶ್ವರಿ ಪುರದಲ್ಲಿಯ ಪ್ರಸಿದ್ಧ ಕೆರೆಗುಂಟ ಹೋಗಿತ್ತು. ಈ ರಸ್ತೆಯಿಂದ ಸುಮಾರು ಅರ್ಧಮೈಲು ಹೋದನಂತರ ರಸ್ತೆಯಮೇಲೆ ಬಹಳ ಜನರು ಒತ್ತಟ್ಟಿಗೆ ನೆರೆದದ್ದು ಕಂಡುಬಂದಿತು. ಇದನ್ನು ಕಂಡು ಏಕೋ! ಏನೋ! ನನ್ನ ಮನಸ್ಸಿಗೆ ಹೇಗೇಗೋ ಆಯಿತು. ನಾನು ಮೋಟರನಿಂದ ಕೆಳಗೆ ಇಳಿದು ಬರುತ್ತಿರುವದನ್ನು ಫೌಜದಾರರು ನೋಡಿ, ನಮ್ರ ಪೂರ್ವಕವಾಗಿ ಸಲಾಂಮಾಡಿ "ಇದು ಆತ್ಮಹತ್ಯೆಯ ಕೇಸು" ಎಂದು ಹೇಳಿದರು.

ಮಂದವಾದ ಹೆಜ್ಜೆಗಳಿಂದ ನಾನು ಮುಂದೆನಡೆದು ಪ್ರೇತದ ಕಡೆಗೆ ನೋಡ-ತೊಡಗಿದೆನು. ಆಗ್ಗೆ ನನ್ನ ತಲೆಯಮೇಲೆ ವಜ್ರಾಘಾತವೇ ಆದಂತಾಯಿತು! ಆ ಪ್ರೇತವು ವಿರೂಪಾಕ್ಷಿಯದೇ ಆಗಿತ್ತು.

ಇಷ್ಟರಲ್ಲಿ ಕೆರೆಯ ದಂಡೆಯಮೇಲೆ ತೆಗೆದಿಟ್ಟ ಕೋಟನಲ್ಲಿ ದೊರೆತ ಒಂದು ಚೀಟಿಯನ್ನು ಫೌಜದಾರರು ತಂದು ನನ್ನ ಕೈಯಲ್ಲಿ ಕೊಟ್ಟರು. ನಾನು ನಡು-ಗುವ ಕೈಯಿಂದ ಅದರ ಮಡಿಕೆಯನ್ನು ಬಿಚ್ಚಿದೆನು.

" ಅವ್ವಾ ನೀನು ಇನ್ನು ಎರಡುಮೂರುದಿವಸಗಳಲ್ಲಿ ಸ್ವರ್ಗಕ್ಕೆ ಹೋಗುವ-ವಳಿದ್ದಿ. ಈ ಹತಭಾಗ್ಯನ ಹತ್ತರ ನಿನ್ನ ಔಷಧೋಪಚಾರದಮುಟ್ಟಿಗೆ ಸಹ ದುಡ್ಡು ಇರಬಾರದೆಂದರೆ ಎಂಥ ದುರ್ದೈವದ ಮಾತು!

ನಾನು ಇದು ವರೆಗೆ ಯಾರಿಗೂ ಒಂದು ಪೈಕೊಡಿರೆಂದು ಕೇಳಿದವನಲ್ಲ. ಆದರೆ ನಿನ್ನ ಯಾತನೆಯನ್ನು ನೋಡುವದು ನನ್ನ ಕೈಯಿಂದಾಗಲಿಲ್ಲ. ಆದ್ದರಿಂದ ಇವತ್ತಿನ ದಿವಸ ಒಬ್ಬ ಸನ್ಮಾನ್ಯ ಗೆಳೆಯನ ಕಡೆಗೆ ಸಹಾಯ ಕೇಳಲು ಹೋದೆನು...................ಹೋಗಲಿಬಿಡು, ಅವನದಾದರೂ ಏನು ತಪ್ಪಿದೆ?

" ನಾನು ಮಾಡತಕ್ಕ ಎಲ್ಲ ಉಪಾಯಗಳೂ ಮುಗಿದದ್ದರಿಂದ ನಿನ್ನಕಿಂತಲೂ ಮೊದಲೇ ಸ್ವರ್ಗಕ್ಕೆ ಹೋಗುವದನ್ನು ನಿಶ್ಚಯಿಸಿದ್ದೇನೆ. "

ಇದನ್ನು ಓದಿ ನನ್ನ ಕಣ್ಣು ಕತ್ತಲುಗೂಡಿಸಿದಂತಾಯಿತು. ನಾನು ಮೂ-ರ್ಛೆಹೋಗಿ ವಿರೂಪಾಕ್ಷಿಯ ಪ್ರೇತಿನಮೇಲೆ ಬಿದ್ದೆನು.

---

# ವೀರಶೈವ ಬಾಲೆ ಪಾರ್ವತಿ.



೨ ನೇ ಸಂಚಿಕೆಯಿಂದ ಮುಗಿದುದು.

ಸ್ವಕರ್ತವ್ಯವಾಗಿದೆ. ಯಾರಿಂದ ನನ್ನ ಹೃದಯದಲ್ಲಿ ಪ್ರೇಮೋದ್ಭವನಾಯಿತೋ ಅವರಿಗೇ ನಿನ್ನ ಪ್ರೇಮವನ್ನು ಅರ್ಪಿಸೆಂದು ಹೇಳುತ್ತಿರುವ ನನ್ನ ಮನಸ್ಸಿನ ವಿಚಾರವು ಯೋಗ್ಯವೆ? ಅಯೋಗ್ಯವೆ? ಫಕೀರೇಶಾ! ನೀನೇ ಬಲ್ಲೆ! ನನ್ನ ಜೀವನ ಕ್ರಮದ ಹೊಣೆಗಾರನು ನೀನೇ" ಎಂದು ಕಣ್ಣು ಮುಚ್ಚಿದಳು. ಕೂಡಲೇ ಪ್ರಕಾಶ ಬಿದ್ದಂತಾಗಿ ಭಸ್ಮ ಭೂಷಿತ ತೇಜೋ ಮೂರ್ತಿಯೊಂದು ತನ್ನ ತಲೆಯಮೇಲೆ ಕೈಯನ್ನಿಟ್ಟು "ಮಗು! ನಿನ್ನ ವಿಚಾರವು ಸ್ತುತ್ಯವಾದುದು! ನಿನ್ನ ಚಿಂತನೆಯ ಮೂರ್ತಿಯೇ ನಿನ್ನ ಪತಿಯಾಗುತ್ತಾನೆ. ಅವನಿಂದಲೇ ನಿನಗೆ ಸಮಸ್ತ ಸುಖಗಳು ಲಭಿಸುವವು. ನಿನಗೆ ಕಲ್ಯಾಣವಾಗಲಿ!" ಎಂದು ಹೇಳಿ ಅದೃಶ್ಯವಾದಂತಾಯಿತು. ಕಣ್ತೆರೆದು ನೋಡುತ್ತಾಳೆ ಅಲ್ಲಿ ಯಾರೂ ಇದ್ದಿಲ್ಲ. ಹಾಗಾದರೆ "ನಿನ್ನ ಚಿಂತನೆಯ ಮೂರ್ತಿಯೇ ನಿನ್ನ ಪತಿಯಾಗುವನು." ಎಂದು ಆಶೀರ್ವದಿಸಿದ ಆ ಅದೃಶ್ಯ ಮೂರ್ತಿ ಯಾರದು? ಫಕೀರೇಶನೇ ಏನು? ಹೌದು ಅವನೇ ಅವನ ಹೊರತು ಭಕ್ತರ ಅಂತರಂಗವನ್ನರಿತು, ಆಶೀರ್ವಾದ ಮಾಡುವ ಶಕ್ತಿಯು ಬೇರೊಬ್ಬ ಮಾನವನಿಗಿರಲಾರದು. ಅಹಹ! ಫಕೀರೇಶಾ! ಈ ದಾಸಿಯಮೇಲೆ ಎಷ್ಟು ಕೃಪೆಯೋ ನಿನ್ನದು! ಈ ಬಡದಾಸಿಯಮೇಲೆ ನಿನ್ನ ಕೃಪೆಯು ಸದಾ ಹೀಗೆಯೇ ಇರಲೆಂದು ಅವಳು ಅನನ್ಯವಾಗಿ ಶರಣು ಹೋದಳು!

## ೬.

ಇದೆಲ್ಲವೂ ಸರಿ ಹೋಯಿತು! ಜಾತ್ರೆಗೆ ಅಕಸ್ಮಾತ್ತಾಗಿ ಬಂದ ಸಮಯದಲ್ಲಿ ದೀನಳಾದ ಓರ್ವ ಅಬಲೆಯ ಮಾನಸಂರಕ್ಷಣೆಯ ಕಾರ್ಯವು ತನ್ನ ಕೈಯಿಂದ ಜರಗಿದುದಕ್ಕಾಗಿ ಮಹಾಲಿಂಗನಿಗೆ ಹರುಷವಾಯಿತು! ಅಲ್ಲದೆ ಶ್ರೀ ಫಕೀರೇಶನೇ ಹೀಗೆ ತನ್ನಿಂದ ಇಂತಹ ಕೃತಿಯನ್ನು ಮಾಡಿಸಿ ತನಗೆ ಲೌಕಿಕದಲ್ಲಿ ಕೀರ್ತಿಯನ್ನು ದೊರಕಿಸಿಕೊಟ್ಟಿರಬಹುದೆಂಬ ಭಾವನೆಯು ಹುಟ್ಟಿ ಫಕೀರೇಶನಲ್ಲಿ ಆತನ ಭಕ್ತಿಯು ಹೆಚ್ಚಾಯಿತು! ಆದರೆ ಮಹಾಲಿಂಗನಿಗೆ ಮಾತ್ರ ಫಕೀರೇಶನ ಸೇವೆಗಾಗಿ ನಿಲ್ಲುವಂತಿರಲಿಲ್ಲ. ಹೊಟ್ಟೆಗಾಗಿ ದುಡಿಯುವ ಆತನು ಸರಕಾರಿ ಚಾಕರಿಯನ್ನು ವಹಿಸಿದ್ದರಿಂದ ಮರುದಿನವೇ ಧಾರವಾಡಕ್ಕೆ ಹೊರಟು ಹೋದನು. ಆದರೆ ಅಷ್ಟರೊಳಗಾಗಿ ಇನ್ನೊಂದು ಮಹತ್ವದ ಕಾರ್ಯವನ್ನು ಗೈದುಹೋದನು. ಅದಾವುದೆಂದರೆ—

ಈ ಮೊದಲೇ ಹೇಳಿದಂತೆ ಸಾಹುಕಾರ ಪುತ್ರನಮೇಲೆ ಫಿರ್ಯಾದು ಕೊಡಿಸಿದುದ ರಿಂದ ಹಿಂದುಗಡೆ ಚನವೀರಪ್ಪನಿಗೆ ತ್ರಾಸವಾಗಬಾರದೆಂದು ಕೊತವಾಲಸಾಹೇಬ ರಿಗೆ ಭೆಟ್ಟಿಯಾಗಿ ನಡೆದ ಸಂಗತಿಯನ್ನೆಲ್ಲಾ ಸವಿಸ್ತಾರವಾಗಿ ಹೇಳಿ ಹೋದನು.

ಇತ್ತ ಮಲ್ಲಮ್ಮನು ಮಹಾಲಿಂಗನ ಭೆಟ್ಟಿಗಾಗಿ ಆತುರ ಪಡುತ್ತಲಿದ್ದಳು. ಆದರೆ ಕೆಲಹೊತ್ತಿನಮೇಲೆ ಅವಳಿಗಾರೋ ಮಹಾಲಿಂಗನು ಮೋಟಾರಿಗೆ ಹೋದ ಸುದ್ದಿಯನ್ನು ತಿಳಿಸಿದರು.

ಸಾಹುಕಾರ ಪುತ್ರನ ಬಗ್ಗೆ ಚೌಕಸಿ ಮಾಡಲು ಕೊತವಾಲ ಸಾಹೇಬರು ಚನವೀರಪ್ಪನನ್ನು ಕರೆಯಿಸಿ ಅವನಿಗೆ "ಏನು ಚನವೀರಪ್ಪನವರೇ ಸಾಹುಕಾರ ಪುತ್ರನಿಗೆ ಶಾಸನವನ್ನು ನೀವು ಹೇಳಿದಂತೆ ಮಾಡಲು ಬರುವಂತಿದೆ. ಯಾವ ದಕ್ಕೊಂದು ಹೇಳಿರಿ." ಎಂಬದಾಗಿ ವಿಚಾರಿಸಿದರು. ಆಗ ದಯಾರ್ದ್ರಭಾವದ ವನಾದ ಚನವೀರಪ್ಪನು "ರಾವಸಾಹೇಬರು ನಿಜವಾಗಿ ವಿಚಾರಮಾಡಿದರೆ ಸಮಾ ಜದಲ್ಲಿ ಇಂತಹ ಸಂಗತಿಗಳು ನಡೆಯಬಾರದು. ಈ ದೃಷ್ಟಿಯಿಂದ ಸಾಹುಕಾರ ಪುತ್ರನಿಗೆ ತಕ್ಕಶಾಸನವು ಆಗಲೇಬೇಕಾಗಿತ್ತು. ಆದರೆ ಕೊತವಾಲ ಸಾಹೇಬರೇ, ನನ್ನ ಅಭಿಪ್ರಾಯವೇ ನಿಮಗೆ ಬೇಕಾದಲ್ಲಿ, ಸಾಹುಕಾರ ಪುತ್ರನು ಇನ್ನೂ ಚಿಕ್ಕವ ನಿರುವನು. ಇಂದಿಲ್ಲ ನಾಳೆ ಅವನು ಸುಧಾರಿಸಬಹುದು. ಇಂತಹ ಅವನ ವಯಸ್ಸಿನಲ್ಲಿ ತರುಣರು ಜಾರುವದು ಸಹಜ! ಅಲ್ಲದೆ ಧನಿಕನಾಗಿರುವನು. ನಮ್ಮ ನಿಮ್ಮಗಳ ಸುದೈವದಿಂದ ಅವನ ಮನಸ್ಸಿನ ಒಲವು ಬದಲಾದಲ್ಲಿ ಪಶ್ಚಾತ್ತಾ ಪದಿಂದ ಪುನೀತನಾದ ಅವನ ಹೃದಯದಲ್ಲಿ ಅನೇಕ ಉತ್ತಮವಾದ—ಸಮಾಜ ಪೋಷಕವಾದ ವಿಚಾರಗಳು ಜನಿಸಿ, ಅವನಿಂದ ಆಯಾ ವಿಚಾರಗಳು ಕೃತಿಯಲ್ಲಿ ಸಹ ಕಾಣಬಹುದು. ಅದುಕಾರಣ ಇದೊಂದುಸಾರೆ ಅವನಿಗೆ ಚನ್ನಾಗಿ ಛೀ ಹಾಕಿ ಕಳುಹಿಸಿರಿ. ಮನುಷ್ಯನು ಯಾವಾಗಲೂ ಪ್ರಯತ್ನವಾದಿಯಾಗಿರಬೇಕು. ಕೆಟ್ಟಜನರನ್ನು ಅನೇಕಬಗೆಯ ಉಪಾಯಗಳಿಂದ ನಿರಾಶರನ್ನಾಗಿ ಮಾಡದೆ, ಯೋಗ್ಯವಾದ ಮಾರ್ಗಗಳಲ್ಲಿ ಪ್ರವೃತ್ತರನ್ನಾಗಿ ಮಾಡುವದೇ ಸಜ್ಜನರ ಲಕ್ಷಣ! ಈ ಮಾತನ್ನು ಸೂಜ್ಞರಾದ ತಮಗೆ ನಾನೇನೋ ಹೇಳಬೇಕಾಗಿಲ್ಲ! ಇನ್ನು ತಮಗೆ ಸರಕಾರೀ ರೀತಿಯಿಂದ ಈ ಸಂಗತಿಯನ್ನು ನೆರವೇರಿಸಲಿಕ್ಕೆ ತಮಗೆ ಅವ ಶ್ಯಕವಾದ ಕಾಗದ-ಪತ್ರಗಳನ್ನು ನಾನು ಮಾಡಿಕೊಡಲಿಕ್ಕೆ ಸಿದ್ಧನೇ ಇದ್ದೇನೆ. ಆದ್ದ ರಿಂದ ಇದೊಂದು ಸಾರೆ ಸಮಾಜದ ಹಿತಕ್ಕಾಗಿಯೇ ನನ್ನಂತಹ ವ್ಯಕ್ತಿಯ ಸ್ವಾರ್ಥ ವನ್ನುಕೂಡಾ ತಾವು ಬದಿಗೊತ್ತಲು ಅಡ್ಡಿ ಇಲ್ಲ. ಇದೀಗ ನನ್ನ ಅಭಿಪ್ರಾಯವು."

ಚನವೀರಪ್ಪನ ಈ ಮಾತು ಕೇಳಿ ಕೊತವಾಲಸಾಹೇಬರಿಗೆ ಸಂತೋಷವಾ ಯಿತು. ಅಲ್ಲದೆ ಅತ್ಯಂತ ಆಶ್ಚರ್ಯವೂ ಆಯಿತು. ಆ ಬಳಿಕ ಕೊತವಾಲಸಾ

ಹೇಬರು ಊರಲ್ಲಿನ ಪಂಚರನ್ನು ಕರೆಯಿಸಿ ಅವರೆದುರಿನಲ್ಲಿ ನಡೆದ ವಿಷಯವನ್ನು ಹೇಳಿ ಸಾಹುಕಾರ ಪುತ್ರನನ್ನು ಒಳಿತಾಗಿ ಸಿಟ್ಟುಮಾಡಿ ಅವನಿಂದ ತಪ್ಪುದಂಡ ವನ್ನು ತಕ್ಕೊಂಡು, ಪಂಚರ ಮುಖಾಂತರ ಆ ಹಣವನ್ನು ಲೋಕಕಲ್ಯಾಣದಲ್ಲಿ ನಿರತರಾದ ಶ್ರೀ ಫಕೀರೇಶ್ವರನ ಮಠಕ್ಕೆ ಕಾಣಿಕೆಯಾಗಿ ಕಳುಹಿಸಿಕೊಟ್ಟರು. ಸಾವು ಕಾರ ಪುತ್ರನು ಚನವೀರಪ್ಪನ ದೊಡ್ಡಿಸ್ತನಕ್ಕೆ ಮೆಚ್ಚಿ ಅವನ ಕಾಲಿಗೆರಗಿ ಶ್ರೀ ಫಕೀರೇಶ್ವರನ ಸಾಕ್ಷಿಯಾಗಿಯೂ ನಾನೆಂದೂ ಇಂತಹ ಕೃತಿಗೆ ಕೈಹಾಕುವದಿಲ್ಲ ವೆಂಬದಾಗಿ ಆಣೆಮಾಡಿ ಕೊತವಾಲರ ಕಚೇರಿಯಿಂದ ಹೊರಟು ಹೋದನು.

## ೭.

"ಏನಿದು ಕಚೇರಿಗೆ ಹೋದವರು ಇದೂವರೆಗೆ ಏಕೆಬಾರಲಿಲ್ಲ" ವೆಂಬದಾಗಿ ಮಲ್ಲಮ್ಮನು ಯೋಚನೆ ಹಾಕುತ್ತಿದ್ದಳು. "ಮಹಾಲಿಂಗನಲ್ಲಿ ಚನವೀರಪ್ಪನಿ ಗೊಂದು ತರದ ಮಮತೆ ಹುಟ್ಟಿದ್ದರಿಂದ ಸದಾ ಅವನ ಸಹವಾಸವು ತನಗೆ ಹೇಗೆ ದೊರಕೀತೆಂ" ದು ಅವನು ಯೋಚಿಸುತ್ತ ಮನೆಗೆ ಬಂದನು. ಕಚೇರಿಯಲ್ಲಿ ನಡೆದ ಸಂಗತಿಯನ್ನೆಲ್ಲ ಮನೆಯೊಳಗೆ ಹೇಳಿದನು. ಎಲ್ಲರಿಗೂ ಆನಂದ. ಹಿಡಿಸಲಾರದಷ್ಟು ಆನಂದ! ಮಲ್ಲಮ್ಮನು ಮಹಾಲಿಂಗನನ್ನು ಬಹಳವಾಗಿ ಕೊಂಡಾಡಿದಳು! ಏನೆ! ಮಹಾಲಿಂಗನಂತಹ ಸಜ್ಜನರು ನಮ್ಮ ವೀರಶೈವ ಸಮಾಜದಲ್ಲಿ ಹುಟ್ಟುವದೇ ದುರ್ಲಭ. ನಮಗೆ ಹೇಗೂ ಗಂಡು ಮಕ್ಕಳಿಲ್ಲ- ನಮ್ಮ ಪಾರ್ವತಿಯನ್ನು ಅವ-ನಿಗೆ ಕೊಟ್ಟು ಮನಿಯ ಅಳಿಯನನ್ನಾಗಿ ಮಾಡಿಕೊಂಡು ಮನಿಯಲ್ಲಿ ಇಟ್ಟುಕೊ ಳ್ಳೋಣವೆ? ನನ್ನ ವಿಚಾರವಂತೂ ಹೀಗೆಯೇ ಇದೆ. ಇದಕ್ಕೆ ನಿನ್ನ ವಿಚಾರವೇ ನೆಂದನು.

ಮಲ್ಲಮ್ಮನು ಪತಿಯ ಮಾತಿಗೆ "ನಿಮ್ಮ ಮನಸ್ಸಿಗೆ ಬಂದಮೇಲೆ ನನಗೂ ಬಂದಂತೆಯೇ ಸರಿ. ಆದರೂ ಮಗಳನ್ನಷ್ಟು ಕೇಳುತ್ತೇನೆಂ" ದು ಹೇಳಿದಳು. ಬಳಿಕ ಚನವೀರಪ್ಪನು, "ನನ್ನ ಈ ಮಾತಿಗೆ ಮಹಾಲಿಂಗಪ್ಪನು ಒಪ್ಪುವನೋ ಇಲ್ಲವೋ ಅವನ ಸ್ನೇಹಿತರು ಏನನ್ನುವರೋ ಸ್ವಾಮಿಗಳ ಅಭಿಪ್ರಾಯವು ಹೇಗ-ದೆಯೋ" ಎಂದು ನಾನಾಬಗೆಯಾಗಿ ವಿಚಾರಮಾಡಹತ್ತಿದನು. ಯಾವದೂ ಬಗೆ ಹರಿಯಲಿಲ್ಲ. ಏನೆ ಆಗಲಿ ಮಹಾಲಿಂಗಪ್ಪನ ಸ್ನೇಹಿತರನ್ನೆಲ್ಲ ಕೇಳಿನೋ ಡೋಣವೆಂದು ಧಾರವಾಡಕ್ಕೆ ಪತ್ರಬರೆದನು. "ನೀವು ಚಿಂತಿಸಬೇಡಿರಿ" ಎಂಬು ದಾಗಿ ಅವರು ತಮ್ಮ ಸಮ್ಮತಿ ದರ್ಶಕ ಉತ್ತರವನ್ನು ಬರೆದರು. ಇತ್ತ ಮಲ್ಲಮ್ಮ ಮಹಾಲಿಂಗನ ತಾಯಿಯು ಪಾರ್ವತಿಯನ್ನು ನೋಡುವದಕ್ಕಾಗಿ ಧಾರವಾಡದಿಂದ ಬಂದಳು. ಅಂದು ಊಟ-ಉಡಿಗೆ ತೀರಿಸಿಕೊಂಡು ಪಾರ್ವತಿ-ಇದ್ದಲ್ಲಿ ಬಂದಳು.

"ಪಾರ್ವತಿಯು ಇನ್ನೂ ಸಾಲೆಗೆ ಹೋಗುತ್ತಿರುವಳೇನು?" ಎಂದು ಕುತೂಹಲದಿಂದ ಯಲ್ಲಮ್ಮನನ್ನು ಕೇಳಿದಳು. ಆಗ್ಗೆ ಮಲ್ಲಮ್ಮನು "ಇಲ್ಲ. ಐದನೆಯತ್ತೆಯ ಅಭ್ಯಾಸ ಮುಗಿಸಿ ವ್ಯವಹಾರೋಪಯುಕ್ತ ಈ ಅಭ್ಯಾಸ ಸಾಕೆಂದು ಸಂಸಾರೋಪಯುಕ್ತ ವಿಷಯವನ್ನು ಮನೆಯಲ್ಲಿಯೇ ಅಭ್ಯಾಸಿಸುತ್ತಿರುವಳು. ಅವಳ ಕೈಯಲ್ಲಿ "ಮಕ್ಕಳ ಪೋಷಣೆ" ಎಂಬ ಪುಸ್ತಕ ಒಂದಿತ್ತು. ಯಲ್ಲಮ್ಮನು ಅವಳನ್ನುದ್ದೇಶಿಸಿ "ಮಗು, ಪಾರ್ವತಿ ನಿನಗೆ ನಾನೊಂದು ಪ್ರಶ್ನವನ್ನು ಕೇಳುವೆನು. ನಾಚದೆ ಸ್ವಚ್ಛಮನಸ್ಸಿನಿಂದ ಮನೋಗತವನ್ನು ತಿಳಿಸುವಿಯಾ? ಇಷ್ಟೇಕೆ ಅನುಮಾನಿಸುವೆ ಹಾಗಾದರೆ ಆದಿನ ನಿನ್ನನ್ನು ಸಂಕಟಮುಕ್ತಳನ್ನಾಗಿ ಮಾಡಿ ಮನೆಗೆ ತಂದು ಮುಟ್ಟಿಸಿದನಲ್ಲ ಆ ಯುವಕನನ್ನು ನೀನು ವರಿಸುವಿಯಾ? ನಿನ್ನ ಮನಸ್ಸನ್ನು ತಿಳಿದುಕೊಂಡು ಕಾರ್ಯಮಾಡಿದರೆ ತಂದೆ-ತಾಯಿಗಳಿಗೆ ಕೀರ್ತಿ ಬರುವದಿಲ್ಲವೆ? ಹೇಳು. ನಿನ್ನ ಮನೋಗತವನ್ನು ಹೇಳು" ಸರಿ, ಯಲ್ಲಮ್ಮನ ಈ ಪ್ರಶ್ನೆಯಿಂದ ಪಾರ್ವತಿಯ ಆನಂದವು ಹಿಡಿಸದಾಯಿತು. ಕೂಡಲೇ ಅವಳು ತಾಯಿಯನ್ನು ಕುರಿತು "ಅವ್ವಾ ನೀನೆಲ್ಲಾ ಕೊಡಬಹುದು. ಮಾಡಿಕೊಳ್ಳಲು ಅವರೊಂದು ಒಪ್ಪಬೇಕಲ್ಲವೆ?" ಮಗಳ ಮಾತಿಗೆ ಮಲ್ಲಮ್ಮನು "ಅದರ ಪ್ರಯತ್ನವನ್ನು ನಾವು ಮಾಡುವೆವು. ನಿನ್ನ ವಿಚಾರವೇನು." "ನನ್ನ ವಿಚಾರವೇನು? ಅವರ ಒಪ್ಪಿಗೆಯೊಂದನ್ನು ಪಡೆಯಿರಿ. ಆಮೇಲೆ ಫಕೀರೇಶನು ಏನು ಬುದ್ಧಿಯನ್ನು ಕೊಡುವನೋ ನೋಡುವಾ" ಎಂದು ಅಲ್ಲಿಂದ ಪಾರ್ವತಿಯು ಪಟಕ್ಕನೇ ಎದ್ದು-ಹೋಗಿ ಪಟಾಂಗಣದಲ್ಲಿ ಓದುತ್ತ ಕುಳಿತಳು. ಅವಳ ಸ್ವಭಾವವನ್ನರಿತ ಮಲ್ಲಮ್ಮನು ಗಂಡನಿಗೆ ಈ ಸಂಗತಿಯನ್ನು ತಿಳಿಸಿದಳು.

## ೮.

ಈ ಅವಧಿಯಲ್ಲಿ ಮಹಾಲಿಂಗಪ್ಪನ ಗುಣಕೀರ್ತನೆಯನ್ನು ಕೇಳಿ ಕೆಲ ಶ್ರೀಮಂತರು ಕನ್ಯ ಕೊಡಲೊಪ್ಪಿ ಅವನ ಸಮ್ಮತಿಯನ್ನು ಕೇಳಲಿಕ್ಕೆ ಎಡತಾಕಹತ್ತಿದರು. ಅದಕ್ಕೆ ಮಹಾಲಿಂಗಪ್ಪನು, "ಶ್ರೀಮಂತರ ಹುಡುಗೆಯರು ಸ್ವೇಚ್ಛೆಯಿಂದ ಬೆಳೆದವರು. ಸುಖ, ದುಃಖದ ಕಲ್ಪನೆಯಿಲ್ಲದ ಕೇವಲ ಶ್ರೀಮಂತಿಕೆಯ ಛಾಯೆಯಲ್ಲಿ ಬೆಳೆದ ಇವರನ್ನು ಕಟ್ಟಿಕೊಂಡರೆ ಸಂಸಾರವು ಸುಖರೂಪವಾಗಿ ನಡೆಯುವದಿಲ್ಲ"ವೆಂದು ನಿರ್ಧರಿಸಿ ಅಸಮ್ಮತಿಯನ್ನು ತೋರಿಸಿದ್ದನು.

ಆ ಮುಂದೆ ಜಾತ್ರೆಗೆ ಮಹಾಲಿಂಗಪ್ಪನು ಬಂದಾಗ ಪಾರ್ವತಿಯಲ್ಲಿ ಮಾತ್ರ ಅವನ ಮನವು ನಟ್ಟಿತ್ತು. ಒಂದು ದಿನ ತನ್ನ ಕೋಣೆಯಲ್ಲಿ ಅಭ್ಯಾಸ ಮಾಡುತ್ತ ಕುಳಿತಿದ್ದಾನೆ. ಆ ವೇಳೆಯಲ್ಲಿ ಅಂಚೆಯವನು ಬಂದು ಒಂದು ಪಾಕೀಟನ್ನು

ಮಹಾಲಿಂಗನ ಕೈಯಲ್ಲಿ ಕೊಟ್ಟು ಹೋದನು. ಕೂಡಲೇ ಅವನು ಅದನ್ನು ಒಡೆದು ಓದಲಾರಂಭಿಸಿದನು. ಓದ ಓದುತ್ತ ಅವನ ಮುಖದಲ್ಲಿ ಉಲ್ಹಾಸದ ಛಾಯೆಯು ಹೊರಸೂಸಹತ್ತಿತು. ಮತ್ತು ಅದಕ್ಕೆ ಮರುಟಪಾಲು ಹಾಕಬೇಕೆಂದೆಣಿಸಿ ಲೇಖನ ಸಾಮುಗ್ರಿಗಳನ್ನು ತೆಗೆದುಕೊಂಡು, ಸ್ವಾಮಿಯವರ ಮನಸ್ಸಿಗೆ ನಿಮ್ಮ ಅಭಿಪ್ರಾಯವು ಯೋಗ್ಯ ಕಂಡು ಅವರು ಸಮ್ಮತಿಯನ್ನುಕೊಟ್ಟರೆ ನನ್ನ ಒಪ್ಪಿಗೆ ಇದೆಯೆಂದು ತಿಳಿಯಿರಿ. ಅವರ ಅಭಿಪ್ರಾಯವನ್ನು ಪಡೆಯದೆ ಯಾವ ಕಾರ್ಯಕ್ಕೂ ಮುಂದರಿಯಬಾರದು. ಅವರ ಆಶೀರ್ವಾದವೇ ನಮ್ಮ ಕ್ಷೇಮಾಭ್ಯುದಯಗಳು. ಹೀಗೆಂದು ಓಲೆ ಬರೆದನು. ಮಹಾಲಿಂಗಪ್ಪನ ಈ ಓಲೆ ಚನವೀರಪ್ಪನಿಗೆ ತಲ್ಪಿದ ಮರುದಿನ ಅವನು ತನ್ನ ಸ್ನೇಹಿತರೊಡಗೂಡಿ ಎಲ್ಲರು ಮಠಕ್ಕೆ ಹೋದರು. ಸ್ವಾಮಿಯವರು ಆ ಸಮಯದಲ್ಲಿ ಲಿಂಗಾರ್ಚನೆಗೆ ಕುಳಿತಿದ್ದರು. ಆ ವೇಳೆಯಲ್ಲಿ ಅವರನ್ನು ಯಾರೂ ಮಾತಾಡಿಸಲವಕಾಶವಿದ್ದಿಲ್ಲ. ಆದ್ದರಿಂದ ಅವರ ಮಾರ್ಗ ಪ್ರತಿಕ್ಷಣೆಮಾಡುತ್ತ ಇವರು ಕುಳಿತುಕೊಳ್ಳಬೇಕಾಯಿತು. ಲಿಂಗಾರ್ಚನೆಯು ಮುಗಿದಮೇಲೆ ಸ್ವಾಮಿಗಳವರು ಹೊರಗೆ ಬಂದರು. ಎಲ್ಲರೂ ಅವರ ಪಾದಕ್ಕೆರಗಿದರು. ಸ್ವಾಮಿಯವರು ಸರ್ವರಿಗೂ ಕೂಡ್ರಲಿಕ್ಕೆ ಹೇಳಿ ತಾವೂ ಕುಳಿತುಕೊಂಡು ಬಂದಕಾರಣವನ್ನು ಕೇಳಿದರು. ಅದಕ್ಕೆ "ಸ್ನೇಹಿತರು ಜಾತ್ರೆಯಲ್ಲಿ ನಡೆದ ಸರ್ವ ಸಂಗತಿಗಳನ್ನು ತಿಳುಹಿಸಿ, ಚನವೀರಪ್ಪನು ತನ್ನ ಮಗಳಾದ ಪಾರ್ವತಿಯನ್ನು ಮಹಾಲಿಂಗಪ್ಪನಿಗೆ ಕೊಡಬೇಕೆಂಬ ವಿಚಾರವನ್ನು ಮಾಡಿದ್ದಾನೆಂ"ದು ತಿಳುಹಿಸಿದರು. ಇವರ ವೃತ್ತಾಂತವನ್ನು ಕೇಳಿ ಸ್ವಾಮಿಗಳು ಹರ್ಷಚಿತ್ತರಾಗಿ "ನಿಮ್ಮ ವಿಚಾರವು ಯತಾರ್ಥವಾಗಿದೆ. ಆದರೆ ಇದರಲ್ಲಿ ಮಹಾಲಿಂಗನ ವಿಚಾರವನ್ನು ತಿಳಿದುಕೊಳ್ಳುವದು ಅವಶ್ಯವಲ್ಲವೆ?" ಎಂದರು. ಇವರು ತಮ್ಮ ಸಂಗಡಲೇ ತಂದಿದ್ದ ಮಹಾಲಿಂಗನ ಪತ್ರವನ್ನು ಸ್ವಾಮಿಗಳವರ ಸನ್ನಿಧಿಯಲ್ಲಿಟ್ಟರು. ಕಾರಕೂನನು ಪತ್ರವನ್ನು ಓದಿಹೇಳಿದನು. ಸ್ವಾಮಿಗಳು ಪತ್ರಾಭಿಪ್ರಾಯವನ್ನು ತಿಳಿದು ಮಹಾಲಿಂಗನ ಬುದ್ಧಿವಂತಿಕೆಯ ಬೆಲೆಯನ್ನರಿತು, ಪ್ರೇಮಭರಿತರಾಗಿ "ಸರಿ! ನಾನು ಮಹಾಲಿಂಗನನ್ನು ಕರಿಸುತ್ತೇನೆ. ಆದಷ್ಟು ತೀವ್ರವಾಗಿ ಈ ಮಂಗಲಕಾರ್ಯವನ್ನು ನೆರವೇರಿಸೋಣ. ಲಗ್ನದ ಎಲ್ಲ ವ್ಯವಸ್ಥೆಯೂ ಮಠದ ಖರ್ಚಿನಿಂದಲೇ ಆಗಲಿ" ಎಂದು ಸ್ವಾಮಿಗಳವರು ಎಲ್ಲರನ್ನು ಆಶೀರ್ವದಿಸಿ ಕಳುಹಿದರು.

## ೯.

ಇದೇನು ಚನವೀರಪ್ಪನ ಮನೆಗೆ ಇಷ್ಟು ಜನರೇಕೆ ಹೋಗುತ್ತಾರೆ. ಶುಭವಾದ್ಯಗಳೂ ಕೇಳಬರುತ್ತವೆ. ಅವನ ಮನೆಯಲ್ಲೇನು ಅಂತಹ ಸಮಾರಂಭ?

ವಾಚಕರೇ ತಾನೇ ತಿಳಿಯುವವು, ಆತುರಗೊಳ್ಳಬೇಡಿ. ಓಹೋ! ಪಾರ್ವತಿಯ ವಿವಾಹ ಸಮಾರಂಭವೊ? ಸಂತೋಷ. ಎಷ್ಟು ಜನ ಸಂದಣಿಯಿದು? ಈ ಜನರೆಲ್ಲ ಶುಭವಾದ್ಯದೊಂದಿಗೆ ಹೋಗುವದೆಲ್ಲಿಗೆ? ವರನನ್ನು ಕರತರುವದಕ್ಕಾಗಿಯೊ? ಹಾದು, ಈ ಹೊತ್ತು ಗೋಧೂಳಿ ಶುಭಮೂಹುರ್ತಕ್ಕೆ ಅಕ್ಷತೆ. ಮಹಾಲಿಂಗನ ಲಗ್ನಕ್ಕೆಂದು ಊರಲ್ಲಿಯ ಪ್ರಮುಖ ವ್ಯಾಪಾರಿಗಳು, ಸಾವುಕಾರರು ತಮ್ಮ ತಮ್ಮ ಮನೆಮಂದಿಯವರೊಂದಿಗೆ ಬಂದಿದ್ದರು. ಇಷ್ಟರಲ್ಲಿಯೇ ವಾದ್ಯವೈಭವಗಳಿಂದ ವರನನ್ನು ಕುದುರೆಯಮೇಲೆ ಕುಳ್ಳಿರಿಸಿಕೊಂಡು ಬಂದೇಬಿಟ್ಟರು. ವರನನ್ನು ಕುದುರೆಯಿಂದ ಇಳಿಸಿದರು. ಮುತ್ತೈದೆಯರು ಆರತಿಯನ್ನು ಮಾಡಿದರು. ಆನಂತರ ವರನನ್ನು ಒಳಗೆ ಕರೆದೊಯ್ದು ತಯಾರಿಸಿದ ಆಸನದಮೇಲೆ ಕುಳ್ಳಿರಿಸಿ ಮುಂದಿನ ಕಾರ್ಯಕ್ಕೆ ಉಪಕ್ರಮಿಸಿದರು. ಭಗವಾನ್ ಸೂರ್ಯನಾರಾಯಣನು ಅದೇ ಪಶ್ಚಿಮಾದ್ರಿಯನ್ನು ಸೇರುತ್ತಲಿದ್ದನು. ಲಗ್ನಮೂಹರ್ತವು ಸಮಿೂಪಿಸಿತೆಂದು ಯಾವತ್ತೂ ಪುರಜನರು ಚನವೀರಪ್ಪನ ಮನೆಯ ಕಡೆಗೆ ಸಾಗಿದ್ದಾರೆ. ಲಗ್ನ-ಮಂಟಪವನ್ನು ಉತ್ತಮರೀತಿಯಿಂದ ತಯಾರಿಸಿ ಅಲ್ಲಲ್ಲಿ ತಳಿರು ತೋರಣಗಳನ್ನು ಕಟ್ಟಿದ್ದಾರೆ. ಬಂದ ಜನರು ಕುಳಿತುಕೊಳ್ಳಲಿಕ್ಕೆಂದು, ಹಾಸಿ ಸಿದ್ಧಮಾಡಿದ್ದಾರೆ. ಸಾವುಕಾರರೂ, ವಕೀಲರೂ, ಸರಕಾರೀ ಅಧಿಕಾರಸ್ಥರೂ ಕುಳತುಕೊಳ್ಳಲಿಕ್ಕೆಂದು, ಪ್ರತ್ಯೇಕ ಸ್ಥಳದ ಏರ್ಪಾಟವಾಗಿದೆ. ಅಲ್ಲಲ್ಲಿ ಊದಬತ್ತಿಯ ಪೇಲೆಗಳು, ಕಂಗೊಳಿಸುತ್ತವೆ. ಮುಹೂರ್ತವು ಸಮಿೂಪಿಸಿತೆಂದು ಮಂಟಪವು ಜನರಿಂದ ತುಂಬಿಹೋಯಿತು. ಎತ್ತರದಲ್ಲಿ ಹಾಸಿ, ಗಾದಿ-ಲೋಡುಗಳನ್ನಿಟ್ಟು ಮಧ್ಯದಲ್ಲಿ ಆಗರಬತ್ತಿಯ ಪೇಲೆಯೊಂದನ್ನು ಇಟ್ಟಿದ್ದಾರೆ. ಈ ಆಸನವು ಕೇವಲ ಕಾರುಣ್ಯ ಮೂರ್ತಿಯಾದ ಫಕೀರೇಶ್ವರನ ಸಲುವಾಗಿ ಮಂಡಿಸಿದ್ದಾರೆ. ಸ್ವಾಮಿಗಳವರು ಇನ್ನೂ ಬಂದಿಲ್ಲವೆಂದೇ ಎಲ್ಲರೂ ತವಕದಿಂದ ಅವರ ಹಾದಿಯನ್ನೇ ಜನರು ನೋಡುತ್ತ ಕುಳತಿದ್ದಾರೆ! ಓಹೋ! ಅತ್ತನೋಡಿ ಸ್ವಾಮಿಗಳವರು ಬಂದೇಬಿಟ್ಟರು. ನೋಡಿ ವಾದ್ಯವೈಭವಗಳಿಂದ ಪಲ್ಲಕ್ಕಿಯಲ್ಲಿ ಕುಳಿತುಕೊಂಡು, ರಾಜಪೋಷಾಕಿನಿಂದ—ತನ್ನ ತಪೋಕಾಂತಿಯಿಂದ ಜಗತ್ತನ್ನೇ ಬೆಳಗುತ್ತ ಕುಳಿತಿರುವ ಯೋಗಿಯನ್ನು ನೋಡಿದಿರಾ? ನೋಡಿ, ಚೌರಿ ಬೀಸುವವರು, ಹೊಗಳುವ ಭಟರು, ಕುದುರೆ ಸವಾರರು, ಪಟ್ಟಾಸಿಪಾಯರು, ನಗಾರಿ-ನೌಬತ್ತುಗಳ ಮರ್ಯಾದೆಯು, ಇಷ್ಟೆಲ್ಲ ವೈಭವವು ನಮ್ಮ ಫಕೀರೇಶ್ವರನಿಗಲ್ಲದೆ ಬೇರೊಬ್ಬರಿಗುಂಟೆ? ಇವರ ತಪೋಶಕ್ತಿಗೆ ಮೆಚ್ಚಿ, ಗಜರಾಜನು ಕೂಡಾ ಹೇಗೆ ತನ್ನ ಸೊಂಡಿಯಿಂದ ಚೌರಿಯನ್ನು ಬೀಸುತ್ತಿರುವನು? ನೋಡಿದಿರಾ, ಇಂತಹ ತಪೋ ವರನನ್ನು ನೋಡುವ ನೀವೇ ಭಾಗ್ಯಶಾಲಿಗಳು! ಈ ತರಹದ ವೈಭವದಿಂದ ಸ್ವಾಮಿಗಳವರು ಚನವೀರಪ್ಪನ ಲಗ್ನ ಮಂಟಪವನ್ನು ಪ್ರವೇಶಿಸಿದರು. ಅವರು ಬಂದಕೂಡಲೇ ಎಲ್ಲ ಜನರು ಎದ್ದು

ಅವರನ್ನು ಸಿದ್ಧಾಸನದ ಮೇಲೆ ಕುಳ್ಳಿರಿಸಿದರು ! ಸ್ವಾಮಿಗಳು ಎಲ್ಲರಿಗೂ ಕುಳಿತು ಕೊಳ್ಳಲಿಕ್ಕೆ ಹೇಳಿದರು. ಲಗ್ನಮುಹೂರ್ತವು ಸಮೀಪಿಸಿತು. ಕನ್ಯೆಯನ್ನು ಕರೆದುಕೊಂಡು ಬರುವದಕ್ಕಾಗಿ ಶಾಸ್ತ್ರಿಗಳು ಅವಸರ ಮಾಡಹತ್ತಿದರು. ವರನು ಬಾಸಿಂಗವನ್ನು ಕಟ್ಟಿಕೊಂಡು, ಸಿದ್ಧನಾಗಿ ಕುಳಿತಿದ್ದನು. ಶಾಸ್ತ್ರಿಗಳು "ಲಗ್ನ ಘಟಿಕಾ ಸಮೀಪಿಸಿತು. ಜಾಗ್ರತೆಯಾಗಿ ಕನ್ಯೆಯನ್ನು ಕರೆದುಕೊಂಡು ಬನ್ನಿ ರೆಂ"ದು ಅವಸರ ಮಾಡಹತ್ತಿದರು. ಎಲ್ಲರಿಗೂ ಮಂತ್ರಾಕ್ಷತೆಗಳನ್ನು ಕೊಟ್ಟರು. ಪಾರ್ವತಿಯು ಓರಿಗೆಯ ಗೆಳತಿಯರೊಡಗೂಡಿ ಬಂದಳು. ನಮ್ಮ ಪಾರ್ವತಿಯು ಈಗ ಹೇಗೆ ಕಾಣುವಳು ನೋಡಿರಿ! ಕೇಸರಿ ಬಣ್ಣದ ಪತ್ತಲವನ್ನುಟ್ಟುಕೊಂಡು, ಕಪೋಲಗಳಿಗೆ ಅರಿಷಣವನ್ನು ಹಚ್ಚಿಕೊಂಡು, ಲಲಾಟದಲ್ಲಿ ವಿಭೂತಿ, ಮಧ್ಯದಲ್ಲಿ ಕುಂಕುಮದ ಬಟ್ಟೊಂದನ್ನು ಇಟ್ಟುಕೊಂಡು, ಹೂವಿನ ದಂಡೆಯನ್ನು ಮುಡಿಸಿಕೊಂಡು, ಸ್ತಂಭಿತ ಮೂರ್ತಿಯ ಕಡೆಗೆ ಕಳ್ಳದೃಷ್ಟಿಯನ್ನಿಟ್ಟು ಲಜ್ಜಾನ್ವಿತಿಯಾಗಿ ಹೋಗಿ ಮಣೆಯಮೇಲೆ ಕುಳಿತುಕೊಂಡ ವಧುವಾದ ಪಾರ್ವತಿಯು ಧನ್ಯಳಲ್ಲವೆ? ಸ್ವಾಮಿಗಳು "ಲಗ್ನಘಟಿಕಾ ಸಮೀಪಿಸಿತು. ಮಂತ್ರಾಕ್ಷತೆಗಳನ್ನು ಹಾಕಿರಿ. ವಿಲಂಬಮಾಡಬೇಡಿರಿ." ಎಂದು ಆಜ್ಞೆಯನ್ನಿತ್ತರು. ಸ್ವಾಮಿಗಳ ಆಜ್ಞೆಯಾಗುವದೇ ತಡ, ಕೂಡಲೇ ಶಾಸ್ತ್ರಿಗಳು ಶಾಸ್ತ್ರೋಕ್ತವಾಗಿ ಮಂತ್ರವಿಧಾನವನ್ನು ಮುಗಿಸಿದರು. "ಹೂಂ ಸುಮುಹೂರ್ತೆ ಸಾವಧಾನ" ಎಂದು ಎಲ್ಲರೂ ಮಂತ್ರಾಕ್ಷತೆಗಳನ್ನು ಹಾಕಿದರು. ಸ್ವಾಮಿಗಳು ವಧೂವರರನ್ನು ಆಶೀರ್ವದಿಸಿ ಸ್ವಸ್ಥಾನಕ್ಕೆ ತೆರಳಲುದ್ಯುಕ್ತರಾದರು. ಸರ್ವರೂ ಸ್ವಾಮಿಗಳ ಆಶೀರ್ವಾದವನ್ನು ಸ್ವೀಕರಿಸಿ ಅವರನ್ನು ಕಳಿಸಿದರು. ಎಲ್ಲರೂ ವಧೂವರರನ್ನು ಆಶೀರ್ವದಿಸಿದರು. ಲಗ್ನಕ್ಕೆ ಬಂದ ದಂಪತಿಗಳ ಗುಂಪು ತಮ್ಮ ಮಕ್ಕಳನ್ನೊಡಗೂಡಿ ಈ ಹೊಸ ದಂಪತಿಗಳನ್ನು ನೋಡಿ "ಅಹ! ಈ ಪಾರ್ವತಿ-ಮಹಾಲಿಂಗಪ್ಪನ ಜೋಡಿಯು ಹೇಗೆ ಪಾರ್ವತಿ-ಪರಮೇಶ್ವರರಂತೆ ಕಂಗೊಳಿಸುವರು ನೋಡಿರಿ." ಎಂದು ಪುನಃ ಪುನಃ ಅವರನ್ನೇ ನೋಡುತ್ತಿದ್ದರು. ಮತ್ತು ಹಾದಿಗುಂಟ "ನಮ್ಮ ವೀರಶೈವ ಮತದ ಗೌರವವನ್ನು ಇವರೇ ಹೆಚ್ಚಿಸಿದರೆಂದು ಹೇಳಲು ಏನೂ ಅಭ್ಯಂತರವಿಲ್ಲ" ವೆಂದು ಅನ್ನುತ್ತ ಹೋಗುತ್ತಿದ್ದರು. ದೇವರು ಈ ಹೊಸ ದಂಪತಿಗಳಿಗೆ ಕ್ಷೇಮಾಯುರಾರೋಗ್ಯವನ್ನು ಕೊಟ್ಟು ರಕ್ಷಿಸಲಿ. ಎಂದು ಎಲ್ಲರೂ ಆಶೀರ್ವದಿಸಿದರು.



# ಕಂಡದ್ದು-ಕೇಳಿದ್ದು.

## ವಿಜಯನಗರದ ಲಲಿತ ಕಲೆಗಳು.

ಶ್ರೀಯುತ ಆರ್. ಎನ್. ಸಾಲಟೋರ M. A. ಎಂಬವರು ಮೇಲ್ಕಂಡ ವಿಷಯದಮೇಲೆ ಒಂದು ಉತ್ಕೃಷ್ಟವಾದ ಪ್ರಬಂಧವನ್ನು ಬರೆದಿರುವರು. ಅದ-ರಲ್ಲಿ ಅವರು, ವಿಜಯನಗರದ ಕಾಲದ ಚಿತ್ರಕಲೆ, ನೃತ್ಯಕಲೆ, ಸಂಗೀತ, ಶಿಲ್ಪಶಾಸ್ತ್ರ ಮುಂತಾದ ಅನೇಕ ವಿಷಯಗಳನ್ನು ಚರ್ಚಿಸಿರುವರು. ಡಾಕ್ಟರ, ವಿನ್ಸೆಂಟ ಸ್ಮಿಥ ರವರಿಗೆ ವಿಜಯನಗರದ ಅರಸೆಂದರೆ, ಕಾಡು ಅರಸರೆಂದು ಭಾವನೆ. ಇದು ತೀರ ತಪ್ಪೆಂಬುದನ್ನು ಈ ಸಂಬಂಧದ ಲೇಖಕರು ಸಪ್ರಮಾಣವಾಗಿ ಸಿದ್ಧಪಡಿಸಿರುವರು. ವಿಜಯನಗರದ ಕಾಲದಲ್ಲಿ ಅರಸರಂತೆಯೆ ಸಾಮಾನ್ಯ ಜನರೂ ಅನೇಕ ಲಲಿತ ಕಲೆಗಳಲ್ಲಿ ಅತ್ಯಂತ ನಿಪುಣರಾಗಿದ್ದರು. ಮಲ್ಲಯುದ್ಧವು ಅವರಿಗೆ ಚನ್ನಾಗಿ ಅವಗತವಾಗಿತ್ತು. ಹೋಳೀಹಬ್ಬ,ಮಹಾನವಮಿ ಹಬ್ಬ, ಮುಂತಾದ ಹಬ್ಬಗಳನ್ನು ಆ ಕಾಲದ ಜನರು ಬಹಳ ವಿಜ್ರುಂಭಣೆಯಿಂದ ಮಾಡುತ್ತಿದ್ದರು. ಆಗ ಅನೇಕ ಕಲಾನಿಪುಣರಿಗೆ ಪ್ರೋತ್ಸಾಹನೆ ದೊರೆಯುತ್ತಿತ್ತು. ಎರಡನೇ ಬುಕ್ಕರಾಯನ ಕಾಲದಲ್ಲಿಯ ಚಿತ್ರಕಲೆಯ ಮಾದರಿಗಳು ಈ ಪ್ರಬಂಧದಲ್ಲಿ ವರ್ಣಿಸಲ್ಪಟ್ಟಿವೆ. ಆಗಿನ ಕಾಲದ ಅಲಂಕಾರ ಪದ್ಧತಿ, ಉಡುಪಿನ ರೀತಿ, ಇವೇ ಮುಂತಾದವುಗಳ ವರ್ಣನೆಯು ಬಹು ಮನೋರಂಜಕವಾಗಿದೆ. ವಿಜಯನಗರದ ಕಾಲದಲ್ಲಿ, ಪಟ್ಟಣಗಳ ರಚನೆಯೂ, ವ್ಯವಸ್ಥೆಯೂ, ಅಭ್ಯಾಸಮಾಡತಕ್ಕ ವಿಷಯಗಳಾಗಿವೆ. ಆಗಿನ ಕಾಲದ ನಾಟಕ ಗ್ರಹ, ಸಂಗೀತ ಶಾಲೆ, ನೃತ್ಯ ಶಾಲೆ, ಇವುಗಳ ವರ್ಣನೆಗಳು ಬಹುತಕ್ಕವುಗಳಾಗಿವೆ.

"ಪ್ರಾಚೀನ-ಕರ್ನಾಟಕ."

---

ಮೇಲಿನ ವಿಷಯವನ್ನು ( ೧೯೩೩ ನೇ ಇಸ್ವಿಯ ) 'ಸುಬೋಧ' ಎಂಬ ಮಾಸಪತ್ರದಿಂದ ಎತ್ತಿ ಬರೆಯಲಾಗಿದೆ.

# ಕನ್ನಡ ಸಾಹಿತ್ಯದಲ್ಲಿ ವೀರಶೈವರ ಮಹತ್ರಿ:

---

**ಲೇಖಾಂಕ ೫.**

ಲೇಖಕರು :— ಶ್ರೀ ಬಾಲೇಹೊಸೂರ ರಾಮರಾಯರು ಶಿರಹಟ್ಟಿ.

ಒಂದು ಸಮಯ ನಮ್ಮ ಭರತ ದೇಶವು ಸಕಲ ಸುಖಸಂಪದಗಳಿಂದ ಶೋಭಾಯಮಾನವಾಗಿತ್ತು. ನಾಗರಿಕರಲ್ಲಿ ಒಳ್ಳೇ ಸಾತ್ವಿಕ ಜೀವನಗಳೂ, ಧಾರ್ಮಿಕರೂ, ಕಲಾಕೋವಿದರೂ ಆಗಿದ್ದರು. ಸಾಧಾರಣವಾಗಿ ೧೪ ನೇ ಶತಮಾನದಲ್ಲಿ ಕೂಡಾ ಉತ್ತರ ಹಾಗೂ ದಕ್ಷಿಣ ಹಿಂದುಸ್ಥಾನದ ಬೇರೆ ಬೇರೆ ಭಾಗಗಳಲ್ಲಿ ಪ್ರಬಲವಾದ ರಾಜ್ಯಗಳೆಷ್ಟೋ ಇದ್ದವು. ಹಿಂದುಸ್ಥಾನವನ್ನೆಲ್ಲ ಪಾದಾಕ್ರಾಂತ ಮಾಡಿ, ಅತಿಶಯವಾಗಿ ಕೀರ್ತಿಪಡೆದ ಗುಪ್ತ ಸಾರ್ವಭೌಮನು ಕನ್ಯಾಕುಬ್ಜ ನೆಂಬ ಪಟ್ಟಣವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದನು. ಇತ್ತ ದಕ್ಷಿಣದಲ್ಲಿ ಬಾದಾಮಿಯ ಚಾಲುಕ್ಯರ ಇಮ್ಮಡಿ ಪುಲಿಕೇಶಿಯು ಅತಿವೈಭವ ದೊಡನೆ ವಾತಾಪಿ ( ಬಾದಾಮಿ ) ನಗರದಲ್ಲಿ ರಾಜ್ಯಭಾರವನ್ನು ಸಾಗಿಸುತ್ತಿದ್ದನು. ಚಾಲುಕ್ಯರ ಕೀರ್ತಿಸ್ತಂಭದಲ್ಲಿ ದೈದೀಪ್ಯಮಾನವಾದ ದೀಪವನ್ನಿರಿಸಿ ಅದರ ಪ್ರಖರ ವಾದ ತೇಜಸ್ಸಿನಿಂದ ಇಡೀ ಭರತಖಂಡವನ್ನು ಅದೇಕೆ? ಅಂದಿನ ಜಗತ್ತನ್ನೇ ಬೆಳಗಿಸಿದ ಕಡುಗಲಿಯೇ ಇವನು. ಇವನು ರಾಜ್ಯಾಭಿಷಿಕ್ತನಾದಮೇಲೆ ದಕ್ಷಿಣ ದಲ್ಲಿನ ರಾಷ್ಟ್ರಕೂಟ, ಗಂಗ, ಕದಂಬ, ಆಳುಪ, ಮೌರ್ಯಲಾಟ, ಗುರ್ಜರ ಮುಂತಾಗಿ ಅರಸರನ್ನು ಚನ್ನಾಗಿ ಸದೆಬಡೆದನು. ಆ ಮುಂದೆ ಕೋಸಲ, ಕಳಿಂಗ, ಪಾಂಡ್ಯ, ಕೇರಳ, ಚೋಳ, ಪಲ್ಲಿ ಮುಂತಾದವರನ್ನು ಪೂರ್ಣವಾಗಿ ಸೋಲಿಸಿ ತನ್ನ ದಂಡಯಾತ್ರೆಗೆ ಮುಕುತಾಯಮಾಡಿದನು. ಅದುಕಾರಣವೇ ಅವನಂದು ದಕ್ಷಿಣಾಪಥೇಶ್ವರನೆಂಬ ಬಿರುದು ಧರಿಸಿದ್ದು ವಾಸ್ತವ.

ಆ ಮುಂದೆ ಅವನು ಉತ್ತರ ಹಿಂದುಸ್ಥಾನದಲ್ಲಿ ಪ್ರಬಲವಾಗಿದ್ದ ಗುಪ್ತ ಸಾಮ್ರಾಟನಾದ ಹರುಷವರ್ಧನನಮೇಲೆ ಸಾಗಿಹೋಗಿ ಸೋಲಿಸಿ, ಪರಮೇಶ್ವರ ನೆಂಬ ಬಿರುದನ್ನು ಪಡೆದ ಸಂಗತಿಯು ಕನ್ನಡಿಗರಿಗಷ್ಟೇ ಅಲ್ಲದೆ ಅಖಿಲ ಭಾರತೀಯರಿಗೆ ತಮ್ಮ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡುವದಾಗಿದೆ. ಇಂತು ಭಾರತೀಯರು ಅಂದಿನ ಸ್ವತಂತ್ರ, ಸಾನಂದಸಾಮ್ರಾಜ್ಯದಲ್ಲಿ ಅತಿಸೌಖ್ಯದಿಂದ ಕಾಲಕಳೆದು ತಮ್ಮ ಸಾಹಿತ್ಯ, ಸಂಗೀತ ಕಲೆ ಮುಂತಾದ ವಿಷಯಗಳಲ್ಲಿ ಒಳ್ಳೇ

ನೈಪುಣ್ಯ ಪಡೆದು, ವಿಶ್ವಜನಾಂಗದವರನ್ನು ಅಚ್ಚರಿಗೊಳಿಸಿದರು. ಆದರೆ ಇಂತಹ ಈ ಸ್ಥಿತಿಯು ಕಾಯಮವಾಗಿ ಇರಲಿಲ್ಲ. ನೂರಿನ್ನೂರು ವರುಷಗಳಲ್ಲಿ ಭಾರತದಲ್ಲಿ ಒಂದೂ ರಾಷ್ಟ್ರವು ಸಾರ್ವಭೌಮತ್ವವನ್ನು ಪಡೆದು ಬದುಕಿ ಬಾಳಲಿಲ್ಲ. ಮತ್ತೆ ಮೊದಲಿನಂತೆ ಅನೇಕ ಚಿಕ್ಕ ಚಿಕ್ಕ ರಾಜ್ಯಗಳಾದವು. ಮತ್ತು ಅತಿ ಕ್ಷುದ್ರ ಭಾವನೆಯಿಂದ ತಮ್ಮ ತಮ್ಮೊಳಗೆ ಒಳಜಗಳಗಳನ್ನು ಹೂಡಿದರು. ಈ ಒಳಜಗಳದ ಬೀಜವೇ ಭಾರತವನ್ನು ಕೊನೆಗೆ ರಸಾತಳಕ್ಕೆ ಮುಟ್ಟಿತು.

ಭಾರತ ದೇಶವು ಸಂಪದ್ಯುಕ್ತವಾಗಿದ್ದು ಅಲ್ಲಿನ ರಾಜ್ಯದಲ್ಲಿ ಐಕ್ಯವಿಲ್ಲದಿರುವ ಈ ಹೀನಸ್ಥಿತಿಯನ್ನು ಅನುಲಕ್ಷಿಸಿ ಹಿಂದೆ ಭಾರತಕ್ಕೆ ಕೊಳ್ಳೆ ಇಡುತ್ತಿದ್ದ ಮಧ್ಯ ಏಶಿಯಾದಲ್ಲಿನ ಮುಸಲ್ಮಾನರು ನಮ್ಮಲ್ಲಿಗೆ ಪುನಃ ದಾಳಿಮಾಡಹತ್ತಿದರು. ಹೀಗೆ ಮಾಡಿದವರಲ್ಲಿ ಗಿಝುನೀ ಮಹಮ್ಮೂದನೇ ಮೊದಲನೆಯವನು. ಆ ಬಳಿಕ ಘೋರೀ ಮಹಮ್ಮೂದನಾದರೂ ಅದೇ ಕಿತ್ತಿಯನ್ನು ತೀಡಿದನು. ಅಲ್ಲದೆ ಸ್ಥಾನೇಶ್ವರ ಎರಡನೇ ಯುದ್ಧದಿಂದ ಉತ್ತರದಲ್ಲಿನ ಅತಿ ಪರಾಕ್ರಮ ಶಾಲಿಗಳಾಗಿದ್ದ ರಜಪೂತ ದೊರೆಗಳ ಧೈರ್ಯವು ಕಾಯಮವಾಗಿ ಹಿಮ್ಮೆಟ್ಟಿತು. ಅದುಕಾರಣವೇ ಘೋರಿಮಹಮ್ಮೂದನು ಹಿಂದುಸ್ಥಾನದಲ್ಲಿ ತಳವೂರಿ ನಿಂತನು. ಆದರೆ ಅಂದು ಸ್ವತಂತ್ರತೆಯನ್ನು ಕಳೆದುಕೊಂಡ ನಾವು ಇಂದು ಕೂಡಾ ಪರಾಧೀನತೆಯಲ್ಲಿ ಬೆಂದು ಬಳಲುತ್ತಿರುವೆವು. ಇರಲಿ! ಘೋರಿಮಹಮ್ಮೂದನ ತರುವಾಯ ಹಾಗೆಯೇ ದಿಲ್ಲೀ ಸಿಂಹಾಸನವು ಪರಂಪರಾಗತವಾಗಿ ಮುಸಲ್ಮಾನ ಬಾದಶಹರ ಕೈಯಲ್ಲಿಯೇ ಉಳಿಯಿತು. ಅದುಕಾರಣವೇ ಮುಂದೆ ಬಲಾಢ್ಯರಾದ ಮುಸಲ್ಮಾನ ಅರಸರು ಭಾರತದಲ್ಲಿ ಧರ್ಮದ ಛಲವನ್ನು ಪ್ರಾರಂಭಿಸಿದರು. ಅವರ ದಾಳಿಯ ಆಘಾತವು ದಕ್ಷಿಣದಲ್ಲಿನ ರಾಜ್ಯಗಳಿಗೂಕೂಡಾ ತಗಲಹತ್ತಿತು. ಈ ಮೊದಲು ಬೌದ್ಧ ಧರ್ಮವು ಪ್ರಬಲಿಸಿದಾಗ ಇಡೀ ಭರತಖಂಡವೇ ಬೌದ್ಧಮಯವಾಗುವ ಪ್ರಸಂಗವು ಬಂದೊದಗಿತ್ತು. ಅಂದು ಆ ಭೀಕರ ಪ್ರಸಂಗದಲ್ಲಿ ನಮ್ಮುಗಳ ಉದ್ಧಾರಕ್ಕಾಗಿಯೇ ಪರಮ ಪೂಜ್ಯರಾದ ಶಂಕರಾಚಾರ್ಯರು ಉದಯಿಸಿ ಹಿಂದೂ ಧರ್ಮವನ್ನು ಕಾಪಾಡಿಕೊಂಡರು. ಹಾಗೆಯೇ ಹನ್ನೆರಡನೇ ಶತಮಾನದಲ್ಲಿ ಮಹಮ್ಮದೀಯರ ದಾಳಿಯಿಂದ ಮತ್ತೆ ಧರ್ಮ ಸಂಕಟವು ಬಂದೊದಗಿತು. ಅದುಕಾರಣವೆ ಹಿಂದೂ ಧರ್ಮದ ಖನಿಯಿಂದುದಯಿಸಿದ ಬೇರೆ ಬೇರೆ ಮತಗಳಲ್ಲಿ ಐಕ್ಯದ ಅವಶ್ಯಕತೆ ಉಂಟಾಯಿತು. ಹಾಗೆ ಮಾಡದವಿನಃ ಆವುದೊಂದು ಜನಾಂಗವು ಸ್ಥಿರವಾಗಿ ನಿಲ್ಲಲು ಅವಕಾಶ ಇರಲಿಲ್ಲ. ಹನ್ನೆರಡನೇ ಶತಮಾನದಲ್ಲಿ ಪ್ರಾಪ್ತವಾದ ಇಂತಹ ಈ ದುರ್ಧರ ಪ್ರಸಂಗದಿಂದ ಲೋಕದ ಜನಗಳನ್ನು ರಕ್ಷಿಸುವದಕ್ಕಾಗಿಯೇ ಶ್ರೀ ಬಸವೇಶ್ವರರು ಉದಯಿಸಿದರು ! ಅವರು ತಮ್ಮ ಮತಕ್ಕೆ ಅತಿ ಉದಾತ್ತವಾದ ಸಕಲರಿಗೂ ಸಹಜವಾಗಿ ಆಚರಿಸಲು ಬರುವಂತಹ ನಿತ್ಯ ನೈಮಿತ್ತಿಕ ವ್ಯವಹಾರಿಕ

ತತ್ವಗಳನ್ನು ಆಧಾರವಾಗಿಟ್ಟುಕೊಂಡರು. 'ಕಾಯಕವೇ ಕೈಲಾಸ' ಎಂಬ ಅವರ ಬೋಧೆಯಂತೆ ಪ್ರತಿ ಒಬ್ಬ ಮನುಷ್ಯನು ನಡೆದರೆ ಸಾಕು. ಅವನಿಗೆ ಲೋಕದಲ್ಲಿ ಎಲ್ಲ ಬಗೆಯ ಸಿದ್ಧಿಗಳು ದೊರೆಯುವವು. ಅಲ್ಲದೆ ಮಾನವನ ಅಂತಿಮಧ್ಯೇಯವಾದ ಕೈವಲ್ಯ ಪದವಿಯು ಕೂಡಾ ಲಭಿಸುವದರಲ್ಲಿ ಸಂದೇಹವಿಲ್ಲ. ಅದುಕಾರಣವೇ ವೀರಶೈವರಲ್ಲಿ ಹೊಟ್ಟೆಗಾಗಿ ಬೇರೆ ಬೇರೆ ಕರ್ಮಗಳನ್ನು ಕಾಯಕ ರೂಪದಿಂದ ಆಚರಿಸುತ್ತಿರುವದನ್ನು ಲೋಕದಲ್ಲಿ ಕಾಣಬಹುದು. ಹಾಗೆಯೇ ಧರ್ಮದ ಬೋಧೆಯೇ ತಮ್ಮ ಕಾಯಕವೆಂದುಕೊಂಡು ಸಂಚರಿಸುವ ಶಿವ-ಶರಣರನ್ನು ನೋಡಬಹುದು. ಇಂತಹ ಮಹತ್ತರವಾದ ವಿಚಾರಗಳನ್ನು ತಮ್ಮ ತತ್ವಗಳಲ್ಲಿಟ್ಟುಕೊಂಡಿಪ್ಪರಲ್ಲೇನಾದರೂ ರಹಸ್ಯವಿರಬೇಕಲ್ಲವೇ ? ಯಾಕಂದರೆ ಬಸವಣ್ಣನವರು ಅಂದಿನ ಕಾಲದ ಮಹಾ ವಿಭೂತಿಗಳು. ಅಂತಜ್ಞಾನಿಗಳು, ಪರಮ ತಪಸ್ವಿಗಳು. ವೇದಾಂತ ವಿಷಯದಲ್ಲಿ ಅವರಿಗೆ ಹೇಗೆ ವಿಶಾಲವಾದ ಜ್ಞಾನವಿದ್ದಿತೋ ಹಾಗೆಯೇ ರಾಜಕಾರಣಾದಿ ಲೌಕಿಕ ವ್ಯವಹಾರ ಶಾಸ್ತ್ರವನ್ನು ಅವರು ಚನ್ನಾಗಿ ಬಲ್ಲಿದರಾಗಿದ್ದರು. ಮಹಮ್ಮದೀಯರ ದವಡೆಯಿಂದ ರಾಷ್ಟ್ರವನ್ನು ರಕ್ಷಿಸುವದೇ ಅಂದಿನ ಜನಗಳಿಗೆ ಉಚಿತವಾದ ಧರ್ಮವಾಗಿತ್ತು. ಬಸವಣ್ಣನವರು ಇದೇ ಕಾರಣದಿಂದ ಒಂದು ಬಗೆಯ ಉದಾತ್ತವಾದ ಹಾಗೂ ರಾಷ್ಟ್ರಪೋಷಕವಾದ ಧರ್ಮವೊಂದನ್ನೇ ಏರ್ಪಡಿಸುವ ತಮ್ಮ ತತ್ವಗಳನ್ನು ಜನರೆದುರಿನಲ್ಲಿರಿಸಿ ಬೋಧೆಗೈದರು. ಮಾನವನಿಗೆ ಅತ್ಯವಶ್ಯವಾಗಿ ವಿಚಾರಮಾಡಬೇಕಾದ ಸಂಗತಿಗಳೆರಡು ಒಂದು ಹೊಟ್ಟೆ. ಮತ್ತೊಂದು ಬಟ್ಟೆ ಕಾಯಕವೇ ಅವನ ಮತತತ್ವದ ಜೀವಾಳವಿದ್ದದರಿಂದ ಎಲ್ಲರೂ ಒಂದಿಲ್ಲೊಂದು ಉದ್ಯೋಗವನ್ನು ಮಾಡಿಯೇ ತಮ್ಮ ಉದರ ಪೋಷಣೆಯನ್ನು ಮಾಡಿಕೊಳ್ಳಬೇಕಾದದ್ದು ಸಹಜ. ಮತ್ತೊಂದು ಬಟ್ಟೆ. ಅದಕ್ಕಾಗಿ ಹೊಲಮನೆ ಕೆಲಸಮಾಡುವ ಒಕ್ಕಲಿಗರ ಕಾರ್ಯಕ್ಕೆ ಸಾಧನೀಭೂತವಾದ ಬಡಿಗರು, ಕಮ್ಮಾರರು, ಅಂತ್ಯಜ ಮೊದಲಾಗಿ ಜನರಿಗೆಕೂಡಾ ತಮ್ಮ ಮತ ದೀಕ್ಷೆಕೊಟ್ಟದ್ದರಿಂದ ಅವರು, ಸಾನಂದದಿಂದ ಕಾಯಕದ ಕಾಲದಲ್ಲಿ ಮಾತ್ರ ತಮ್ಮ ಉದ್ಯೋಗವನ್ನು ಮಾಡಿ ಮಿಕ್ಕ ಕಾಲದಲ್ಲಿ ವೀರಶೈವರಿಗುಚಿತವಾದ ಧರ್ಮವನ್ನಾಚರಿಸಿ ಮುಕುತಿ ಪಡೆಯಲು ಬಸವಣ್ಣನವರು ಅವರಿಗೆ ಅವಕಾಶವನ್ನಿತ್ತರು. ಅದುಕಾರಣವೇ ಒಂದೊಂದು ಗ್ರಾಮದಲ್ಲಿ ಹೊಟ್ಟೆ ಬಟ್ಟೆಗಾಗಿ ಸಾಧನೀಭೂತವಾದ ಬೇರೆ ಬೇರೆ ಉದ್ಯೋಗದವರಿಗೆ ವೀರಶೈವ ದೀಕ್ಷೆಯನ್ನು ಕೊಟ್ಟು ಅವರನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು. ಹೊಟ್ಟೆ ಬಟ್ಟೆಗಳ ಚಿಂತೆ ದೂರಾದಾಗಲೇ ರಾಷ್ಟ್ರ-ದೇಳಿಗೆಗೆ ಮನಮಾಡಲು ಮಾನವರಿಗೆ ಅವಕಾಶ ದೊರೆಯುವದು ಸಹಜ ! ಇಂದು ಮಹಾಜನಗಳಿಗೆ ತೊಂದರೆಯನ್ನುಂಟುಮಾಡಿ ರಾಷ್ಟ್ರೋನ್ನತಿಯ ಮಾರ್ಗದಲ್ಲಿ ಅಡ್ಡಾಗಿ ಬಿದ್ದಿರುವ ಜಾತಿ ವಿಷಯಕವಾದ ಮಹಾ

ಸರ್ಪನ ಬಾಧೆಯನ್ನು ತಡೆಯುವದಕ್ಕಾಗಿಯೇ ಅತಿ ಪವಿತ್ರವಾದ ವೀರಶೈವ ಧರ್ಮವನ್ನು ಪ್ರಸಾರಗೊಳಿಸಿದ್ದು, ಮತ್ತು ಅತಿಶಯದ ಸಹಿಷ್ಣುತೆ ತಾಳಿ ಜನತೆಯೊಂದಿಗೆ ವರ್ತಿಸಿದ್ದು, ತಮ್ಮ ಕಾರ್ಯದಲ್ಲಿ ಮಹತ್ತರವಾದ ಸಿದ್ಧಿಯನ್ನು ಪಡೆದದ್ದು. ಇಂತು ಬಸವಣ್ಣನವರ ಬೋಧೆಯಿಂದ ಲೋಕದಲ್ಲೊಂದು ಬಗೆಯ ರಾಷ್ಟ್ರೀಯ ಭಾವನೆಯೇ ಜಾಗ್ರತಗೊಂಡಿತು. ಪರಮತೀಯರ ಛಲದಿಂದ ಅಂದಿನ ಸಮಾಜವು ರಕ್ಷಿಸಲ್ಪಟ್ಟಿತು. ಇಂತು ಮಹತ್ಕಾರ್ಯವನ್ನು ಗೈದ ಶ್ರೀ ಬಸವಣ್ಣನವರ ಅನೇಕಾನೇಕ ಸದ್ಗುಣಗಳಿಗೆ ಮನಸೋತು ಅವರಿಗನೇಕ ಜನ ಸತ್‌ಶಿಷ್ಯರು ಲಭಿಸಿದ್ದರೆ ಅದೇನೂ ಆಶ್ಚರ್ಯಕರವಾದ ಸಂಗತಿಯಲ್ಲ. ಅವರ ಶಿಷ್ಯರಾದ ಅನೇಕ ಜನ ಶಿವಶರಣರು ಪರಮಖ್ಯಾತಿಯನ್ನೂ ಮನ್ನಣೆಯನ್ನೂ ಲೋಕದಲ್ಲಿ ಪಡೆದು ವೀರಶೈವ ಮತ ಚಂದ್ರಮನ ನಭೋಮಂಡಲದಲ್ಲಿ ಶೋಭಾಯಮಾನವಾದ ತಾರೆಗಳಂತೆ ಪ್ರಕಾಶಿಸುತ್ತಲಿರುವರು!

ನಾವಿಂದು ನಮ್ಮ ವೀರಶೈವ ಮಹತಿಯೆಂಬ ಲೇಖನದಲ್ಲಿ ಬಸವಣ್ಣನವರ ಸಮಕಾಲೀನರಾದ ಪ್ರಭುದೇವ ಅಥವಾ ಅಲ್ಲಮಪ್ರಭು ಎಂಬ ವಿಭೂತಿಯ ಚರಿತ್ರೆಯ ವಿಷಯವನ್ನೇ ಚರ್ಚಿಸಬೇಕಾಗಿದೆ. ಅದುಕಾರಣವೇ ಅಂದಿನ ಶರಣರ ಧ್ಯೇಯವನ್ನು ಹೇಳುವದಕ್ಕಾಗಿ ಇಂತು ಉಪೋದ್ಘಾತ ಮಾಡಿದುದು.

## — ಪ್ರಭುದೇವರು. —

ಪ್ರಭುದೇವನು ವೀರಶೈವ ಮತೋದ್ಧಾರ ಕಾರ್ಯದಲ್ಲಿ ಎಲ್ಲರಿಗಿಂತ ಹೆಚ್ಚಾಗಿ ಕೆಲಸಮಾಡಿದವನು. ಅಂತೆಯೇ ಅನೇಕ ವೀರಶೈವ ಕವಿಗಳು, ಇವನ ವಿಷಯಕವಾಗಿ ಗ್ರಂಥಗಳನ್ನು ಬರೆದಿರುವರು. ತತ್ವಾನ್ವೇಷಣೆಯ ಕಾರ್ಯದಲ್ಲಿ ಇವನನ್ನಾರೂ ಸರಿಗಟ್ಟುವವರು ಇರಲಿಲ್ಲವೆಂದು ಧಾರಳವಾಗಿ ಹೇಳಬಹುದಾಗಿದೆ. ತತ್ವಬೋಧೆಯನ್ನು ಮಾಡುವ ಇವನ ಶೈಲಿಯು ಮೇಲ್ತರದ್ದಾಗಿತ್ತು. ಇವನ ಭಾಷೆಯಲ್ಲಿ ತುಂಬಾ ಜೀವವಿದ್ದಿತು. ಅಂತೆಯೇ ಇವನು ವೀರಶೈವರಲ್ಲಿ ಪರಮಗುರುವೆಂದೆನಿಸಿ, ಒಳ್ಳೇ ಪ್ರಖ್ಯಾತಿಯನ್ನು ಪಡೆದನು. ಇವನಿಗೆ ಶ್ರೀ ಮದ್ದೇಶಿಕ ಷಟ್‌ಸ್ಥಲ ಚಕ್ರವರ್ತಿ, ಬ್ರಹ್ಮಾನಂದ ಪರಶಿವ ಮೂರ್ತಿ, ವಿರಕ್ತಶಿಖಾಮಣಿ, ಮಾಯಾಕೋಳಾಹಳ, ಇತ್ಯಾದಿ ಬಿರದುಗಳಿಂದ ಹಿಂದಿನ ವೀರಶೈವ ಗ್ರಂಥಕಾರರು ಇವನನ್ನು ವಿಶೇಷಿಸಿದ್ದಾರೆ.

**ಪ್ರಭುದೇವನ ಕಾಲ :—** ವೀರಶೈವ ಧರ್ಮ ಗ್ರಂಥವಾದ ಜ್ಯೋತಿರ್ಮಯ ಶಾಂಭವೀ ಜ್ಞಾನದೀಕ್ಷಾಬೋಧೆ ಎಂಬ ಗ್ರಂಥದಲ್ಲಿ ಬಸವಾದಿ ಪ್ರಮಥ ಗಣಗಳಿಗೆ ಇವನು ತನ್ನ ಬೆಡಗಿನ ವಚನಗಳಿಂದ ತತ್ವೋಪದೇಶ ಮಾಡಿದನೆಂಬದಾಗಿ ಹೇಳಿರುವದರಿಂದ ಇವನು ಬಸವೇಶ್ವರರಿಗಿಂತ ಸ್ವಲ್ಪ ಮುಂಚಿನವನೆಂದು ಊಹಿಸಲು ಅವಕಾಶವಿದೆ. ಹಾಗಿದ್ದರೂ ಕೂಡಾ, ಇವನನ್ನು ಹನ್ನೆರಡನೇ ಶತಮಾನದವನೆಂತಲೇ ಹೇಳುವದು ಇಷ್ಟವಾಗಿದೆ. ಪ್ರಭುದೇವನಿಗೆ ಅನೇಕ ನಾಮಗಳು ಇದ್ದವೆಂದು ವೀರಶೈವ ಗ್ರಂಥಕಾರರು ಹೇಳುವದುಂಟು. ಪ್ರಭುದೇವರ ಸಾಂಗತ್ಯ ಎಂಬದೊಂದು ಗ್ರಂಥದಲ್ಲಿ ಅಲ್ಲಮ ಪ್ರಭು, ಬಸವ ಪ್ರಭು, ಚನ್ನ ಪ್ರಭು, ಮಗಿ ಪ್ರಭು, ಶಾಂತ ಪ್ರಭು, ಎಂಬ ಐದು ನಾಮಗಳು ಕಂಡುಬರುವದು ಆ ಮಾತಿಗೆ ಸಾಕ್ಷಿಯಾಗಿರುವದು.

**ಪ್ರಭುದೇವನ ಚರಿತ್ರೆ :—** ವೀರಶೈವ ಕವಿಗಳಲ್ಲಿ ಅನೇಕರು ಪ್ರಭುದೇವನಲ್ಲಿನ ಗುಣಗಳಿಗೆ ಲುಬ್ಧರಾಗಿ ಅನೇಕ ಗ್ರಂಥಗಳನ್ನೂ ಪುರಾಣಗಳನ್ನೂ ರಚಿಸಿರುವರು. ಅವುಗಳಲ್ಲಿ ಪ್ರಭುಲಿಂಗಲೀಲೆ, ಪ್ರಭುದೇವರ ಪುರಾಣ, ಪ್ರಭು ನಟನ ತಾರಾವಳಿ, ಪ್ರಭು ಚರಿತ್ರೆ, ಪ್ರಭು ಗೀತೆ, ಮುಂತಾದವುಗಳೇ, ಮುಖ್ಯವಾದವು. ಹೀಗಿದ್ದರೂ ಕೂಡಾ ಇವುಗಳಲ್ಲಿ ಐತಿಹಾಸಿಕ ದೃಷ್ಟಿಯಿಂದ ವಿಶೇಷ ಸಂಗತಿ ಪ್ರಭುದೇವನ ಸ್ಥಲ-ಕಾಲಗಳ ವಿಷಯಕ್ಕೆ ದೊರೆಯುವದಿಲ್ಲ. ಆದರೂ ಚನ್ನಬಸವ ಪುರಾಣ, ಪ್ರಭುಲಿಂಗಲೀಲೆ, ಈ ಎರಡರಲ್ಲಿ ದೊರೆಯುವ ಅಂಶಗಳನ್ನು ಇಲ್ಲಿ ಕೊಡಲಾಗಿದೆ—

ಇವನು ವೀರಶೈವ ಕವಿ. ಈತನ ತಂದೆ ನಿರಹಂಕಾರಿ, ತಾಯಿ ಸುಜ್ಞಾನಿ. ಇವನ ಚಿತ್ತ-ಸ್ಥೈರ್ಯವನ್ನು ಪರೀಕ್ಷಿಸುವದಕ್ಕಾಗಿ ಪಾರ್ವತಿ ದೇವಿಯು ತನ್ನ ತಾಮಸಗುಣವನ್ನು ಸ್ತ್ರೀರೂಪವಾಗಿ ಹುಟ್ಟುವಂತೆ ಆಜ್ಞಾಪಿಸಿ ಭೂ ಲೋಕಕ್ಕೆ ಅಟ್ಟಿದಳು. ಅದು ಬೆಳವಲು ನಾಡಿನ ಬನವಸೆಯ ರಾಜನಾದ ಮಮಕಾರ ನೃಪನ ಪತ್ನಿ ಮೋಹಿನಿ ದೇವಿಯ ಗರ್ಭದಲ್ಲಿ ಮಾಯೆಯೆಂಬ ಹೆಣ್ಣುಮಗುವಾಗಿ ಜನಿಸಿತು. ಪ್ರೌಢಾವಸ್ಥೆ ಹೊಂದಿದ ಆ ಹೆಣ್ಣು ಪರಮ ವಿರಕ್ತ ಶಿಖಾಮಣಿಯಾದ ಇವನನ್ನು ( ಪ್ರಭುದೇವನನ್ನು ) ಮೋಹಗೊಳಿಸಲು ಯತ್ನಿಸಿದಾಗ ಇವನು ಅವಳನ್ನು ತಿರಸ್ಕರಿಸಿದನು. ಇವನು ಅನಿಮಿಷನ ಕೈಯ ಲಿಂಗವನ್ನು ಸ್ವೀಕರಿಸಿದನು. ಗೊಗ್ಗಯ್ಯ ಮುಕ್ತಾಯಗಳಿಗೆ ಬೋಧಿಸಿ ಮುಕುತಿಯನ್ನಿತ್ತನು. ಸೊನ್ನಲಗಿಗೆ ಹೋಗಿ ಸಿದ್ಧರಾಮನಿಗೆ ಶಿವತತ್ವವನ್ನು ತಿಳಿಸಿ ಅವನೊಡನೆ ಕಲ್ಯಾಣಕ್ಕೆ ಹೋಗಿ ಬಸವನಿಂದ ಸತ್ಕೃತನಾಗಿ ಶೂನ್ಯಪೀಠವನ್ನೇರಿದನು. ಬಳಿಕ ಶ್ರೀಶೈಲಕ್ಕೆ ಹೋಗಿ ಅಲ್ಲಿ ಮಹಾದೇವಿಗೆ ನಿರ್ವಾಣ ಪದವಿಯನ್ನು ಉಪದೇಶಿಸಿ ಬಸವನಿಗಿಂತ ಸ್ವಲ್ಪಕಾಲ ಮುಂಚಿತವಾಗಿ ಕದಳಿಯ ಬನದಲ್ಲಿ ಬೈಲಾದನು.

# ಪ್ರಭುದೇವನ ಸಾಹಿತ್ಯ ಕಾರ್ಯ.

೧ **ಷಟ್‌ಸ್ಥಲ ಚರಿತ್ರೆ:—** ಇದೊಂದು ವೀರಶೈವ ಮತ ತತ್ವವನ್ನು ಹೇಳುವ ಗ್ರಂಥವಾಗಿದೆ. ಸಾಮಾನ್ಯವಾಗಿ ಬಸವ ಚನ್ನಬಸವ ಇವರುಗಳ ಈ ಮೊದಲು ಬರೆದ ವಿಷಯಗಳೇ ಇದರಲ್ಲಿ ಇವೆ. ಒಟ್ಟು ೬೯೪ ವಚನಗಳಿವೆ. ಇದೇ ಗ್ರಂಥಕ್ಕೆ ಒಂದು ಟೀಕೆಯನ್ನು ವೀರಶೈವ ಶರಣರಲ್ಲಿ ಒಬ್ಬರು ಬರೆದಿದ್ದಾರೆ. ಪ್ರಭುದೇವನು ವಚನಗಳೆಲ್ಲವನ್ನು ತನ್ನ ಇಷ್ಟ ದೈವತವಾದ ಗುಹೇಶ್ವರಲಿಂಗಕ್ಕೆ ಅರ್ಪಿಸಿರುವದರಿಂದ ವಚನಗಳ ಕೊನೆಯಲ್ಲಿ ಗುಹೇಶ್ವರವೆಂದೇ ಅಂಕಿತವಿದೆ. ವಚನಗಳಲ್ಲಿ ಅತ್ಯಂತ ತೀವ್ರವಾದ ಭಕ್ತಿರಸವು ತುಂಬಿ ತುಳುಕುತ್ತದೆ. ಅದುಕಾರಣವೇ ಇಲ್ಲಿ ಒಂದು ವಚನವನ್ನು ವಾಚಕರಿಗಾಗಿ ಕೊಡಲಾಗಿದೆ.

ಸುತ್ತಿ ಸುತ್ತಿ ಬಂದೊಡಿಲ್ಲ | ಲಕ್ಷ ಗಂಗೆಯ ಮಿಂದೊಡಿಲ್ಲ |
ತುಟ್ಟತುದಿಯ ಮೇರುಗಿರಿಯ | ಮೆಟ್ಟ ಕೂಗಿದಡಿಲ್ಲ |
ನಿತ್ಯನೇಮದಿಂದ ತನು | ಮುಟ್ಟಿಕೊಂಡಡಿಲ್ಲ | ನಿಚ್ಚಕ್ಕೆ
ಮನವನಂದದಿಂದಿಗೆ ಅತ್ತಿತ್ತ ಹರಿಯಲೀಯದೆ |
ಚಿತ್ತದಲಿ ಧರಿಸಬಲ್ಲಡೆ ಬಚ್ಚಬರಿಯ ಬೆಳಗು ಗುಹೇಶ್ವರಲಿಂಗಾ ||೧||

೨ **ಶೂನ್ಯ ಸಂಪಾದನೆ :—** ಭಕ್ತಿ ಮಾರ್ಗವನ್ನುಪದೇಶಿಸುವ ಅನೇಕ ಗ್ರಂಥಗಳಲ್ಲಿ ಇದೊಂದಾಗಿದೆ. ವೀರಶೈವ ಶರಣರು ಕಾಯಕ ಹಾಗೂ ಅಚಲವಾದ ಭಕ್ತಿ ಇವೆರಡರಿಂದಲೇ ತಮ್ಮ ಅಂತ್ಯಮ ಧ್ಯೇಯವನ್ನು ಕಂಡುಕೊಂಡು ತಾವು ಅನುಭವಿಸಿದುದನ್ನೇ ಗ್ರಂಥರೂಪವಾಗಿ ಈ ರೀತಿ ಬರೆದಿಟ್ಟ ಕನ್ನಡ ಸಾಹಿತ್ಯಸೇವೆ ಗೈದದ್ದು ಕನ್ನಡಿಗರ ಮೇಲೊಂದು ದೊಡ್ಡ ಉಪಕಾರವೇ ಸರಿ. ಇರಲಿ. ಶೂನ್ಯ ಸಂಪಾದನೆಯೊಳಗಿನ ಇದೊಂದು ಪದ್ಯವನ್ನು ನೋಡಿ! ಅದರಲ್ಲಿನ ಭಾಷೆಯು ಎಷ್ಟು ಕಾವ್ಯಮಯವಾಗಿದೆ, ರಸವತ್ತಾಗಿದೆ ; ತಿರುಳಿನದಾಗಿದೆ!

ಕನಕಾಚಲದಲ್ಲಿ ದಿನನಾಯಕನೆಂಬ ರತ್ನಹುಟ್ಟ | ಅಹುದಲ್ಲ
ಎಂಬ ಕೊಳಗದ ಕೊರಳಲ್ಲಿ | ಅಳೆಯುತ್ತೈದಾರೆ ಕೊಳಗದ
ಕೊರಳ್ ತುಂಬಿ ಅಳೆವಾತನ ಹೃದಯ ತುಂಬಿ ಗುಹೇಶ್ವರ
ಲಿಂಗದ ಕಂಗಳು ತುಂಬಿ ಮಂಗಳವಾಯಿತು ಭಕ್ತಿಯೇ
ಓಗರವಾಗಿ | ಸತ್ಯವೇ ಮೇಲೋಗರವಾಗಿ ನಿಜತತ್ವವೇ
ಸರಿಯಾಗಿ | ಗುಹೇಶ್ವರ ಲಿಂಗಕ್ಕೆ ಬಲ್ಲವ ಸಂಗನಬಸವಣ್ಣನಲ್ಲದಿಲ್ಲ ||೧||

೩ **ಮಂತ್ರಗೋಪ್ಯ :—** ವೀರಶೈವ ಧರ್ಮದ ಧರ್ಮಸಿದ್ಧಾಂತ ಪ್ರಮೇಯಗಳೇ ಇದರಲ್ಲಿ ತಿಳಿಗನ್ನಡದ ಸರಳವಾದ ಭಾಷೆಯಲ್ಲಿ ಹೇಳಲ್ಪಟ್ಟದೆ. ಆದರೂ

ವೇದಾಂತ ವಿಷಯಕವಾದ ಜ್ಞಾನವಿಲ್ಲದವಿನಃ ವಚನಗಳಲ್ಲಿನ ಅರ್ಥವು ಸಹಜವಾಗಿ ಹೊಳೆಯುವಂತಿಲ್ಲ. ಒಟ್ಟಾರೆ ಈ ಗ್ರಂಥದಲ್ಲಿ ೨೭ ವಚನಗಳಿವೆ. ಅದರಲ್ಲಿನ ದೊಂದು ಇಲ್ಲಿ ಉದಹರಿಸಲಾಗಿದೆ.

ಎಂಟೆಸಳ ಕಮಲದಾ ನವ ಬ್ರಹ್ಮಪುರದೊಳಗೆ | ಎಂಟು ಬೀದಿ
ಯೊಳೆಂಟು ಕರಿಗಳುಂಟು | ಎಂಟು ಕರಿಗಳ ಸುಟ್ಟು ಕಂಟಕಗಳ
ಗೆಲಿದು | ದಾಂಟಿದೆನು ಸಂಸಾರ ಸಾಗರವನು ||೧||

೪ ಸೃಷ್ಟಿಯ ವಚನ:— ವೀರಶೈವರಿಗುಚಿತವಾದ ಶೈವಸಿದ್ಧಾಂತದ ತತ್ವಗಳ ಅರ್ಥವನ್ನೇ ಕನ್ನಡದಲ್ಲಿ ಕೊಡಲಾದ ಇದೊಂದು ಗ್ರಂಥವು ಶಿವಾದ್ವೈತ ಸಿದ್ಧಾಂತದಲ್ಲಿ ಅತಿತೊಡಕಾದ ಪ್ರಮೇಯಗಳ ಅರ್ಥಗಳನ್ನು ಮೇಲ್ಕಾಣಿಸಿದ ಸೃಷ್ಟಿಯ ವಚನವೆಂಬ ಗ್ರಂಥದಲ್ಲಿ ಕೊಟ್ಟಿರುವ ಬಗೆಯನ್ನಿಷ್ಟು ನೋಡಿರಿ ಅದರಲ್ಲಿನ ವೇದಾಂತದ ತಿರುಳು ಎಷ್ಟು ಗಹನವಾಗಿದೆ.

ತತ್ಪದವೇ ಲಿಂಗ, ತ್ವಂಪದವೇ ಅಂಗ, ಈ ಎರಡರ ಐಕ್ಯವೇ ಅಸಿ.

## ( ೩೬ ನೇ ವಚನ. )

೫ ಬೆಡಗಿನ ವಚನ :— ಜ್ಯೋತಿರ್ಮಯ ಶಾಂಭವೀ ದೀಕ್ಷಾಬೋಧೆ ಎಂಬದೊಂದು ವೀರಶೈವರ ಧರ್ಮಗ್ರಂಥದಲ್ಲಿ ವೀರಶೈವವು ಈಶ್ವರ ಪ್ರೋಕ್ತವು ಎಂಬದಾಗಿ ಹೇಳಲಾಗಿದೆ. ಅದೇ ಸಂಗತಿಯನ್ನೇ ಅಲ್ಲಮಪ್ರಭುವು ಕಲ್ಯಾಣ ಪಟ್ಟಣದಲ್ಲಿ ಬಸವಾದಿ ಪ್ರಮಥಗಣಗಳಿಗೆ ಬೆಡಗಿನ ವಚನಗಳ ರೂಪದಲ್ಲಿ ಉಪದೇಶ ಮಾಡಿದನು. ವಚನಗಳು ಎರಡೆಂಬತ್ತು ಕೋಟಿ ಸಂಖ್ಯೆಗಳಿಂದ ಕೂಡಿದ್ದಾಗಿದೆ. ಇಷ್ಟು ವಚನಗಳನ್ನು ರಚಿಸಿ ಹೇಳುವದು ಅದೇನು ಸಾಮಾನ್ಯ ಸಹಾಸವೇ? ವೀರಶೈವ ಶರಣರಲ್ಲಿ ಇಂತಹ ಅದ್ಭುತವಾದ ಕಾರ್ಯವನ್ನು ಪ್ರಭುದೇವನ ವಿನಃ ಆರೂ ಮಾಡಿರಲಿಲ್ಲವೆಂದು ನಿಃಸಂದೇಹವಾಗಿ ಹೇಳಲಾಗಿದೆ. ಇಂತು ವಚನಗಳನ್ನು ರಚಿಸಿ ಪ್ರಭುದೇವನು ಗೈದ ಸಾಹಿತ್ಯಸೇವೆಯ ಪ್ರಮಾಣವನ್ನು ಅಳಿಯುವದು ಸಾಧ್ಯವಿಲ್ಲ.

ಮೇಲಿನ ಗ್ರಂಥಗಳನ್ನಲ್ಲದೆ ಪ್ರಭುದೇವನು ಮಂತ್ರಗೌಪ್ಯ, ಕಾಲಜ್ಞಾನ ಮುಂತಾಗಿ ಗ್ರಂಥಗಳನ್ನು ರಚಿಸಿದ್ದಾನೆ. ಒಟ್ಟಾರೆ ಪ್ರಭುದೇವನ ಧರ್ಮಕಾರ್ಯಕ್ಕಾಗಿ ವೀರಶೈವರು ಸಾಹಿತ್ಯ ಸೇವೆಗಾಗಿ ಅಖಿಲ ಕನ್ನಡಿಗರೂ ಎಷ್ಟು ಬಗೆಯಾಗಿ ಕೃತಜ್ಞತೆಯನ್ನರ್ಪಿಸಿದರೂ ತೀರುವಂತಿಲ್ಲ.

---

ಮೇಲಿನಲೇಖವನ್ನು ಬರೆಯುವಾಗ ನನಗೆ ಸಹಾಯಕವಾದ ಕವಿಚರಿತೆ ಹಾಗೂ ಪ್ರಭುದೇವರ ಸಾಂಗತ್ಯ (ಪ್ರಕಾಶಕರಿಗೆ) ಗ್ರಂಥಗಳ ಬರೆಯುಗರಿಗೆ ನಾನು ತುಂಬಾ ಋಣಿಯಾಗಿದ್ದೇನೆ.

# ಪ್ರಪಂಚದಲ್ಲಿ ಅತಿದೊಡ್ಡವು.



೧. ಅತ್ಯುತ್ತಮವಾದ ಶಿಖರ — ಇದು ಹಿಮಾಲಯದಲ್ಲಿ ಆದೆ. ಇದರ ಹೆಸರು " ಗೌರೀಶಂಕರ " ಇದು ೨೯೦೦೨ ಫೂಟು ಎತ್ತರವಿದೆ.

೨. ಅತ್ಯುನ್ನತವಾದ ಮನೆ — ಇದು ಅಮೇರಿಕಾ ದೇಶದಲ್ಲಿನ ನ್ಯೂಯಾರ್ಕ ನಗರದಲ್ಲಿದೆ. ಇದರ ಹೆಸರು " ಎಂಡಾಯರ ಸ್ಟೇಟ ಬಿಲ್ಡಿಂಗ " ಇದು ೧೨೫೦ ಫೂಟು ಎತ್ತರವಿದೆ.

೩. ಅತ್ಯಂತ ದೊಡ್ಡ ಹಡಗ — ಜಗತ್ತಿನಲ್ಲಿ ಅತಿ ದೊಡ್ಡದಾದ ಹಡಗ ಒಂದು ಕಟ್ಟಲ್ಪಟ್ಟದೆ ಅದರ ಹೆಸರು " ಮ್ಯಾಜೆಸ್ಟಿಕ್ " ಅದು ೪೫೯೨೬೦೦ ಮಣ ಭಾರವಾಗಿದೆ.

೪. ಅತ್ಯಂತ ದೊಡ್ಡ ಪಟ್ಟಣ — ಇದು ಇಂಗ್ಲಂಡಿನಲ್ಲಿದೆ ಅದರ ಹೆಸರು " ಲಂಡನ್ " ಜನಸಂಖೆ ೭೭೪೭೭೧೪೩. ಇದು ಪ್ರತಿ ವರುಷವೂ ಬೆಂಗಳೂರಿನಷ್ಟು ದೊಡ್ಡದಾಗುತ್ತದೆಯೆಂತೆ !

೫. ಅತ್ಯಂತ ದೊಡ್ಡ ಪುಸ್ತಕ ಭಾಂಡಾರ — ಇದು ಫ್ರಾನ್ಸ ದೇಶದ ರಾಜಧಾನಿಯಾದ ಪ್ಯಾರಿಸನಲ್ಲಿ ಇವೆ. ಇದರಲ್ಲಿ ಸುಮಾರು ೧೦೦,೦೦,೦೦,೦೦೦ ಪುಸ್ತಕಗಳು ಅವೆ.

೬. ಅತ್ಯಂತ ಉದ್ದವಾದ ನದಿ — ಇಂತಹ ಒಂದು ನದಿಯು, ದಕ್ಷಿಣ ಅಮೇರಿಕೆಯಲ್ಲಿ ಅದೆ. ಅದರ ಹೆಸರು " ಅಮೇಜಾನ್ " ಉದ್ದಳತೆ ೪೦೦೦ ಮೈಲು.

" ಮಕ್ಕಳ-ಪುಸ್ತಕ. "

ಇಲ್ಲದೆ ತಪಸ್ಸು ಮಾಡುತ್ತಿರುವನೆಂಬದಾಗಿ ಹೇಳುವದುಂಟೆ? ಆ ಮಾತನ್ನು ಧರ್ಮದ ಹುಚ್ಚು ಹಿಡಿದವರಾದ ಉಳಿದವರು ಒಪ್ಪಿದರೆ ಒಪ್ಪಲಿ. ನೀನಾದರೂ ಒಪ್ಪಬೇಡ. ಇಂತಹ ಸೋಗು ಹಾಕಿದ ಆ ಕಳ್ಳರು ಜನರ ಸುಳುವಿಲ್ಲದ ರಾತ್ರಿ-ಕಾಲದಲ್ಲಿ ಕಷ್ಟು ಭುಂಜಿಸುವವರೇ ಬಹಳ. ಇದು ನಿನಗೇನಾದರೂ ಗೊತ್ತುಂಟೋ?

**ನಿರೀಶ್ವರ :—** ಹೀಗೋ! ಅಂದಮೇಲೆ ಅವರ ಡಾಂಭಿಕತನದ ಈ ಸೋಗಿಗೆ ಇಷ್ಟು ಜನರು ಮರುಳಾಗಲು ಕಾರಣವೇನು?

**ಅಖಂಡೇಶ್ವರ :—** ಸಮಾಜವು ಯಾವಾಗಲೂ ಅಂಥವಾದದು. ಒಬ್ಬರಾದರೂ ಒಂದು ಸುಳ್ಳು ಸುದ್ದಿಯನ್ನು ಹುಟ್ಟಿಸಿ ಹರಡುತ್ತ ನಡೆದರೆಂದರೆ ಅದು ಸಟೆಯೋ, ದಿಟವೋ ಎಂಬುದನ್ನು ಪರೀಕ್ಷಿಸುವ ತೊಂದರೆಗೆ ಯಾರು ಹೋಗುವರು? ಹೋಗುವದೇ ಇಲ್ಲ. ಆಯಿತು. ಮುಂದೆ ಆ ಹುಚ್ಚ ಕಲ್ಪನೆಯೇ ಜನರಲ್ಲಿ ನಿಜವಾದುದೆಂದು ಪರಿಣಮಿಸುವದು.

**ನಿರೀಶ್ವರ :—** ಈಗ ಮಾತ್ರ ನನ್ನ ಭ್ರಮೆಯು ದೂರಾಯಿತು. ತಮ್ಮೀ ತರ್ಕವೂ ಅನುಮಾನವೂ ನಿಜವಾದವು. ಅಂತಲೇ ತಮಗೆ ಕುತರ್ಕನ್ಯಾಯ ವಿಶಾರದ ಎಂಬ ಬಿರುದು ಬಂದಿರಬಹುದಲ್ಲವೇ?

**ಅಖಂಡೇಶ್ವರ—** ಅಹುದು ನಡೆ. ಆ ಬ್ರಾಹ್ಮಣನ ಹಾಳು ವಿಷಯವನ್ನು ತಕ್ಕೊಂಡು ಏನು ಮಾಡುತ್ತೀ? ಇನ್ನು ಸ್ವಲ್ಪ ಕಾಲದಲ್ಲಿಯೇ ಅವನ ಮೋಸವು ಹೊರಬಿತ್ತೆಂದರೆ ತಾನೇ ಆ ಕಳ್ಳನು ಊರಬಿಟ್ಟು ಓಡಿ ಹೋಗುವನು. ಹೀಗೆ ಎಷ್ಟೋ ಜನರು ಹೋದದ್ದನ್ನು ನಾವು ನೋಡಿಲ್ಲವೋ?

**ನಿರೀಶ್ವರ—** ನಡೆಯಿರಿ ಹಾಗಾದರೆ ನಮ್ಮ ಹೊಟ್ಟೆಯ ಉದ್ಯೋಗಕ್ಕೆ. ಇಂದು ತಮ್ಮ ಟೊಪ್ಪಿಗೆಯ ಪರವಣಿ ಚಕ್ರವು ಯಾರಲ್ಲಿ ಬಂದಿದೆ?

**ಅಖಂಡೇಶ್ವರ—** ಇರಲಿ ಸುಮ್ಮನೆ ನಡೆಯೋ. ನಿನಗೆ ಹೇಗಾದರೂ ನಾಲ್ಕು ಮುಷ್ಟು ದೊರೆತರಾಯಿತು.

**ನಿರೀಶ್ವರ—** ಆಗಲಿ ಮಹಾಸ್ವಾಮಿ! ನಡೆಯಿರಿ ಹಾಗಾದರೆ
(ಹೊಗಡುವರು)

## ೩ ನೇ ಪ್ರವೇಶ.

**ಸ್ಥಳ—** ಗಣಪತಿಯ ದೇವಾಲಯ (ನಂದಾದೀಪವು ಉರಿಯುತ್ತಿದೆ.)

**ದೃಶ್ಯ—** ಹರಿಭಟ್ಟರು ನಿದ್ರಿಸುತ್ತಿರುವರು. (ಶ್ರೀ ಗಜಾನನು ತನ್ನ ನಿಜ ರೂಪದಲ್ಲಿ ಪ್ರಕಟನಾಗಿ ಪ್ರವೇಶಿಸುವನು.)

**ಶ್ರೀ ಗಜಾನನ** — ಎಲೋ ಬ್ರಾಹ್ಮಣನೆ! ನಿನ್ನ ಉಗ್ರವಾದ ತಪಸ್ಸಿಗೆ ನಾನುಮೆಚ್ಚಿರುವೆನು. ಬರುವ ಕಾಲದಲ್ಲಿ ನಿನ್ನ ಮನೆತನಕ್ಕೆ ರಾಜ್ಯವೈಭವವು ಪ್ರಾಪ್ತವಾಗುವದು. ಈ ಮುಂದೆ ನಿನಗೆ ರಾಜಾಶ್ರಯವು ದೊರೆತು ನಿನ್ನ ಉದರ ಪೋಷಣೆಯ ಚಿಂತೆಯು ದೂರಾಗುವದು. ಏನೂ ಯೋಚಿಸಬೇಡ. ನೀನಿಲ್ಲಿಂದ ಹೊರಡು.

**ಹರಿಭಟ್ಟರು** — (ಒಮ್ಮೆಲೆ ಎಚ್ಚತ್ತು) ಅಹಹಾ ಎಂತಹ ಮನೋಹರ ವಾದ ರೂಪವದು! ಹೋಯಿತು! ಕಣ್ಮರೆಯಾಯಿತು! ನಾನೇನು ಸ್ವಪ್ನದಲ್ಲಿರು ವೆನೋ ಅಥವಾ ಜಾಗ್ರತಾವಸ್ಥೆಯಲ್ಲಿರುವೆನೋ? (ಕಿವಿಗೊಟ್ಟು) ಅದೋ ಪಕ್ಷಿ- ಗಳ ಕಿಲಿಕಿಲಾಟವು ಕೇಳಬರುತ್ತದೆ. ಇದೀಗ ಬೆಳಗಿನ ಝಾವವು. ಈಗ ನಿದ್ರೆ ಯೆಲ್ಲಿ? ತಿಳಿಯಿತು. ಆವನಿಗಾಗಿ ನಾನು ತಪಸ್ಸನ್ನಾಚರಿಸುತ್ತಿದ್ದೆನೋ ಆ ಶ್ರೀ ಗಜಾನನೇ ಪಾಶಾಂಕುಶಧಾರಿಯಾಗಿ ಸಕಲಾಭರಣಗಳಿಂದ ಭೂಷಿತನಾಗಿ ಬಂದು ನಿಂತಂತಾಗಿತ್ತು. ಅಹುದು. ಆ ಮೂರ್ತಿಯು ನನ್ನ ಉಪಾಸ್ಯದೇವತೆಯೇ ಅಹುದು. ಅದರಲ್ಲಿ ಏನೂ ಸಂಶಯವಿಲ್ಲ. ಧನ್ಯನು! ನಾನೇ ಧನ್ಯನು! ಆಯಿತು ನನ್ನ ಮನದಾಸೆಯು ಪೂರ್ಣವಾದಂತಾಯಿತು. ದೇವಾ ನಿನ್ನ ಆ ಮನೋಹರ ವಾದ ರೂಪವನ್ನು ನಿರಂತರವಾಗಿನೋಡುವವರಲ್ಲಿಯೇ ನನ್ನನ್ನು ಏಕೆ ಇರಿಸಲಿಲ್ಲ? ಹಾಗೆ ಮಾಡಿದ ಪಕ್ಷಕ್ಕೆ ನಿನ್ನ ದರುಶನದ ತೃಪ್ತಿಯು ಆಗಬಹುದೆಂಬ ಭಯ- ದಿಂದಲೋ? ಮತ್ತೆ ನಿನ್ನ ಆ ದರುಶನದ ಲಾಲಸೆಯು ಹೆಚ್ಚಾಗಬೇಕೆಂದಲ್ಲವೆ ನಿನ್ನ ಇಚ್ಛೆಯು. ನಿನ್ನ ಈ ವ್ಯಾಪಾರವು ಯಾರಿಗೂ ತಿಳಿಯದು. ಬಾಲಕರಿಗೆ ಅವರ ಮನದಿಚ್ಛೆಯ ಪದಾರ್ಥಗಳನ್ನು ಒಮ್ಮೆ ತೋರಿಸಿ ಮತ್ತೆ ಕಸಿದುಕೊಂಡರೆ ಹೇಗೆ ಅವರು ಆ ಪದಾರ್ಥಕ್ಕಾಗಿ ಹೆಚ್ಚು ಹೆಚ್ಚು ಆತುರವಾಗಿ ಬಳಲುವರೋ ತದ್ವತ್ ನಿನ್ನ ಭಕ್ತರುಗಳಾದ ನಮಗೆ ಹೀಗೆ ಬಳಲಿಸುವಿ. ಅದರಲ್ಲಿಯೇ ನಿನಗೆ ಸಂತೋಷವೇ? ಆಗಲಿ ಹೇಗಾದರೂ ನೀನು ಸಂತೋಷ ಪಟ್ಟರೆ ಸಾಕು. ನೀನು ಇರಿಸಿದ ಸ್ಥಿತಿಯಲ್ಲಿ ನಾವು ಇರಲೇ ಬೇಕಲ್ಲವೆ? ಆದ್ದರಿಂದ ಭೋ ದೇವಾ! ಗಜಾನನಾ!! ನನ್ನ ಆಯುಷ್ಯದ ಒಂದು ಅವಸ್ಥೆಯ ಕಾಲವಂತೂ ಸುಖ ಪರಿ ಯವಸಾಯಿಯಾಯಿತು. ಇನ್ನು ಎರಡನೆ ಅವಸ್ಥೆಯಲ್ಲಿ ಕೂಡ ಹೀಗೆಯೇ ಯಶ ದೊರೆಯುವಂತೆ ಕರುಣಿಸು. ಇಷ್ಟೇ ನಿನ್ನ ಪಾದಾರವಿಂದದಲ್ಲಿ ನಾನು ಬೇಡು- ವದು.

ರಾಗ— ಸಾರಂಗ ತಾಳ- ದಾದರಾ.

**ವಂದನಂ ಮಹಾ ದೇವಾ । ಭೋ ಘನಾಸುಖವನೀವಾ ॥**
**ಚಂದ್ರ ಮೌಳಿ ಸುತನೆ ಭಾವಾ ॥ಪ॥**
**ನಿನ್ನಯಾ ಚರಣ ಸೇವಾ । ನನ್ನಿಯಿಂ ಗೈಯೆ ನರರಕಾವಾ ॥**
**ಸನ್ನುತಾ ದೇವಾದಿ ದೇವಾ ॥೧॥**

# ೨ ನೇ ಅಂಕು.

## ೧ ನೇ ಪ್ರವೇಶ.

**ಸ್ಥಳ—** ಕೊಂಕಣದೊಳಗಿನ ಒಂದು ಊರು.

**ದೃಶ್ಯ—** ಒಂದು ಮನೆಯಲ್ಲಿ ದಿನಕರಪಂತ ಹಾಗೂ ಭಾಸ್ಕರಪಂತ ಇವರಿಬ್ಬರು ಮಾತಾಡುತ್ತ ಕುಳಿತಿರುವರು !

**ಭಾಸ್ಕರ ಪಂತ—** ಕೇಳಿದಿರಾ ! ನಮ್ಮ ಆ ಕೊತವಡೆಯ ಹರಿಭಟ್ಟರ ದೈವಿಕ ಭಾವನೆಯ ಫಲವನ್ನು ! ಅತಿಶಯವಾಗಿ ದಾರಿದ್ರಾವಸ್ಥೆಯಲ್ಲಿದ್ದ ಆತನು ಒಮ್ಮಿಂದೊಮ್ಮೆ ಸಂಸಾರದಲ್ಲಿ ವಿರಕ್ತಿಯನ್ನು ಹೊಂದಿ ಅಲ್ಲಿಯೇ ತಮ್ಮ ಊರಲ್ಲಿ ಶ್ರೀ ಗಜಾನನನ್ನು ಕುರಿತು ಏಕೋಭಾವದಿಂದ ತಪಸ್ಸುಮಾಡಿದುದಕ್ಕೆ ಅವನದೆಷ್ಟು ಕಲ್ಯಾಣವಾಯಿತು. ಗುರುತು ಪರಿಚಯವಿಲ್ಲದಲೆ ಆತನಿಗೆ ಈಚಲಕರಂಜೀ ಸಂಸ್ಥಾನಿಕರ ಆಶ್ರಯವು ದೊರೆಯಿತು. ಆ ಮುಂದೆ ಪೇಶ್ವೆಯರ ಆಶ್ರಯವು ದೊರೆತಿದ್ದು ಸಧ್ಯಕ್ಕೆ ಆತನು ತನ್ನ ಕುಟುಂಬ ಸಹಿತವಾಗಿ ಪುಣೆಯಲ್ಲಿ ಆನಂದ-ದಿಂದ ಕಾಲಕಳೆಯುತ್ತಿರುವನು. ಅವನ ಸಂಸಾರದ ತಾಪಗಳೆಲ್ಲ ಹಿಂಗಿದವು. ನಿಜವಾಗಿಯೂ ಹರಿಭಟ್ಟನು ಧನ್ಯನು. ಇನ್ನು ಆತನಿಗೆ ತನ್ನ ಮಕ್ಕಳ ವಿದ್ಯಾಭ್ಯಾಸ ಹಾಗೂ ಹೊಟ್ಟೆಯ ಉದ್ಯೋಗ ಮುಂತಾದವುಗಳ ಚಿಂತೆಯು ಕೂಡ ಇಲ್ಲ.

**ದಿನಕರಪಂತ —** “ಯಾದೃಸೀ ಭಾವನಾಯಸ್ಯ” ಎಂದು ಭಗವಂತನ ಉಕ್ತಿಯೇ ಇರುವದಲ್ಲವೇ. ಯಾವ ಯುಗದಲ್ಲಿಯಾದರೇನು ? ಅವರ ಭಾವನೆಗನುಗುಣವಾಗಿ ಭಕ್ತರ ಮನೋರಥಗಳನ್ನು ಪೂರ್ಣಮಾಡಲು ಕರುಣಸಾಗರನಾದ ಆ ಪರಮಾತ್ಮನು ಕೈಕಟ್ಟಿಕೊಂಡು ನಿಂತಿರುವನು. ಅಂದಬಳಿಕ ಹರಿಭಟ್ಟರಿಗೆ ಪೇಶ್ವೆಯರ ಆಶ್ರಯವು ದೊರೆಯುವದಷ್ಟೇ ಏಕೆ ? ಅದಕ್ಕೂ ಹೆಚ್ಚಿನ ವೈಭವವು ಕೂಡ ದೊರೆಯಬಹುದು.

**ಭಾಸ್ಕರಪಂತ —** ಅಂದರೆ ಮತ್ತಾವ ವೈಭವವು ದೊರೆಯಬಹುದೆಂದು ನಿಮ್ಮ ಕಲ್ಪನೆ. ಎಲ್ಲಿ ಸ್ವಲ್ಪ ಹೇಳಿ ನೋಡುವಾ ?

**ದಿನಕರಪಂತ —** ಕೇಳಿ ! ಹರಿಭಟ್ಟರ ಮಕ್ಕಳ ಒಲವು ವಿದ್ಯಾಭ್ಯಾಸಕ್ಕಿಂತ ದಂಡಾಳುತನದ ಕಡೆಗೆ ಹೆಚ್ಚಾಗಿರುವದು. ಅದರಲ್ಲಿ ಪ್ರೌಢರಾದ ಗೋ-ವಿಂದಪಂತರ ಮೋರೆಯ ಮೇಲಂತೂ ನಿಜವಾದ ವೀರಕಳೆಯು ಉಕ್ಕುತ್ತಿರುವದು. ಅಂದ ಬಳಿಕ ಪೇಶ್ವೆಯರಿಗೆ ತಮ್ಮ ವೈರಿಗಳನ್ನು ಸದೆಬಡೆಯುವ ಕಾರ್ಯದಲ್ಲಿ ಸಹಜವಾಗಿ ಗೋವಿಂದ ಪಂತರ ಸಹಾಯವಾಗದೆ ಇರಲಾರದು. ಅಂತಹ ಸಂಧಿಯಲ್ಲಿ ಗೋವಿಂದಪಂತರು ಪೇಶ್ವೆಯರ ಮೆಚ್ಚು ಪಡೆದರೆ ಸಾಕು. ಜಹಾ-ಗೀರು ದೊರೆಯುವದಕ್ಕೆ ಎಷ್ಟು ಅವಕಾಶ. ನೀವೇ ಹೇಳಿರಿ ನೋಡುವಾ.

**ಭಾಸ್ಕರಪಂತ** — ಅದು ಕೂಡಾ ನಿಜವೇ? ಯಾಕಂದರೆ ಶ್ರೀಗಜಾನನು ಹರಿಭಟ್ಟರಿಗೆ ಕೊಟ್ಟ ವರವು ನಿಜವಾಗಬೇಕಲ್ಲವೇ ಮತ್ತೆ? ಗೋವಿಂದ ಪಂತರಿಗೆ ಜಹಾಗೀರು ದೊರೆತಿಲ್ಲನೆ, ಅವನ ಆ ಸತ್ಯ ಸಂಕಲ್ಪನೆಂಬ ಬಿರದು ಯಥಾರ್ಥವಾಗುವದು.

**ದಿನಕರಪಂತ** — ದೈವಿಕ ಭಾವನೆಯ ಫಲವು ಹೀಗೆ ಅನುಭವದಲ್ಲಿ ಕೂಡ ಕಂಡು ಬರುತ್ತಿದ್ದರೂ ಅನೇಕರು ಸುಮ್ಮನೆ ಅಲ್ಲದ-ಸಲ್ಲದ ಸಾಧನೆಗಳನ್ನು ಕಲ್ಪಿಸಿಕೊಂಡು ಸಂಸಾರದ ತಾಪಗಳನ್ನು ಹಿಂಗಿಸಲು ಹೆಣಗುತ್ತಿರುವರಲ್ಲ. ಅವರೆಂತಹ ಮೂಢರು. ದಯಾಘನನಾದ ಪರಮಾತ್ಮನು ಸುಲಭಸಾಧ್ಯನು. ಭಕ್ತಾಧೀನನು. ಭಕ್ತರು ಕೂಗಿದ ಧ್ವನಿಯಲ್ಲಿ ಆರ್ತತೆ. ಹಾಗೂ ಸತ್ಯಾಂಶ ವಿದೆಯೆಂದು ತಿಳಿದ ಕೂಡಲೇ ಅವರಿದ್ದಲ್ಲಿಗೆ ಧಾವಿಸಿ ಬಂದು ಅವರ ಮನೋಭೀಷ್ಟವನ್ನು ಕಲ್ಪಿಸಿಕೊಡುವನು. ಆದ್ದರಿಂದಲ್ಲವೆ ಅವನಿಗೆ ಭಕ್ತವತ್ಸಲನೆಂಬ ಬಿರದು ಸಲ್ಲುವದು.

**ಭಾಸ್ಕರಪಂತ** — ಭಗವಂತನ ವಿಷಯುಕವಾದ ಜ್ಞಾನವನ್ನು ಕೂಡಲೇ ತಿಳಿದುಕೊಳ್ಳುವ ಜನರು ತೀರವಿರಳ. ಕೆಲವರು ತಿಳಿದುಕೊಂಡರೂ ಷಡ್ರಿಪುಗಳ ಬಲಿಗೆ ಶಿಲುಕಿ ಮೂಢರಾಗುವರು. ಇನ್ನು ಕೆಲವರು ದೇವರ ಅಸ್ತಿತ್ವವನ್ನೇ ನಂಬದಷ್ಟು ಮೂರ್ಖರಾಗಿರುವರಲ್ಲ ಇದಕ್ಕೆ ಏನನ್ನಬೇಕು? ಅವರಲ್ಲಿ ದೈವಿಕ ಭಾವನೆಯು ಜನಿಸುವದೇ ಸಾಧ್ಯವಿಲ್ಲ. ಆದರೂ ಅಂತಹ ಜನರನ್ನು ಒಂದಿಲ್ಲೊಂದು ವಿಪತ್ತಿನೊಳಗೆ ನೂಕಿ ನಾಸ್ತಿಕರಾದ ಅವರಿಂದ ಕೂಡ ದೇವನು ತನ್ನ ಅಸ್ತಿತ್ವದ ಬಗ್ಗೆ ಒಪ್ಪಿಗೆಯನ್ನು ತಕ್ಕೊಂಡು ಉದಾಹರಣೆಗಳೆಷ್ಟೋ ನಮ್ಮ ಕಣ್ಣೆದುರಿನಲ್ಲಿ ಅವೆ. ಇನ್ನು ಹರಿಭಟ್ಟರಂತೂ ಮೊದಲೇ ಸಾತ್ವಿಕರು. ಆದರಲ್ಲಿಯೂ ಸಜ್ಜನರಂತೂ ಮೊದಲೇ ಸಾತ್ವಿಕರು ಆದರಲ್ಲಿಯೂ ಸಜ್ಜನರ ಸಹವಾಸದಲ್ಲಿದ್ದವರು. ಅಂತಲೇ ಅವರಿಗೆ ತಮ್ಮ ಸಂಸಾರದ ತಾಪವನ್ನು ಹಿಂಗಿಸುವ ನಿಜವಾದ ಮಾರ್ಗವು ಕೂಡಲೇ ಹೊಳೆಯಿತು. ಅಷ್ಟೊಂದು ಭಾಗ್ಯವು ಸಾಮಾನ್ಯರಾದ ನಮ್ಮ ನಿಮ್ಮ ಹಣೆಯಲ್ಲಿ ಎಲ್ಲಿ ಬರೆದದೆ.

**ದಿನಕರಪಂತ** — ತದ್ವಿಷಯಕವಾದ ಶ್ರದ್ಧೆಯುಳ್ಳವರಾದ ನಮ್ಮಂಥವರಿಗೆ ಕೂಡ ಪರಮೇಶ್ವರನು ಇಂದಿಲ್ಲನಾಳೆ ಕೃಪೆಮಾಡಬಹುದು. ಆದರೂ ಕಾಲವು ಬರಬೇಕಲ್ಲವೆ? ಓಹೋ ನಾನು ಬಂದು ಬಹಳೇ ಹೊತ್ತಾಯಿತು. ಆದ್ದರಿಂದ ನನಗಿನ್ನು ಹೋಗಗೊಡಿರಿ. ಈ ವಿಷಯುವೇ ಹೀಗೆ ಆದ್ಯಂತ ರಹಿತವಾದದ್ದು.

**ಭಾಸ್ಕರಪಂತ** — ಪರಮಾತ್ಮನ ಲೀಲಾ ವಿಷಯುಕವಾದವು ನನಗೆ ಬಹಳವಾಗಿ ಸೇರುವದು. ಆದ್ದರಿಂದ ಹೀಗೆಯೇ ನಮ್ಮ ಮನೆಯ ಕಡೆಗೆ ದಯವಿಟ್ಟು ಬರುತ್ತಾ ಹೋಗಿರಿ.

ಆಡು ಭಾಷೆಯಂತೆಯೇ ನಮ್ಮ ಬರೆಯುವ ಭಾಷೆಯು ಬಹುಮುಖವಾಗಿದೆ. ಇದೊಂದು ನಮ್ಮ ಮಟ್ಟಿಗೆ ಆಶ್ಚರ್ಯಜನಕವಾದ ಮತ್ತು ಶೋಚನೀಯವಾದ ಸಂಗತಿ. ನಮ್ಮ ನಾಡಿನ ಒಂದು ಕಡೆಯ ಲೇಖನಭಾಷೆಗೆ ಮತ್ತೊಂದೊಡನೆ ಏನೂ ಸಂಬಂಧವಿಲ್ಲದಂತೆ ಕಾಣುತ್ತದೆ.

# ನಮ್ಮ ಮಾತು.

ಒಂದೇ ನಾಡಿನ ಒಂದೇ ಭಾಷೆಯೊಳಗೆ ಇಷ್ಟರಮಟ್ಟಿಗೆ ಭೇದವು ಸ್ಫುಟವಾಗಿದೆ. ಇದಕ್ಕಿಂತ ಹೆಚ್ಚಿನ ಕೊರತೆ ಯಾವುದು ನಮ್ಮ ಕನ್ನಡಕ್ಕೆ? ಈ ವೈವಿಧ್ಯವು ಸಾಲದುದಕ್ಕೋ ಎಂಬಂತೆ ನಮ್ಮಲ್ಲಿನ ವಿದ್ವಾಂಸರು ಕೂಡಾ ಪ್ರಯತ್ನಪಟ್ಟಾದರೂ ಕನ್ನಡದ ಬೇರೇ ಬೇರೆ ಆಡುಭಾಷೆಯಲ್ಲಿಯೇ ಗ್ರಂಥಗಳನ್ನು ಬರೆಯಲು ಉಪಕ್ರಮಿಸಿದ್ದಾರೆ.

ಶ್ರೀಮಾನ್ ಕುಕ್ಕಿಲ ಕೃಷ್ಣಭಟ್ಟರು.

ಹನ್ನೆರಡನೇ ಶತಮಾನದಲ್ಲಿ ರಾಷ್ಟ್ರದಲ್ಲಿ ಪರಧರ್ಮದವರ ದಾಳಿಯುಂಟಾದಾಗ, ಶ್ರೀ ಬಸವೇಶ್ವರರು ಜಾತಿಮತ್ಸರವನ್ನಳಿಯಲು ಸಾಧನವಾದ ಹಾಗೂ ರಾಷ್ಟ್ರಪೋಷಕವಾದ ಮತವೊಂದನ್ನು ಸ್ಥಾಪಿಸಿ ಹೇಗೆ ದಿಗಂತ ಕೀರ್ತಿಸಂಪಾದನೆಗೈದರೋ ತದ್ವತ್ ಶಿರಹಟ್ಟಿಯ ಶ್ರೀ ಫಕೀರಸ್ವಾಮಿಗಳವರು ಅನೇಕ ವರುಷಗಳಿಂದ ತಮ್ಮದೊಂದು ಮಠವನ್ನು ಇದೇ ತತ್ವಕ್ಕನುಗುಣವಾದ ಧ್ಯೇಯದಿಂದ ಇಂದಿನವರೆಗೆ ನಡೆಯಿಸಿಕೊಂಡು ಬಂದಿರುವರು. ಅಂತೆಯೇ ಶಿರಹಟ್ಟಿಯಲ್ಲಿ ಸಕಲಮತದವರಲ್ಲಿ ಒಂದು ಬಗೆಯ ಐಕ್ಯಭಾವವು ನಮಗೆ ಗೋಚರವಾಗುತ್ತದೆ. ಈ ತೆರವಾದ ಸ್ಥಿತಿಯು ನನಗೆ ಅನ್ಯತ್ರಕಾಣುವದಿಲ್ಲ. ಈ ಐಕ್ಯದದ್ಯೋತಕವಾಗಿಯೋ ಏನೋ ಎಂಬಂತೆ, ಶ್ರೀ ಶಿರಹಟ್ಟಿ ಸ್ವಾಮಿಗಳವರ ಆಶ್ರಯದಲ್ಲಿ "ವೀರಶೈವ ಚಂದ್ರಿಕೆ" ಎಂಬ ಮಾಸ ಪತ್ರಿಕೆಯು ಹೊರಟಿದೆ. ಚಂದ್ರಿಕೆಯು ಮಂಡಲದಲ್ಲಿ ವೀರಶೈವರೂ ವೀರಶೈವೇತರರೂ ಮತಾಭಿಮಾನಕ್ಕೆಡೆಗೊಡದೆ ಕೇವಲ ಸಾಹಿತ್ಯ ಸೇವೆಗಾಗಿ ಟೊಂಕಕಟ್ಟಿರುವದನ್ನು ಕಂಡು ನನಗೆ ತುಂಬಾ ಸಂತೋಷವಾಗಿದೆ. ದಯಾಘನನಾದ ಪರಮೇಶ್ವರನು ಚಂದ್ರಿಕೆಗೆ ಶುಭೋದಯವನ್ನುಂಟುಮಾಡಲಿ.

ಶಿರಹಟ್ಟಿ. } ವೇ|| ರಾಮಾಶಾಸ್ತ್ರಿಗಳು
ಕೀರ್ತನ ಕೇಸರಿಗಳು
ಮುಳಗುಂದ.

— — — — —

ಈ ರೀತಿ ಚಂದ್ರಿಕೆಗೆ ಸಂದೇಶಗಳನ್ನಿತ್ತ ಸರ್ವ ಮಹನೀಯರುಗಳಿಗೆ ಕೃತಜ್ಞತಾಪೂರ್ವಕ ಅಭಿನಂದನೆಗಳನ್ನರ್ಪಿಸುವೆವು.

ಹು. ರಾ. ಅಗ್ನಿಹೋತ್ರಿ.
ಆಡಳತೆಗಾರರು.

# ವಿಮರ್ಶೆ :-

## ಗಂಗಾಲಹರಿ. ಬೆಲೆ ೧ ಆಣೆ.

ಲೇಖಕರು :— ಶ್ರೀ. ಶಂಕರಭಟ್ಟರು ಅಗ್ನಿಹೋತ್ರಿ ನವಲಗುಂದ.

ಪ್ರಕಾಶಕರು :— ಗೋಸ್ವಾಮಿ ರಾಮಚಂದ್ರರಾಯರು ನವಲಗುಂದ.

ಇದೊಂದು ಪದ್ಯಪುಸ್ತಕ. ಪದ್ಯಗಳು ಸುಲಲಿತವಾಗಿವೆ. ಸಂಸ್ಕೃತ ಭಾಷಾಕೋವಿದನಾದ ಜಗನ್ನಾಥ ಪಂಡಿತನು ಬರೆದ ಮೂಲ ಗ್ರಂಥವನ್ನು ಕನ್ನಡಕ್ಕೆ ಪರಿವರ್ತಿಸಿದುದು. ಶ್ರೀಮಾನ್ ಶಂಕರಭಟ್ಟರು ಕನ್ನಡಿಗರಮೇಲೆ ಮಾಡಿದ ಮಹದುಪಕಾರವೇ ಸರಿ. ಕನ್ನಡ ಸಾಹಿತ್ಯದಲ್ಲಿ ಈ ಅವರ ಸೇವೆಯು ಅತ್ಯಂತ ಬೆಲೆಯುಳ್ಳದ್ದಾಗಿದೆ. ರಮ್ಯವಾದ ಈ ಅವರ ಕೃತಿಗೆ ಚಿಕ್ಕದೊಂದು ಮುನ್ನುಡಿಯ ಅವಶ್ಯಕತೆಯುಂಟೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಆಗಲಿ ಕನ್ನಡ ತಾಯಿಯನ್ನು ಇಂತಹ ವಿವಿಧ ಸಾಹಿತ್ಯದಿಂದ ಸೇವೆಗೈಯ್ಯುವ ಧ್ಯೇಯವನ್ನೇ ಈ ಮುಂದೆ ಅವರು ಇಟ್ಟುಕೊಂಡು ಶ್ರೇಯಪಡಿಯಬೇಕಾಗಿ ನಾವು ಆಶಿಸುತ್ತೇವೆ.

ರಾ. ಬಾ. ಬಾಲೇಹೊಸೂರ.
ವಿಮರ್ಶಕಾರರು.

---

ವಿಶ್ವಭಾರತಿ ಸಂಪಾದಕರು :— ಜೀ. ಎಮ್. ಸಿದ್ಧಲಿಂಗಪ್ಪನವರು
ಬೆಂಗಳೂರು.

ವಾ. ಚ. ೩—೦—೦.

ಕನ್ನಡ ಸಾಹಿತ್ಯದ ಬೆಳಿಗೆಯು ಕೇವಲ ಕನ್ನಡಿಗರಿಗೆ ಮಾತ್ರವಲ್ಲದೆ, ಇಡೀ ಪ್ರಪಂಚದ ಕಲ್ಯಾಣಕ್ಕಾಗಿ ಎಂಬ ಅತಿ ಉದಾತ್ತವಾದ ಭಾವನೆಯಿಂದ ಕಾರ್ಯ ಮಾಡಲು ಹೊರಟಿರುವ ಇದೊಂದು ಮಾಸಪತ್ರ. ಲೇಖನಗಳು ಒಳ್ಳೇ ರಸವತ್ತಾಗಿಯೂ, ವಿಚಾರಾರ್ಹವಾಗಿಯೂ ಅವೆ. ಸಾಮಾನ್ಯವಾಗಿ ಅಖಿಲ ಕರ್ನಾಟಕದ ವಿದ್ವಾನ್ ಸಾಹಿತಿಗಳ ಆಶೀರ್ವಾದದ ಬೆಂಬಲವು ವಿಶ್ವಭಾರತಿಗೆ ಈಗಾಗಲೇ ದೊರೆತಿದೆ. ಸಂಪಾದಕರ ಇಂತಹ ದೀರ್ಘಸಾಹಸಕ್ಕೆ ಪೂರ್ಣ ಯಶವು ದೊರೆತು ವಿಶ್ವಭಾರತಿಯು ವಿಶ್ವದ ಜನರನ್ನು ಆಕರ್ಷಿಸುವಳೋ ಎಂಬದನ್ನು ನೋಡಬೇಕೆಂಬುದೇ ನಮ್ಮುಗಳ ಬಲವಾದ ಆಶೆ.

ರಾ. ಬಾ. ಬಾಲೇಹೊಸೂರ
ವಿಮರ್ಶಕಾರರು.

# ಅತ್ಯುತ್ತಮವಾದ ಕೆಲವು ಅನುಭವಸಿದ್ಧ

## — ಔಷಧಗಳು. —

ಕೇವಲ ಮೋಹಕವಾದ ಲೇಬಲುಗಳಿಂದ ಕೂಡಿದ ಹಾಗು ಆಡಂಬರದ ಜಾಹೀರಾತುಗಳಿಗೆ ಮೋಸಹೋಗಿ ಸಲ್ಲದ ಔಷಧಗಳನ್ನು ತರಿಸಿ ನಿಮ್ಮ ದೇಹಾರೋಗ್ಯದ ಹಾನಿಯನ್ನು ಮಾಡಿಕೊಳ್ಳಬೇಡಿ! ಕಸ್ತೂರಿಯ ವಾಸನೆಯನ್ನು ಬಾಯಿಂದ ಹೇಳಬೇಕಾದವಶ್ಯವಿಲ್ಲ ಹಾಗೆ ನಮ್ಮ ಔಷಧಗಳಲ್ಲಿರುವ ಗುಣದಬಗ್ಗೆ ಖಾತ್ರಿ ಮಾಡಿಕೊಳ್ಳಬೇಕು.

### ಔಷಧಗಳ ವಿವರ:

(೧) ಕಾಲರಾಪಿಲ್ಸ ೧೦೦ಕ್ಕೆ ೫ ರೂ. (೨) ವ್ಯಾಧಿಗಜಕೇಸರಿ ೧ ರೂ. ೨ ತೊಲಿ (೩) ಹುರಕಿನ ಚೀಟು ೧೦೦ಕ್ಕೆ ೫ ರೂ. (೪) ವ್ಯಾಧಿಹರಗುಟಿಕಾ ೧ ರೂ. ೨ ತೊಲಿ (೫) ಥಂಡಿಜ್ವರಕ್ಕೆ ೨೪ ಮಾತ್ರೆಗೆ ೧ ರೂ. (೬) ಚಚನಾಗಾದಿಗುಟಿಕಾ ೧ ರೂ ೨ ತೊಲಿ (೭) ಅಶ್ವಗಂಧಿಚೂರ್ಣ ೧ ರೂ ೪ ತೊಲಿ (೮) ಸಂಜೀವಿನಿ ಗುಟಿಕಾ ೧ ರೂ. ೨ ತೊಲಿ. (೯) ನಾಗಾರ್ಜುನಚೂರ್ಣ ೧ ರೂ. ೪ ತೊಲಿ (೧೦) ಹಿಂಗ್ವಾದಿಚೂರ್ಣ ೧ ರೂ. ೨ ತೊಲಿ (೧೧) ಪುಷ್ಯಾನುಗಚೂರ್ಣ ೧ ರೂ. ೪ ತೊಲಿ (೧೨) ಗುಲ್ಮಜಲೋದರಮಹೋದರ ಚೂರ್ಣ ೧ ರೂ. ೨ ತೊಲಿ (೧೩) ಭಾಸ್ಕರಲವಣ ೧ ರೂ. ೪ ತೊಲಿ (೧೪) ಅಗ್ನಿಕುಮಾರ ರಸ ೧ ರೂ. ೧ ತೊಲಿ (೧೫) ಮಹಾಜರಾಂಕುಶ ೨ ರೂ. ೧ ತೊಲಿ (೧೬) ವಾತುವಿಧ್ವಂಸ ರಸ ೧ ರೂ. ೪ ತೊಲಿ (೧೭) ಮೃತ್ಯುಂಜಯ ರಸ ೨ ರೂ. ೧ ತೊಲಿ (೧೮) ಮಹಾಯೋಗರಾಜ ಗುಗ್ಗಳ ೪ ರೂ. ೧ ತೊಲಿ (೧೯) ಪ್ರದವಾದಿ ರಸ ೨ ರೂ. ೧ ತೊಲಿ (೨೦) ಕಾಮೇಶ್ವರ ೪ ರೂ. ೧ ತೊಲಿ (೨೧) ಗರ್ಭಿಣಿಗೆ ೧೪ ಮಾತ್ರೆಗೆ ೫ ರೂ. (೨೨) ಮೂಲವ್ಯಾಧಿಗೆ ೧೪ ಮಾತ್ರೆಗೆ ೧ ರೂ. (೨೩) ಶೂಲವಜ್ರಿಣಿ ೫ ರೂ. ತೊಲಿ ೧ (೨೪) ಯಾವತ್ತೂ ವ್ರಣಗಳಿಗೆ ಮಲಮು ಡಬ್ಬಿ ೨ ಆಣೆ (೨೫) ಸರ್ವವಾತಕ್ಕೆ ೫ ರೂ. ೧ ತೊಲಿ (೨೬) ಪರಿಣಾಮಶೂಲಿಗೆ ೨ ರೂ. ೧ ತೊಲಿ (೨೭) ಸುದರ್ಶನ ಚೂರ್ಣ ೧ ರೂ. ೪ ತೊಲಿ (೨೮) ಶ್ಲೇಷ್ಮಿಗೆ ೧ ರೂ. ೨ ತೊಲಿ.

ಅನುಪಾನ— ಪಥ್ಯ ಔಷಧಗಳಕೂಡ ವಿವರಿಸುವದು. ಹೆಚ್ಚಿನ ಮಾಹಿತಿ ಬೇಕಾದಲ್ಲಿ ಕೆಳಗಿನ ವಿಳಾಸಕ್ಕೆ ಬರೆದು ತಿಳಕೊಳ್ಳಬಹುದು.

ನಮ್ಮ ವಿಳಾಸ:— **ಬ. ಕೆ. ಪಾಟೀಲ ಶಿರಹಟ್ಟಿ**

ಪೋ. ಶಿರಹಟ್ಟಿ

# ಜಾಹೀರಾತಿಗಾಗಿ ಈ ಸ್ಥಳವನ್ನು ಕಾದಿಡಲಾಗಿದೆ.

---

### ವರ್ಗಣಿದಾರರಲ್ಲಿ ವಿನಂತಿ.

ಚಂದಾಹಣವನ್ನು ಈ ಪತ್ರಿಕೆಯು ಕೈಸೇರಿದೊಡನೆ ಮನಿಯಾರ್ಡರ ಮೂಲಕ ಕಳುಹಬೇಕು. ಕಳುಹದವರಿಗೆ ೨-೦-೦ ವ್ಹಿ. ಪಿ. ಯಿಂದ ಮುಂದಿನ ಸಂಚಿಕೆ ರವಾನಿಸಲ್ಪಡುವದು. ಸ್ವೀಕರಿಸಿ ಈ ವಿಷಯದಲ್ಲಾಗುವ ನಮ್ಮ ತೊಂದರೆಯನ್ನು ದೂರಮಾಡಬೇಕಾಗಿ ವಿನಂತಿ. ವ್ಹಿ. ಪಿ. ಯನ್ನು ಪರತ ಬಿಟ್ಟು, ಚಂದ್ರಿಕೆಯ ಹಾನಿಯನ್ನು ಮಾಡಬಾರದೆಂಬದಾಗಿಯೂ ವಿನಂತಿ.

ಹು. ರಾ. ಅಗ್ನಿಹೋತ್ರಿ,
ಆಡಳತೆಗಾರರು.

---

ಇದನ್ನು ಗದಗ-ರಸಿಕರಂಜನಿ ಮುದ್ರಣಾಲಯದಲ್ಲಿ ಮುದ್ರಿಸಿ, ಗದಗ ತಾಲೂಕ ಸೊರಟೂರ (ಪೋ. ಶಿರಹಟ್ಟಿ) ಹಾಗು ಶಿರಹಟ್ಟಿ ವೀರಶೈವ ಚಂದ್ರಿಕೆಯ ಆಫೀಸಿನಲ್ಲಿ ಪ್ರಸಿದ್ಧಪಡಿಸಿತು.

ವಾರ್ಷಿಕ ಚಂದಾ ೧-೮-೦, ಅಂಚೇ ವೆಚ್ಚ ಸೇರಿ ೧-೧೧-೦.
ಬಿಡಿ ಸಂಚಿಕೆ ೦-೩-೦.

ಶಿರಹಟ್ಟಿ.
ಶ್ರೀ ಫಕ್ಕೀರೇಶ್ವರ ಸ್ವಾಮಿಗಳ ಕೃಪಾಛತ್ರದಲ್ಲಿ ನಡೆದ,

# ವೀರಶೈವ ಚಂದ್ರಿಕೆ

ನೈತಿಕ, ಸಾಮಾ[illegible] ಧಾರ್ಮಿಕ ವಿಷಯಗಳಿಂದೊಡಗೂಡಿದ
[illegible] ಕನ್ನಡ ಮಾಸಪತ್ರಿಕೆ.
ಹುಟ್ಟಿ[illegible] ೧೮೫೬. ಶ್ರೀ ಬಸವ ಜಯಂತಿ.

| ಸಂಪುಟ | [illegible]ಗೀ ಹುಣ್ಣಿವೆ. | ಸಂಚಿಕೆ |
|---|---|---|
| ೧. | ೨೨ — ೧೧ — ೧೯೩೪. | ೬. |

**ಕಂದ**

ತನ್ನಯನಾಡ-ನುಡಿಗ ।
ಳುನ್ನತಿಯಂ ಮಾಳ್ಪ ಕಜ್ಜ[illegible]ಂಟೇ ॥
ಕನ್ನಡದೇಳ್ಗೆ ಯುಬಗೆಯಂ ।
ಕನ್ನಡಿಗರ್ ತಿಳಿದುಕೊಡ[illegible]ಯ
[illegible] ॥೧॥

**ಕಂದ**

ಬಂದವರಂಬರಿಸದಿಹಂ ।
ಸಂದವರಂಸಂತವಿಸದನಹ ತಾಯ್ನುಡಿಯಂ ॥
ವಂದಿಸದಿರುವಂ ಮನುಜನೋ ! ।
ವಂದ್ಯನೋ ! ಕ್ಷಾಣಿಳೆಗೆ ಪುಟ್ಟಿ ಫಲವೆನಿಸಿಹ
ನೋ ! ॥೨॥

[illegible]ಜಸೇಯ ಶಿವಾನಂದಾರ್ಯರು.

* ಕರ್ಮಿಯ[illegible]ಮುಕನಾಗಿ ಅವಿದ್ಯೆಯಲ್ಲಿ ಮೈಮರೆವ ವ್ರಾತ್ಯನೂ ಆಗಬೇಡ; ವಿದ್ಯೆ[illegible]ತು ಅಸಂಭಾವಿಯ ಅಭಿಮಾನಿಯ ಬರಿ ಶೂನ್ಯ ಸಂಪಾದಕನೂ [illegible] ವಿದ್ಯೆ-ಅವಿದ್ಯೆಗಳ ಹದವನರಿತು, ಸಂಭೂತಿ ಅಸಂಭೂತಿಗಳ [illegible]ರಿದು ಸಮುಕಟ್ಟಿನಿಂದ ಸಾಗು; ಎರಡೂ ಬಗೆಯ ಅತಿವಾದಗಳನ್ನು [illegible]ಸತ್ಯಸಮನ್ವಯದ ಸುವರ್ಣಮಧ್ಯವನ್ನು ಅನುಸರಿಸಿ ಆನಂದವನ[illegible]ವಿಸು. ಇದೇ ಶಾಶ್ವತವಾದ ಧರ್ಮವು.

'ಈಶ ವ್ಯಾಸೋಪನಿಷತ್.'

* ಕಣ್ಮರೆಯಾದ ಕನ್ನಡಗ್ರಂಥದಿಂದ ಅವತರಿಸಿಕೊಂಡದ್ದು.

ಸಂಪಾದಕರು ಹಾಗು ಪ್ರಕಾಶಕರು :
ಆಲೂರ ಮುರಿಗೇಂದ್ರ ಶೆಟ್ಟರು.

ಬಾಲಸುಧಾ ೧ ಔಂಸಿನ ಬಾಟ್ಲಿಗೆ ೦-೭-೦, ೬ ಔಂಸಿನ ಬಾ. ೦-೧೨-೦




ವಾಸಕ ೧ ಔಂಸಿನ ಬಾಟ್ಲಿ ಕಿಂಮ್ಮತ್ತು ೦—೬—೦.

## —ಬಾಲಸುಧಾ—

ಚಿಕ್ಕ ಮಕ್ಕಳ ಹೊಟ್ಟೆ ದೊಡ್ಡದಾಗುವದು, ಅಜೀರ್ಣದಿಂದ ಹೊಟ್ಟೆ ಉಬ್ಬುವದು, ಝಾಡಿಸುವದು, ಹೊಟ್ಟೆನೋವು, ಮಲಬದ್ಧತೆ ಮುಂತಾದ ಅಪಚನದ ವಿಕಾರಗಳು, ಮುಟ್ಟ ದೋಷಗಳು. ರಿಕೆಟ್ಸ. ಕೆಮ್ಮು, ನೆಗಡಿ ಮುಂತಾದ ಕಫವಿಕಾರಗಳು, ಯಕೃದಭಿವೃದ್ಧಿ ಪ್ಲೀಹಾಭಿವೃದ್ಧಿ ಮುಂತಾದ ಭಯಂಕರ ರೋಗಗಳು ತೀವ್ರ ಕಡಿಮೆಯಾಗಿ ಚಿಕ್ಕ ಬಾಲಕರು ಸಶಕ್ತರೂ, ಪುಷ್ಟರೂ, ಸುಂದರರೂ ಆಗುವರು.

## —ವಾಸಕ—

ಈ ಔಸಧದಿಂದ ಕಫಕ್ಷಯ, ದಮ್ಮು, ಕೆಮ್ಮು, ನೆಗಡಿ, ಇನ್‌ಫ್ಲುಯಂಝಾ, ನ್ಯೂಮೋನಿಯಾ, ಸಣ್ಣ ಹುಡುಗರ ಪಕ್ಕೆ ಬಡಕೊಳ್ಳುವ ಭಯಂಕರ ರೋಗ (ಬ್ರಾಂಕೋನ್ಯೂಮೋನಿಯಾ) ಕೊಡಗಕೆಮ್ಮು. ಕಫಜ್ವರ, ಕಫ ಗಟ್ಟಿಯಾಗುವದು, (ತ್ರಿದೋಷಜ್ವರದಲ್ಲಿ) ಮುಂತಾದ ತ್ರಾಸದಾಯಕ ಭಯಂಕರ ರೋಗಗಳು ಖಾತ್ರಿಯಿಂದ ಗುಣ. ಬಹುದಿವಸ ದಮ್ಮಿನಿಂದ ಬಳಲುವ ಎಷ್ಟೋ ಜನರು ಇದನ್ನು ಉಪಯೋಗಿಸಿ ಸುಖಹೊಂದಿದ್ದಾರೆ.

**ಕರ್ನಾಟಕ ಆಯುರ್ವೇದಿಕ ಫಾರ್ಮಸಿ,**

**ಶಿರಹಟ್ಟಿ. ಜಿಲ್ಲಾ ಧಾರವಾಡ.**

# ಶ್ರೀ ಗುರು ಫಕೀರೇಶ್ವರ ಯತಿವರೇಣ್ಯಾಃ

ಶ್ರೀಫಕೀರಚನ್ನವೀರಸ್ವಾಮಿಸಮರ್ಥ ನಿತ್ಯನಿರಂಜನ ನಿಗಮ
ಗೋಚರ ಸಚ್ಚಿದಾನಂದ ನಿತ್ಯಪರಿಪೂರ್ಣ ಅವಿರಳ
ಪರಂಜೋತಿರಲ್ಲಮಾಪ್ರಭು ರಾತ್ಮರಾಮ ಶಾಂಭವ
ಲೋಕೆ ಶಪಾದಪಿ ಶರಾದಪ್ಯ ಗಣಿತಗುಣ
ಗಣ ಮಹಿಮಾನ್ನದಾತೃ ಭಕ್ತವತ್ಸಲ
ದತ್ತಾತ್ರವಧೂತ ದಿಗಂಬರ ಬಾದ
ಶಾಹ ಶ್ರೀ ಭಗವನ್
ಮಹತ್ವ ವಿಭುಃ

ಶ್ರೀಕರ ಶ್ರೀ
ಚರಣಾಣರವಿಂದ
ಸಂಜಾತ ಶ್ರೀ ಸಿದ್ಧರಾ-
ಮಸ್ವಾಮಿ ಸಮರ್ಥ ಶ್ರೀಪಾದ
ಪಂಕಜೋದ್ಭವ ಶ್ರೀ ಶಿವಯೋಗಿ
ಸ್ವಾಮಿ ಸಮರ್ಥ ಶ್ರೀ ಕರಮಲೋದ್ಭವ
ಶ್ರೀ ಚನ್ನವೀರಸ್ವಾಮಿ ಸಮರ್ಥ ಶ್ರೀಪಾದ
ಸರಸಿಜ ಸಂಭವ ಶ್ರೀ ಸಿದ್ಧರಾಮ ಸ್ವಾಮಿ ಸಮ
ರ್ಥಾನಾಂ ಶ್ರೀ ಪಾದಪಂಕಜೋದ್ಭವ ಶ್ರೀ ಶಿವ-
ಯೋಗಿ ಸ್ವಾಮಿ ಸಮರ್ಥ ಶ್ರೀ ಕರಸುವರ್ಣಾರವಿಂದ
ಸಂಜಾತ ಶ್ರೀ ಚನ್ನವೀರಸ್ವಾಮಿ ಸಮರ್ಥ ಶ್ರೀಪಾದನಳಿ
ನೋದ್ಭವ ಶ್ರೀ ಸಿದ್ಧರಾಮಸ್ವಾಮಿ ಸಮರ್ಥ ಶ್ರೀಪಾದ
ಪಂಕಜೋದ್ಭವ ಶ್ರೀಶಿವಜೋಗಿಸ್ವಾಮಿ ಸಮರ್ಥ ಶಿರಃಪುರ
ಶೂನ್ಯಸಿಂಹಾಸನಾಧೀಶ್ವರ ಮಹತ್ವನಿ ಭುಃ



ಶ್ರೀ ಶಿವಜೋಗಿ ಸ್ವಾಮಿಗಳವರು

ಈಗಿನ ಪಟ್ಟಾಧ್ಯಕ್ಷರು.

# “ಲಿಂಗಾ” “ಲಿಂಗ್ರೈ”

## ಶ್ರೀ ಫಕೀರಸ್ವಾಮಿಗಳವರ ಮಠದ ವೃತ್ತಾಂತ:—

ಗಿನ ಪಟ್ಟಾಧ್ಯಕ್ಷರಾದ ಶ್ರೀ ಶಿವಜೋಗಿ ಮಹಾಸ್ವಾಮಿಗಳವರ ಪ್ರಕೃತಿಯು ಚನ್ನಾಗಿದ್ದು ಸಂಚಾರದಲ್ಲಿರುತ್ತಾರೆ. ಇವರು ಪೂರ್ವಾಶ್ರಮದಲ್ಲಿ ಸಂಶಿಯಲ್ಲೊಂದು ಮಠವನ್ನು ಸ್ಥಾಪಿಸಿದ್ದಾರೆ. ಅಲ್ಲಿಯೂ ಪೂಜಾ-ಸೇವಾ-ಸೂತ್ರ ಮಂತ್ರಾದಿ ಕಾರ್ಯಗಳು ಜರಗುತ್ತಲಿವೆ. ಆದ್ದರಿಂದ ಶ್ರೀಗಳವರು ಅಲ್ಲಿಗೂ ದಯಮಾಡಿಸುವರು. ಹೀಗೆ ಎರಡೂ ಕಡೆಯಲ್ಲಿ ಸಂಚರಿಸುತ್ತ ಪೂಜಾದಿ ಸಕಲ ಕಾರ್ಯಗಳನ್ನು ನಿರ್ವಿಘ್ನದಿಂದ ಸಾಗಿಸುತ್ತ ( “ ” ) ಆನಂದದಲ್ಲಿರುವರು.

ಈ ಮೊದಲು ಶ್ರೀಗಳವರಿಗೆ ದೇಹಾಲಸ್ಯವಾದಾಗ ತಾವುಗಳು ( “ ” ) ಕೈರಾದೇವೆಂಬ ಭೀತಿಯಿಂದ ಮತ್ತು ಮಠದ ಪೂಜಾ ಮೊದಲಾದ ಸಕಲ ಕಾರ್ಯಗಳು ನಿರ್ವಿಘ್ನದಿಂದ ಸಾಗಬೇಕೆಂಬ ಇಚ್ಛೆಯಿಂದ ತಾ|| ೨೯—೩—೩೪ ಈ ದಿವಸ ಶಿರಹಟ್ಟಿಯ ಹಾಗೂ ಪರಸ್ಥಳದ ಯಾವತ್ತೂ ವೀರಶೈವ ಸಮಾಜದವರನ್ನೂ, ಶಿರಹಟ್ಟಿಯ ಮುಸಲ್ಮಾನ ಸಮಾಜದವರನ್ನೂ ಕರೆಕಳುಹಿಸಿಕೊಂಡು ಇಲ್ಲಿಯ ಮೇ|| ಮಾಮಲೇದಾರರವರ ಸಮಕ್ಷಮದಲ್ಲಿ ಯಾದಿಯನ್ನು ಕೊಟ್ಟು ಜಬಾಬುಕೊಟ್ಟು ತಮ್ಮ ಶಿಷ್ಯರಲ್ಲೊಬ್ಬರಾದ ಶ್ರೀಬುದೀಹಾಳ ಫಕೀರ ಮರಿದೇವರುಗಳಿಗೆ ಶ್ರೀ ಚನ್ನವೀರಸ್ವಾಮಿಗಳೆಂದು ನಾಮಕರಣಮಾಡಿ ಯಥಾ ವಿಧಿಯಾಗಿ ಮಠದ ಸಾಂಪ್ರದಾಯಕ್ಕನುಸಾರವಾಗಿ ಉತ್ತರಾಧಿಕಾರಿಗಳನ್ನಾಗಿ ಮಾಡಿದ್ದಾರೆ. ಭಾವೀ ಚನ್ನವೀರಸ್ವಾಮಿಗಳು ಮಠದಲ್ಲಿದ್ದು ಯಾವತ್ತೂ ಕಾರಭಾರವನ್ನು ಅವರೇ ನೋಡುತ್ತಲಿದ್ದಾರೆ. ಅವರ ಪ್ರಕೃತಿಯೂ ಚನ್ನಾಗಿದ್ದು ಆನಂದದಲ್ಲಿದ್ದಾರೆ.

ಉತ್ತರಾಧಿಕಾರಿಗಳನ್ನು ಮಾಡಿದ ವಿಷಯವಾಗಿ ಕೆಲಜನ ಮಠದ ವಿರುದ್ಧ ಜನರು ಇರುವರು. ಅವರು ವೃತ್ತಪತ್ರಗಳಲ್ಲಿ “ ಜಾಹೀರವಿನಂತಿ ” “ ಪತ್ರವ್ಯವಹಾರ ” ಮೊದಲಾದ ಲೇಖನಗಳನ್ನು ಕೊಟ್ಟು ಸುಳ್ಳು ಸುದ್ದಿಯನ್ನು ಹರಡಿದ್ದಾರೆ. ಅವುಗಳನ್ನು ಯಾರೂ ನಂಬಬಾರದು. ನಿಜಾಂಶವನ್ನು ತಿಳಿಯಬೇಕಾದವರು ಮಠದಲ್ಲಿಯ ಯಾವತ್ತೂ ಕಾಗದ ಪತ್ರಗಳನ್ನು ನೋಡಿ ಖಾತ್ರಿಮಾಡಿಕೊಳ್ಳಬೇಕು. ದ್ವೇಷಿಕರ ಲೇಖಗಳನ್ನು ಎಷ್ಟುಮಾತ್ರಕ್ಕೂ ನಂಬಬಾರದು.

ಫಕ್ಕೀರಪ್ಪಾ ಶಿವಜೋಗೆಪ್ಪಾ ಭೋರಶೆಟ್ರ,
ಶಿ ರ ಹ ಟ್ಟಿ.

# ಶ್ರೀ ಫಕ್ಕೀರೇಶ್ವರ ಗದ್ದುಗೆಯ ಪೂಜಾ
# ಮಹೋತ್ಸವವು.



ಈಗಿನ ಪಟ್ಟಾಧ್ಯಕ್ಷ ಸ್ವಾಮಿಗಳಾದ ಶ್ರೀ ಶಿವಜೋಗಿ ಸ್ವಾಮಿಗಳು ಪೂರ್ವಾಶ್ರಮದಲ್ಲಿ ಸಂಶಿಯಲ್ಲಿ ಒಂದು ಮಠವನ್ನು ಸ್ಥಾಪಿಸಿರುವರೆಂಬದಾಗಿ ಹಿಂದೆ ಹೇಳಿದಿಯಷ್ಟೆ? ಆ ಸಂಶೀಮಠದಲ್ಲಿ ಒಂದು ತೋರಗದ್ದುಗೆಯನ್ನು ಸ್ಥಾಪನಾ ಮಾಡಿರುವರು, ಅಲ್ಲಿ ಪೂಜಾ ಮೊದಲಾದ ನಿತ್ಯ ನೈಮಿತ್ತಿಕ ಕಾರ್ಯಗಳು ಜರಗುತ್ತಲಿವೆ. ತೋರಗದ್ದುಗೆಯು ಅಸ್ತವ್ಯಸ್ತವಾಪ್ಪರಿಂದ ಶ್ರೀಗಳವರು ಅದನ್ನು ಸರಿಪಡಿಸಿ ಅದಕ್ಕೆ-

**ಬುಧವಾರ ತಾರೀಖು ೧೦—೧೦—೩೪ ನೇ ದಿವಸ**

**ಸವಣೂರ ಶ್ರೀ ಚರಂತಿಪಟ್ಟದ್ದೇವರು**

ಇವರಿಂದ ಗದ್ದುಗೆಯ ಅಭಿಷೇಕವನ್ನು ವಿಧಾನೋಕ್ತದಿಂದ ಮಾಡಿಸಿದರು ಈ ಉತ್ಸವದ ಕಾರ್ಯಕ್ಕೆ ಹುಬ್ಬಳ್ಳಿ, ಕುಂದಗೋಳ, ಕಮಡಳ್ಳಿ, ಕಾರಡಗಿ, ಹಣಮನಹಳ್ಳಿ, ಯರೇಬೂದಿಹಾಳ, ಶಿರಹಟ್ಟಿ, ಹೊಸೂರ ಮೊದಲಾದ ಸದ್ಭಕ್ತರು ದಯಮಾಡಿಸಿದ್ದರು. ಪೂಜಾ ಅಭಿಷೇಕ ಮೊದಲಾದ ಕಾರ್ಯಗಳು ಯಥಾಸಾಂಗವಾಗಿ ಜರಗಿದಬಳಿಕ ಸಕಲರಿಗೂ ಅನ್ನಸಂತರ್ಪಣೆಯ ಕಾರ್ಯವು ನಡೆಯಿತು.

ಈ ಕಾರ್ಯದಲ್ಲಿ ಸಂಶಿಯ ವೀರಶೈವ ಮಹನೀಯರು ಶ್ರಮವಹಿಸಿದರಲ್ಲದೆ ಇತರ ಮತದವರೂ ಟೊಂಕಕಟ್ಟಿ ನಿಂತಿದ್ದರು. ಉತ್ಸವವು ಬಹು ವಿಜೃಂಭಣೆಯಿಂದ ಜರಗಿತು.

ಹೀಗೆಯೇ ಸಂಶಿಯ ಗ್ರಾಮದ ಭಕ್ತ ಮಹಾಜನಗಳು ಧರ್ಮಕಾರ್ಯದಲ್ಲಿ ಪ್ರವೃತ್ತರಾಗಿ ಶ್ರೀಗಳವರ ಕೃಪಾ-ಪ್ರಸಾದವನ್ನು ಪಡೆದು ಸುಖಸಂಪದಗಳನ್ನು ಹೊಂದಲೆಂಬದಾಗಿ ನಮ್ಮ ಹಾರೈಕೆ.

ಆಲೂರ ಮುರಿಗೇಂದ್ರ ಶೆಟ್ಟರು,
ಸಂಪಾದಕರು.



ಶ್ರೀ ಚನ್ನವೀರ ಸ್ವಾಮಿಗಳು.

ಭಾವೀ ಸ್ವಾಮಿಗಳವರು.

ಕವಿಯುಗಾನವು ಪರಮಾತ್ಮನ ಆಜ್ಞೆಯಿಂದ ಬರತಕ್ಕದ್ದು ಅದರ ಮೂಲಕ ಆತನು ಪರಮಾತ್ಮನ ಅತಿಮಧುರವಾದ, ಸೃಷ್ಟಿಯು ಗಾನಕ್ಕೆ ಒಂದು ಸ್ವರವನ್ನು ಸೇರಿಸುತ್ತಾನೆ. ಪರಮಾತ್ಮನ ಗಾನಕ್ಕೆ ತಕ್ಕ ವಾದ್ಯವಾಗುವದಕ್ಕಾಗಿ ಕವಿಯು, ತನ್ನ ಜೀವನವನ್ನು ಸರಿಯಾಗಿ ಇಟ್ಟುಕೊಳ್ಳಬೇಕು. ಆ ಮೂಲಕ ಅವರಲ್ಲಿ ಗಾನವುಂಟಾಗಿ ಅವರು ದೇವರ ದೇವನಪದಾರವಿಂದವನ್ನು ಮುಟ್ಟುವನು. ಗಾನದ ಉತ್ಸಾಹದಲ್ಲಿ ದೇವರು ಒಡಿಯನೇ ಅಲ್ಲದೆ ಜೊತೆಗಾರನಾಗುವನು.

ಮಾಸ್ತಿ ವೆಂಕಟೇಶ ಅಯ್ಯಂಗಾರ ಎಂ. ಎ.

# ಪದ್ಯಶ್ರೀಮೆ.

ಭೌತಿಕ ಶಾಸ್ತ್ರಗಳು ತತ್ವಜ್ಞಾನ ಬೋಧಕಗಳಾದ ದರ್ಶನಗಳೂ ಐತಿಹಾಸಿಕ ವರ್ಣನಗಳೂ ಅವಕಾಶ ಹೊಂದದೆ ಇದ್ದ ಸಂದರ್ಭಗಳಲ್ಲಿಯೂ ಕವಿಯ ವಾಕ್ಯಗಳು ಲೋಕೋತ್ತರವಾದ ಆನಂದವನ್ನು ಸಾಮಾನ್ಯ ಜನರಲ್ಲಿಯೂ ಉಂಟುಮಾಡುವವು.

ಕೈ. ಕರ್ಪೂರ ಶ್ರೀನಿವಾಸರಾಯರು ಮೈಸೂರು.

ಸಿರಿಗನ್ನಡಂ ಗೆಲ್ಗೆ

# ವೀರಶೈವ ಚಂದ್ರಿಕೆ.

ಮಾಸಪತ್ರಿಕೆ.

ಬಯಲುಮೂರ್ತಿಯಾಗಿನಿಂದನೊಬ್ಬ ಶರಣ. ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ. ಆತನ ಶಾಂತಿಸ್ಥೈರಣೆಯಿಂದ ಹುಟ್ಟಿದಾತ ವಿಷ್ಣು. ಆತನ ಕೋಪ ಕ್ರೋಧದಿಂದ ಹುಟ್ಟಿದಾತ ರುದ್ರ. ಈ ಮೂರು ಸೀಶವಂತಿರಲಿ. ಆ ಶರಣನನರಿದು ಶರಣೆನುತಿರ್ದೆನು ಕೂಡಲ ಸಂಗಮದೇವಾ. —ಶ್ರೀ ಬಸವೇಶ್ವರ.

| ಸಂಪುಟ ೧ | ಶ್ರೀಮನ್ನೃಪಶಾಲಿವಾಹನ ಶಕೆ ೧೮೫೬<br>ಶೀಗೀ ಹುಣ್ಣಿವೆ | ಸಂಚಿಕೆ ೬ |
|---|---|---|

## ಪ್ರಾರ್ಥನೆ.

ರಾಗ– ನಾಟಿ. ತಾಳ– ಝಂಪಾ.

ಬೇಡಿಕೊಂಬುವೆ ನಭವ | ನಿನ್ನಂಘ್ರಿಯನು ತಳುವ |
ಮಾಡದೀ ವರಗಳನೆ | ಕರುಣಿಸೆಲೆದೇವ ||ಪಲ್ಲ||
ಮನದೊಳಗೆ ನಿನ್ನ ಸಂ | ಸ್ಮರಣವನು ನಾಲಿಗೆಯ |
ಕೊನೆಯೊಳಗೆ ಪಂಚಾಕ್ಷ | ರಿಯನೆಸುಡಿವುದನು ||
ತನುವಿನೊಳು ನಿನ್ನ ಸೇವೆಯ ಮಾಳ್ಪುದನು ಕಿವಿಯೊ |
ಳನುದಿನವು ಪ್ರಣವನಾದವನೆ ಕೇಳ್ವುದನು ||೧||
ವರಬಂದು ಕಾಂತಿಗಳ | ನೇತ್ರದೊಳು ನೋಳ್ಪುದನು |
ಕರದೊಳಗೆ ನಿನ್ನ ಪೂ | ಜೆಯನೆ ಮಾಳ್ಪುದನು ||
ಮರೆದಾದೊಡಿಹ ಪರಕ್ಕೆಳಸದಿಹ ವಿರತಿಯನು |
ಶರಿರವಿರುವನಕರಿತವರ ಸಂಗಮನು ||೨||
ಆವಕಾಲದೊಳು ತತ್ವಾನುಭವವನು ಕಾಣು |
ವೀವಿಶ್ವವೆಲ್ಲ ಪುಶಿಯೆಂಬ ಪ್ರಜ್ಞೆಯನು ||
ಭಾವದೊಳು ನೀನೆ ನಾನೆಂಬ ಸಂಧಾನವನು |
ದೇವಗುರುಸಿದ್ಧನೊಳು ಕಡೆಗೆ ಮುಕ್ತಿಯನು ||೩||

ಸರ್ಪಭೂಷಣಕವಿ.

# ನೋಟೀಶನ್.

ರಾಗ- ನಾಂಟಿ   ತಾಲ- ಝುಂಪೆ   ಮಾತ್ರಾ- ೧೦.

ಆರೋಹ:- ಸಾ ಗ ಮ ಪ ನಿ ಸಾ } ಗ. ವಾದಿ ನಿ. ಸಂವಾದಿ
ಅವರೋಹ:- ಸಾ ನಿ ಪ ಮ ಗ ಸಾ } ರಿ. ಅಲ್ಪ

ಸಂಗೀತಗಾರರು :- ಬಿಜಾಪುರ ನಾರಾಯಣರಾಯರು ಶಿರಹಟ್ಟಿ.

| | | | | | | | | | | |
|---|---|---|---|---|---|---|---|---|---|---|
| ಧೀ | ನ್ನಾ | ಧಿ | ಧಿ | ನ್ನಾ | ತೀ | ನ್ನಾ | ಧೀ | ಧೀ | ನ್ನಾ | |
| + | | ೩ | | | ೦ | | ೧ | | | |
| ಬೆ | ಽ | ಡಿ | ಕೊ | ೦ | ಬು | ವೆ | ನ | ಭ | ವ | |
| ಸಾ | ಽ | ಸಾ | ಗ | ಮ | ಪ | ನಿ | ಪ | ನಿ | ಸಾ | |
| ನಿ | ಽ | ನ್ನ | ೦ | ಘ್ರಿ | ಯ | ನು | ತ | ಳು | ವ | |
| ಪ | ನಿ | ಸಾ | ರಿ | ಸಾ | ಸಾ | ನಿ | ಪ | ಮ | ಗ | |
| ಮಾ | ಽ | ಡ | ದಿ | ೀ | ವ | ರ | ಗ | ಳ | ನೆ | |
| ಮ | ಗ | ಮ | ಪ | ನಿ | ಸಾ | ನಿ | ಪ | ಮ | ಗ | |
| ಕ | ರು | ಣಿ | ಸೆ | ಲೆ | ದೆ | ೀ | ವಾ | ಽ | ಽ | |
| ಗ | ಮ | ಪ | ನಿ | ಪ | ಗ | ಮ | ಗ | ಽ | ಸಾ | ‖ಪ‖ |
| ಮ | ನ | ದೊ | ಳ | ಗೆ | ನಿ | ಽ | ನ್ನ | ಸ | ೦ | |
| ಗ | ಮ | ಪ | ನಿ | ಪ | ಪ | ನಿ | ಸಾ | ರಿ | ಸಾ | |
| ಸ್ಮ | ರ | ಣ | ವ | ನು | ನಾ | ಽ | ಲಿ | ಗೆ | ಯ | |
| ಪ | ನಿ | ಸಾ | ರಿ | ಸಾ | ಸಾ | ನಿ | ಪ | ನಿ | ಸಾ | |
| ಕೊ | ನೆ | ಯೊ | ಳ | ಗೆ | ಪ | ೦ | ಚಾ | ಽ | ಕ್ಷ | |
| ಪ | ನಿ | ಸಾ | ಗ | ಗ | ರಿ | ಸಾ | ನಿ | ಪ | ಮ | |
| ರಿ | ಯ | ನೆ | ಸು | ಡಿ | ವು | ದ | ನು | ಽ | ಽ | ‖೧‖ |
| ಗ | ಮ | ಪ | ನಿ | ಪ | ಗ | ಮ | ಗ | ಽ | ಸಾ | |

ಸೂಚನೆ:— ಮೇಲಿನ ನುಡಿಯಂತೆ ಎಲ್ಲ ಚರಣಗಳನ್ನು ಬಾರಿಸಬೇಕು.
˘ ಇದು ಕೋಮಲ ಸ್ವರ ಚಿನ್ಹ.
| ಇದು ತಾರ ಸಪ್ತಕ ಸ್ವರ ಚಿನ್ಹ.

# ಹದಿನಾರುಸೋಮವಾರಗಳ ಪದ್ಯಕಥೆ.

## ಶ್ರೀ ಶಿವವ್ರತ.

( ಶಿವಾನಂದ ದೀಕ್ಷಿತ ವಾಜಪೇಯವಿರಚಿತಂ. )

(ಮುಂದೆ ಸಾಗಿದ್ದು.)

### ಕಂದ ಪದ್ಯಂ.

೨೭ ಹರನೊಲಿದ ವಿಪ್ರನು ಮನೋ |
ಹರವಿಭುಸುತೆಯ ವರಿಸಿ ವಿಭುವೆನ್ನಿಸಿ ಚಿತ್ರಂ ||
ಹರವಿಭುವೈಭವವಾಂತಾ |
ಹರದಯದಿಂದರಸಿಯಿಂದೆ ಮುದನೆತ್ತಲ್ಲಿಂ ||

(ದ್ವಿಜಪುತ್ರ (ರಾಜ)ನು ವ್ರತಪೂರ್ತಿ ಮಾಡಲು ಮಾಡಿದ್ದು.
ರಾಜಪುತ್ರಿಗೆ ( ತನ್ನ ರಾಣಿಗೆ ) ಹೇಳಿದ್ದು- ಆಕೆ ವರ್ತಿಸಿದ್ದು.
ಶ್ರೀ ಶಿವನು ಕೋಪಿಸಿದ್ದು ೨೯ ರ ವರೆಗೆ)

ಭಾ. ಷಟ್ಪದಿ

೨೮ ಕಡೆಯ ಪದಿನೇಳನೆಯ ವ್ರತವನು |
ನಡೆ ಜರುಗಿಸಲು ವಿಪ್ರಸುತನಾ |
ವೊಡೆಯನೈದೇ ಸೇರೊಳಿಹ ಮೂರುಂಡಿಗಳನಾಗ ||
ಗುಡಿಗೆ ನೈವೇದ್ಯಕ್ಕೆ ಕಳಿಸಲು |
ಮಡದಿಗರಸಿಗೆ ತಿಳಿಸೆಯಾಕೆಯು |
ಬಡವರೇಂ! ನಾವೊಡೆಯರಹ! ಬಡವರ ಪ್ರಸಾದವದು ||

೨೯ ಕೊಡದು ದೊಡ್ಡಿಸ್ತನವನೆಮಗೆಂ |
ದೊಡನೆ ದೂಷ್ಯಂಗಳನೆ ಐನೂ |
ರಿಡಿಸಿ ಬೆಳ್ಳಿಯ ತಬಕದಲಿ ದೊರೆಯುಡಿಗೆ ಕಳುಹಲ್ಕೆ ||
ನೃಡನು ಮುಳಿದೆಲೊ! ಭಾಗ್ಯದೊಡೆಯನೆ |
ಬಿಡುವುದರಸಿಯ ವ್ರತವು ಕೆಟ್ಟಿತು |
ಕೆಡುವೆ! ಬಿಡನಿರೆ ರಾಜ್ಯವಳಿಯುವುದೆಂದ ನರಸಂಗೆ ||

( ಆಗ ಅರಸನ ಪ್ರಧಾನನು ಶ್ರೀ ಶಿವನಿಗೆ ನುಡಿದದ್ದು )

ಕಂದ ಪದ್ಯಂ.

೩೦ ಆ ಬಳಿಕ ದೊರೆಯುವಮಾತ್ಯಂ |
ಶೋಭಿಸದಿದು ಶಿವನೆ! ರಾಜ್ಯವಿದು ಮಗಳದು ಮ ||
ತ್ತೀಬವಣೆಯು! ಅರಸಿಗೆ ದೇ |
ವಾ! ಬಗೆಯೆಂದನಭವಂಗೆ ತಡೆಯುದಲಾತಂ ||
ವಚನಂ- ಆಗಳಭವನುಮಾಧವನೆಂದನೆಂತೆನೆ ||

ಕಂದ ಪದ್ಯಂ.

೩೧ ಬಿಡು! ಸಚಿವ! ಹೀನನುತಿಯುಂ |
ಬಡಿವಾರಂ ಭಕ್ತಿಯಲ್ಲ! ಶುಚಿಚಿತ್ತಂಕಾಣ್! ||
ಬಿಡು! ದೂಡೀಗಳೆ! ರಾಣಿಯು |
ಬಿಡದಿರೆ ಕೆಡುವೆ ತಿಳಿ! ನೋಡು-ನೋಡೈ! ಅರಸಾ! ||

( ನಾವೆಂಬುದುಪಯೋಗದ್ದಲ್ಲ. )

೩೨ ನಾವಾಣ್ಮರ್- ಸಿರಿವಂತರ್ |
ನಾವೆಲ್ಲಕ್ಕಾಢ್ಯರೆಂದು ವಿಭುಸುತೆ ಕೆಟ್ಟಳ್ ||
ನಾವೆಂಬುದಲ್ಲ! ದೇವಂ |
ಭಾವಿಸನನ್ಯವ ಸುಭಾವಮೊಂದಂ ನೋಳ್ಪಂ ||

( ಅರಸನು ವಿಚಾರವಮಾಡಿದ್ದು. )

ವಚನಂ- ಬಳಿಕ ವಿಶ್ವೇಶನುದ್ರೇಕದಿಂ ವಿಧಿಸಿದ ವಿಷಾದವುಂ ವಿಭುವಿ ಭಾವಿಸಿ.

( ಅರಸನು ರಾಣಿಯುನ್ನು ಬಿಟ್ಟದ್ದು ಆಕೆ ಪರಪುರದೊರ್ವ ಮುದು-
ಕೆಯು ಬಳಿಗೆ ಬಂದು ಬೇಡಿದ್ದು. )

ಭಾ. ಷಟ್ಪದಿ

೩೩ ಹರನ ನುಡಿಗೇಂ ಯತ್ನವಿಲ್ಲದೆ |
ದೊರೆಯುರಸಿಯುಂ ಬಿಡಲವಳು ಗತಿ |
ಯಿರದೆ ಪರಪುರವಾಂತು ವೃದ್ಧೆಯದೊಬ್ಬಳು ಕಂಡು ||
ಪೊರೆವರಾರಿಲ್ಲೆನಗೆ ಧನ್ಯಳೆ! |
ಕರುಣದಲಿ ನೀಂ ಪೊರೆವುದೆಂದುರೆ |
ಮೊರೆಯುನಿಟ್ಟರೆ ದಯುದ ಮನದಾ ಮುದುಕೆಯಿದಕೇಳ್ದು ||

— ಮುಂದೆ ಸಾಗುವದು —

# ಜನಪದ ಸಾಹಿತ್ಯ.

## ಹಳ್ಳಿಯ ಹಾಡುಗಳು.

ಸಂಗ್ರಾಹಕರು : " ತಿಮ್ಮಣ್ಣ "

ಕಟದ ಕಲ್ಲಿನಮ್ಯಾಲ ಕಟ್ಟ್ಯಿತೊ ಕಾಲೋಡ | ಎತ್ತ ನೋಡಿದರ ಹುಲಿಮುಕ |
ಎತ್ತ ನೋಡಿದರ ಹುಲಿಮುಕದ ಅಗಸ್ಯಾಗ | ಕಾದ ಬಿದ್ದಾವೊ ಕೌಲೆತ್ತು ||೧||
ಜೋಳದ್ಧಂತಿಗೆ ಕಟ್ಟಿ ನಾಳೀಗೆ ತಿಂಗಳಾತು | ಆನಿ ಮೆಟ್ಟಿದರ ಸವಿಯಾವೊ |
ಆನಿ ಮೆಟ್ಟಿದರ ಸವಿಯಾವೊ ನಮ್ಮಬಸವನ | ಕೊಳಗ ಮೆಟ್ಟಿದರ ಉಳಿಯವೊ||೨||
ಬೆಳ್ಳನ್ನ ಎರಡೆತ್ತು ಬೆಳ್ಳಿಯ ಬಾರಕೋಲು । ಬಂಗಾರಶೆಡ್ಡಿ ಬಲಗಯ್ಯ |
ಬಂಗಾರಶೆಡ್ಡಿ ಬಲಗಯ್ಯನವಬಸವ | ಹೊಳಿಸಾಲ ಹೊನ್ನ ಬೆಳದಾನೋ ||೩||
ಶಿರಹಟ್ಟಿ ದಾರ್‍ಯಾಗ ಶಿರಿಗಂಧದ ಮರಹುಟ್ಟಿ | ನರಗುಂದ ಬೇರ ಇಳಿದಾವೊ |
ನರಗುಂದ ಬೇರ ಇಳಿದಾವೊ ಯಮನೂರ | ದರ್ಗಾಕ ಮುಗ್ಗಿ ಸುರದಾವೊ ||೪||
ಆಡಿನ್ಹಿಕ್ಕಿ ತಂದು ತೀಡಿ ಲಿಂಗವ ಮಾಡಿ ! ನೋಡಿ ಆ ಶಿವನ ಮೈಮಾಟ |
ನೋಡಿ ಆ ಶಿವನ ಮೈಮಾಟ ಗೊಲಗೇರಿ ಲಿಂಗ | ಆಡಿನ್ಹಿಕ್ಯಾಗ ನೆನದಾನೇ ||೫||
ಬಸವ ಬಂಡಿಯನೇರಿ ಶಿವನು ನಂದಿಯನೇರಿ | ಪಾರ್ವತಿದೇವಿ ರಥನೇರಿ |
ಪಾರ್ವತಿ ದೇವಿ ರಥನೇರಿ ಬರುವಾಗ । ಬಂದ ಕಂಟಕ ಬಯಲಾಗೆ ||೬||
ಅಡಕಿಲೆಕಟ್ಟಿ ಆ ಕಿಡಿಕಿಬಾಗಲ ಕೋಟಿ । ಹುಡಕಿದರ ಕಲ್ಲು ಸಿಗಲಿಲ್ಲ |
ಹುಡುಕಿದರ ಕಲ್ಲು ಸಿಗಲಿಲ್ಲ ಪರಂಗೇರು | ಮಿಡಿಕಿದರ ಕೀಲಿ ಬರಲಿಲ್ಲ ||೭||
ಕಾತರಕಿ ಹಳದಾಗ ಕಾತೀವ ಮಲ್ಲಿಗಿ | ಕೋತಾರೋ ಜಾಣರ ಹಿಡಿತುಂಬ |
ಕೋತಾರೊ ಜಾಣರ ಹಿಡಿತುಂಬ ನಮ್ಮೂರ ! ಅಕ್ಕದ್ಯಾಮವ್ವನ ತುರಬೀಗೆ ||೮||
ಪಂಚ್ಯಾಳರೋಣ್ಯಾಗ ಮಿಂಚಾಡೋದೇನೇ | ಕಂಚಿನಗಾಲಿ ಹೊಸತೇರೋ |
ಕಂಚಿನಗಾಲಿ ಹೊಸತೇರ ದ್ಯಾಮವ್ವ | ಪಂಚಾಳರ ಮಗಳ ಬರುವಾಗ ||೯||
ಹಬ್ಬ ಗುಡ್ಡದ ನಡುವ ಸಬ್ಬಿ ಕೂರಿಗಿ ಹಾಕಿ | ಬಂಗಾರಶೆಡ್ಡಿ ಬಲಗಯ್ಯ |
ಬಂಗಾರಶೆಡ್ಡಿ ಬಲಗೈಯಲ್ಲಿಡಕೋಡು | ಹೊನ್ನ ಬಿತ್ತ್ಯಾನೊ ಬೆಳಿಸಾಲ ||೧೦||
ಬೆಳ್ಳನ್ನ ಎರಡೆತ್ತು ಬೆಳ್ಳಿಯ ಹಣಿಕಟ್ಟು । ಹಳ್ಳದ ಹೊಲವ ಹರಗುವ |
ಹಳ್ಳದ ಹೊಲವ ಹರಗುವ ಹುಡುಗನ | ತೆಳ್ಳನ್ನ ಹೊಟ್ಟಿ ಹಸದಾವೊ ||೧೧||

# ಚಹ ಗೀತೆ.

ಕವಿ :— ಮಲ್ಲನಗೌಡ ಹೊಮ್ಮರಡಿ.

ಧಾಟಿ :- "ಕನ್ನಡ ಕಲಿಗಳೆ ಕಣ್ಗಳ ತೆರೆಯಿರಿ" ಎಂಬಂತೆ.

ಧನ್ಯನು! ಧನ್ಯನು! ಧನ್ಯನಾದೆನು |
ಘನ್ನ ಪರಾಕ್ರಮಿ ಬಿಸಿ ಚಹ ರಾಜ್ಯದಿ ||
ಎನ್ನ ಸಮಾನರದಾರಿಹರಮುಮಾ ! |
ಎನ್ನನು ಕೊಲ್ಲುವ ಚಟಗಳ ಸೇವೆಲಿ ||ಪ||

ಕಪ್ಪು-ಬಸಿಯಲಿ ಚಹವನು ಸೇವಿಸಿ |
ಭಪ್ಪರೆ! ಧನ್ಯನು! ಮಾನ್ಯನು! ಆದೆನು ||
ತುಪ್ಪದ ದೋಸೆಯ ಗಪ್ಪ ಗಪ್ಪನೆ ತಿಂದು |
ಜಪ್ಪಿಸಿ ರೊಕ್ಕವ ತಪ್ಪಿಸಿ ಬಂದೆನು ||೧||

ಬಿಸಿ ಬಿಸಿ ಚಹವನು ಹಸಿವಿಸಿ ನೋಡದೆ |
ಬಿಸಿಯೊಳು ಕುಡಿದೆನು ಭಪ್ಪರೆ! ವೀರಾ ||
ಹಸಿಬಿಸಿ ಭಜಿಯನು ಶಿರವನು ತಿಂದೆನು |
ದಶ ದಶ ಸಾಸಿರ ಹಣವನು ಕಳೆದನು ||೨||

ಕೋಟನು ಬೂಟನು ಹ್ಯಾಟನು ಧರಿಸಿದ |
ಮಾಟದ ಮಂಗನ ಥಾಟಲೆ ನಾನು ||
ಪೇಟೆಲಿ ಅಲಿಯುತ ಸಿಗರೇಟ ಸೇದುತ |
ನೋಟವ ಬೀರುತ ಮೆರೆದನು ಶಾಭಾಶ್ ||೩||

ದೇಶಿಯಸಾಬನ ನೋಡುತಲೆಲ್ಲರು |
ಹೇಶಿಯ ನೋಡೆಂದ್ಹಾಸ್ಯವ ಮಾಳ್ಪರು ||
ಸೋಸಿಲೆ ಭಾರತ ಧರ್ಮವ ಬಿಡುತಲೆ |
ದೋಸೆಯ ಧರ್ಮದಿ ಮೆರೆದೆನು ಹಾ! ಹಾ! ||೪||

ಚನ್ನಿಗ ಚಹವೇ ನಿನ್ನನು ನುತಿಸುವ |
ಕನ್ನಡ ಕವಿ ಹೊಮ್ಮರಡಿಯ ಮಲ್ಲನು ||
ಘನ್ನ ರೋಗಗಳ ಸಗ್ಗವ ನೀಡುತೆ |
ಮನ್ನಣೆಯಿಂದಲಿ ಪೊರೆಯೈ ನಿರುತವು ||೫||

ಲೋಕದಲ್ಲಿ ಕವಿಗಳು, ಸಾಮಾನ್ಯ ಜನರಿಗೂ ಕೂಡಾ ಅಜ್ಞಾನ ನಿವೃತ್ತಿಯಾಗಿ ಉತ್ತಮಗತಿ ದೊರೆವುದಕ್ಕೂ ವ್ಯಸನಾದಿಗಳಲ್ಲಿ ಶಿಕ್ಕಿಬಿದ್ದವರಿಗೆ ಮನೋರಂಜನೆಯಾಗಿ ಕಾರ್ಯಗಳಲ್ಲಿ ತವಕವುಂಟಾಗುವದಕ್ಕೂ ನೆರವಾಗಲೆಂದು ಅಸಾರವಾದ ಸಂಸಾರ ಸ್ವರೂಪವನ್ನು ಕಾಲದೇಶ ಪದಾರ್ಥಗಳ ಸ್ವಭಾವಗಳೊಡನೆ ಚಮತ್ಕಾರವಾಗಿ ವಿವರಿಸಿ ಮಹಾನದಿಗಳಂತೆ ಎಡೆಬಿಡದೆ ಪರೋಪಕಾರ ಮಾಡತಕ್ಕವುಗಳಾಗಿಯೂ, ಯಾವಾಗಲೂ

# ಕಾವ್ಯಕುಂಜ.

ಬೇಕಾದವರೆಲ್ಲರ ಹತ್ತಿರದಲ್ಲೂ ಇದ್ದು ಸದ್ಗುರುವಿನಂತೆ ಹಿತವನ್ನು ಬೋಧಿಸತಕ್ಕವಾಗಿಯೂ ಇರುವ ಅಮೌಲ್ಯವಾದ ಗ್ರಂಥಗಳನ್ನು ರಚಿಸುವರು. ಹೀಗೆ ಗ್ರಂಥ ಮುಖದಿಂದ ಹಿತೋಪದೇಶ ಮಾಡುತ್ತ ಲೋಕಕ್ಕೆ ಪರಮಗುರುಗಳಾಗಿರುವ ಕವಿಗಳ ಹಂಗನ್ನು ಮನುಷ್ಯರು ಎಂದಿಗೂ ತೀರಿಸಿಕೊಳ್ಳಲಾರರು.

ವೇ|| ಎಸ್. ತಿಮ್ಮಪ್ಪಯ್ಯ ಶಾಸ್ತ್ರಿಗಳು
ಮೈಸೂರ ಕನ್ನಡಸೀನಿಯರ ಪಂಡಿತರು.

ಕರ್ನಾಟಕ ಸಾಹಿತ್ಯಪರಿಷತ್ಪತ್ರಿಕೆಯ ೨ ನೇ ಸಂಪುಟ
೨ ನೇ ಸಂಚಿಕೆಯಿಂದ ಅವತರಿಸಿದ್ದು.

ಸಕಲ ಧರ್ಮದವರಿಗೂ ಸಕಲ ಮತದವರಿಗೂ ಪರಮ ಪೂಜ್ಯನಾಗಿ, ಇಂದು ಸುಧಾರಣೆಯ ಶಿಖರವನ್ನೇರಿದ ಜನಾಂಗಗಳಲ್ಲಿ ಹರಡಿದ್ದ ಬಾಲವೀರ ಚಳವಳಿ ( Scout system ) ಪುರಸ್ಕರ್ತನೂ ಅಧಿ ದೈವತವೂ ಆದ ಭಾರತೀಯರ

# ಆದರ್ಶವೀರನ ಪುಣ್ಯಸ್ಮರಣೆ.

ಕವನಗಾರರು: ಶ್ರೀ. ಬಾಲೇಹೊಸೂರ ರಾಮರಾಯರು.

ಕಾಮುದಾ ವೃತ್ತಗಳು :—

ಜಯತು ರಾಮನಾ ಪ್ರೇಮ ಸೇವಕಾ ।
ಜಯತು ಲಕ್ಷ್ಮಣಾ ಪ್ರಾಣಪಾಲಕಾ ॥
ಜಯತು ಕಪಿವರಾ ಜ್ಞಾನದಾಯಕಾ ।
ಜಯತು ಭಕುತರಾ ಭೀಷ್ಟದಾಯಕಾ ॥೧॥

ಕರುಣ ವಾರಿಧೆ ವೀರ ಹನುಮನೆ ।
ಪರಮ ಪಾವನ ಶರಧಿ ಲಂಘನಾ ॥
ಶರಣು ಬಂದೆನೊ ಸುರರಿಗೊಂದ್ಯನೆ ।
ವರ ಗಣಾರ್ಣವಾ ಮರುತನಂದನಾ ॥೨॥

ಸಾಧು ರನ್ನನೆ ಸಾಧಿ, ಶೋಧನೆ ।
ಹೇ ದಯಾನಿಧೆ ವೇದ ವೇದ್ಯನೆ ॥
ಖೇದ ನಾಶಕ ಮೋದ ಕಾರನೆ ।
ಶ್ರೀದ ರಾಮನಾ ಪಾದಸೇವ್ಯನೆ ॥೩॥

ಕಪಿ ಕುಲೇಂದ್ರನೇ ಉಪಮೆ ರಹಿತನೆ ।
ನೃಪತಿ ರಾಮನಾ ಕೃಪಗೆ ಪಾತ್ರನೆ ॥
ನಿಪುಣ ಮತಿಯುತಾ ಪಾರಮಹಿಮನೆ ।
ವಿಪದಿ ರಕ್ಷಕಾ ತಪದಿ ಶ್ರೇಷ್ಠನೆ ॥೪॥

ಭುಜಬಲಾಢ್ಯನೆ ವಿಜಯ ಶಾಲಿಯೆ ।
ಕುಜನ ಕಾಲನೆ ಅಜಿತ ಶೌರಿಯೆ ॥
ಸುಜನ ಸೇವಿತಾ ಅಜರ ದೇಹಿಯೆ ।
ಭಜಕಜನರಘ ವೃಜವಿನಾಶಿಯೆ ॥೫॥

ಧರುಣಿ ಪುತ್ರಿಗೆ ಧೈರ್ಯದಾತನೆ |
ಅರಿಭಯಂಕರಾ ವೀರವಂತನೆ ||
ನಿರತಿ ಪೂರಿತಾ ವರವಸೀವನೆ |
ತರುಣಿ ಕುಲಮಣಿ ಚರಣದಾಸನೆ ||೬||

ಗಾನ ನಿಪುಣನೆ ದೀನರೊಡೆಯನೆ |
ಭಾನುತೇಜನೆ ಮಾನವಂತನೆ ||
ವಾನರೇಂದ್ರನೆ ದಾನಶೂರನೆ |
ದಾನವೇಂದ್ರನಾ ಮಾನಖಂಡನಾ ||೭||

ದ್ರೋಣಗಿರಿಯನು ತಂದ ಧೀರಗೆ |
ಜ್ಞಾನವಾರಿಧಿ ಪೂರ್ಣ ಚಂದ್ರನೆ ||
ಧ್ಯಾನ ಮಾಳ್ಪರಾ ಮನದಿ ತೋರ್ಪನೆ |
ಕ್ಷೋಣಿ ತಲದೊಳು ಪುಣ್ಯನಾಮನೆ ||೮||

( ಇದೇ ಪದ್ಯಕ್ಕೆ ಧಾರವಾಡದ ಶ್ರೀ ಬಾಲಮಾರುತಿ ಸಂಸ್ಥೆಯವರು ಏರ್ಪಡಿಸಿದ ೧೯೩೭ ನೇ ಇಸ್ವಿಯ 'ಕಾವ್ಯ ಪರೀಕ್ಷೆ' ಯಲ್ಲಿ ಮೊದಲನೆ ತರಗತಿಯ ಬಹುಮಾನವು ದೊರೆತಿದೆ.

## "ಅಲ್ಲಮನ ಸಲ್ಲು"

೧ ದೇವರಲ್ಲಿ ನಂಬಿಗೆ ಇಡು.
೨ ಸರ್ವದಾ ಒಳ್ಳೇ ಆಲೋಚನೆ ಮಾಡು.
೩ ಕಷ್ಟಕಾಲಕ್ಕೆ ಆನಂದದಿಂದ ಇರು.
೪ ಸುಖದಿಂದ ಇದ್ದ ಕಾಲಕ್ಕೆ ಗರ್ವಿಯಾಗಬೇಡ.
೫ ಸ್ವಾರ್ಥಿಗಳ ಗೆಳೆತನ ಮಾಡಬೇಡ.
೬ ಸತ್ಯದಿಂದ ಹಿತ ಸಾಧಿಸು.
೭ ಜಾರನಾಗಬೇಡ.
೮ ಕುಡುಕನಾಗಬೇಡ.
೯ ಅಧೀರನಾಗಬೇಡ.
೧೦ ಹಸಿದವರನ್ನು ತಿರಸ್ಕರಿಸಬೇಡ.
೧೧ ಮುಯ್ಯಕ್ಕೆ ಮುಯ್ಯ.
೧೨ ಸಾಲ ಕೊಡಬೇಡ. ಮಾಡಬೇಡ.
೧೩ ನಾಳೆಗೆಂದು ಚಿಂತಿಸಬೇಡ.

# ಬಾಡಿದ ಹೂವು!

( —ಶಂಕರಭಟ್ಟ ಅಗ್ನಿಹೋತ್ರಿ ನವಲಗುಂದ )

ಎಲ! ಈಗ ನೀನು ಹೀಗೇಕೆ? ಇಂದು ಬೆಳಗಿನಲ್ಲಿ ತೊಳಗುತ್ತಿದ್ದ ನೀನು, ಈಗೇಕೆ ಹೀಗೆ ಅಳಲಿಗೀಡಾದೆ? ಮೊದಲು ನಿನ್ನ ಮೊಗದಲ್ಲಿ ನಗುವಿತ್ತು. ನಗೆಯಲ್ಲಿ ಬಿಗುವಿತ್ತು. ಈಗ ತಾಯಿಯನಗಲಿದ ಮಗುವಿನಂತೆ ನಿನ್ನ ಗತಿಯಾಗಿದೆ. ನನ್ನ ಮುದ್ದಿನ ಹೂವೇ, ಹೇಳು ಹೇಳು. ನೀನು ಹೀಗೇಕಾದೆ?

ನಿನ್ನನ್ನು ಬಳಸಿ, ತಮ್ಮ ಇಂಚರದಿಂದ ಬಗೆಗೊಳಿಸುತ್ತಿದ್ದ ಆ ಅಳಿಗಳೆಲ್ಲಿ? ನಿನ್ನ ಸುರಭಿ-ಸರ್ವಸ್ವವನ್ನು ಸೂರೆಗೈಯ್ದ ಆ ಚೋರರೆಲ್ಲಿ? ಮೈಗಂಪನ್ನು ನಿನಗಿತ್ತು ಮೆಲ್ಲಗೆಯಿಂದ ಆದರಿಸಿ, ನಗೆ ನೋಟದಿಂದ ನೋಡಿ, ಮಿದುವಾದ ಕೈಯಿಂದ ಮುಟ್ಟಿ ಮುದ್ದಿಟ್ಟು ಉಲ್ಲಗೆಯ್ಯುತ್ತಿದ್ದ ಆ ಫುಲ್ಲನೇತ್ರೆಯರೆಲ್ಲಿ? ದುಡುದುಡುಬಂದು ಬಡಬಡ ಹಿಡಿದು, ಬಾಯಿಂದ ಏನೇನೋ ಬಡಬಡಿಸುತ್ತ ತಟಕ್‌ನೆ ಹರಿದು ಪಟಕ್‌ನೆ ಜಿಗಿದು ಹೋಗುವ ಆ ಗೋಪಾಲ ಬಾಲಕರೆಲ್ಲಿ? ಸೊಲ್ಲು ಸೊಲ್ಲಿಗೆ 'ಶಿವಶಿವ' ಎನ್ನುತ್ತ ನಿಂದಲ್ಲಿ ನಿಲ್ಲದೆ ಶಿವನಪೂಜೆಗೆಂದು ನೆವಮಾಡಿ, ಅರಳು ಮೊಗ್ಗುಗಳನ್ನು ತಿರಿದುಕೊಂಡು ಮನೆಗೆ ಹೋಗಿ ತರುಣಿಯ ತಲೆಗೆ ಮಾಲೆಮಾಡಿಮುಡಿಸಿ, ನಲಿದಾಡುವ ಬಲ್ಲಿದ ಭಕ್ತರೆಲ್ಲಿ? ಈಗಾರೂ ನಿನ್ನ ಹತ್ತರ ಬಾರರು. ಯಾರಿಗೆ ಯಾರೋ ಪುರಂದರವಿಠಲ!

\+ \+ \+ \+ \+

ಎಲೇ ಸುಮನವೇ, ನೀನು ತರುಣಿಯ ಕಿರಣಗಳಲ್ಲಿ ತಪವ ಮಾಡಿದೆ! ಊರ್ಧ್ವದೃಷ್ಟಿಯಿಂದ ನೋಡಿದೆ. ವಿಷ್ಣುಪದಕ್ಕೆ ಗಂಧವನ್ನು ನೀಡಿದೆ! ಸದ್ಗತಿಯ ನೀಡೆಂದು ಬೇಡಿದಿ! ಇಷ್ಟೆಲ್ಲ ಮಾಡಿಯೂ ಕಡೆಗೆ ನೀನು ಹೀಗೆ ಬಾಡಿದೆ! ತಕ್ಕನೇ ನೀನು ಭಕ್ತಿಯಿಂದ ಪರಮಾತ್ಮನ ಪದದಲ್ಲಿ ಬೀಳಲಿಲ್ಲ. ಸತ್ಕರ್ಮಗಳಿಂದ ಸ್ವರ್ಗಕ್ಕೇರಲಿಲ್ಲ. ಕಾಮಿನಿಯ ಕೊರಳನ್ನಪ್ಪಿ ಭೋಗಿಯಾಗಲಿಲ್ಲ. ಅಂತೇ ನಿನ್ನ ಜೀವಿತವು ವಿಫಲವಾಯಿತು.

ಕುಸುಮವೇ, ನಿನಗೆ ಚಲುವಿಕೆಯ ಮದವು ಬಲವಾಗಿತ್ತು. ಒಮ್ಮೆ ನಸುನಗೆಯಿಂದಲೂ ಮತ್ತೊಮ್ಮೆ ಪುಸಿನಗೆಯಿಂದಲೂ ಹೀಯಾಳಿಸುತ್ತಿದ್ದೆ. ನಿನ್ನ

ಸಿರಿಯ ಸೊಕ್ಕು ಹಿರಿದಾಗಿತ್ತು ಯಾಚಕರನ್ನು ಕಂಡು ನಗುತ್ತ ಹೋಗು ಹೋಗೆಂದು ತಲೆಯನ್ನಲ್ಲಾಡಿಸುತ್ತಿದ್ದೆ. ಮಾರುತನ ಪ್ರೇರಣೆಯ ಬಲದಿಂದ ಇಂಥ ಎಷ್ಟೋ ಕುಚೇಷ್ಟೆಗಳನ್ನು ಬಡವರಿಗೆ ಮಾಡುತ್ತಿದ್ದೆ. ಈಗ ಆ ಮಾರುತನೇ ನಿನ್ನನ್ನು ಕಿತ್ತು ಕೆಡವಿ, ಒದೆದು ಸದೆದು, ಹಾರಿಸಿ ತೂರಿಸಿ, ಕಲ್ಲು ಮುಳ್ಳುಗಳ ಕಟ್ಟಡವಿಯಲ್ಲಿ ಕಣ್ಣುಕಟ್ಟಿಕೊಳ್ಳುತ್ತಿರುವನು! ಎಲ್ಲಿದೆ ನಿನ್ನ ಚಲುವಿಕೆಯ ಮದವು? ಎತ್ತ ಹೋಯಿತು ನಿನ್ನ ಸಿರಿತನದ ಗರುವು? ಎಲ್ಲಿರುವರು ನಿನ್ನ ಹಿತಚಿಂತಕರು?

\+ + + + +

ಪುಷ್ಪವೇ, ನಿನಗಿದು ಕಾಮನಬಾಣವಾದದ್ದರ ಫಲವು! ಪ್ರೇಮ ಪಾಠವನ್ನು ಕಲಿತದ್ದರ ಪರಿಣಾಮವು! ನಾರಿಯರ ಓರೆನೋಟಕ್ಕೆ ಮರುಳಾದದ್ದರ ಗತಿಯು! ಫಲಾಪೇಕ್ಷೆಯನ್ನು ಮಾಡಿದ್ದರ ಪ್ರಾಯಶ್ಚಿತ್ತವು! ಕಮ್ಮಲರೇ, ನಾನು ನಿನ್ನನ್ನು ಬರಿದೆ ಟೀಕಿಸುವೆನೆಂದು ಸಿಟ್ಟಿಗೇಳಲುಬೇಡ. ನೀನೆಷ್ಟೇ ಒಳ್ಳೆಯವನಿದ್ದರೂ ಗುಣವಂತನಾಗಲಿಲ್ಲವಲ್ಲ ಎಂದು ಗುಣಗುಟ್ಟುವದೇನೂ ನನ್ನ ಪಾಲಿಗೆ ತಪ್ಪಲಿಲ್ಲ. ಇದು ತಪ್ಪೆಂದರೂ ಒಪ್ಪು!

\+ + ÷ + +

ಪೂಷ್ಪೆ, ನಿನ್ನ ಪಕಳೆಗಳು ನೆಲದ ಪಾಲಾದವು. ಮರಂದರಸವು ಜಲದಲ್ಲಿ ಲಯವಾಯಿತು. ಕಳೆಯು ಅನಲದಲ್ಲಿ ಐಕ್ಯವಾಯಿತು. ಪರಾಗವು ಗಾಳಿಯಲ್ಲಿ ಕೂಡಿತು. ದನಿಯು ಆಗಸದಲ್ಲಡಗಿತು. ಈಗ ನೀನು ಉಪಾಧಿಯಿಂದ ಮುಕ್ತನಾದೆ. ನೀನೇ ನೀನಾದೆ- ಕ್ಷಣಿಕ ಸುಖವೀವ ಸಂಸಾರವನ್ನುಳಿದು, ಶಾಶ್ವತ ಸುಖಸರ್ವಸ್ವರೂಪನಾದ ಪರಮೇಶನ ಚರಣ ಸನ್ನಿಧಿಯ ಸೇರಿದೆ! ಹ್ಯಾಗಿದ್ದರೂ ನೀನೇ ಧನ್ಯನು ಧನ್ಯನು!!

ನವಲಗುಂದದ ವಿದ್ಯಾರಣ್ಯ (ಕೈಬರಹದ) ಮಾಸಪತ್ರಿಕೆಯಿಂದ.

---


## ಆಭಾರ ಪ್ರದರ್ಶನ.

ಚಂದ್ರಿಕೆಯ ವಾಚನಾಲಯಕ್ಕೆಂದು "ಸಂಯುಕ್ತ ಕರ್ನಾಟಕ" ದಿನ ಪತ್ರಿಕೆಯನ್ನು ದಯಪಾಲಿಸಿದುದಕ್ಕಾಗಿ ನಾವು ಶ್ರೀಯುತ ಕೃಷ್ಣರಾವ ನೂಲ್ವಿ ಇವರಿಗೆ ತುಂಬಾ ಋಣಿಯಾಗಿದ್ದೇವೆ.

ಶಿರಹಟ್ಟಿ.
ವೀರಶೈವ ಚಂದ್ರಿಕೆ ಆಫೀಸ
ತಾರೀಖು ೧೨—೧೨—೧೯೩೪ ಇಸ್ವಿ. } ಮುರಿಗೇಂದ್ರ ಶೆಟ್ಟರು.
ಸಂಪಾದಕರು.

# " ಮುಳ್ಗಳ್ಳಿಯ ಗತಿ ನೋಡಿದಿರಾ? "

ಕವನಗಾರ: ಶ್ರೀ. ಶಂಕರರಾವ ಕುಲಕರ್ಣಿ.

ಮುಳ್ಗಳ್ಳಿಯ ಗತಿ ನೋಡಿದಿರಾ ||ಪ||
ಸುತ್ತು ಮುತ್ತು ಲೂ ಒಳಗೂ ಹೊರಗೂ |
ಊರೊಳು ನಾಲ್ಕೂದಿಕ್ಕಿನೊಳಾಸ್ಪದ |
ಸಿಕ್ಕಿಲ್ಲೆಡೆಯೊಳು ಹುಟ್ಟುತೆ ಬೆಳೆದು |
ಹಸರು ಬಂಣವಾ ಬೀರುತಲಿರುವಾ |
ಮುಳ್ಗಳ್ಳಿಯ ಗತಿ ನೋಡಿದಿರಾ ||೧||
ಬರಗಾಲದಿ ಬೆಳೆ ಬಾರದಿ ಹೋಗಿ |
ಜನ ದನಗಳ ಹೊಟ್ಟೆಗೆ ಸಿಗದಿರಲು |
ಹಂಣೆಲೆಗಳನು ಪೂರೈಸುತಲಿ |
ಅನ್ನವ ನೀಡಿದ ಪುಣ್ಯವ ಪಡೆದಾ |
ಮುಳ್ಗಳ್ಳಿಯ ಗತಿ ನೋಡಿದಿರಾ ||೨||
ಇಳಿಯಲು ಸ್ಥಳ ಕೊಟ್ಟರೆ ಮನೆ ನನ್ನದು |
ಎನ್ನುತ ಮನೆಯವರನು ಹೊರಗಟ್ಟುವ |
ತೆರದಿಂ ಬೇಲಿಯು ಹಚ್ಚಲು ಹೊಲವನೆ |
ವ್ಯಾಪಿಸಿ ಬೆಳೆಯನ್ನೆಲ್ಲ ಸುಡುತಿಹ |
ಮುಳ್ಗಳ್ಳಿಯ ಗತಿ ನೋಡಿದಿರಾ ||೩||
ದಾರಿಗಳನು ಕಂಟಕಮಯ ಮಾಡಿ |
ಕಾಕು ಕರ್ಮಗಳ ತಾ ಮರೆ ಮಾಡಿ |
ಕಳ್ಳಕಾಕರಿಗೆ ಆಶ್ರಯ ನೀಡಿ |
ಶ್ವಾಪದ ಗಣಗರ ಮನೆ ಮಾಡಿ |
ಮುಳ್ಳುಗಳ್ಳಿಯ ಗತಿ ನೋಡಿದಿರಾ ||೪||
ಕಡಿದು ಬೇರುಸಹ ಕಿತ್ತು ಒಗೆದರೂ |
ಬೆಂಕಿ ಇಟ್ಟು ಸುಟ್ಟರು ಸಾಯದಲೆ |
ರಕ್ತ ಬೀಜ ರಕ್ಕಸನಂದದಿ ಅತಿ |
ಸೊಕ್ಕಿಲಿ ಹೆಚ್ಚೆಚ್ಚಾಗಿ ಬೆಳೆಯುವಾ |
ಮುಳ್ಗಳ್ಳಿಯ ಗತಿ ನೋಡಿದಿರಾ ||೫||
ಪಕ್ಕದಲೆರಡು ಸುಂಣದ ರೆಕ್ಕೆ |
ಪುಟ್ಟ ಹೊಟ್ಟೆಯೂ ನೊರಜಿನ ಜಾತಿಯು |
ಹುಳಗಳು ದಾಳಿಯ ನಿಟ್ಟು ಮುತ್ತಲು |
ಹೇಳ್ಹೆಸರಿಲ್ಲದೆ ನಾಶ ಹೊಂದುವಾ |
ಮುಳ್ಗಳ್ಳಿಯ ಗತಿ ನೋಡಿದಿರಾ ||೬||

# ಇದೂ ಒಂದು ಕಾವ್ಯವೇ !

ಎಲೈ ಗಡ್ಡಿಯೇ ! ನಿನಗೆ ಇಷ್ಟೊಂದು ಮಾನವು ದೊರೆಯಬೇಕಾದರೆ ಪೂರ್ವಜನ್ಮದ ನಿನ್ನ ಸುಕೃತವು ಬಲವಾದದ್ದಿರಬೇಕು. ನೀನು ಕನ್ನಡಿಗನಲ್ಲ. ಮಹಾರಾಷ್ಟ್ರದವನಲ್ಲ. ತೆಲಗು ಮೊದಲಾದ ಇತರೇಯುವನೂ ಅಲ್ಲ. ಕೇವಲ ಪರದೇಶಿಕನು ! ಇಟಲಿಯುವನು. ಇಟಲಿ ಎಂದರೆ ಇಲ್ಲಿಗೆ ಸಾವಿರಾರು ಹರದಾರಿ ! ಸಮುದ್ರವನ್ನು ದಾಟಿ ಇಲ್ಲಿಗೆ ಬಂದು ನೀನು ಕೊಬ್ಬಿದೆಯಲ್ಲವೇ ! ಅಹಂಕರಿಸಬೇಡ ! ಜೋಕೆ !

ನೀನು ಪೂರ್ವಾಶ್ರಮದಲ್ಲಿರತಕ್ಕ ಮುನಿಗಳು ತಿನ್ನುವಂಥ ಗಡ್ಡೆ-ಗೆಣಸುಗಳನ್ನು ಮರೆಸಿದನೆಂದು ಹೆಮ್ಮೆ ಪಡಬೇಡ ! ಚಹಾ ಸಾಮ್ರಾಜ್ಯ ವೈಭವಮಂದಿರದಲ್ಲಿ ಅಗ್ರಪೂಜೆಯೆಂದೂ ಅಹಂಕರಿಸಬೇಡ.

ಎಲೈ ಪಿಷ್ಟಾವಕುಂಠಿತನೇ ! ನಿನ್ನ ರೂಪವು ಅಷ್ಟೊಂದು ಹೇಳಿಕೊಳ್ಳುವಂಥಾದ್ದಿಲ್ಲ ! ಮೈತುಂಬ ಛಿದ್ರ-ಛಿದ್ರಾನ್ವೇಷಿಯಾದ ನಿನಗೆ ತಾಯಿ-ತಂದೆಗಳೇ ಇಲ್ಲ ನಿನ್ನ ಛಿದ್ರದಲ್ಲಿಯೇ ನೀನು ಜನಿಸುವಿ. ಹೀಗಿದ್ದು ನಿನ್ನ ಹೆಮ್ಮೆ ಹೆಚ್ಚಿನದು.

ನಿನ್ನಲ್ಲಿ (ಟಾನಿಕ) ಗುಣವು ಒಳ್ಳೇದ್ದಾಗಿರುವದರಿಂದ ನಿನ್ನನ್ನು ಎಲ್ಲರೂ ಆರಾಧಿಸುವರು ಇಷ್ಟೇ !

ಕನ್ನಡ ನಾಡಿನಲ್ಲಿ ಕನ್ನಡಕ್ಕೆ; ಮಹಾರಾಷ್ಟ್ರದಲ್ಲಿ ಪರಭಾಷಾಸಹಿಷ್ಣುತೆಗೆ ಪ್ರಾಶಸ್ತ್ಯ ಇಲ್ಲದಿದ್ದರೂ ನೀನು ಮಾತ್ರ ಅಖಿಲ ಭಾರತವನ್ನು ಆಕ್ರಮಿಸಿಕೊಂಡು ಪ್ರಾಶಸ್ತ್ಯ ಹೊಂದಿರವೆ. ಆದರೆ ಮೂರ್ಖರ ತಲೆಬುರುಡಿಯೇ ನಿನ್ನ ವಾಸಸ್ಥಾನ ಎಂಬದಾಗಿ ಮಾತ್ರ ಲೋಕದ ಜನರು ವ್ಯವಹಾರದಲ್ಲಿ ಆಡಿಕೊಳ್ಳುವರು ಅದೇಕೋ ತಿಳಿಯದು !

ನಿನಗೆ ಅನಂತನಾಮಗಳಾಗಿದ್ದದರಿಂದ ಯಾವ ನಾಮದಿಂದ ಕರೆದರೆ ಒಳ್ಳೇದಾದೀತೆಂಬದನ್ನು ವಾಚಕರಕಡೆಗೊಪ್ಪಿಸಿ ನಿನಗೆ ಗಡ್ಡಿಯೆಂದು ಸಂಬೋಧಿಸಿದ್ದೇನೆ. ಇರಲಿ ! ವಾಚಕರು ಬೇಕಾದ ಹೆಸರಿನಿಂದ ನಿನ್ನನ್ನು ಕರೆಯಲಿ !

ಹಾಸ್ಯರಸ ಹುಟ್ಟಿಸಲೆತ್ನಿಸಿದವ

— ಭ್ರಾಂತೇಶ.

ಹಾಸ್ಯರಸವು, ವಾಚಕ ಪ್ರೇಕ್ಷಕ ಜನರಿಗೆ ನಗುವನ್ನುಂಟುಮಾಡುವದರ ಮೂಲಕ, ಕೇವಲ ಕಥಾಸಂವಿಧಾನದಿಂದ ಅವರಿಗುಂಟಾಗುವ ಜುಗುಪ್ಸೆಯನ್ನು ಹೋಗಲಾಡಿಸುವದಕ್ಕೆ ಸಹಕಾರಿಯಾಗುವದು. ಇಷ್ಟುಮಾತ್ರವಲ್ಲದೆ ಮಾನವ ವರ್ಗದಲ್ಲಿ ಕಂಡುಬರುವ ಕೆಲವು ದೋಷಗಳನ್ನು ತಿದ್ದಲೂಸಹ ಈ ಹಾಸ್ಯ ರಸವು ಸಹಕಾರಿಯಾಗುವದು.

ಮುತ್ಯಾ ನಾಗೇಶಾಚಾರ್ಯ ಬೀ. ಏ.

ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ ಸಂಚಿಕೆ ೪ ಸಂಪುಟ ೨

# ವಿವಿಧ ಸಾಹಿತ್ಯ.

ಪಾಶ್ಚಾತ್ಯ ನಾಗರಿಕತೆಯ ಪ್ರಬಲಸಂಘರ್ಷಣದಿಂದಲೂ, ಪ್ರಪಂಚದಲ್ಲಿ ಎಲ್ಲೆಡೆಯಲ್ಲಿ ಹರಡುತ್ತಿರುವ ಹೊಸಭಾವಗಳಿಂದಲೂ ಹಿಂದೆ ತಿಳಿಯದ ಎಷ್ಟೋ ವಿಷಯಗಳು ನಮ್ಮ ಭೌತಿಕಪ್ರಪಂಚವನ್ನು ಭಾವಪ್ರಪಂಚವನ್ನು ಪ್ರವೇಶಿಸಿ ನಮ್ಮ ಜೀವನದ ಬಣ್ಣವೇ ಬದಲಾಯಿಸಿದೆ. ಆದುದರಿಂದ ಇದೆಲ್ಲಕ್ಕೆ ತಕ್ಕಂತೆ ನಮ್ಮ ವಾಕ್ಸಂಪತ್ತಿಯು ಹೆಚ್ಚಬೇಕು ಅಲ್ಲದೆ ಈ ಹೊಸಭಾವನೆಗಳು ಜನಸಾಮಾನ್ಯದಲ್ಲಿ ಹರಡುವದು ಸಾಧ್ಯವಿಲ್ಲ.

ರಾಜಕಾರ್ಯಪ್ರಸಕ್ತ ದಿವಾನ್ ಬಹಾದ್ದೂರ
ಎಮ್. ಎನ್. ಕೃಷ್ಣರಾಯರು.

ಸಾಂಗಲಿ ಸಂಸ್ಥಾನದ ಶಾಲೆಗಳಲ್ಲಿ
ಸಮಾರಂಭದ ಕಾಲಕ್ಕೆ ಅಭಿನಯಿಸಲು ತಕ್ಕುದಾದ

# ಪಟವರ್ಧನ.

ಚಿಕ್ಕ ನಾಟಕ.



ಲೇಖಕರು :—

ಶ್ರೀ. ಬಾಳೇಹೊಸೂರ ರಾಮರಾಯರು, ಶಿರಹಟ್ಟಿ.

---

ಬೆಲೆ ೨ ಆಣೆ.

# ಮೊದಲು ಹೇಳುವ ಮಾತು.

ಸಾಮಾನ್ಯವಾಗಿ ವಿಚಾರಮಾಡಿದರೆ, ನಮ್ಮ ಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ಕಲಿಸಲ್ಪಡುವ ಬೇರೆ ಬೇರೆ ವಿಷಯಗಳು, ಅವರ ಜೀವನ ಕಲಹದಲ್ಲಿ ಲೋಕ ವ್ಯವಹಾರಕ್ಕನುಗುಣವಾದವುಗಳೇ ಇರಬೇಕೆಂದು ಶಿಕ್ಷಣದ ವಿಚಾರದಲ್ಲಿ ನುರಿತ ಅಂದಿನ ಹಾಗೂ ಇಂದಿನ ಮಹಾಜನಗಳು ತೀರ್ಮಾನಿಸಿದುದು ಎಲ್ಲರಿಗೂ ಗೊತ್ತಿದ್ದ ಮಾತೇ ಸರಿ. ಅಂತಹ ಆ ವಿವಿಧ ವಿಷಯಗಳಲ್ಲಿ ವಕ್ತೃತ್ವ ಕಲೆಯು ಒಂದಾಗಿದೆ. ಆವುದೊಂದು ಓದಿದ ಸಂಗತಿಯನ್ನು ಹೇಳುವದಕ್ಕೆ ಬರಬೇಕಾದರೆ ವಿದ್ಯಾರ್ಥಿಗಳಲ್ಲಿ ಮೇಲೆ ಹೇಳಿದ ಕಲೆಯು ಚನ್ನಾಗಿ ಸಾಧಿಸಬೇಕಾಗುವದು. ಇಲ್ಲವಾದರೆ ಮನಸ್ಸಿನಲ್ಲಿ ಆಯಾ ವಿಷಯಗಳು ನಟ್ಟಿದ್ದರೂ ಅವನ್ನು ಪ್ರಕಾಶಕ್ಕೆ ಡಲು ಬಾರದೇ ಹೋಗುವದು. ಇಂತಹ ದುಸ್ಥಿತಿಯನ್ನು ಬಹಳ ಕಡೆಗೆ ಕಾಣ ಬಹುದು. ಆದುಕಾರಣವೇ ವಿದ್ಯಾರ್ಥಿಗಳಿಗೆ ಚಿಕ್ಕವರಿರುವಾಗಲೇ ವಕ್ತೃತ್ವ ಕಲೆಯಲ್ಲಿ ತರಬೇತು ಮಾಡಿದರೆ ಮುಂದೆ ಅವರು ದೊಡ್ಡವರಾದಮೇಲೆ ,ವ್ಯವಹಾರದಲ್ಲಿ ಒಳ್ಳೇ ಕುಶಲರಾಗುವರು. "ಮಾತುಬಂದವ ಮಾಣಿಕತಂದ" ಎಂದು ಹಿರಿಯರು ಈ ಸಂಗತಿಯ ಬಗ್ಗೆ ಹೇಳಿರುವದು.

ಇದೇ ಧೇಯವನ್ನು ಮುಂದಿಟ್ಟುಕೊಂಡು ವಿದ್ಯಾರ್ಥಿಗಳಿಗೋಸುಗ ನಾನು ಈಗ "**ಪಟವರ್ಧನ**" ವೆಂಬ ಚಿಕ್ಕ ದೃಶ್ಯವೊಂದನ್ನು ಬರೆದುದು. ಸಾಂಗಲಿ ಸಂಸ್ಥಾನದ ಶಾಲೆಗಳಲ್ಲಿ ಬಾಲಕರಿಂದ ಇಂತಹ ಚಿಕ್ಕ ದೃಶ್ಯವನ್ನು ಅಭಿನಯಿಸುವ ಏರ್ಪಾಟುಮಾಡಿಕೊಂಡಲ್ಲಿ ವಿದ್ಯಾರ್ಥಿಗಳಿಗಂತೂ ಸರಿಯೇ. ಆಯಾ ಇಂದಿನ ರೈತ ಜನಗಳಿಗೂ ಕೂಡಾ ನಮ್ಮ ಸಂಸ್ಥಾನದ ಒಡೆಯರ ಇತಿಹಾಸವು ಮನದಟ್ಟಾಗುವದರಲ್ಲಿ .ಸಂದೇಹವಿಲ್ಲ.

ಇಂತು ನಮ್ಮ ಒಡೆಯರ ಉಜ್ವಲ ಶೌರ್ಯದ ಇತಿಹಾಸವು ಸಾಂಗಲಿ ಸಂಸ್ಥಾನದ ಪ್ರಜಾಜನಗಳಲ್ಲಿ ಹರಡಿ, ಅವರುಗಳ ಬಗ್ಗೆ ಒಂದು ತರಹದ ಪೂಜ್ಯ ಬುದ್ಧಿಯ ಜನಿಸಬೇಕೆಂಬುದೇ ನನ್ನ ಮನದಾಶೆ.

ಅದುಕಾರಣ ಸಾಂಗಲಿ ಸಂಸ್ಥಾನದಲ್ಲಿನ ಶಿಕ್ಷಕರು ನಾನು ಬರೆದ ಈ ಚಿಕ್ಕ ದೃಶ್ಯವನ್ನು ಸಮಾರಂಭಗಳ ಕಾಲಕ್ಕೆ ಬಾಲಕರಿಂದ ಅಭಿನಯಿಸಿ ತೋರಿಸಿ ತನ್ಮೂಲಕ ಸಂಸ್ಥಾನದ ಇತಿಹಾಸವನ್ನು ತಿಳಿಸಿ ಹೇಳುವ ಎತ್ತುಗಡೆಮಾಡಿದಲ್ಲಿ ನನ್ನ ಶ್ರಮವು ಸಾರ್ಥಕವಾಯಿತೆಂದು ಭಾವಿಸುವೆನು.

ಶಿರಹಟ್ಟಿ
ತಾ. ೧೦—೧೦—೩೪

ತಮ್ಮ ವಿಧೇಯ,
ಬಾಲೇಹೊಸೂರ ರಾಮರಾಯರು.

**ದಿನಕರಪಂತ**— ಏನೂ ಸರವಿಲ್ಲ. ಮತ್ತೆ ವೇಳೆ ನೋಡಿಕೊಂಡು ಬಂದೇ ಬರುವೆನು. ಆ ಬಗ್ಗೆ ಯೋಚಿಸಬೇಡಿ. ನಾನಿನ್ನು ಬರುವೆನು. ನಮಸ್ಕಾರ.

(ಹೋಗುವನು.)

## ೨ ನೇ ಪ್ರವೇಶ.

**ಸ್ಥಳ**— ಪೇಶ್ವೆಯರ ದಂಡಿನ ಛಾವಣಿ

**ದೃಶ್ಯ**— ಇಬ್ಬರು ದಂಡಾಳುಗಳು ಮಾತಾಡುತ್ತ ತಂಬಾಕ ಸೇದುತ್ತ ಕುಳಿತಿರುವರು.

**ಹಂಬೀರ**— ಏನು ಶೌರ್ಯವಪ್ಪಾ ನಮ್ಮ ಆ ಗೋವಿಂದ ಪಂತನದು. ನೋಡಿದರೆ ಆತನೇನೋ ದಂಡಿನ ಖಾತೆಯಲ್ಲಿ ಹೊಸದಾಗಿ ಬಂದವನು. ಪುರಾಣ ಪುಣ್ಯ ಕಥೆಗಳನ್ನು ಹೇಳುವ ಸಾತ್ವಿಕರಾದ ಹರಿಭಟ್ಟರ ಮಗನು. ಇಂತಹನಿಗೆ ಯುದ್ಧ ಕಲೆಯೆಂದರೇನು? ಇದರ ವ್ಯಾಖ್ಯೆಕೂಡ ಗೊತ್ತಿರಲು ಸಾಧ್ಯವಿಲ್ಲ. ಏನೋ ಹೊಟ್ಟೆ ಹೊರಕೊಳ್ಳುವದಕ್ಕೆ ಪೇಶ್ವಯರ ಆಶ್ರಯಕ್ಕೆ ಬಂದವನು. ಮತ್ತು ದಂಡಿನಲ್ಲಿ ನೌಕರಿಗೆ ನಿಂತವನು. ಆದರೆ ಪರಾಕ್ರಮವೇ ಅವನ ಸಹಜ ಗುಣವಾಗಿ ಹೋದದ್ದರಿಂದ ಕೂಡಲೇ ತನ್ನ ಪ್ರಕಾಶವನ್ನು ನಾಲ್ಕೂ ಕಡೆಗೆ ಚಲ್ಲುತ್ತಿರುವನು.

**ಪಿರಾಜೀ**— ಮಿತ್ರಾ ಹಾಗೆ ಹೇಳಲಿಕ್ಕೆ ಬರುವದಿಲ್ಲ. ಪುರಾಣ-ಪುಣ್ಯ ಕಥೆಗಳಲ್ಲಿ ಕೇಳಿಲ್ಲವೇ? ಬ್ರಹ್ಮತೇಜವೊಂದೇ ಜಗತ್ತನ್ನು ನಾಶಪಡಿಸಬಲ್ಲದೆಂಬುದಾಗಿ ಹೇಳಿದುದನ್ನು ಅಂತಹದಕ್ಕೆ ಮತ್ತೆ ಕ್ಷಾತ್ರತೇಜವೊಂದು ಕೂಡಿದರೆ ತೀರಿಯೇ ಹೋಯಿತು. ಕ್ಷತ್ರಿಯರು ಜಗತ್ತಿನಲ್ಲಿದ್ದರೋ ಇಲ್ಲವೋ ಎಂದೆನ್ನಿಸಿದ ವಿಶ್ವಾಮಿತ್ರನಂತೆ ಪೇಶ್ವಯರಿಗೆ ಈ ನಮ್ಮ ಗೋವಿಂದಪಂತನು ಲಭಿಸಿರುವನು. ಅಂದ ಬಳಿಕ ಈ ಮುಂದೆ ಪೇಶ್ವಯರಿಗೆ ಆವ ಬಲವಾದ ಶತ್ರುವೂ ಎದುರಾಗಿ ನಿಲ್ಲಲು ಸಾಧ್ಯವಿಲ್ಲ.

**ಹಂಬೀರ**— ಈಗಿನ ಅವರ ಎರಡು ಮೂರು ಕಾರ್ಯಗಳ ಮೇಲಿಂದ ನೋಡಿದರೆ ಹಾಗೆಯೇ ಹೇಳಬೇಕಾಗಿದೆ. ದಾಮಾಜಿ ಗಾಯಕವಾಡನೆಂದರೆ ಮಹಾಶೂರನು. ಮುತ್ಸದ್ದಿಯು. ಅಂತಹನನ್ನು ಮೂಗದಾರಹಾಕಿದ ಕೋಣನನ್ನು ಎಳೆದು ತರುವ ಹಾಗೆ ನಮ್ಮ ಗೋವಿಂದಪಂತನು ಸೆರೆಹಿಡಿದು ತಂದು ಪೇಶ್ವಯರಿಗೆ ಒಪ್ಪಿಸಿದನು.

**ಪಿರಾಜೀ**— ಅದೇಕೆ ಮುತ್ಸದ್ಧಿತನವೂ ಗೋವಿಂದ ಪಂತರಲ್ಲಿ ಮನೆ ಮಾಡಿಕೊಂಡಿದೆ. ಅಂತಲೇ ಯುದ್ಧದ ಪ್ರಸಂಗವು ಪ್ರತ್ಯಕ್ಷ ಒದಗಿದ್ದರೂ ಅದನ್ನು ಹಾರಿಸಿ ಸವಣೂರ ನವಾಬನ ಕಡೆಯಿಂದ ಪೇಶ್ವೆಯರ ಅಧಿಕಾರಕ್ಕೆ ಒಪ್ಪಿಗೆಯನ್ನು

ತಕ್ಕೊಂಡದ್ದಲ್ಲದೆ ಆತನಿಂದ ದೋಡವಾಡ ಗ್ರಾಮವನ್ನು ಯುದ್ಧದ ವೆಚ್ಚಕ್ಕಾಗಿ ತಕ್ಕೊಂಡನು. ಇದೇನು ಕಡಿಮೆ ತರಗತಿಯ ಮುತ್ಸದ್ದಿತನವೆ?

**ಹಂಬೀರ—** ಇನ್ನೊಂದು ವಿಶೇಷ ಸಂಗತಿಯಂದರೆ ಸ್ವಾಮಿನಿಷ್ಠೆಯು ಅವನಲ್ಲಿ ಪೂರ್ಣವಾಗಿದೆ. ಮತ್ತು ವರ್ಣಸತಕ್ಕಂಥಾದ್ದಾಗಿದೆ. ಇವೆಲ್ಲ ಗುಣಗಳಿಂದ ಕೂಡಿದ ಗೋವಿಂದಪಂತನು ನಮ್ಮ ಪೇಶ್ವೆಯರಿಗೆ ಒಂದು ಅಪೌಲ್ಯವಾದ ರತ್ನವೇ ದೊರಕಿದಂತಾಗಿದೆ.

**ಪಿರಾಜೀ—** ಪೇಶ್ವೆಯವರದಾದರೂ ಅವರಮೇಲೆ ಉತ್ಕಟ ಪ್ರೇಮವಿದೆ. ಗೋವಿಂದಪಂತರು ಈ ಮುಂದೆ ಉಚ್ಚ ತರಗತಿಯ ಸರದಾರಕಿಯನ್ನೂ ಜಹಾಗೀರನ್ನೂ ಪಡೆಯುವದರಲ್ಲಿ ಸಂದೇಹವಿಲ್ಲ.

**ಸುಭಾನ—** (ಓಡುತ್ತ ಬಂದು) ಇದೇನು? ಹೀಗೇಕೆ ಹರಟೆ ಕೊಚ್ಚುತ್ತ ಕುಳಿತಿರುವಿರೋ. ನಡೆಯಿರಿ. ನಾಳಿನ ದಿನ ನಮಗೆ ದೊಡ್ಡ ಮೇಜವಾನಿಯದೆ.

**ಪಿರಾಜೀ—** ಅದೇಕೆ?

**ಸುಭಾನ—** ಅದೇಕೆ? ನಿಮಗೇನೂ ವಿಷಯವೇ ಗೊತ್ತಿದ್ದಂತೆತೋರುವದಿಲ್ಲವಲ್ಲ. ಪಟವರ್ಧನ ಗೋವಿಂದ ಪಂತರಿಗೆ ನಾಳಿನ ದಿನ ಪೇಶ್ವೆಯವರು ಸರದಾರಿಕೆಯನ್ನು ಕೊಟ್ಟು ಜಹಾಗೀರು ಹಾಕಿಕೊಡುತಕ್ಕವರಿರುವರು. ಆ ಬಗ್ಗೆ ಇಂದು ನಗರದಲ್ಲಿ ಡಂಗುರವನ್ನು ಹೊಡೆಯಿಸಿರುವರು. ನೀವದನ್ನು ಕೇಳಿಲ್ಲವೇ?

**ಪಿರಾಜೀ—** ನೋಡಿದಿರಾ ಹಂಬೀರರಾವ ನಾವು ಯೋಚಿಸಿದಂತೆ ಗೋವಿಂದಪಂತರು ಸ್ವಾಮಿನಿಷ್ಠೆಯಿಂದ ಸೇವೆ ಮಾಡಿದ್ದಕ್ಕೆ ಪ್ರತಿಫಲವು ಹೇಗೆ ದೊರಕಿತು. ಭಾಪು! ಗೋವಿಂದಪಂತಾ ನೀನೇ ಧನ್ಯನು! ಮತ್ತು ನಿಜವಾದ ವೀರನು! ಸ್ವಾಮಿನಿಷ್ಠ ಸೇವಕನು! ಸುಮ್ಮನೆ ನಮ್ಮಂತಹರು ಆಯುಷ್ಯವನ್ನು ಹಾಳುಮಾಡಿಕೊಂಡೆವು. ಆದರೆ ನಿಮ್ಮಲ್ಲಿನ ಆವ ಗುಣಗಳು ನಮ್ಮಲ್ಲಿ ಮನೆಮಾಡಲಿಲ್ಲ. ನಿಜವಾಗಿಯೂ ನಿನ್ನ ಮೇಲೆ ಪರಮೇಶ್ವರನ ಕೃಪೆಯಿರುವದು.

## ೩ ನೇ ಪ್ರವೇಶ.

**ಸ್ಥಳ—** ಪುಣೆ ಪಟ್ಟಣದ ಶನಿವಾರ ವಾಡೆ.

**ದೃಶ್ಯ—** ಪೇಶ್ವೆಯರ ದರಬಾರ (ಸರದಾರರು ತಮ್ಮ ತಮ್ಮ ಆಸನಗಳಲ್ಲಿ ಕುಳಿತಿರುವರು. ಪೇಶ್ವೆಯರು ಒಳಗೆ ಬಂದಕೂಡಲೆ ತಮ್ಮ ಆಸನಗಳನ್ನು ಬಿಟ್ಟು ಎದ್ದು ನಿಲ್ಲುವರು. ಹಾಗು ಭಟ್ಟಂಗಿಗಳು ಜಯ ಜಯಕಾರ ಮಾಡುವರು.)

**ಮಂತ್ರಿ—** ಸರದಾರರೇ ಮತ್ತೂ ಮಿತ್ರರೇ, ಈ ದಿನದ ದರಬಾರದ ಉದ್ದೇಶವು ಈ ಮೊದಲೇ ಪ್ರಸಿದ್ಧಪಡಿಸಿದ ಪ್ರಕಾರ ತಮ್ಮೆಲ್ಲರಿಗೆ ಗೊತ್ತೇ ಅದೆ. ಇರಲಿ ನಮ್ಮ ದಂಡಿನ ಖಾತೆಯಲ್ಲಿರುವ ಗೋವಿಂದಪಂತ ಪಟವರ್ಧನರು ಪೇಶ್ವೆ

ಯರೊಂದಿಗೆ ಒಳ್ಳೇ ಸ್ವಾಮಿನಿಷ್ಠೆಯಿಂದ ನಡೆದುಕೊಂಡು ಶತ್ರುಗಳ ನಾಶವಾಡುವ ಕಾರ್ಯದಲ್ಲಿ ಅತಿಶಯವಾದ ಶೌರ್ಯದಿಂದ ಹೋರಾಡಿದ್ದಕ್ಕಾಗಿ ಪೇಶ್ವೆಯರಿಗೆ ತುಂಬಾ ಆನಂದವಾಗಿದೆ. ಆ ಬಗ್ಗೆ ಗೋವಿಂದಪಂತರ ಕೃತಜ್ಞತೆ ವ್ಯಕ್ತಮಾಡುವದೇ ಇಂದಿನ ದರಬಾರದ ಉದ್ದೇಶವು. ಪೇಶ್ವೆಯರಿಗೆ ತಮ್ಮ ರಾಜ್ಯವನ್ನು ಬೆಳೆಸುವ ಕಾರ್ಯದಲ್ಲಿ ತಮ್ಮಂತಹ ಅಪೌಲ್ಯ ರತ್ನವು ದೊರಕಿದುದಕ್ಕೆ ಅವರು ಭಗವಂತನಿಗೆ ವಂದನೆಗಳನ್ನು ಅರ್ಪಿಸುತ್ತಿರುವರು. ಅಲ್ಲದೆ ಗೋವಿಂದಪಂತರೇ ತಾವು ಮಾಡಿದ ಕಾರ್ಯದ ಪ್ರತಿಫಲರೂಪವಾಗಿಯೂ ಮತ್ತು ತಮ್ಮ ಪರಾಕ್ರಮದ ಉತ್ತೇಜನಾರ್ಥವಾಗಿಯೂ ಪೇಶ್ವೆಯರು ಇಂದು ಗೋವಿಂದಪಂತ ಪಟವರ್ಧನರವರನ್ನು ತಮ್ಮ ಸರದಾರರನ್ನಾಗಿ ಮಾಡಿಕೊಳ್ಳಲಿಚ್ಛಿಸುತ್ತಾರೆ. ಮತ್ತು ಇಂದಿನಿಂದ ಸರದಾರರಾದ ತಮ್ಮುಗಳ ಕೈಯಲ್ಲಿ ೮೦೦೦ ಸೈನಿಕರನ್ನು ಆದರ ವೆಚ್ಚಕ್ಕಾಗಿ ೨೫ ಲಕ್ಷ ಉತ್ಪನ್ನ ಬರುವ ಸೀಮೆಯನ್ನೂ ವಂಶ ಪರಂಪರವಾಗಿ ಜಹಾಗೀರು ಹಾಕಿಕೊಟ್ಟಿರುತ್ತಾರೆ. ಈ ಮುಂದೆ ನೀವು ಮಿರ್ಜಿ ಕೋಟೆಯಲ್ಲಿ ವಾಸ ಮಾಡಿಕೊಂಡಿದ್ದು ಪೇಶ್ವೆಯರ ಅನುಜ್ಞೆಯ ಪ್ರಕಾರ ನಡೆದುಕೊಂಡು ರಾಜ ನಿಷ್ಠತೆಯನ್ನು ವ್ಯಕ್ತ ಪಡಿಸುವಿರಾಗಿ ಆಶಿಸುತ್ತೇವೆ. ಆದ್ದರಿಂದ ಪಂತರೇ ಹೀಗೆ ಬನ್ನಿರಿ. ಇದೋ ತಕ್ಕೊಳ್ಳಿ (ಪೇಶ್ವೆಯರ ಹಸ್ತದಿಂದ ಜಹಾಗೀರಿನ ಸನದು ಹಾಗೂ ಖಡ್ಗ, ಸರದಾರಿಕೆಯ ಉಡುಪು ಕೊಡಿಸಿ ಕೊರಳಲ್ಲಿ ಪುಷ್ಪಹಾರ ಹಾಕುವರು.)

**ಗೋವಿಂದಪಂತ—** ಪೇಶ್ವೆಮಹಾರಾಜರೇ, ನಾನು ತಮ್ಮುಗಳ ಸೇವೆಯನ್ನು ಸ್ವೀಕರಿಸಿ ನನ್ನ ಕರ್ತವ್ಯವನ್ನು ಜರಗಿಸಿದ್ದಕ್ಕೆ ತಾವದನ್ನು ಬಹುಮೋಲವಾದುದೆಂದು ಭಾವಿಸಿ ಇಂತಹ ಮನ್ನಣೆಯನ್ನು ಮಾಡುವ ಅವಶ್ಯಕತೆಯು ಎಷ್ಟು ಮಾತ್ರವೂ ಇರಲಿಲ್ಲವೆಂದು ನನ್ನ ನಿಜವಾದ ಭಾವನೆ. ಅಲ್ಲದೆ ಆದಕ್ಕೆ ನಾನು ಅರ್ಹನೂ ಆಗಿರಲಿಲ್ಲ. ಇರಲಿ ಹೀಗಿದ್ದರೂ ನಾನು ಮಾಡಿದ ಅಲ್ಪಕಾರ್ಯವನ್ನೇ ಗುಣಗ್ರಾಹಕತೆಯಿಂದ ದೊಡ್ಡದನ್ನಾಗಿ ಮಾಡಿ ನನ್ನನ್ನು ಗೌರವಿಸಿದ್ದಕ್ಕಾಗಿ ನಾನು ತಮ್ಮುಗಳಿಗೆ ಅತ್ಯಂತ ಕೃತಜ್ಞತಾ ಪುರಸ್ಸರವಾಗಿ ವಂದನೆಗಳನ್ನು ಅರ್ಪಿಸುತ್ತೇನೆ. ಉದಾರ ಹೃದಯಗಳಾದ ತಮ್ಮುಗಳಿಗೆ ಉತ್ತರೋತ್ತರ ಆಯುರಾರೋಗ್ಯ ಅಭಿವೃದ್ಧಿಯನ್ನೀಯಲೆಂದು ಸರ್ವಶಕ್ತನಾದ ಪರಮೇಶ್ವರನ ಬಳಿ ಅನನ್ಯಭಾವದಿಂದ್ದ ಪ್ರಾರ್ಥಿಸುತ್ತೇನೆ. ಅದೇ ಮೇರೆಗೆ ತಮ್ಮುಗಳ ಸೇವೆ ಗೈಯಲು ಹೆಚ್ಚಾಗಿ ಶಕ್ತಿ ಕೊಡೆಂದು ಆತನ ಚರಣಗಳಲ್ಲಿ ಬೇಡುತ್ತೇನೆ.

(ಯಾವತ್ತರಿಗೂ ಪಾನ—ಸುಪಾರಿ ಅತ್ತರ ಗುಲಾಬ ಕೊಡುವ ಸಮಾರಂಭ. ಕೊನೆಗೆ ಪೇಶ್ವೆಯರ ಜಯ ಜಯಕಾರದಲ್ಲಿ ದರಬಾರದ ವಿಸರ್ಜನೆ.)

ಎರಡನೇ ಅಂಕು ಸಮಾಪ್ತ...

# ೩ ನೇ ಅಂಕವು

## ೧ ನೇ ಪ್ರವೇಶ.

---

**ಸ್ಥಳ**— ಸಾಂಗಲಿ ಶಹರದ ಒಂದು ಮನೆ.

**ದೃಶ್ಯ**— ಒಬ್ಬ ಗೃಹಸ್ಥನು ಮನೆಯಲ್ಲಿ ಕುಳಿತಿರುವನು.

**ಯಶವಂತರಾವ**— (ಬಾಗಿಲಕಡೆ ನೋಡಿ) ಓಹೋ ಬನ್ನಿ ಗಣಪತರಾವ ಇದೇನು ಒಳ್ಳೇ ಮುಂಜಾವಿನಲ್ಲಿ ಇತ್ತ ಕಡೆಗೆ ಬರೋಣವಾಯಿತು.

**ಗಣಪತರಾವ**— ಸಹಜವಿದೆ. ಯಾವದೊಂದು ಆನಂದದ ಸಂಗತಿಯ ಬಗ್ಗೆ ಎರಡು ಮಾತುಗಳನ್ನು ತಮ್ಮ ಸ್ನೇಹಿತರೊಂದಿಗೆ ಆಡಿದರೆ ಅದು ದ್ವಿಗುಣಿತವಾಗುವದು. ಮತ್ತು ಹೀಗೆ ಮಾಡುವದು ಮಾನವ ಸ್ವಭಾವಕ್ಕೆ ಸಹಜವಾದದ್ದು.

**ಯಶವಂತರಾವ**— ಅಂದರೆ ಈ ನಿಮ್ಮ ಗಹನವಾದ ಭಾಷೆಯೇ ನನಗೆ ತಿಳಿಯಲೊಲ್ಲದು ಸ್ವಲ್ಪ ಇದಕ್ಕೂ ಸ್ಪಷ್ಟವಾಗಿ ಹೇಳುವಿರಾ ?

**ಗಣಪತರಾವ**— ಮತ್ತೆ ಹೊಸದಾಗಿ ಹೇಳುವದೇನು. ನಿಮಗೆ ಗೊತ್ತಿಷ್ಟ ಸಂಗತಿಯನ್ನೇ ನಾನೀಗ ಹೇಳಲಿಕ್ಕಿರುವದು. ಈ ಮುಂದೆ ನಮ್ಮ ಸಾಂಗಲಿಯ ಪಟವರ್ಧನರ ರಾಜಧಾನಿ ಶಹರವಾಗತಕ್ಕದ್ದಿರುವದು. ಪಾಂಡುರಂಗರಾಯರ ಮಕ್ಕಳಾದ ಚಿಂತಾಮಣಿರಾಯರಿಗೂ ಅವರ ಕಕ್ಕಂದಿರಾದ ಗಂಗಾಧರರಾಯರಿಗೂ ಕೂಡಿ ನಡೆಯದ್ದರಿಂದ ಚಿಂತಾಮಣರಾಯರು ಜಹಾಗೀರಿನಲ್ಲಿ ಪಾಲು ತಕ್ಕೊಂಡು ಸಾಂಗಲಿಗೆ ಹಿಂದೆಯೇ ಬಂದದ್ದು ತಮಗೆ ಗೊತ್ತಿದೆ. ಅವರೀಗ ಇದೇ ಸಾಂಗಲಿಯನ್ನೇ ಕಾಹೀಮವಾಗಿ ತಮ್ಮ ರಾಜಧಾನಿಯನ್ನಾಗಿ ಮಾಡಿಕೊಳ್ಳಬೇಕೆಂದಿಚ್ಛಿಸಿರುವರು. ಅಲ್ಲದೆ ತಾವು ಈ ಮುಂದೆ ಸ್ವತಂತ್ರರಾಜರೆಂದು ಪ್ರಸಿದ್ಧಪಡಿಸತಕ್ಕವರಿದ್ದಾರೆ. ನಾಳಿನ ದಿನವೇ ದರಬಾರವು ನೆರೆಯತಕ್ಕದ್ದಿರುವದು. ಆಗಲೇ ಶಹರವನ್ನೆಲ್ಲ ತಳಿರು-ತೋರಣಗಳಿಂದ ಶೃಂಗರಿಸಹತ್ತಿರುವರು.

**ಯಶವಂತರಾವ**— ಹೀಗೇನು ? ನನಗೆ ನಿಜವಾಗಿಯೂ ಈ ಸಂಗತಿ ಗೊತ್ತಿಲ್ಲ. ಪಟವರ್ಧನರ ಇತಿಹಾಸವನ್ನು ನೀನೊಳ್ಳೇ ರೀತಿಯಿಂದ ಅಭ್ಯಾಸಿಸಿದ ಹಾಗೆ ಕಾಣುವದು. ಎಲ್ಲಿ ಸ್ವಲ್ಪ ಹೇಳಿ ನೋಡುವಾ.

**ಗಣಪತರಾವ**— ಅದೇನೋ ನಿಜ. ನಾನವರಿಗೆ ಸ್ವಲ್ಪ ದೂರಿನಿಂದ ಆಪ್ತನಾಗಬೇಕು ಆದ್ದರಿಂದ ಅವರ ಮನೆತನದ ವೈಭವದಬಗ್ಗೆ ನನಗೊಂದು ತರದ ವಿಶೇಷವಾದ ಅಭಿಮಾನವಿದೆ. ಹರಿಭಟ್ಟರ ಮಕ್ಕಳಾದ ಗೋವಿಂದಪಂತರ ಶೌರ್ಯದ ಬಗ್ಗೆ ತಾವು ಕೇಳಿರಬಹುದು.

**ಯಶವಂತರಾವ—** ಓಹೋ! ನಾನು ಆ ಸಂಗತಿಯನ್ನು ಹಿಂದೆಯೇ ಕೇಳಿದ್ದೇನೆ. ಮತ್ತು ಪೇಶ್ವೆಯವರಿಂದ ಅವರಿಗೆ ಜಹಾಗೀರು ದೊರೆತದ್ದೂ ಗೊತ್ತಿದೆ. ಆದರೆ ಅವರು ಮಿರಜಿ ಕಿಲ್ಲೆಯಲ್ಲಿ ವಾಸಮಾಡಿದ್ದರಲ್ಲವೆ?

**ಗಣಪತರಾವ—** ಅಹುದು. ಜಹಾಗೀರು ಪಡೆದ ಬಳಿಕ ಪೇಶ್ವೆಯರ ಆಜ್ಞೆಯ ಮೇರೆಗೆ ಗೋವಿಂದಪಂತರು ಮಿರಜಿಯಲ್ಲಿಯೇ ಇರಹತ್ತಿದರು. ಅವರ ಮಕ್ಕಳು ಕೂಡ ಅಲ್ಲಿಯೇ ಇದ್ದರು.

**ಯಶವಂತರಾವ—** ಒಳ್ಳೇದು. ಮುಂದೆ?

**ಗಣಪತರಾವ—** ಗೋವಿಂದಪಂತರ ಮರಣದ ತರುವಾಯ ಜಹಾಗೀರದ ಅಧಿಕಾರವು ಅವರ ಹಿರಿಯ ಮಕ್ಕಳಾದ ಗೋಪಾಳರಾಯರಿಗೆ ಪ್ರಾಪ್ತವಾಯಿತು. ಆದರೆ ಅವರು ಚಿಕ್ಕವರಿರುವಾಗಲೇ ತೀರಿದರು. ಮುಂದೆ ಗೋಪಾಳರಾಯರ ತಮ್ಮಂದಿರಾದ ವಾಮನರಾಯರೇ ಜಹಾಗೀರಿನ ಒಡೆಯರಾದರು.

**ಯಶವಂತರಾವ—** ಹೀಗೇನು? ಮುಂದೆ

**ಗಣಪತರಾವ—** ಪೇಶ್ವೆ ನಾರಾಯಣರಾಯನನ್ನು ಕೊಲೆಯ ಮಾಡಿಸಿ ತಾನು ಪೇಶ್ವೆಯಾಗಲಿಚ್ಛಿಸಿದ ಆ ನೀಚ ರಾಘೋಬನ ಪಾರಿಪತ್ಯ ಮಾಡುವ ನಮ್ಮ ವಾಮನರಾಯರು ಪುಣೆಗೆ ಹೋದರು. ಮತ್ತು ರಾಘೋಬನನ್ನು ಅಲ್ಲಿಂದ ಹೊರಗೆ ಹೊರಡಿಸಿ ಅವರನ್ನು ಹಾಗೆಯೇ ಬೆನ್ನುಹತ್ತಿ ಉತ್ತರಕ್ಕೆ ಸುರತದವರೆಗೆ ಹೋಗಿರಲು ಅಲ್ಲಿಯೇ ತಾಪೀ ನದಿಯ ತೀರದಲ್ಲಿ ವಾಮನರಾಯರು ಒಮ್ಮಿಂದೊಮ್ಮೆ ಮರಣ ಹೊಂದಿದರು. ಆ ಬಳಿಕ ಜಹಾಗೀರಿನ ಒಡೆತನವು ಅವರ ತಮ್ಮಂದಿರಾದ ಪಾಂಡುರಂಗರಾಯರ ಕಡೆಗೆ ಬಂತು.

**ಯಶವಂತರಾವ—** ಅಂತೂ ಪಟವರ್ಧನರೆಲ್ಲರೂ ಶೂರರೆಂದು ಭಾವಿಸಲಿಕ್ಕೆ ಏನೂ ಅಡ್ಡಿ ಇಲ್ಲ.

**ಗಣಪತರಾವ—** ಅದು ನಿಜವೇ! ಯಾಕಂದರೆ ನಮ್ಮ ಪಾಂಡುರಂಗರಾಯರ ಇತಿಹಾಸವನ್ನು ಕೇಳಿರಿ. ಮೈಸೂರಿನಲ್ಲಿದ್ದ ಹಿಂದೂರಾಜ್ಯವನ್ನು ಮುರಿಬಡಿದು ಒಬ್ಬ ಮುಸಲ್ಮಾನ ಅರಸು ಹೈದರನೆಂಬವನು ಮೈಸೂರಿನ ರಾಜ್ಯಕ್ಕೆ ಒಡೆಯನಾಗಿದ್ದನು. ಆತನೊಳ್ಳೇ ಸೊಕ್ಕಿಗೆಬಂದು ಹಿಂದುಗಳಿಗೆ ಪೀಡೆ ಕೊಟ್ಟದ್ದಲ್ಲದೆ ಪೇಶ್ವೆಯರ ಅಧಿಕಾರವನ್ನು ಮನ್ನಿಸಲಿಲ್ಲ. ಆದ್ದರಿಂದ ಪೇಶ್ವೆಯರು ಸಹಜವಾಗಿಯೇ ಅವನ ಮೇಲೆ ದಂಡೆತ್ತಿಹೋದರು. ಅಂದಿನ ಯುದ್ಧದಲ್ಲಿ ನಮ್ಮ ಪಾಂಡುರಂಗರಾಯರು ತೋರಿಸಿದ ಪರಾಕ್ರಮವು ಅವರ್ಣನೀಯವಾದದ್ದಿತ್ತೆಂದು ಹಿರಿಯರು ಈಗಲು ಹೇಳುವದುಂಟು.

ಯಶವಂತರಾವ— ಹೂಂ ಹೀಗೇನು ಮುಂದೆ ಅಂದಿನ ಯುದ್ಧದ ಪರಿಣಾಮ ಏನಾಯಿತು.?

ಗಣಪತರಾವ— ಯುದ್ಧದಲ್ಲಿ ಪಾಂಡುರಂಗರಾಯರು ಒಳ್ಳೇ ಪರಾಕ್ರಮದಿಂದ ಕಾದುತ್ತಿರುವಾಗ್ಗೆ ಒಂದು ಗುಂಡು ಅವರ ಭುಜಕ್ಕೆ ತಗಲಿತು. ಕೂಡಲೇ ಅವರು ಮೂರ್ಛೆ ಹೋದರು. ಆದೇ ಸಂಧಿಯಲ್ಲಿ ಹೈದರನು ಅವರನ್ನು ಶರೆಯಲ್ಲಿ ಇರಿಸಿದನು.

ಯಶವಂತರಾವ— ಅಹಹಾ! ಎಂತಹ ನೀಚನವನು.

ಗಣಪತರಾವ— ಜಾತಿಯಿಂದ ಯವನನೇ ಅವನು. ಅಂದಬಳಿಕ ಅವನಲ್ಲಿ ನೀಚತನಕ್ಕೇನು ಕಡಿಮೆ. ಮುಂದೆ ಪಾಂಡುರಂಗರಾಯರು ಅಲ್ಲಿಯೇ ಮರಣ ಹೊಂದಿದರು. ಆ ಬಳಿಕ ಪೇಶ್ವೆಯರೊಂದಿಗೆ ಹೈದರನು ಒಪ್ಪಂದಮಾಡಿಕೊಂಡನು. ಇತ್ತ ಪಾಂಡುರಂಗರಾಯರು ತೀರಿದನಂತರ ಜಹಗೀರಿನಹಕ್ಕು ಅವರ ತಮ್ಮಂದಿರಾದ ಗಂಗಾಧರರಾವ ಇವರಿಗೆ ಬಂತು.

ಯಶವಂತರಾವ— ತಿಳಿಯಿತು. ಎಲ್ಲವೂ ಸರಿಯಾಗಿ ತಿಳಿದಂತಾಯಿತು. ಈ ಚಿಂತಾಮಣಿರಾಯರು ಗಂಗಾಧರರಾಯರಿಗೆ ಏನಾಗಬೇಕು ?

ಗಣಪತರಾವ— ಗಂಗಾಧರರಾಯರ ಅಣ್ಣಂದಿರಾದ ಪಾಂಡುರಂಗರಾಯರ ಮಕ್ಕಳೇ ನಮ್ಮ ಈ ಚಿಂತಾಮಣಿರಾಯರು. ಅವರೇ ಈಗ ಸಾಂಗಲಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಇಲ್ಲಿಯೇ ಕಾಯಮಾಗಿ ಇರಬೇಕೆಂದಿರುವರು.

ಯಶವಂತರಾವ— ಓಹೋ ಈಗ ಮಾತ್ರ ಎಲ್ಲವೂ ಸರಿಯಾಯಿತು. ತಮಗೆ ಇಷ್ಟು ಹೊತ್ತಿನ ವರೆಗೆ ಎಲ್ಲ ಸವಿಸ್ತರ ಸಂಗತಿಯನ್ನು ಹೇಳಲು ತ್ರಾಸಕೊಟ್ಟದ್ದಕ್ಕಾಗಿ ದಯಮಾಡಿ ನನ್ನನ್ನು ಕ್ಷಮಿಸುವಿರಾ ?

ಗಣಪತರಾವ— ಮೊದಲಲ್ಲಿಯೇ ನಾನು ಹೇಳಿಲ್ಲವೇ ? ನಾನೊಬ್ಬ ಪಟವರ್ಧನರ ದೂರಿನ ಆಪ್ತನೆಂದು. ಆದ್ದರಿಂದ ಅವರ ಮನೆತನದ ಇತಿಹಾಸವನ್ನು ಹೇಳುವದರಲ್ಲಿ ನನಗೊಂದು ತರದ ವಿಶೇಷವಾದ ಆನಂದವೆನಿಸುವದೇ ಹೊರತು ತ್ರಾಸವಾಗುವದಿಲ್ಲ. ಆದ್ದರಿಂದ ಕ್ಷಮಿಸುವ ಕಾರಣವಿಲ್ಲ. ನಮ್ಮ ಮನೆತನದ ಇತಿಹಾಸವನ್ನು ಒಳ್ಳೇ ಉತ್ಸುಕತೆಯಿಂದ ಕೇಳಿದ ಬಗ್ಗೆ ನಾನೇ ತಮ್ಮನ್ನು ಅಭಿನಂದಿಸಬೇಕಾಗಿದೆ.

ಯಶವಂತರಾವ— ಛೇ ಛೇ ಅದೇನೂ ಬೇಡ.

ಗಣಪತರಾವ— ಆಗಲಿ ನಾನು ಬಂದು ಬಹಳ ಹೊತ್ತಾಯಿತು. ನಾನಿನ್ನು ಬರುವೆನು.

ಯಶವಂತರಾವ— ಒಳ್ಳೇದು ಹೋಗಿಬನ್ನಿ ನಮಸ್ಕಾರ.

## ೨ ನೇ ಪ್ರವೇಶ.

**ಸ್ಥಳ—** ಸಾಂಗಲಿ ಪಟವರ್ಧನರ ವಾಡೆ.

**ದೃಶ್ಯ—** ದರಬಾರ ಸರದಾರರು ಮತ್ತು ಸರಕಾರಿ ಅಮಲದಾರರು ಕುಳಿತಿರುವರು.

**ಸರದಾರರಲ್ಲಿ ಒಬ್ಬ—** ಮಿತ್ರರೇ ಈದಿನದ ಮಹತ್ಕಾರ್ಯಕ್ಕಾಗಿ ತಾವೆಲ್ಲರು ಸಹಾನುಭೂತಿಯನ್ನು ತೋರಿಸಿ ಇಲ್ಲಿನ ವರೆಗೆ ದಯಮಾಡಿಸಿದ್ದು ನಮ್ಮ ಭಾಗ್ಯವೇ ಸರಿ. ಇನ್ನು ಬೇಗನೆ ಮಹಾರಾಜರ ಸುಖಾಗಮನವು ಆಗ ಬಹುದು. ಆ ಬಳಿಕ ದರಬಾರದ ಕಾರ್ಯಕಲಾಪಗಳು ಸುಗಮವಾಗಿ ನಡೆಯಿ ಸಲು ಅನುಕೂಲವಾಗುವದರಲ್ಲಿ ಸಂದೇಹವಿಲ್ಲ. (ಬಾಗಿಲಕಡೆಗೆ ನೋಡಿ) ಅಡೋ ಮಹಾರಾಜರು ಬಂದೇ ಬಿಟ್ಟರು.

(ಮಹಾರಾಜರು ಬಂದಕೂಡಲೆ ಭಟ್ಟಂಗಿಗಳು ಜಯಜಯಕಾರ ಮಾಡುವರು. ಅಧಿಕಾರಿಗಳೆಲ್ಲರೂ ತಮ್ಮ ಸ್ಥಳದಲ್ಲಿಯೇ ಎದ್ದು ಸನ್ಮಾನಮಾಡುವರು.)

**ಚಿಂತಾಮಣಿರಾವ —** ಈ ದಿನದ ದರಬಾರದಿಂದ ಸಕಲ ಜನಗಳಿಗೂ ವಿದಿತ ಪಡಿಸುವದೇನಂದರೆ, ಈ ಮುಂದೆ ನಾವು ಪಟವರ್ಧನ ಸರದಾರರಿರದೆ ಸ್ವತಂತ್ರರಾಜರೆಂದು ಜಾಹೀರ ಪಡಿಸಿದ್ದೇವೆ. ಈ ಬಗ್ಗೆ ಯಾರಿಂದಲಾದರೂ ಪ್ರತಿಬಂಧವಾದರೆ ಅಂತಹ ಶತ್ರುಗಳ ನಾಶಕ್ಕೆ ಸ್ವಲ್ಪವೂ ಅನುಮಾನಿಸದೆ ಸಮರ ಸನ್ನಾಹಕ್ಕೆ ಅಕ್ಷತವನ್ನಿತ್ತಿರುವೆವೆಂಬ ಸತ್ಯವಾದ ಕಲ್ಪನೆಯಿಂದಲೇ ಅವರು ನಮ್ಮು ಗಳ ಪರಾಕ್ರಮದ ಚಾಪಲ್ಯವನ್ನು ನೋಡಬಹುದು. ಸಧ್ಯಕ್ಕೆ ನಮ್ಮ ಮೇಲೆ ಕೈಯೆತ್ತುವ ವೀರರು ಸಮೀಪದಲ್ಲಿ ಯಾರೂ ಇಲ್ಲವೆಂದು ನಾವು ಧಾರಳವಾಗಿ ಹೇಳಬಲ್ಲೆವು. ಇನ್ನು ಕಂಪನಿ-ಸರಕಾರವು ಆವರೀತಿಯಿಂದ ವರ್ತಿಸುವದೋ ನೋಡಬೇಕು. ಆದರೆ ಈ ಸಮಯದಲ್ಲಿ ಅವರಿಗೂ ಕೂಡ ನಾವು ಸೊಪ್ಪು ಹಾಕುವಂತಿಲ್ಲ. ಆದುದರಿಂದ ಯಾವತ್ತರೂ ಈ ಜಾಗ್ರುತವಾದ ಭಾವನೆಯಿಂದ ವರ್ತಿಸತಕ್ಕದ್ದು. ಪ್ರಜಗಳೇ ನಿಮ್ಮ ಹಿತಾಹಿತದ ಪ್ರಶ್ನೆಗಳ ಬಗ್ಗೆ ಅತ್ಯಂತ ಮನಃಪೂರ್ವಕವಾಗಿ ನಾವು ಯತ್ನಿಸುತ್ತೇವೆ. ಆ ಕಾರ್ಯಕ್ಕೆ ಶಕ್ತಿಯನ್ನೀಯ ಲೆಂದು ಪರಮೇಶ್ವರನಲ್ಲಿ ನಮ್ಮ ಬೇಡಿಕೆ. ( ಪಾನ-ಸುಪಾರಿ ಅತ್ತರ-ಗುಲಾಬ ಹಾರ-ತುರಾಯಿ ವಗೈರೆ ಸಮಾರಂಭವು ನಡೆಯುವದು. )

**ಸರದಾರರಲ್ಲಿ ಒಬ್ಬ—** ಸರದಾರರೇ ಮತ್ತು ಮಿತ್ರರೇ, ನಮ್ಮೆಲ್ಲರ ಸುದೈವದಿಂದ ಮತ್ತೂ ಕರುಣಾಶಾಲಿಯಾದ ಆ ಪರಮೇಶ್ವರನ ಇಚ್ಛೆಯಿಂದ ನಾವು

ಈ ಸುದಿನವನ್ನು ಕಂಡೆವು. " ರಾಜಾ ಪ್ರತ್ಯಕ್ಷ ದೈವತಾ " ಎಂಬಂತೆ ನಾವೆಲ್ಲರೂ ಪರಮೇಶ್ವರನ ವಿಷಯಕವಾದ ಭಾವನೆಯನ್ನೆ ನಮ್ಮ ರಾಜರಾದ ಚಿಂತಾಮಣರಾವ ಅಪ್ಪಾಸಾಹೇಬರಲ್ಲಿ ವ್ಯಕ್ತಪಡಿಸಿ ತನು-ಮನ-ಧನಗಳಿಂದ ಸೇವೆ ಗೈದರೆ ಅದರ ಪ್ರತಿಫಲವು ದೊರೆಯದಿರದು. ಆಗಲಿ ಎಲ್ಲವೂ ನಮ್ಮ ಮನಸ್ಸಿನಂತಾಯಿತು. ಇನ್ನು ನಮ್ಮ ಪಟವರ್ಧನ ರಾಜರೂ ಸಾಂಗಲಿ ಸಂಸ್ಥಾನದ ಅಧಿಪತಿಗಳೂ ಆದ ಶ್ರೀಮಂತ ಚಿಂತಾಮಣರಾವ ಅಪ್ಪಾಸಾಹೇಬರವರಿಗೆ ಆಯುರಾರೋಗ್ಯ ಅಭಿವೃದ್ಧಿಯನ್ನೀಯಲೆಂದು ದೇವಾಧಿದೇವನಾದ ಶ್ರೀ ಗಜಾನನ ಚರಣಾರವಿಂದದಲ್ಲಿ ಬೇಡುವಾ ಬನ್ನಿ !

ರಾಗ– ಶಂಕರಾಭರಣ. ತಾಲ– ದಾದರಾ.

ಹೇರಂಬಾ ಸುಖಸದಯಾ । ರಕ್ಷಿಸು ಪಾರ್ವತಿ ತನಯಾ ॥
ಪಟವರಧನ ವರದ ಸುತಾ । ನೃಪವರನಾ ಸಾಂಗಲಿಯಾ ॥ಪ॥
ದೀರ್ಘಾಯು ಕರುಣಿಸು ಭೋ । ವಿಘ್ನಗಳಿಂ ಪೊರೆ ಅಭಯಾ ।
ರಾಜ್ಯವನೆ ವಿಭವವುಯಾ । ಭೋಗಿಪುದಕೆ ಸಿರಿ ಬಲವಾ ॥
ಜನತೆಯಾ ಪ್ರಿಯಕಾರ್ಯಾ । ಜರುಗಿಸಲನುದಿನ ಜೀಯಾ ॥೧॥



# ಎದೆಗಿಚ್ಚು!

ಲೇಖಕ :— ನಾಗೇಶ.

## ೧.

"ನೀರಿಗೆ ನೈದಿಲೆ ಶೃಂಗಾರ; ಸಮುದ್ರಕ್ಕೆ ತೆರೆಯೇ ಶೃಂಗಾರ;
ನಾರಿಗೆ ಗುಣವೇ ಶೃಂಗಾರ; ಗಗನಕ್ಕೆ ಚಂದ್ರಮನೇ ಶೃಂಗಾರ;
ನಮ್ಮ ಕೂಡಲ ಸಂಗಮನ ಶರಣನನೊಸಲಿಗೆ ವಿಭೂತಿಯೇ
ಶೃಂಗಾರ."

— ಶ್ರೀ ಬಸವೇಶ್ವರರು.

ಶಿರಪುರದ ಸೋಮಶೇಖರ ಶೆಟ್ಟಿಯು ಪ್ರತಿಷ್ಠಿತ ಗೃಹಸ್ಥನಾಗಿದ್ದು, ಶ್ರೀಮಂತನಿದ್ದನು. ಗುರು, ಲಿಂಗ, ಜಂಗಮರಲ್ಲಿ ಭಕ್ತಿಯುಳ್ಳವನಿದ್ದು ಪರಮ ಧಾರ್ಮಿಕನಾಗಿದ್ದನು. ಆವನಿಗೆ ಗೌರಮ್ಮನೆಂಬ ಪತ್ನಿ ಇದ್ದಳು. ಅವಳಾದರೂ ಹರ-ಗುರು ಸೇವಾತತ್ಪರಳಿದ್ದು, ಮಹಾ ಪತಿವ್ರತೆಯಾಗಿದ್ದಳು. ಈ ದಂಪತಿಗಳಿಗೆ ಶಿವಗಂಗೆಯೆಂಬ ಒಬ್ಬಳೇ ಮಗಳು. ಅವಳ ವಯಸ್ಸು ಸುಮಾರು ಹದಿನಾಲ್ಕು ಹದಿನೈದು ವರ್ಷವಿರಬಹುದು. ಈ ಕುಮಾರಿಯು ತಕ್ಕಮಟ್ಟಿಗೆ ಶಿಕ್ಷಣ ಹೊಂದಿದವಳಿದ್ದು ಪರಮ ಸುಶೀಲೆಯಿದ್ದಳು. ಶಿವಗಂಗೆಯ ಸದ್ಗುಣಗಳನ್ನೂ, ಸ್ವಧರ್ಮನಿಷ್ಠೆಯನ್ನೂ ನೋಡಿ ಜನರು ಬೆರಗಾಗುತ್ತಿದ್ದರು. ಗೃಹಶಿಕ್ಷಣವು ಒಳಿತಾಗಿ ದೊರೆತರೆ ಮಕ್ಕಳು ಸುವಿಚಾರಿಗಳೂ, ಸದಾಚಾರಿಗಳೂ ಆಗುವದರಲ್ಲಿ ಸೋಜಿಗವಿಲ್ಲ. ಒಟ್ಟಿನಮೇಲೆ ಸೋಮಶೆಟ್ಟಿಯ ಕುಟುಂಬವೆಲ್ಲವು ಶಿವಾಚಾರ ಸಂಪನ್ನವಾಗಿತ್ತೆಂದು ಹೇಳಬಹುದು. ಇಂತಹರು ಲೋಕಾದರಕ್ಕೆ ಪಾತ್ರವಾಗುವದು ಸ್ವಾಭಾವಿಕವು. ತಮಗೆ ಗಂಡುಮಕ್ಕಳಿಲ್ಲವೆಂಬ ಚಿಂತೆಯು ಸೋಮಶೇಖರ ಶೆಟ್ಟಿಗೂ ಗೌರಮ್ಮನಿಗೂ ತಿಲಾಂಶವಾದರೂ ಇದ್ದಿರಲಿಲ್ಲ. ಅವರು

ಶಿವಗಂಗೆಯು ಆಚಾರ-ವಿಚಾರಗಳನ್ನು ನೋಡಿ ಹಿರಿ ಹಿರಿ ಹಿಗ್ಗಿ ಮಗಳು ತಮ್ಮ ಕುಲಕೋಟಿಯನ್ನೇ ಉದ್ಧರಿಸುವಳೆಂದು ಧನ್ಯೋದ್ಗಾರ ತೆಗೆಯುತಲಿದ್ದರು. ನಿಜ ವಾಗಿಯೂ ಶಿವಗಂಗೆಯು ಧನ್ಯವಾದನೆಗೆ ಪಾತ್ರಳಿದ್ದಳು. ಅವಳು ನಿತ್ಯದಲ್ಲಿ ಲಿಂಗಾರ್ಚನೆ, ಜಂಗಮಪೂಜೆ, ಪಾದೋದಕ ಪ್ರಸಾದಗಳಿಲ್ಲದೆ ಊಟಮಾಡು ತ್ತಿರಲಿಲ್ಲ. ದಿನಾಲು ಶ್ರೀ ಫಕೀರೇಶನ ಸಮಾಧಿಯ ದರ್ಶನವನ್ನು ತೆಗೆದುಕೊಳ್ಳು ತ್ತಿದ್ದಳು. ಅತಿಥಿ ಸತ್ಕಾರದಲ್ಲಿ ಅವಳು ಪರಮದಕ್ಷಳಾಗಿದ್ದಳು ತನ್ನ ಮನೆತನವು ಶ್ರೀಮಂತಿಕೆಯದಿರುವದೆಂಬ ದುರಭಿಮಾನಕ್ಕೆ ಒಳಪಡದೆ ತೀರ ಸಾಧಾರಣ ತರದ ಸ್ಥಿತಿ-ರೀತಿಗಳಿಂದ ವರ್ತಿಸುತ್ತಿದ್ದಳು. 'ನಾರಿಗೆಗುಣವೇ ಶೃಂಗಾರ' ಎಂಬ ಶ್ರೀ ಬಸವೇಶ್ವರರ ವಚನದಂತೆ ಅವಳು ಗುಣವಿಭೂಷಿತಳಾಗಿದ್ದಳು.

ಶಿವಗಂಗೆಯು ಉಪವರಳಾದ್ದರಿಂದ ಅವಳಿಗೆ ಅನುರೂಪನಾದ ವರನನ್ನು ಹುಡುಕಿ ಬೇಗನೆ ವಿವಾಹ ಮಹೋತ್ಸವವನ್ನು ಜರುಗಿಸಬೇಕೆಂದು ಸೋಮಶೇ ಖರ ಶೆಟ್ಟಿಯು ಯೋಚಿಸಿಕೊಂಡಿದ್ದನು. ಅವನು ಶ್ರೀಮಂತನಿದ್ದುದರಿಂಗಲೂ ಪುತ್ರಸಂತಾನವಿಲ್ಲದ್ದರಿಂದ ತನ್ನ ಬದಕು-ಬಾಳ್ವೆಗಳನ್ನು ವಾತ್ಸಲ್ಯದ ಕುವರಿಗೆ ಒಪ್ಪಿಸಿಬಿಡಬೇಕೆಂದು ನಿರ್ಧರಿಸಿದ್ದರಿಂದಲೂ ಎರಡು ಸಾವಿರ ರೂಪಾಯಿಗಳ ವರದ ಕ್ಷಿಣೆಕೊಟ್ಟು ಸರ್ವೋತ್ಕೃಷ್ಟನಾದ ವರನನ್ನು ನಿಯೋಜಿಸಬೇಕೆಂದು ಅವನ ಬಲವಾದ ಅಭಿಲಾಷೆ. ವಿವಾಹ ಮಹೋತ್ಸವವನ್ನಾದರೂ ಕಡುವೈಭವದಿಂದ ಮಾಡಬೇಕೆಂದು ಅವನು ಮುಂಚಿತವಾಗಿಯೇ ಸಂಕಲ್ಪಿಸಿಕೊಂಡಿದ್ದನು. ಕೇವಲ ವರಾನ್ವೇಷಣೆಗಾಗಿಯೇ ಅವನು ಸಾವಿರಾರು ರೂಪಾಯಿಗಳನ್ನು ವೆಚ್ಚಮಾಡಿದ್ದರೂ ಇದುವರೆಗೆ ಯೋಗ್ಯ ವರನು ದೊರೆತಿರಲಿಲ್ಲ. ತನ್ನ ಸರ್ವಾಂಗ ಸುಂದರ ಕನ್ನಿಕೆಗೆ ಸರ್ವಾಂಗ ಸುಂದರನಾದ ವರನು ದೊರೆಯಬೇಕೆಂದು ಅವನ ಉತ್ಕಟವಾದ ಇಚ್ಛೆ ಇತ್ತು. ಶಿವಗಂಗೆಗೆ ಸಮಾನರೂಪನಾದ ವರನು ದೊರೆಯುವದೇ ಕಠಿಣ ವೆಂದು ಊರವರು ಅನ್ನತೊಡಗಿದ್ದರು. ಶೆಟ್ಟಿಯ ಗುಮಾಸ್ತನಾದ ಜಂಬಣ್ಣನೂ ಮನೆಯ ಅಯ್ಯನವರಾದ ಪಶುಪತಯ್ಯನವರೂ ರಾಯಚೂರು, ಬೆಂಗಳೂರು, ಬೆಳಗಾವಿ, ಕಾರವಾರ ಮೊದಲಾದ ಸ್ಥಳಗಳಲ್ಲೆಲ್ಲ ಸಂಚರಿಸಿ ಬಂದರು. ಅವರು ತಂದ ಭಾವಚಿತ್ರಗಳು ಸೋಮಶೇಖರ ಶೆಟ್ಟಿಯ ದೃಷ್ಟಿಗೆ ಚನ್ನಾಗಿ ತೋರಲಿಲ್ಲ. ಆದ್ದರಿಂದ ಅವುಗಳು ಶಿವಗಂಗೆಯ ವರೆಗೆ ಹೋಗಲಿಲ್ಲ.

೨.

"ಶಿವಗಂಗಾ!"

"ಯಾಕೆ ಅಪ್ಪಾ?"

"ತೊಳಲು ತರಸುವ ಬಳ್ಳಿ ಕಾಲ್ತೊಡಕಿದಂತಾಯಿತವ್ವಾ."

" ಅದೇನು ಸುಖದ ಸುದ್ದಿ ? "

" ತಂಗಿ, ಫಕೀರೇಶನು ಪರಮ ಕರುಣಿ ನೋಡಮ್ಮಾ. ವರನನ್ನು ಹುಡುಕಿ ಬೇಸತ್ತು ನಾನು ನಿನ್ನಿನ ದಿವಸ ' ತಂದೆ–ತಾಯಿ ನೀನು, ಬಂಧು–ಬಳಗ ನೀನು ನೀನಲ್ಲದೆ ಮತ್ತಾರು ಇಲ್ಲವಯ್ಯಾ ; ಕೂಡಲ ಸಂಗಮದೇವ ! ಹಾಲಲ್ಲಿದ್ದು, ನೀರಲ್ಲಿದ್ದು ' ಎಂದು ಧ್ಯಾನಮಾಡಿ ಮಲಗಿದೆನು. ಇಂದು ಮುಂಜಾನೆಯೇ ಬಹುದಿನಗಳ ಮನೋದಯವು ಈಡೇರುವ ಅಮೃತೋಪಮ ಸಂಧಿಯು ಲಭಿಸಿತು"

ವಿಷಯವು ತನ್ನದೇ ಅದರಲ್ಲಿ ಸ್ತ್ರೀಯರನ್ನು ಸಹಜವಾಗಿ ನಾಚಿಕೆ ಗೀಡು ಮಾಡುವ ಸಂಗತಿಯು. ಆದ್ದರಿಂದ ತಂದೆಯ ಮಾತಿಗೆ ಪ್ರತಿ ಮಾತಾಡದೆ, ಶಿವಗಂಗೆಯು ತಲೆಬಾಗಿದಳು. ಆಗ ಸೋಮಶೇಖರ ಶೆಟ್ಟಿಯು ಆನಂದ ಭರದಿಂದ " ಗುರುಲಿಂಗ ಜಂಗಮರ ಕೃಪೆಯಿಂದ ಉತ್ತಮವಾದ ಮನೆತನವಂತು ದೊರೆ ತಂತಾಯಿತು. ನೀನು ಸುದೈವಿಯಾಗಿದ್ದರೆ, ಸೌಖ್ಯಕ್ಕೇನೂ ಕೊರತೆ ಇಲ್ಲ ಶಿವಗಂಗಾ "

ತಂದೆಯಾರಿಸಿದ ವರನಾರೆಂಬದನ್ನು ತಿಳಿದುಕೊಳ್ಳುವ ಆತುರತೆಯು ಶಿವ ಗಂಗೆಗೆ ಬಹಳವಿದ್ದರೂ ಸ್ತ್ರೀ ಜನೋಚಿತವಾದ ಲಜ್ಜೆಯಿಂದ ಅವಳ ಬಾಯಿಯಿಂದ ಮಾತುಗಳು ಹೊರಡಲಿಲ್ಲ. ಅಷ್ಟರಲ್ಲಿ ಅವಳ ತಾಯಿಯಾದ ಗೌರಮ್ಮನು ಅಲ್ಲಿಗೆ ಬಂದು— " ಶುಭ ವರ್ತಮಾನವನ್ನು ತಂದಂತೆ ಕಾಣುತ್ತದೆ. ಯಾವ ಸುದ್ದಿ ಯದು ? "

" ನಮ್ಮ ವಾತ್ಸಲ್ಯದ ಕುವರಿಗೆ ಅದ್ವಿತೀಯವಾದ ವರನು ಗೊತ್ತಾಗಿರುವನು"

" ಅವನು ಯಾರು ? " ಗೌರಮ್ಮನು ಉತ್ಕಂಠೆಯಿಂದ ಕೇಳಿದಳು.

" ರಾವಬಹಾದ್ದೂರ ಪೇನಶನರ ಡೆಪ್ಯುಟಿ ಕಲೇಕ್ಟರ ಸಂಗಪ್ಪನವರ ಮಗ ನಾದ ಶಿವಮೂರ್ತಿ ಶೆಟ್ಟಿಯು. "

" ಇದೇನು ಹುಡುಗಾಟಿಕೆ ಮಾಡುವಿರಿ ? ಅಂತಹ ದೊಡ್ಡವರು ನಮ್ಮಂತಹ ರೊಡನೆ ಶರೀರಸಂಬಂಧ ಮಾಡುವರೆ ? ಶಿವಮೂರ್ತಿಯು ಈಗ ಮುಂಬಯಿಯಲ್ಲಿ ಕಲಿಯುತ್ತಿರುವನಂತೆ. ಮುಂದಿನ ವರ್ಷ ವಿಲಾಯತಿಗೆ ಹೋಗಿ ಕಲಿತು ತಂದೆ ಯಂತೆ ದೊಡ್ಡ ಕೆಲಸ ದೊರಕಿಸುವವನಿರುವನಂತೆ. ಇಂತಹ ಮೇಲ್ತರಗತಿಯ ಜನರು ಸಾಮಾನ್ಯರಾದ ನಮ್ಮ ಮನೆಯ ಹೆಣ್ಣನ್ನು ತೆಗೆದುಕೊಳ್ಳುವರೇ ? "

ಸೋಮಶೇಖರ ಶೆಟ್ಟಿಯ ಮಾತುಗಳು ಗೌರಮ್ಮನಿಗೆ ಹುಡುಗಾಟಿಕೆಯಾಗಿ ತೋರಿದ್ದರಲ್ಲಿ ಸೋಜಿಗವಿಲ್ಲ. ಯಾಕಂದರೆ ರಾವಬಹಾದ್ದೂರ ಸಂಗಪ್ಪನವರೆಂದರೆ ಸಾಮಾನ್ಯರಿದ್ದಿಲ್ಲ ಅವರೊಳ್ಳೇ ಧನಕನಕಸಂಪನ್ನರು. ಮೇಲಾಗಿ ದೊಡ್ಡ ಕೆಲಸ ಮಾಡಿದವರು. ಅವರು ಮಗನನ್ನು ಕೆಂಬ್ರಿಜದ ವಿಶ್ವವಿದ್ಯಾಲಯಕ್ಕೆ 'ಆಯ್.ಸಿ. ಎಸ್.' ಪರೀಕ್ಷೆಯಲ್ಲಿ ಉತ್ತೀರ್ಣನಾಗುವದಕ್ಕಾಗಿ ಕಳುಹಿಸುವವರಿದ್ದರು.

ಇಂತಹ ಮೇಲ್ತರಗತಿಯ ಜನರು ಶಿರಪುರದಂತಹ ಸಾಧಾರಣ ತರದ ಗ್ರಾಮದೊಳಗಿನ ಸಾಧಾರಣ ಶ್ರೀಮಂತಿಕೆಯ ಮನೆತನದ ಹಳೆಯ ಪದ್ಧತಿಯ ಜನರೊಡನೆ ಶರೀರಸಂಬಂಧ ಮಾಡುವರೆಂಬ ಸಂಗತಿಯು ಗೌರಮ್ಮನಿಗೆ ನಿಜವೆನಿಸಲಿಲ್ಲ. ಶಿವಮೂರ್ತಿಯಂತಹ ಉಚ್ಚ ಶಿಕ್ಷಣಹೊಂದಿದವನು ಶಿವಗಂಗೆಯನ್ನು ವರಿಸಲಿಕ್ಕೆ ಎಂದೂ ಸಮ್ಮತಿಸಲಾರನೆಂದು ಅವಳು ತಿಳಿದಿದ್ದಳು.

ಪತ್ನಿಯ ಮಾತುಗಳನ್ನು ಕೇಳಿ ಸೋಮಶೇಖರ ಶೆಟ್ಟಿಯು ನಸುನಗುತ್ತ— ನಾನಾದರೂ ಮೊದಲು ನಿನ್ನಂತೆ ತಿಳಿದುಕೊಂಡೇ ಶಿವಮೂರ್ತಿಯ ಪ್ರಸ್ತಾಪವನ್ನೆತ್ತಿಲ್ಲ. ಸಂಗಪ್ಪನವರೂ ಶಿವಮೂರ್ತಿಯೂ ನಮಗೇನು ಅರಿಯದವರೆ? ದೊಡ್ಡಯೋಗ್ಯತೆಯ ಜನರೊಡನೆ ಶರೀರಸಂಬಂಧವಾಗುವದು ಅಸಾಧ್ಯವೆಂದು ನನ್ನ ತಿಳುವಳಿಕೆ ಇತ್ತು. ಆವರೆ ಇಂದು ಮುಂಜಾನೆ ಅವರೇ ಕನ್ಯೆಯನ್ನು ಬೇಡಿದರು. ನಮ್ಮ ಶಿವಗಂಗೆಯ ಗುಣಗಳಿಗೆ ಅವರು ಮೆಚ್ಚಿರುವರು. ತಮ್ಮ ಮಗನಿಗೆ ಸರಿಯಾದ ಕನ್ಯೆ ಇರುವಳೆಂದು ಅವರು ಶಿವಗಂಗೆಯನ್ನು ಹೊಗಳಿದರು. ನಮ್ಮ ಪ್ರಾಕ್ತನ ಪುಣ್ಯ ವಿಶೇಷದಿಂದ ಶಿವಮೂರ್ತಿಯಂತಹ ಅಳಿಯನು ದೊರೆತನು. ಸಂಗಪ್ಪನವರು ಮುಪ್ಪಿನವರು. ಬೇಗನೆ ಮಗನ ವಿವಾಹ ಮಾಡಬೇಕೆಂದು ಅವರು ಆತುರಗೊಂಡಿರುವರು. ವಿಲಾಯತಿಯಿಂದ ಬರುವವರೆಗೆ ವಿವಾಹ ಕಾರ್ಯವನ್ನು ಬದಿಗಿರಸಬೇಕೆಂದು ಶಿವಮೂರ್ತಿಯು ಅನ್ನುತ್ತಿರುವನಂತೆ. ಆದರೆ ಸಂಗಪ್ಪನವರು ಮಗನ ಮಂಗಲಕಾರ್ಯವನ್ನು ಕಾಣಬೇಕೆಂಬ ಉತ್ಕಟೇಚ್ಛೆಯುಳ್ಳವರಿರುವದರಿಂದ ಅವನ ಮಾತನ್ನು ನಡೆಯಿಸುವದಿಲ್ಲ."

"ಬಹಳೇ ಒಳಿತಾಯಿತು. ನಮ್ಮ ಶಿವಗಂಗೆಯ ದೈವ ಬಹಳೇ ಚಲೋದು ಶಿವಗಂಗಾ, ನೀನು ಹರಪೂಜೆ-ಗುರುಸೇವೆ ಮಾಡಿದ ಪುಣ್ಯವು ನಿನಗೆ ಈಗ ಒದಗಿ ಬಂತವ್ವಾ" ಎಂದು ಗೌರಮ್ಮನು ಆನಂದೋದ್ರೇಕದಿಂದ ಮಾತಾಡಿದಳು. ಶಿವಗಂಗೆಯು ಮೌನವಾಗಿದ್ದಳು. ಅವಳ ಮನಸ್ಸು ಮಾತ್ರ ನಾನಾತರದ ವಿಚಾರಗಳ ಕೋಲಾಹಲದಿಂದ ಪ್ರಕ್ಷುಬ್ಧವಾಗಿತ್ತು. ಅವಳಿಗೆ ತಾಯಿ-ತಂದೆಗಳ ಮಾತುಗಳು ಅಷ್ಟೊಂದು ರುಚಿಸಲಿಲ್ಲವೆಂಬಂತೆ ಮುಖಲಕ್ಷಣವು ಹೇಳುತ್ತಿತ್ತು. ಸೋಮಶೇಖರ ಶೆಟ್ಟಿಯೂ ಗೌರಮ್ಮನೂ ಅಷ್ಟು ಸೂಕ್ಷ್ಮದೃಷ್ಟಿಯಿಂದ ಮಗಳ ಮುಖ ಪರೀಕ್ಷೆ ಮಾಡಲಿಲ್ಲ. ಮಗಳು ನಾಚಿಕೊಂಡು ತನ್ನ ಆನಂದವನ್ನು ವ್ಯಕ್ತಪಡಿಸದವಳಾಗಿರುವಳೆಂದು ಅವರು ತಿಳಿದರು. ಕೆಲವು ಹೊತ್ತಿನಮೇಲೆ ಗೌರಮ್ಮನು ಪತಿಯನ್ನು ಕುರಿತು— "ಸಂಗಪ್ಪನವರು ಬಹಳ ವರದಕ್ಷಿಣೆ ಕೇಳುತ್ತಿರುವರಾಗಿದ್ದೀತು? ನೀವು ಈಗ ಎಲ್ಲ ಮಾತು-ಕಥೆಗಳನ್ನು ಮುಗಿಸಿಕೊಂಡೇ ಬಂದಿರುವಿರೋ ಹೇಗೆ?" ಎಂದಳು.

(ಮುಂದೆ ಸಾಗುವದು.)

# ಬನ್ನಿ! ಕೊಳ್ಳಿ 'ಬನ್ನಿ'



ಬನ್ನಿಯೆ ಪಾವನಸಗೈವುದು ಘನ್ನದ ಪಾಪಗಳ ಸಕಲ ಶೀಘ್ರ
ತೆಯಿಂದಂ ||
ಬನ್ನಿಯೆ ಪೂಜೆಯಗೊಂಬುತೆ ಧನ್ಯರನೆ ಗೈದುದಂದು ಆ
ಪಾಂಡವರು ||
ಬನ್ನಿರಿ! ಎನ್ನುವ ಪ್ರೇಮದ ರನ್ನೆಯುಳಾ 'ಕರೆ' ಯ ನಿಂದು
ಮನ್ನಿಸಿ ಮುದದಿಂ |
ಬನ್ನಿರಿ! 'ಬನ್ನಿ'ಯು ಕೊಳ್ಳಿರಿ! ಧನ್ಯತೆಯಿಂ ಹರಿಸಿ!
ಬೇಗದಲಿ ಚಂದ್ರಿಕೆಯಂ ||೧||



ಮಾನ್ಯ ವಾಚಕರೇ,

ಅನೇಕ ವಂದನೆಗಳು—

ಚಂದ್ರಿಕೆಯ ಮಂಡಲದ ಪರವಾಗಿ ವಿಜಯ ದಶಮಿಯ ಸುದಿನದಲ್ಲಿ ತಮ್ಮೆಲ್ಲರಿಗೆ 'ಬನ್ನಿ'ಯನ್ನು ಕೊಡುವ ಭಾಗ್ಯವು ನನಗೆ ಲಭಿಸಿದುದಕ್ಕಾಗಿ ನನಗೆ ತುಂಬಾ ಸಂತೋಷವೆನಿಸುತ್ತದೆ. ತಾವು ದಯವಿಟ್ಟು ಸ್ವೀಕರಿಸಿ, 'ಚಂದ್ರಿಕೆ'ಯಲ್ಲಿ ಪ್ರೇಮಾದರವನ್ನು ತಳೆಯುವರಾಗಿ ಹಾರೈಸುವೆ.

ಶಿರಹಟ್ಟಿ,
ತಾ. ೧೭-೧೦-೩೪.

ತಮ್ಮ ಕೃಪಾಭಿಲಾಷಿ,
ಹು. ರಾ. ಅಗ್ನಿಹೋತ್ರಿ

ಇಲ್ಲಿಗೆ ದಯಮಾಡಿಸಿದ್ದ ಶ್ರೀ ಮಾನ ಬೇಲೂರ ಕೇಶವದಾಸರು ಮಠದಲ್ಲಿ ತಾ|| ೨೭—೯—೩೪ ನೇ ದಿವಸ ಕಬೀರದಾಸರ ಚರಿತ್ರೆಯನ್ನು ಒಳ್ಳೇ ಗಾಂಭೀ-ರ್ಯದಿಂದ ಸುಶ್ರಾವ್ಯವಾಗಿ ನಿರೂಪಿಸಿದರು. ಸರ್ವರಿಗೂ ಆನಂದವಾಯಿತು. ಈ ಸಮಯದಲ್ಲಿ ವೀರಶೈವ ಮತವಿಷಯಕವಾಗಿ ಅವರು ಹೇಳಿದ ತಿರುಳು.

# ವೀರಶೈವ ಮತರಹಸ್ಯ.

ಭಾರತವು ಧರ್ಮಭೂಮಿಯು. ಜಗದಲ್ಲಿಂದು ಪ್ರಬಲವಾಗಿರುವ ಬಹು-ತರ ಧರ್ಮಗಳು ಉದಯಿಸಿದುದು ಭಾರತದಲ್ಲಿಯೇ! ಈ ವಿಷಯಕವಾದ ಶ್ರೇಯಸ್ಸು ಹೆಚ್ಚಾಗಿ ಕರ್ನಾಟಕ್ಕೆ ಇದೆ. ಎಂದಿನಿಂದಲೋ ಭಾರತೀಯರ ಧರ್ಮದಲ್ಲಿ ಗೋವಿಗೆ ಒಳ್ಳೆ ಪ್ರಾಶಸ್ತಿ-ಗೋದ್ವಿಜ ಪರಿಪಾಲನೆಯನ್ನೇ ಕರ್ತವ್ಯವನ್ನಾಗಿಟ್ಟುಕೊಂಡವರು ಕರ್ನಾಟಕದ ಸಮ್ರಾಟರು. ಭಾರತದ ಜೀವನ ಬೇಸಾಯವೇ ಕರ್ನಾಟಕದ ಜನಗಳದು. ಅದುವೇ ಕೃಷಿ. ಗೋವು ಮಾತ್ರ ಆ ಬೇಸಾಯಕ್ಕೆ ಸಾಧನೀಭೂತವಾದ "ಬಸವ"ನನ್ನು ಕೊಡಬಲ್ಲದು. "ಬಸವ"ನಿಂದಲೇ ಬೇಸಾಯದ ಬೇಗೆ ಹೀಗೆಂದರೆ "ಬಸವ"ನ ಸೇವೆಯೇ ಮಾನವ ಜೀವಿಯ ತಾಪತ್ರಯ ತರಣೋಪಾಯ. ಹೊಟ್ಟೆ-ಬಟ್ಟೆ ಇಹದಲ್ಲಿನ ದೊಡ್ಡ ಪ್ರಮೇಯ ಇಹದ ತಾಪವು ದೂರಾಗದಲೆ ಪರದ ಅರಿವು ನಮ್ಮಲ್ಲಿ ಜನಿಸುವದು. ಅದಕ್ಕೆ ಅವಶ್ಯವಾದ ವಸ್ತುವೇ ಈಶ್ವರ (ದೇವರು). ಈಶ್ವರನಿಂದಲೇ ಪರದಪ್ರಾಪ್ತಿ. ಇಂತಹ ಉದಾತ್ತವಾದ ಧ್ಯೇಯವನ್ನೇ ಮುಖ್ಯವಾಗಿರಿಸಿಕೊಂಡ ಧರ್ಮವೊಂದು ಹಿಂದೆ ಹನ್ನೆರಡನೇ ಶತಮಾನದಲ್ಲಿ ಕರ್ನಾಟಕದಲ್ಲುದಯಿಸಿದ್ದುದು. ಅದಕ್ಕೆ ಜನ್ಮಕೊಟ್ಟ ವಿಭೂತಿಗಳೇ, "ಬಸವೇಶ್ವರರು" ಇಹಪರಗಳ ಕ್ಷೇಮಧ್ಯೇಯವನ್ನು ಪ್ರಾಪ್ತಿ ಮಾಡಿಕೊಡುವ "ಬಸವ-" "ಈಶ್ವರ"ಎಂಬ ವಸ್ತುಗಳ ಸಮರಸಭಾವವೇ ಅವರ ಆ ಹೆಸರಿನಲ್ಲಿ ಒಡಮೂಡಿರುವ ತತ್ವ. ಇದುವೇ ವೀರಶೈವ ಮತದಲ್ಲಿನ ರಹಸ್ಯ.

## ಸಂದೇಶಗಳು:-

ವೀರಶೈವ ಚಂದ್ರಿಕೆಯ ಸಂಚಿಕೆಗಳನ್ನು ಓದಿದೆ; ಚನ್ನಾಗಿವೆ. ನಾನೂ ಅನುಕೂಲಿಸಿದಾಗ ಲೇಖನ ಕಳಿಸುವೆ. ನನಗೆ ಧಾರವಾಡಹೇಗೋ? ಹಾಗೆಯೇ ಶಿರಹಟ್ಟಿ! ಚಂದ್ರಿಕೆಯು ಬೆಳದಿಂಗಳನ್ನು ಸೂಸಬೇಕೆಂದು ನನಗೂ ಆಸೆ.

ಪುಣೆ.
ತಾ. ೨೧—೯—೩೪ } ಬೇಂದ್ರೆ ದತ್ತರಾಯರು.

---

ಚಂದ್ರಿಕೆಯ ಸಂಚಿಕೆಗಳು ಕೈಸೇರಿದವು. ಓದಿ ಸಂತೋಷವಾಯಿತು ಜನಪದ ಸಾಹಿತ್ಯವನ್ನು ಹಾಕಿದುದು ತುಂಬಾ ಯೋಗ್ಯವಾಗಿದೆ. ಅನುವು ದೊರೆತಾಗ ಲೇಖನಗಳನ್ನು ಕಳಿಸುವೆ.

ಪುಣೆ.
ತಾ. ೨—೧೦—೩೪ } ಪ್ರೋಫೇಸರ- ವಿ. ಕೃ. ಗೋಕಾಕ
ಫರ್ಗ್ಯೂಸನ್ ಕಾಲೇಜ.

---

ವೀರಶೈವ ಚಂದ್ರಿಕೆಯನ್ನು ತಾವು ಹೊರಡಿಸಿದ್ದು ಯೋಗ್ಯವಾಗಿದೆ. ಉದ್ದೇಶವು ಒಳ್ಳೇಯದು.

ಕ್ಯಾಂಪ ವಿಜಾಪೂರ
ತಾ. ೭—೧೦—೩೪. } ಬಿ. ಶಿವಮೂರ್ತಿ ಶಾಸ್ತ್ರಿ ಕೀರ್ತನ ಕೇಸರಿ
ಹುಲ್ಕುಂಟೆಮಠ ತುಮಕೂರ.

---

ಶಿರಹಟ್ಟಿಯಲ್ಲಿ ಕನ್ನಡದ ಶೇವೆಗಾಗಿ ನೀವು ಕೈಕೊಂಡ ಕಾರ್ಯಕ್ಕೆ ನನ್ನ ಅಂತಃಕರುಣದ ಬೆಂಬಲವಿದೆ. ಪತ್ರಿಕೆಯು ಒಳ್ಳೇದಾಗುವಂತೆ, ಸ್ಥಿರವಾಗುವಂತೆ ಯತ್ನಮಾಡಬೇಕು. ವೀರಶೈವ ಸಾಹಿತ್ಯದ ಬಗ್ಗೆ ಶ್ರೀ ಬಾಲೇಹೊಸೂರ ಅವರ ಲೇಖಾಂಕಗಳು ಚನ್ನಾಗಿವೆ. ತಮ್ಮ ಕಾರ್ಯವು ಚಿರಾಯುವಾಗಲಿ.

ಶ್ರೀ ರಾಮಾಶ್ರಮ
ಸಾಂಗಲಿ ಎಕ್ಸ್ಟೆನ್‌ಶನ್.
ತಾ. ೮—೧೦—೩೪ } ರಂಗರಾವ ಮುಗುಳಿ
ಪ್ರೋಫೇಸರ ವೆಲಿಂಗ್ಟನ್ ಕಾಲೇಜಿ
ಸಾಂಗಲಿ.

# ಕನ್ನಡ ಸಾಹಿತ್ಯ ಸಮ್ಮೇಳನ

## ರಾಯಚೂರಿನಲ್ಲಿ, ಡಿಸೆಂಬರ ಕಡೆಯಲ್ಲಿ

೨೦ನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನವು ಹೈದರಾಬಾದು ಸಂಸ್ಥಾನದಲ್ಲಿರುವ **ರಾಯಚೂರು** ನಗರದಲ್ಲಿ ೧೯೩೪ನೆಯ **ಡಿಸೆಂಬರ ೨೮, ೨೯, ೩೦**ನೆಯ ತಾರೀಖು (ಶುಕ್ರವಾರ, ಶನಿವಾರ, ಭಾನುವಾರ) ಗಳಲ್ಲಿ ನಡೆಯುವಂತೆ ಏರ್ಪಾಟಾಗಿದೆ. ಅಲ್ಲಿಯ ಪ್ರಸಿದ್ಧ ವಕೀಲರಾದ **ಶ್ರೀಮಾನ್ ಗುಡಿಹಾಳ ಹನುಮಂತರಾವ್ ದೇಶಪಾಂಡೆ** ಅವರ ನೇತೃತ್ವದಲ್ಲಿ ಸ್ವಾಗತ ಮಂಡಲಿ ಏರ್ಪಟ್ಟು ಸಮ್ಮೇಳನಕ್ಕೆ ಬೇಕಾದ ಅನುಕೂಲತೆಗಳನ್ನು ಸಂಭ್ರಮದಿಂದ ಸಿದ್ಧಗೊಳಿಸುತ್ತಿದೆ.

ಸುಪ್ರಸಿದ್ಧ ಸಾಹಿತಿಗಳಾದ ಮಂಗಳೂರಿನ **ಶ್ರೀಮಾನ್ ಪಂಜೆ ಮಂಗೇಶರಾವ್**, ಬಿ.ಎ., ಎಲ್.ಟಿ. ಅವರು ಅಧ್ಯಕ್ಷಸ್ಥಾನವನ್ನು ವಹಿಸಲು ದಯವಿಟ್ಟು ಒಪ್ಪಿರುತ್ತಾರೆ.

ಸಮ್ಮೇಳನದಲ್ಲಿ ಪ್ರಬಂಧಗಳನ್ನೋದಬೇಕೆಂದಾಗಲಿ, ನಿರ್ಣಯಗಳನ್ನು ಸೂಚಿಸಬೇಕೆಂದಾಗಲಿ ಕೀರ್ತನೆ, ಕಾವ್ಯ, ವಾಚನ, ನಾಟಕ ಮೊದಲಾದವುಗಳನ್ನು ನಡಸಬೇಕೆಂದಾಗಲಿ, ಅಥವಾ ಆ ಕಾಲದಲ್ಲಿ ಬೇರೆ ಸಭೆ ಪ್ರದರ್ಶನ ಮೊದಲಾದವುಗಳನ್ನು ಸೇರಿಸಬೇಕೆಂದಾಗಲಿ ಇಷ್ಟಪಡುವವರು ತಮ್ಮ ಉದ್ದೇಶವನ್ನು **೧೯೩೪ರ ಅಕ್ಟೋಬರ್ ೩೧**ರೊಳಗಾಗಿ ಬೆಂಗಳೂರಲ್ಲಿರುವ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯವರಿಗಾಗಲಿ ಅಥವಾ ರಾಯಚೂರಿನಲ್ಲಿರುವ ಸ್ವಾಗತಮಂಡಲಿಯ ಕಾರ್ಯದರ್ಶಿಯವರಿಗಾಗಲಿ ತಿಳಿಯಪಡಿಸಬೇಕೆಂದು ಕೋರಿದೆ. ಈ ಬಗ್ಗೆ ಏರ್ಪಟ್ಟಿರುವ ನಿಯಮಗಳನ್ನು ಈ ಕೆಳಗೆ ಕೊಟ್ಟಿದೆ.

ನಿಜಾಂ ಕರ್ನಾಟಕದಲ್ಲಿರುವ ನಮ್ಮ ಭಾಷಾಬಂಧುಗಳು ಈ ಸಮ್ಮೇಳನವು ಅತ್ಯಂತ ಯಶಸ್ವಿಯಾಗಿ ನಡೆಯಬೇಕೆಂದು ಆಶೆಪಟ್ಟುಕೊಂಡು ಉತ್ಸಾಹದಿಂದ ಏರ್ಪಾಟುಗಳನ್ನು ನಡಸುತ್ತಿದ್ದಾರೆ. ಸಮಸ್ತ ಕರ್ನಾಟಕ ನಾನಾಭಾಗಗಳಲ್ಲಿಯ ದೇಶಭಕ್ತರೂ, ಭಾಷಾಭಿಮಾನಿಗಳೂ, ಸಾಹಿತ್ಯೋಪಾಸಕರೂ, ಕಲಾಭಿಜ್ಞರೂ ಸಮ್ಮೇಳನಕ್ಕೆ ಬರುವರೆಂದು ರಾಯಚೂರಿನ ಸ್ವಾಗತಮಂಡಲಿಯು ನಿರೀಕ್ಷಿಸಿಕೊಂಡಿದೆ. ಕನ್ನಡನಾಡಿನ ಎಲ್ಲ ಪ್ರಾಂತಗಳಿಂದಲೂ ಮಹಾಜನರು ತಂಡೋಪತಂಡವಾಗಿ ರಾಯಚೂರಿಗೆ ದಯಮಾಡಿ ಬಂದು, ಸಮ್ಮೇಳನ ಕಾರ್ಯದಲ್ಲಿ ಭಾಗಿಗಳಾಗಿ, ತಾಯ್ನುಡಿಯ ಏಳಿಗೆಯ ಕೆಲಸಕ್ಕೆ ಬೆಂಬಲಕೊಡಬೇಕೆಂದು ಕರ್ನಾಟಕ ಸಾಹಿತ್ಯ ಪರಿಷತ್ತು ಮನಃಪೂರ್ವಕವಾಗಿ ಪ್ರಾರ್ಥಿಸುತ್ತದೆ.

### ನಿಯಮಗಳು

೧. (ಅ) ಸಮ್ಮೇಳನದಲ್ಲಿ ಪ್ರಬಂಧಗಳನ್ನೋದಲಿಚ್ಛಿಸುವವರೂ ನಿರ್ಣಯಗಳನ್ನು ಸೂಚಿಸಲಿಚ್ಛಿಸುವವರೂ ಆ ಸಂಗತಿಗಳನ್ನು ಅಕ್ಟೋಬರ್ ೩೧ರೊಳಗಾಗಿ ಕಾರ್ಯನಿರ್ವಾಹಕ ಮಂಡಲಿಗಾಗಲಿ ಸ್ವಾಗತಮಂಡಲಿಗಾಗಲಿ ಬರೆದು ತಿಳಿಸಿರಬೇಕು.

(ಆ) ಸ್ವಾಗತಮಂಡಲಿಯು ತನ್ನಲ್ಲಿಗೆ ಬಂದ ಇಂಥಾ ದರಖಾಸ್ತುಗಳನ್ನು ತನ್ನ ಶಿಫಾರಸು ಗಳೊಡನೆ ನವಂಬರು ೧೦ರೊಳಗಾಗಿ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಗೆ ಕಳುಹಿಸತಕ್ಕದ್ದು.

೧೭. ಸಮ್ಮೇಳನ ಕಾಲದಲ್ಲಿ ನಾಟಕವಾಡಬೇಕೆಂದಿರುವ ನಾಟಕ ಸಂಘಗಳೂ, ಕಾವ್ಯ ವಾಚನ ಮಾಡಲಿಚ್ಛಿಸುವ ಗಮಕಿಗಳೂ, ಕೀರ್ತನಕಾರರೂ, ಉಪನ್ಯಾಸಕರೂ ಇಂಥ ಇತರ ಸಾಹಿತ್ಯಸೇವಕರೂ ಸಹ ಅಕ್ಟೋಬರು ತಿಂಗಳು ೩೧ರೊಳಗಾಗಿ ತಾವು ಉದ್ದೇಶಿಸಿರುವ ಕಾರ್ಯ ವಿವರವನ್ನು ಸ್ವಾಗತ ಮಂಡಲಿಗೆ ಅಥವಾ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಗೆ ತಿಳಿಸಿರಬೇಕು ಆ ತಾರೀಖಿನ ತರುವಾಯ ಬರುವ ದರಖಾಸ್ತುಗಳನ್ನು ಆ ಮಂಡಲಿಗಳು ಗಮನಕ್ಕೆ ತೆಗೆದುಕೊಳ್ಳಬೇಕಾದ್ದಿಲ್ಲ. ಸ್ವಾಗತ ಮಂಡಲಿಯು ತನ್ನಲ್ಲಿಗೆ ಬಂದ ಇಂಥಾ ದರಖಾಸ್ತುಗಳನ್ನು ತನ್ನ ಶಿಫಾರಸ್ಸುಗಳೊಡನೆ ಪರಿಷತ್ತಿನ ಕಾರ್ಯ ನಿರ್ವಾಹಕ ಮಂಡಲಿಗೆ ನವಂಬರು ೧೦ರೊಳಗಾಗಿ ಕಳುಹಿಸಿರಬೇಕು.

೧೮. ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಇನ್ನಾವ ಸಭೆ, ಸಮ್ಮೇಳನ, ಪ್ರದರ್ಶನ ಮೊದ ಲಾದ ಸಮಾರಂಭಗಳನ್ನಾದರೂ ನಡೆಸಬೇಕೆಂದು ಇಷ್ಟಪಡುವ ಸಂಸ್ಥೆಗಳೂ ಅಕ್ಟೋಬರ್ ೩೧ರೊಳ ಗಾಗಿ ತಮ್ಮ ಉದ್ದೇಶವನ್ನು ಸ್ವಾಗತಮಂಡಲಿಗೂ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಗೂ ಸಹ ಕಳುಹಿಸಿರಬೇಕು. ಅವುಗಳ ದರಖಾಸ್ತುಗಳೂ ಮೇಲಿನ ದರಖಾಸ್ತುಗಳಂತೆಯೇ ವ್ಯವಸ್ಥೆಯಾಗ ತಕ್ಕದ್ದು.

೧೯. ಪ್ರಬಂಧಗಳನ್ನೋದಲಿಚ್ಛಿಸುವವರು ತಮ್ಮ ದರಖಾಸ್ತಿನೊಡನೆ ತಮ್ಮ ಪ್ರಬಂಧದ ಸಂ ಗ್ರಹ ಲೇಖವನ್ನು ಕಳುಹಿಸಿರಬೇಕು. ಈ ಸಂಗ್ರಹ ಲೇಖವು ಪ್ರಬಂಧದ ಮುಖ್ಯಾಂಶಗಳನ್ನು ಮಾತ್ರ— ಎಂದರೆ ಅದರಲ್ಲಿ ಚರ್ಚಿತವಾಗಿರುವ ಪಶ್ನೆಗಳನ್ನು ಮತ್ತು ಪ್ರತಿಪಾದಿತವಾಗಿರುವ ಸಿದ್ಧಾಂತಗಳನ್ನು ಮಾತ್ರ— ಸೂಚಿಸುವುದಾಗಿ ಕೈಬರೆಹದಲ್ಲಿ ೨ ಪುಟಗಳನ್ನು ಮೀರ ಇರಬೇಕು.

೨೦. ನಿರ್ಣಯಗಳನ್ನು ಸೂಚಿಸಲಿಚ್ಛಿಸುವವರು ತಮ್ಮ ನಿರ್ಣಯ ವಾಕ್ಯಗಳನ್ನು ಬರೆದು ಕಳುಹಿಸತಕ್ಕದ್ದು.

೨೧. ಪರಿಷತ್ತಿನ ಕಾರ್ಯ ನಿರ್ವಾಹಕ ಮಂಡಲಿಯು ಈ ಪ್ರಬಂಧ ಸಂಗ್ರಹಗಳನ್ನೂ ನಿರ್ಣ ಯಸೂಚನೆಗಳನ್ನೂ ನೋಡಿ ಅವಕ್ಕೆ ತಕ್ಕ ಕಾಲಾವಕಾಶವನ್ನು ಗೊತ್ತುಪಡಿಸುವ ಕೆಲಸವನ್ನು ಒಂದು ಉಪಸಮಿತಿಗೆ ವಹಿಸಬಹುದು. ಆ ಉಪಸಮಿತಿಯ ಶಿಫಾರಸ್ಸಿನಮೇರೆಗೆ, ಅಥವಾ ತಾನಾಗಿ ಯಾವ ಪ್ರಬಂಧಕ್ಕಾಗಲಿ ನಿರ್ಣಯ ಸೂಚನೆಗಾಗಲಿ ಅವಕಾಶ ದೊರೆಯದೆಂದು ಹೇಳುವ ಅಧಿಕಾರವು ಕಾರ್ಯ ನಿರ್ವಾಹಕ ಮಂಡಲಿಗೆ ಇರುತ್ತದೆ.

೨೨. ಮೇಲಿನ ೧೬, ೧೭, ೧೮ನೆಯ ನಿಯಮಗಳಿಗೆ ಸಂಬಂಧಪಟ್ಟಂತೆ ಬಂದ ದರಖಾಸ್ತು ಗಳನ್ನು ಪರಿಷತ್ತಿನ ಕಾರ್ಯ ನಿರ್ವಾಹಕ ಮಂಡಲಿಯು ಪರ್ಯಾಲೋಚಿಸಿ ತನ್ನ ತೀರ್ಮಾನುಗಳನ್ನು ನವಂಬರು ೩೦ರೊಳಗಾಗಿ ಆಯಾ ದರಖಾಸ್ತುದಾರರಿಗೆ ತಿಳಿಯಪಡಿಸತಕ್ಕದ್ದು.

ಈ ವಿಚಾರಕ್ಕೆ ಸಂಬಂಧಪಟ್ಟ ನಿಯಮಗಳು ಇನ್ನೂ ಕೆಲವು ಇವೆ. ಅವುಗಳನ್ನು ಕರ್ನಾ ಟಕ ಸಾಹಿತ್ಯ ಪರಿಷತ್ಪತ್ರಿಕೆಯ ೧೯೩೪ನೆಯ ಎಪ್ರಿಲ ತಿಂಗಳ ಸಂಚಿಕೆಯಲ್ಲಿ ಕೊಟ್ಟಿರುವ ಅನು ಬಂಧದಲ್ಲಿ (ಪುಟ xi-xx) ಕಾಣಬಹುದು.

ಸಮ್ಮೇಳನಕ್ಕೆ ಸಂಬಂಧಪಟ್ಟ ಇತರ ಅಂಶಗಳನ್ನು ವರ್ತಮಾನಪತ್ರಿಕೆಗಳ ಮೂಲಕವೂ ಇತರ ವಿಧಗಳಲ್ಲಿಯೂ ಕ್ರಮೇಣ ಪ್ರಕಟಿಸಲಾಗುವದು.

ಕರ್ನಾಟಕ ಸಾಹಿತ್ಯ ಪರಿಷತ್ತು,
ಶ್ರೀ ಕೃಷ್ಣರಾಜೇಂದ್ರ ಪರಿಷನ್ಮಂದಿರ,
ಚಾಮರಾಜಪೇಟೆ, ಬೆಂಗಳೂರು ಸಿಟಿ.

ಸಿ. ಕೆ. ವೆಂಕಟರಾಮಯ್ಯ,
ಎಂ.ಎ., ಎಲ್ಎಲ್. ಬಿ.,
ಗೌರವ ಕಾರ್ಯದರ್ಶಿ.

# ಅತ್ಯುತ್ತಮವಾದ ಕೆಲವು ಅನುಭವಸಿದ್ಧ

## — ಔಷಧಗಳು. —

ಕೇವಲ ಮೋಹಕವಾದ ಲೇಬಲುಗಳಿಂದ ಕೂಡಿದ ಹಾಗು ಆಡಂಬರದ ಜಾಹೀರಾತುಗಳಿಗೆ ಮೋಸಹೋಗಿ ಸಲ್ಲದ ಔಷಧಗಳನ್ನು ತರಿಸಿ ನಿಮ್ಮ ದೇಹಾರೋಗ್ಯದ ಹಾನಿಯನ್ನು ಮಾಡಿಕೊಳ್ಳಬೇಡಿ! ಕಸ್ತೂರಿಯ ವಾಸನೆಯನ್ನು ಬಾಯಿಂದ ಹೇಳಬೇಕಾದವಶ್ಯವಿಲ್ಲ. ಹಾಗೆ ನಮ್ಮ ಔಷಧಗಳಲ್ಲಿರುವ ಗುಣದಬಗ್ಗೆ ಖಾತ್ರಿ ಮಾಡಿಕೊಳ್ಳಬೇಕು.

### ಔಷಧಗಳ ವಿವರ :

(೧) ಕಾಲರಾಪಿಲ್ಸ ೧೦೦ಕ್ಕೆ ೫ ರೂ. (೨) ವ್ಯಾಧಿಗಜಕೇಸರಿ ೧ ರೂ. ೨ ತೊಲಿ (೩) ಹುರಕಿನ ಚೀಟು ೧೦೦ಕ್ಕೆ ೫ ರೂ. (೪) ವ್ಯಾಧಿಹರಗುಟಿಕಾ ೧ ರೂ. ೨ ತೊಲಿ (೫) ಥಂಡಿಜ್ವರಕ್ಕೆ ೨೪ ಮಾತ್ರೆಗೆ ೧ ರೂ. (೬) ಬಚನಾಗಾದಿಗುಟಿಕಾ ೧ ರೂ. ೨ ತೊಲಿ (೭) ಅಶ್ವಗಂಧಿಚೂರ್ಣ ೧ರೂ ೪ ತೊಲಿ (೮) ಸಂಜೀವಿನಿ ಗುಟಿಕಾ ೧ ರೂ. ೨ ತೊಲಿ. (೯) ನಾಗಾರ್ಜುನಚೂರ್ಣ ೧ ರೂ. ೪ ತೊಲಿ (೧೦) ಹಿಂಗ್ವಾದಿಚೂರ್ಣ ೧ ರೂ. ೨ ತೊಲಿ (೧೧) ಪುಷ್ಯಾನುಗಚೂರ್ಣ ೧ ರೂ. ೪ ತೊಲಿ (೧೨) ಗುಲ್ಮಜಲೋದರಮಹೋದರ ಚೂರ್ಣ ೧ ರೂ. ೨ ತೊಲಿ (೧೩) ಭಾಸ್ಕರಲವಣ ೧ ರೂ. ೪ ತೊಲಿ (೧೪) ಅಗ್ನಿಕುಮಾರ ರಸ ೧ ರೂ. ೧ ತೊಲಿ (೧೫) ಮಹಾಜರಾಂಕುಶ ೨ ರೂ. ೧ ತೊಲಿ (೧೬) ವಾತುವಿಧ್ವಂಸ ರಸ ೧ ರೂ. ೪ ತೊಲಿ (೧೭) ಮೃತ್ಯುಂಜಯ ರಸ ೨ ರೂ. ೧ ತೊಲಿ (೧೮) ಮಹಾಯೋಗರಾಜ ಗುಗ್ಗಳ ೪ ರೂ. ೧ ತೊಲಿ (೧೯) ಪ್ರದವಾದಿ ರಸ ೨ ರೂ. ೧ ತೊಲಿ (೨೦) ಕಾಮೇಶ್ವರ ೪ ರೂ, ೧ ತೊಲಿ (೨೧) ಗರ್ಭಿಗೆ ೧೪ ಮಾತ್ರೆಗೆ ೫ ರೂ. (೨೨) ಮೂಲವ್ಯಾಧಿಗೆ ೧೪ ಮಾತ್ರೆಗೆ ೧ ರೂ. (೨೩) ಶೂಲವಜ್ರಣಿ ೫ ರೂ. ತೊಲಿ ೧ (೨೪) ಯಾವತ್ತೂ ವ್ರಣಗಳಿಗೆ ಮಲಮು ಡಬ್ಬಿ ೨ ಆಣೆ (೨೫) ಸರ್ವವಾತಕ್ಕೆ ೫ ರೂ. ೧ ತೊಲಿ (೨೬) ಪರಿಣಾಮಶೂಲಿಗೆ ೨ ರೂ. ೧ ತೊಲಿ (೨೭) ಸುದರ್ಶನ ಚೂರ್ಣ ೧ ರೂ. ೪ ತೊಲಿ (೨೮) ಶ್ಲೇಷ್ಮಿಗೆ ೧ ರೂ. ೨ ತೊಲಿ.

ಅನುಪಾನ— ಪಥ್ಯ ಔಷಧಗಳಕೂಡ ವಿವರಿಸುವದು. ಹೆಚ್ಚಿನ ಮಾಹಿತಿ ಬೇಕಾದಲ್ಲಿ ಕೆಳಗಿನ ವಿಳಾಸಕ್ಕೆ ಬರೆದು ತಿಳಕೊಳ್ಳಬಹುದು.

ನಮ್ಮ ವಿಳಾಸ:— **ಬ. ಕೆ. ಪಾಟೀಲ ಶಿರಹಟ್ಟಿ**

ಪೋ. ಶಿರಹಟ್ಟಿ

R. No. B. 3350

VEERSHAIVA CHENDRIKE.



---

**ವರ್ಗಣಿದಾರರಲ್ಲಿ ವಿನಂತಿ.**

ಚಂದಾಹಣವನ್ನು ಈ ಪತ್ರಿಕೆಯು ಕೈಸೇರಿದೊಡನೆ ಮನಿಯಾರ್ಡರ ಮೂಲಕ ಕಳುಹಬೇಕು. ಕಳುಹದವರಿಗೆ ೨-೦-೦ ವ್ಹಿ. ಪಿ. ಯಿಂದ ಮುಂದಿನ ಸಂಚಿಕೆ ರವಾನಿಸಲ್ಪಡುವದು. ಸ್ವೀಕರಿಸಿ ಈ ವಿಷಯದಲ್ಲಾಗುವ ನಮ್ಮ ತೊಂದರೆಯನ್ನು ದೂರಮಾಡಬೇಕಾಗಿ ವಿನಂತಿ. ವ್ಹಿ. ಪಿ. ಯನ್ನು ಪರತ ಬಿಟ್ಟು, ಚಂದ್ರಿಕೆಯ ಹಾನಿಯನ್ನು ಮಾಡಬಾರದೆಂಬದಾಗಿಯೂ ವಿನಂತಿ.

ಹು. ರಾ. ಅಗ್ನಿಹೋತ್ರಿ,

ಆಡಳತೆಗಾರರು.

---

ಇದನ್ನು ಗದಗ-ರಸಿಕರಂಜನಿ ಮುದ್ರಣಾಲಯದಲ್ಲಿ ಮುದ್ರಿಸಿ, ಗದಗ ತಾಲೂಕ ಸೊರಟೂರ (ಪೋ. ಶಿರಹಟ್ಟಿ) ಹಾಗು ಶಿರಹಟ್ಟಿ ವೀರಶೈವ ಚಂದ್ರಿಕೆಯ ಆಫೀಸಿನಲ್ಲಿ ಪ್ರಸಿದ್ಧಪಡಿಸಿತು.

ವಾರ್ಷಿಕ ಚಂದಾ ೧-೮-೦, ಅಂಚೇ ವೆಚ್ಚ ಸೇರಿ ೧-೧೧-೦.
ಬಿಡಿ ಸಂಚಿಕೆ ೦-೩-೦.

ಶಿ ರ ಹ ಟ್ಟಿ.

ಶ್ರೀ ಫಕ್ಕೀರೇಶ್ವರ ಸ್ವಾಮಿಗಳ ಕೃಪಾಛತ್ರದಲ್ಲಿ ನಡೆದ,

# ವೀರಶೈವ ಚಂದ್ರಿಕೆ.

ನೈತಿಕ, ಸಾಮಾಜಿಕ, ಧಾರ್ಮಿಕ ವಿಷಯಗಳಿಂದೊಡಗೂಡಿದ
ತಿಳಿಗನ್ನಡ ಮಾಸಪತ್ರಿಕೆ.

ಹುಟ್ಟು : ಶಕೆ ೧೮೫೬. ಶ್ರೀ ಬಸವ ಜಯಂತಿ.

| ಸಂಪುಟ | ಗೌರಿ ಹುಣ್ಣಿವೆ. | ಸಂಚಿಕೆ |
|---|---|---|
| ೧. | ೨೧ — ೧೧ — ೧೯೩೪. | ೭. |

ಕಂದ

ತನ್ನಯನಾಡ-ನುಡಿಗ ।
ಉನ್ನತಿಯಂ ಮಾಳ್ಪಕಜ್ಜಕಿನ್ನೆಣೆಯುಂಟೇ ॥
ಕನ್ನಡದೇಳ್ಗೆಯ ಬಗೆಯಂ।
ಕನ್ನಡಿಗರ್ ತಿಳಿದುಕೊಡಲಿದಕ್ಕಾಶ್ರಯ
ಮಂ. ॥೧॥

ಕಂದ

ಬಂದವರಂಬರಿಸದಿಹಂ ।
ಸಂದವರಂಸಂತವಿಸದನಹ ತಾಯ್ನುಡಿಯಂ ॥
ವಂದಿಸದಿರುವಂ ಮನುಜನೋ ! ।
ವಂಧ್ಯನೋ ! ಕಾಣಿಳಿಗೆ ಪುಟ್ಟಿ ಫಲವೆನಿಸಿಹ
ನೋ ! ॥೨॥

ಕವಿ- ವಾಜಿಪೇಯ ಶಿವಾನಂದಾರ್ಯರು.

ನಮ್ಮ ಭಾಷೆ ಅಲ್ಪವಾದದ್ದು. ನಮ್ಮ ಲೇಖನ ಯೋಗ್ಯತೆ ಅಲ್ಪವಾದದ್ದು. ನಮ್ಮ ಭಾಷೆಗೆ ಯಾವದೊಡ್ಡ ವಿಚಾರವೂ ಸಾಧ್ಯವಲ್ಲ. ಎಂದು ಎದುವರೆಗೆ ತಿಳಿದುಕೊಂಡಿರುತ್ತೇವೋ ಅದುವರೆಗೆ ನಮ್ಮಿಂದ ಲೋಕದಲ್ಲಿ ಯಾವ ದೊಡ್ಡ ಕೆಲಸವೂ ಆಗಲಾರದು. ಈ ಅಲ್ಪತಾಭ್ರಾಂತಿಯ ಕಟ್ಟುಗಳಿಂದ ನಾವು ಬಿಡುಗಡೆ ಹೊಂದಬೇಕು ಆಗ ನಮ್ಮ ಬುದ್ಧಿಗೆ ಸ್ವಾತಂತ್ರ್ಯವುಂಟಾಗುತ್ತದೆ. ಬುದ್ಧಿ ಸ್ವಾತಂತ್ರ್ಯವು ಇತರ ಸ್ವಾತಂತ್ರ್ಯಕ್ಕೆ ಪೂರ್ವಭಾವಿಯಾಗಿರಬೇಕಾದ ಸಿದ್ಧತೆ.

ಶ್ರೀಮಾನ್ ಡಿ. ವ್ಹಿ. ಗುಂಡಪ್ಪನವರು,
ಮೈಸೂರು.

ಸಂಪಾದಕರು ಹಾಗು ಪ್ರಕಾಶಕರು,
ಆಲೂರ ಮುರಿಗೇಂದ್ರ ಶೆಟ್ಟರು.




ವಾಸಕ ೧ ಔಂಸಿನ ಬಾಟ್ಲಿ ಕಿಮ್ಮತ್ತು ೦—೬—೦.

ಬಾಲಸುಧಾ ೧ ಔಂಸಿನ ಬಾಟ್ಲಿಗೆ ೦-೭-೦, ೮ ಔಂಸಿನ ಬಾ. ೦-೧೨-೦

## —ಬಾಲ ಸುಧಾ—

ಚಿಕ್ಕ ಮಕ್ಕಳ ಹೊಟ್ಟೆ ದೊಡ್ಡದಾಗುವದು, ಅಜೀರ್ಣದಿಂದ ಹೊಟ್ಟೆ ಉಬ್ಬುವದು, ಝಾಡಿಸುವದು, ಹೊಟ್ಟೆನೋವು, ಮಲಬದ್ಧತೆ ಮುಂತಾದ ಅಪಚನದ ವಿಕಾರಗಳು, ಮುಟ್ಟ ದೋಷಗಳು. ರಿಕೆಟ್ಸ. ಕೆಮ್ಮು, ನೆಗಡಿ ಮುಂತಾದ ಕಫವಿಕಾರಗಳು, ಯಕೃದಭಿವೃದ್ಧಿ ಪ್ಲೀಹಾಭಿವೃದ್ಧಿ ಮುಂತಾದ ಭಯಂಕರ ರೋಗಗಳು ತೀವ್ರ ಕಡಿಮೆಯಾಗಿ ಚಿಕ್ಕ ಬಾಲಕರು ಸಶಕ್ತರೂ, ಪುಷ್ಟರೂ, ಸುಂದರರೂ ಆಗುವರು.

## —ವಾಸಕ—

ಈ ಔಷಧದಿಂದ ಕಫಕ್ಷಯ, ದಮ್ಮು, ಕೆಮ್ಮು, ನೆಗಡಿ, ಇನ್ಫ್ಲುಯಂಝಾ, ನ್ಯೂಮೋನಿಯಾ, ಸಣ್ಣ ಹುಡುಗರ ಪಕ್ಕೆ ಒಡಕೊಳ್ಳುವ ಭಯಂಕರ ರೋಗ (ಬ್ರಾಂಕೋನ್ಯೂಮೊನಿಯಾ) ಕೊಡಗಕೆಮ್ಮು. ಕಫಜ್ವರ, ಕಫ ಗಟ್ಟಿಯಾಗುವನು, (ತ್ರಿದೋಷಜ್ವರದಲ್ಲಿ) ಮುಂತಾದ ತ್ರಾಸದಾಯಕ ಭಯಂಕರ ರೋಗಗಳು ಖಾತ್ರಿಯಿಂದ ಗುಣ. ಬಹುದಿವಸ ದಮ್ಮಿನಿಂದ ಬಳಲುವ ಎಷ್ಟೋ ಜನರು ಇದನ್ನು ಉಪಯೋಗಿಸಿ ಸುಖಹೊಂದಿದ್ದಾರೆ.

**ಕರ್ನಾಟಕ ಆಯುರ್ವೇದಿಕ ಫಾರ್ಮಸಿ,**
**ಶಿರಹಟ್ಟಿ, ಜಿಲ್ಲಾ ಧಾರವಾಡ.**

ಕವಿತೆಯನ್ನು ಅಭ್ಯಾಸಿಸುವದಕ್ಕೆ ಮೊದಲು ಅದರ ಅಭಿರುಚಿ ಏನೆಂದೂ ಅದರ ವಿಚಾರವೇನೆಂದೂ ಅವಶ್ಯಕವಾಗಿ ತಿಳಿಯಬೇಕು. "ವಾಕ್ಯರಸಾತ್ಮಕಂ ಕಾವ್ಯ" ರಸವತ್ತಾದವಾಕ್ಯವೇ ಕಾವ್ಯವು ಎಂದು ಸಂಸ್ಕೃತ ಅಲಂಕಾರ ಶಾಸ್ತ್ರವು ಸಾರುತ್ತದೆ. ಈ ಈಶ್ವರಪದತ್ತರಸವು ಕೇವಲ ಕವಿಗೆ ಮಾತ್ರ ಲಭ್ಯವು. ರಸಮಯಪಂಕ್ತಿಗಳೇ ಹೃದಯ ಗ್ರಾಹಿಗಳು. ಎಲ್ಲಿ ಕವಿಯು ಸಮಸ್ತ ಹೃದಯರೂಪೀ ದ್ರವಿತ ರಸವು ಕವಿತಾರೂಪವಾದ ಅಚ್ಚಿನಲ್ಲಿ ಎರೆಯಲ್ಪಡುತ್ತದೋ, ಅಲ್ಲಿ ಅದರ ವಿಶೇಷ ಅನುಭೂತಿಯನ್ನು ಹೊಂದಬಹುದು.

# ಪದ್ಯಶ್ರೀಮ.

ಕವಿಯು ಸ್ವಭಾವತಃ ಸೌಂದರ್ಯೋಪಾಸಕನು. ಈ ಸೌಂದರ್ಯವು ಭಿನ್ನ ಭಿನ್ನ ಸ್ಥಾನಗಳಲ್ಲಿರಬಹುದು. ಹೇಗೆಂದರೆ ಮಹಾಕವಿ ಕಾಳಿದಾಸನ ಸೌಂದರ್ಯವು ಶಾಕುಂತಲೆಯಲ್ಲಿ, ಹೋಮರನದು ಹೆಲೆನಿನಲ್ಲಿ, ಶೆಕ್ಸಪೀಯರನದು ಮಿರಿಂಡೆಯಲ್ಲಿ, ತುಲಸಿದಾಸನದು ರಾಮನಲ್ಲಿ ಮತ್ತು ವರ್ಡ್ಸ್ ವರ್ತನದು ಪ್ರಕೃತಿಯಲ್ಲಿದೆ. ಕವಿಯು ಜ್ಞಾನತಃ ಸೌಂದರ್ಯೋಪಾಸಕನಾಗಿದ್ದರೂ ಅಜ್ಞಾನತಃ ಸತ್ಯಾನ್ವೇಷಕನೂ ಆಗಿದ್ದಾನೆ.

ಶ್ರೀ. ಬಿ. ಶಂಕರಭಟ್ಟ ವಿದ್ವಾನ,
ಮಂಗಳೂರು.

ಸಿರಿಗನ್ನಡಂ ಗೆಲ್ಗೆ

# ವೀರಶೈವ ಚಂದ್ರಿಕೆ.

ಬಯಲುಮೂರ್ತಿಯಾಗಿನಿಂದನೊಬ್ಬಶರಣ. ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ. ಆತನ ಶಾಂತಿಸ್ವೈರಣೆಯಿಂದ ಹುಟ್ಟಿದಾತ ವಿಷ್ಣು. ಆತನ ಕೋಪಕ್ರೋಧದಿಂದ ಹುಟ್ಟಿದಾತ ರುದ್ರ. ಈ ಮೂರು ಸೀಠವಂತಿರಲಿ. ಆ ಶರಣನನರಿದು ಶರಣೆನುತಿರ್ದೆನು ಕೂಡಲ ಸಂಗಮದೇವಾ. —ಶ್ರೀ ಬಸವೇಶ್ವರ.


| ಸಂಪುಟ ೧ | ಶ್ರೀಮನ್ನೃಪಶಾಲಿವಾಹನ ಶಕೆ ೧೮೫೬<br>ಗೌರೀ ಹುಣ್ಣಿವೆ. | ಸಂಚಿಕೆ ೭ |
|---|---|---|


## ಪ್ರಾರ್ಥನೆ.

ರಾಗ- ಸಾರಂಗ. ತಾಳ- ಆದಿ.

ಕಾರ್ಯೈಸುಖಸಾರಾ ನೀನುಪಕಾರಾ ||
ಮಾಯಾದೂರನೆ ಎನ್ನ ಗುಣಮಣಿಹಾರಾ ||ಪಲ್ಲ||

ತನುಮೋಹವಖಳೇಂದ್ರಿಯ ಪರಿತಾಪಾ |
ಧನದಾಶೆ ಸುಜನರ ನಿಂದೆಯಾ ಲಾಪಾ |
ವನಿತಾಭಿರತಿ ಲೋಕಗತಿಯನು ಲೇಪಾ |
ಮನವಿಡಿವಳಲು ವೆನ್ನನು ನಗಚಾಪಾ ||೧||

ಪಲವು ವಿಷಯದುಪಹತಿಯೊಡಗೂಡಿ |
ಕಲುಷ ರೂಪಿನ ಕರ್ಮವನು ಮಿಗೆಮಾಡಿ ||
ಕುಲಜಾತಿ ರೂಪುಸಂಪದವನೆ ಬೇಡಿ |
ಸಲೆ ಬಾಧೆ ಬಡುವೆನ್ನ ನಭವನೆ ನೋಡಿ ||೨||

ಕರುಣಾಂಬು ನಿಧಿತೆರೆ ಮಸಗುವಪಾಂಗಾ |
ಗಿರಿರಾಜ ಸುತೆ ವಿರಾಜಿಸುವವಾಮಾಂಗಾ |
ಶರಣ ಸಂಕುಳದ ಮಾನಸ ನಿಜಸಂಗಾ |
ಪರಿಭವಯುತ ನೆನ್ನ ನೆಲೆಶಂಭುಲಿಂಗಾ ||೩||

ನಿಜಗುಣಿ ಶಿವಯೋಗಿಗಳು.

# ಪ್ರಾರ್ಥನಾ ಪದ್ಯದ ನೊಟೇಶನ್.

ರಾಗ– ಸಾರಂಗ. ತಾಲ– ತ್ರಿವಟ. ಮಾತ್ರಾ ೧೬.

ಆರೋಹ { ಸಾ ರಿ ಮ ಪ ನಿ ಸಾ }

ಅವರೋಹ { ಸಾ ನಿ ಪ ಮ ರಿ ಸಾ }

೨ ಸಿಷ್ಟಫಗಳನ್ನು ಹಚ್ಚುವ ವಾಡಿಕೆಯುಂಟು
ಇದು ಕೋಮಲ ಸ್ವರದ ಗುರುತು.
ಇದು ತಾರ ಸಪ್ತಕದಲ್ಲಿನ ಗುರುತು.
-- ಇದು ಮಂದ್ರ ಸಪ್ತಕದಲ್ಲಿನ ಗುರುತು.

| | | | |
|---|---|---|---|
| ನಾ ತಿ ತಿ ನ್ನಾ | ನಾ ಧೀ ಧಿ ನ್ನಾ | ನಾ ಧೀ ಧಿ ನಾ | ನಾ ಧೀ ಧಿ ನ್ನಾ |
| ಕಾ ಽ ಯ್ಯೈ ಽ | ಸು ಖ ಸಾ ಽ | ರಾ ಽ ನಿ ನು | ಪ ಕಾ ರಾ ಽ |
| ಸಾ ಽ ನಿ ಪ | ಪ ಮ ರಿ ರಿ | ಸಾ ಽ ಸಾ ರಿ | ಮ ಪ ನಿ ಽ |
| ಮಾಯಾದೂ ರ | ನೆ ಯ ನ್ನ ಽ | ಗು ಣ ಮ ಣಿ | ಹಾ ಽ ರಾ ಽ |
| ಮ ಮ ಮ ಪ | ಪ ನಿ ನಿ ಽ | ಮ ಪ ನಿ ನಿ | ಸಾ ಽ ಸಾ ಽ |

ಅಂತರಾ.

| | | | |
|---|---|---|---|
| ತ ನು ಮೋ ಹ | ವ ಖಿ ಳೀ ಂ | ದ್ರಿ ಯ ಪ ರಿ | ತಾ ಽ ಪಾ ಽ |
| ಮ ಮ ಮ ಮ | ಪ ಪ ನಿ ನಿ | ಮ ಪ ನಿ ನಿ | ಸಾ ಽ ಸಾ ಽ |
| ಘ ನ ನಾ ಶಿ | ಸು ಜ ನ ರ | ನಿ ಂ ದೆ ಯ | ಲಾ ಽ ಪಾ ಽ |
| ನಿ ಸಾ ನಿ ಸಾ | ನಿ ಪ ಮ ರಿ | ರಿ ಮ ಪ ನಿ | ಪ ಮ ರಿ ಸಾ‖ |

**ಈ ನುಡಿಯಂತೆ ಉಳಿದ ಚರಣಗಳನ್ನು ಬಾರಿಸಬೇಕು.**

‖ ತಾನುಗಳು. ‖

ಕಾಯ್ಯೈ ಸುಖಸಾ | ರಾ ಎಂಬ ಕೊನೆಯ ಅಕ್ಷರವನ್ನೇ ತಾನಿನಲ್ಲಿರಿಸಬೇಕು.

ನಾ ಧೀ ಧಿ ನ್ನಾ ನಾ ಧೀ ಧಿ ನ್ನಾ ನಾ ತಿ ತಿ ನ್ನಾ ನಾ ಧೀ ಧಿ ನ್ನಾ

೧ ನಿ ಸಾ ರಿ ಮ ಪ ನಿ ಸಾ ರಿ ಸಾ ರಿ ಸಾ ನಿ ಪ ಮ ರಿ ಸಾ

೨ ನಿ ಸಾ ರಿ ಸಾ ಮ ರಿ ಪ ಮ ನಿ ಪ ಸಾ ನಿ ರಿ ಸಾ ನಿ ಸಾ

೩ ನಿ ಸಾ ರಿ ಮ ಸಾ ರಿ ಮ ಪ ರಿ ಮ ಪ ನಿ ಮ ಪ ನಿ ಸಾ

೪ ನಿ ಸಾ ರಿ ಮ ಪ ನಿ ಸಾ ರಿ ಮ ರಿ ಸಾ ನಿ ಪ ಮ ರಿ ಸಾ

೫ ನಿ ಸಾ ರಿ | ಸಾ ರಿ ಮ | ರಿ ಮ ಪ | ಮ ಪ ನಿ | ಪ ನಿ ಸಾ ಽ

ನಾರಾಯಣರಾವ ಬಿಜಾಪೂರ

ಶಿರಹಟ್ಟಿ

# ಜನಪದ ಸಾಹಿತ್ಯ.

## ಹಳ್ಳಿಯ ಹಾಡುಗಳು.

### ಸಂಗ್ರಾಹಕರು : "ತಿಮ್ಮಣ್ಣ"

ಜ್ಯಾಲಿಯಗಿಡಕ ಜಗ್ಗಗೊಂಗಡಿಹಾಕಿ | ಜಾಣರಾಡ್ಯಾರೊ ಪಗಡೀನ |
ಜಾಣರಾಡ್ಯಾರೊ ಪಗಡೀನ ಪಾಂಡವರು । ಉಣ್ಣದ್ಹೋಗ್ಯಾರೋ ವನವಾಸ ||೧||

ಮಾಳಿಗಿ ವ್ಯಾಲಿನ ಹುಲ್ಲು ಗಾಳಿಗ್ಹಾರಿದರೇನೋ | ಗಾಲವೇಲಾತೊ ನರಗುಂದ |
ಗಾಲವೇಲಾತೊ ನರಗುಂದ | ಬಾಬಸಾಬ ಗಾಳೀಗೆ ಬಾಯಿಬಿಡತಾನೋ ||೨||

ಕಂಚಿನ ಕಣೆಹಲಗಿ ಮಿಂಚಿನಮಣಿದಿಮ್ಮು | ಗೊಂಚಲಾಡ್ಯಾವೊ ಮುನವಳ್ಳಿ ।
ಗೊಂಚಲಾಡ್ಯಾವೊ ಮುನವಳ್ಳಿ ಮುಂದಿರುವ | ಪಂಚಲಿಂಗಗ ನಮಶೆರಣು ||೩||

ಏನುಕೋಳಿಯು ಕೊಯ್ದೋ ಹೀನಗಡ್ಡದಮುಲ್ಲ । ರನ್ನದಗೋಳಿರಣಗೋಳಿ |
ರನ್ನದಗೋಳಿ ರಣಗೋಳಿ ಕೂಗಿದರ | ರಾಯರ ಪಟ್ಟಣಕ ಬೆಳಗಾತೋ ||೪||

ಊರಮುಂದಿನಗಾಳಿ ಏನಂತಬೀಸಿತೋ । ಲಾಲಿಸಿಕೇಳ ಹಡದವ್ವ |
ಲಾಲಿಸಿಕೇಳ ಹಡದವ್ವ ನಿನಮಗ । ಹಾಡ್ಯಾಡಿ ಹಂತೀಯಹೊಡದಾನೊ ||೫||

ಬಾದೂರ ಬಂದಾನೊ ಬಾದಾಮಿಗಿಳಿದಾನೊ | ನೋಡಬೇಕೆಂದಾನೊ ನರಗುಂದ |
ನೋಡಬೇಕೆಂದನೋನರಗುಂದಬಾಬಸಾಬ | ಮಾದಬೇಕೆಂದನೊಲಡಾಯಿ ||೬||

ಊರೀಗೆ ನಮಗೌಡ ಮೀರಿದ ಒಕ್ಕಲು | ಕೂರೀಗಿನೂರೊ ಕುಡನೂರೋ |
ಕೂರೀಗೆ ನೂರೊ ಕುಡನೂರೊ ನಮಗೌಡ | ಮೋಜಿಗೆತೊಡುವ ಮದರಂಗಿ ||೭||

ಎಂಟಿತ್ತಿನಾಗ ಬಂಟನನಸಾದೇವ | ಮಂಟಪದಾಗ ಮಲಗ್ಯಾನೋ |
ಮಂಟಪದಾಗ ಮಲಗೀರುಸಾದೇವಗ | ಗಂಟೆಸರಪಳಿ ಒಪ್ಯಾವೊ ||೮||

ಘಾರವಾಡದತೇರು ಯಾವಕಟ್ಟಿದಾನೋ | ಉಣಕಲ್ಲಬಡಿಗಿ ಲಿಚಮಣ್ಣ |
ಉಣಕಲ್ಲಬಡಿಗಿ ಲಿಚಮಣ್ಣ ಕಟ್ಟಿದತೇರು | ಮುರವಾಳಿಲ್ಲದಮುಗದೈತಿ ||೯||

ಆ ಊರು ಈ ಊರು ಜೋಗಿಜಂಗಮನೂರು | ನೀರಿಲ್ಲದೂರು ಲಿಂಗದಾಳ |
ನೀರಿಲ್ಲದೂರು ಲಿಂಗದಾಳ ಆ ಊರಿಗೆ | ಬಾರಿಬಾರಿಗೆ ಬರಗಾಲೋ ||೧೦||

ಹೋಗುವವನ ಕಯ್ಯಾಗ ಹೊಳೆವಹೊನ್ನುಂಗರ | ಹೋಗೊನಿನದಾರಿ ಬಲುದೂರ |
ಹೋಗೊನಿನದಾರಿ ಬಲದೂರ | ಸಂಗಮದ ತೇರನಿನಗಾಗಿ ತರಬೇಕೋ ||೧೧||

# ಜನಪದ ಸಾಹಿತ್ಯ.

ಕವನಗಾರ:— ಪ್ರೋ. ರ. ಶ್ರೀ. ಮುಗುಳಿ, ಎಮ್. ಎ. ಬಿ. ಟಿ. (ಸಾಂಗಲಿ.)

೧ ದೈವಾದ ಮನಿಯೊಂದು ಕಬ್ಬಿಣದ ಬಾಗಿಲ |
ಹುಲಿಯಂಥ ಜನರು ಹಾಯ್ದಾರು | ತೆರಿಲಿಲ್ಲ |
ತಾನತೆರಿದಾಗ ತೆರಿಬೇಕ ||

೨ ದೈವುಳ್ಳ ಗೌಡರು ಪುಣ್ಯೇವಮಾಡ್ಯಾರ |
ದೈವಾದ ಮರಿಯು ತೆರಿದಾಗ | ತಾವ್ಹೋಗಿ |
ಭಂಗಾರ ಹಿಡಿಯ ತಂದಾರ ||

೩ ಬಡವಾರು ನಾವೆಲ್ಲ ಬಡಕೊಂಡು ಅತ್ತರು |
ಹಿಡಿಮಣ್ಣು ಇಲ್ಲ ಸುಡುಗಾಡ | ದೈವಾದ |
ಬಡಿವಾರ ಏನಹೇಳಲ್ಯ ||

೪ ಪೈಮೂರಿ ದುಡಿಯೋದು | ಹೊಲದಾಗ ಎಲ್ಲನಾವ |
ಮತ್ತೊಬ್ಬ ಬಾಯಿತೆರದಾಗ | ನಮಹಾಡು |
ಬೀಸುವಕಲ್ಲ ಬರಿಹಾಡ ||

೫ ಕೊಟ್ಟಾಗ ತಿನ್ನೋಣ ಕೈತುಂಬ ಕಾಳಾಗಿ |
ಮಣ್ಣಾನುಕೊಟ್ಟ ಶಿವತಾನು | ಹೊನ್ನಾವ |
ಕೊಡದೆಲ್ಲಿ ಹೋಗ್ಯಾನು ||

---

# ಬೇಡಿಕೆ.

ಕವಿ:— ಗೋಸ್ವಾಮಿರಾಮಚಂದ್ರ, ನವಲಗುಂದ.

ಭಾ. ಷ.

ಕರವೆಬಾರ್ರೈ ಕೃಷ್ಣನೀನೆ |
ನ್ನರಿಗಳಾರನು ತಡೆಯುತಲಿನೀ |
ಡರಿತು ಭಕುತಿಗೆ ತವಪದಾಂಬುಜ ಸೇವೆಯನು ನಿರುತ ||
ಕರುಣಿಸಿದಿತವ ನಾಮಜಯರವ |
ನಿರಲಿಕಿವಿಯೊಳು ಸತತವಾಗಿಯು |
ತೆರಳುವಾಗ ಸುಜಿಹ್ವೆ ಪೊಗಳಲಿ ನಾಮ ಮಹಿಮೆಯನು ||೧||

# ಹದಿನಾರುಸೋಮವಾರಗಳ ಪದ್ಯಕಥೆ.

## ಶ್ರೀಶಿವವ್ರತವು.

( ಶಿವಾನಂದದೀಕ್ಷಿತವಾಜಪೇಯವಿರಚಿತಂ. )

ಮುಂದೆ ಸಾಗಿದ್ದು.

ಭಾ. ಷಟ್ಪದಿ.

(ಮುದುಕೆಯು ರಾಣಿಯನ್ನು ತನ್ನಲ್ಲಿಟ್ಟುಕೊಂಡದ್ದು-ಪಟ್ಟೆಯಗಂಟು ಹೋದದ್ದು.)

೩೪ ಅರಿ! ಮಗಳೆ! ನೀನೆನ್ನಣುಗೆ ಗಡ! |
ಪೊರೆವೆ! ಪಟ್ಟೆಗಳನ್ನು ಸಂತೆಯೊ |
ಳಿರಿಸಿ ಮಾರಿರು ಮನೆಯೊಳೆನ್ನಲು ಬಳಿಕಲಾ ಕುವರಿ ||
ಅರಿತು ಪಟ್ಟೆಯ ಗಂಟು ಸಿರದಲಿ |
ಧರಿಸಿ ಸಂತೆಗೆ ಮಾರತರುತಿರೆ |
ಭರದೊಳಾ ಮಾರುತನು ಬಂದಾಗಂಟುಸೆಳೆದೊಯ್ಯೆ ||

( ರಾಣಿಯು ಪಟ್ಟೆಯ ಸಂಗತಿ ಮನೆಗೆ ಬಂದು ಹೇಳಿದ್ದು. )

೩೫ ನಿಳಯಕವಳೈತಂದೊಡತಿ ! ಪಥ |
ದೊಳಗೆ ಪವನನು ನೂಲಗಂಟನು |
ಸೆಳೆದುಕೊಂಡೋಡಿದನು ಮಾಡುವುದೇನು ! ಕಾಣೆನಲು ||
ತಿಳಿದೊಡತಿಯೆಲೆ ! ದುರುಳೆ ! ದುರ್ಭಾ |
ಗ್ಯಳೆ ! ನಿಲದೆ ಮನೆಬಿಟ್ಟು ಸಾಗೀ |
ಗಳೆನೆ ತಾನಾ ತೈಲವಿಕ್ರಯಿಯೆಡೆಗೆ ಬಂದಾಗ ||

(ತೈಲವ್ಯಾಪಾರಸ್ಥನನ್ನು ಬೇಡಿಕೊಂಡದ್ದು-ಆತನು ಮನೆಯಲ್ಲಿಟ್ಟು ಕೊಂಡದ್ದರ ಸಂಗತಿ.)

೩೬ ಪರಮಧನ್ಯನೆ ! ನೊರೆಯ ಲಾಲಿಸು |
ಪೊರೆವರೆಂಬರು ತನಗೆ ದಾರಿ |
ಲ್ಲರಿತನಾಥೆಯ ಕಾಯಬೇಕೆನಲಾಗಳಾ ಧನಿಯು ||

ಇರು ! ಸುಖದೆ ನಡೆ ! ಮನೆಗೆ ನೀನೆಂ |
ದಿರಲವಳು ಮನೆವೊಕ್ಕು ಗೃಹಿಣಿಸೆ |
ಬರಿಯವೆನಿಸಿದುವಾಗ ತುಂಬಿದ ಕೊಡಗಳೆಣ್ಣೆಯವು ||

(ವ್ಯಾಪಾರಸ್ಥನ ವಿಚಾರಗಳು)

೩೭ ವರ್ತಕನು ತಾಂ ಮನೆಗೆ ಬಂದಾ |
ಬತ್ತಿಪೋಗಿರುವೆಣ್ಣೆಗೊಡಗಳ |
ನಿತ್ತರಿತಿದೇನರಿದೊ ! ನಾನೇಂ ! ನಯನವಿಲ್ಲದನೋ ! ||
ಮತ್ತದೇಂ ! ವಿಧಿಲಕ್ಷ್ಮಿಯಾಟವೊ ! |
ಮಿಥ್ಯವಲ್ಲದು ಮನೆಗೆ ಬಂದಿಹ |
ಪುತ್ರಿಯುದೆ ಕಾಲ್ಗುಣವು ಸೈಯೆಂದವಳ ಬಳಿವಂದು ||

(ವ್ಯಾಪಾರಸ್ಥನು ರಾಣಿಯನ್ನು ಹೊರಗೆ ಹಾಕಿದ್ದು-ಆಕೆಯು ಹೊಳೆಯೆಡೆಗೆ ಬಂದ ಸಂಗತಿ.)

೩೮ ಎಲೆ ! ಪರಮಶುಭನಯನೆ ! ಶುಭವತಿ ! |
ಚಲಿಸು ನನ್ನೀಮನೆಯಿನೀಗಳೆ |
ನಿಲದಿರೆನ್ನಲುಪಾಯವೇನಿರದಾಗಿ ಬಳಿಕವಳು ||
ಚಲಿಸಿ ಮುಂದಿಹ ಹೊಳೆಯ ಹೊಂದುತ |
ಜಲವದರದೀಕ್ಷಿಸಲು ತಾನದು |
ನಿಲದೆಯೊಣಗಿತು " ದೆಸೆಯು ತನಗಿಂತ ಮೊದಲೆಂಬಂತೆ " ||

(ರಾಣಿಯು ಸರೋವರಕ್ಕೆ ಬಂದಸಂಗತಿ-ವನದಲ್ಲಿ ಮೂರ್ಛೆಹೊಂದಿ ಬಿದದ್ದು-ಸಾಧುವು ಬಂದದ್ದು)

೩೯ ಮುಂದವಳು ತಾನೊಂದು ಸರಕ್ಕೈ |
ತಂದುನೋಡಿರೆ ಹುಳಗಳಾಗುತ |
ಬಂದ ಗೋಪರು-ದನಗಳುಣದಿರೆ ಜಲವ; ದೆಸೆಗೆಟ್ಟು ||
ಸುಂದರಿಯು ಬಲುನೊಂದು ತನ್ನಿರ |
ವಿಂದೆ ಫಲವೇನೆಂದು ವಿಭ್ರಮೆ |
ಬಂದು ಬಿದ್ದಿರೆ ಬನದಿ ಸಾಧುವದೊಬ್ಬನೈತಂದು ||

ಸ್ವೈರಾಜ್ಯದ ಸಂತೆಯಾದ ಜಗತ್ತಿನಲ್ಲಿ ಶಾಂತಿಯು ತಂಪನ್ನು ಬೀರುವದು ಘನವಾದ ಕೆಲಸ. ಆದರೆ ಮಾಯದ ಮಾಟವು ಸ್ಥಾಯಿಯಲ್ಲ. ಸ್ಥಾಯಿಯಾಗಬೇಕಾದರೆ, ಮನಸ್ಸಿನ ಹಲವು ಪ್ರಶ್ನಗಳಿಗೆ ಸಮಂಜಸವಾದ ಉತ್ತರವನ್ನಿತ್ತು ಮನಸ್ಸಿಗೆ ಮನೆ ಮಾಡಿಕೊಡಬೇಕು. ಕಾವ್ಯವು ಇಂತಹ ಸ್ಥಾಯಿಯಾದ ಶಾಂತಿಯನ್ನು ಬೀರಬೇಕು. ಕಾವ್ಯವು ಪ್ರಪಂಚದ ಒಗಟೆಯನ್ನು ಬಿಡಿಸಿ ಘನವಾದ ಸತ್ಯವನ್ನು ಸರ್ವೋತ್ಕೃಷ್ಟವಾದ ರೀತಿಯಲ್ಲಿ ಹೇಳಬೇಕು. ಸೌಂದರ್ಯದಲ್ಲಿ ಸತ್ಯವನ್ನು ಹುಗಿದಿರುವುದಾಗಬೇಕು.

"ಜೇ"

(ರಂಗಭೂಮಿ ಮಾ|| ದಿಂದ.)



# ಕಾವ್ಯಕುಂಜ.



ಕಾವ್ಯ ಶರೀರಕ್ಕೆ ರಸವೇ ಆತ್ಮ. ಶೌರ್ಯಾದಿಗಳು ಹೇಗೆ ಜೀವಾತ್ಮಕ್ಕೆ ಉತ್ಕರ್ಷ ಹೇತುಗಳಾಗಿವೆಯೋ ಹಾಗೆಯೇ ಗುಣಗಳು ಕಾವ್ಯಾತ್ಮವಾದ ರಸಕ್ಕೆ ಆಸ್ವಾದಾತಿಶಯಕಾರಿಗಳಾಗಿ ಅದನ್ನು ಎಡೆಬಿಡದೆ ಇರುವವು. ಆದುದರಿಂದ ಮಾಧುರ್ಯ ಓಜಃಪ್ರಸಾದಿಗಳು ರಸಕ್ಕೆ ಆಲಂಬನಭೂತವಾದುವು. ಅಲಂಕಾರಗಳೂ ಶಬ್ದಾರ್ಥಾಶ್ರಿತಗಳಾಗಿ ಗುಣಗಳಿಂದುಂಟಾದ ಕಾವ್ಯಶೋಭೆಯನ್ನು ಗುಣಗಳು ರಸದ ಶೋಭಾತಿಶಯವನ್ನುಂಟುಮಾಡುವಂತೆ ಹೆಚ್ಚಿಸುತ್ತವೆ. ಹೀಗೆ ಸ್ಫೋಟಾರ್ಥದಿಂದ ರಸವೂ, ರಸದಿಂದಗುಣವೂ ಗುಣದಿಂದ ಅಲಂಕಾರವೂ ಅಲಂಕಾರಕ್ಕೆ ರೀತಿಯೂ ಒಂದೊಂದು ಮತ್ತೊಂದಕ್ಕೆ ಆಲಂಬನಭೂತವಾಗಿರುವದರಿಂದ ಪೂರ್ವೋಕ್ತವಾದಂತೆ ವೈರಾಗ್ಯವೇ ಕಾವ್ಯಕ್ಕೆ ಆತ್ಮಸ್ವರೂಪವೆಂಬದು ಆಧುನಿಕರಮತ.

ಸೊಂಡೇಕೊಪ್ಪದ ಶ್ರೀಕಂಠಶಾಸ್ತ್ರಿಗಳು.

# ಬೇಡಿಯೆ ಬರಬೇಕು!



( ಪ್ರೊ. ರ. ಶ್ರೀ. ಮುಗಳಿ, ಎಮ್. ಎ. ಬಿ. ಟಿ. ಸಾಂಗಲಿ. )

ಬೇಡಿಯೆ ಬರಬೇಕು | ನಾಡಿನ ಸೇವೆಯು ಮಾಡುವ ಭಾಗ್ಯಕೆ. ||ಪ||

ದೇಶದ ತಾಯಿಯ ದಾಸ್ಯವ ಕಂಡು | ಸಾಸಿರ ಚೇಳಿನ ಕಡಿತವನುಂಡು |
ಪಾಶದಿಕ್ಷಣವಿನ ನಿಲ್ಲದೆ ನಿತ್ಯದಿ | ಸಾಸವ ಮಾಡುವ ಮಾಡಿಸುವಾತ್ಮಕೆ ||೧||

ಇಡಿಗೂಳಿಲ್ಲದೆ ದುಡಿಯುವ ದಣಿಯುವ| ಬಡವರಬಗ್ಗರಹೊಟ್ಟೆಯ ಬೆಂಕಿಯ|
ಕಿಡಿಯಲಿ ನಡೆಯುತ ಕಂಬನಿಗರೆಯುತ | ಬಡತನವಿಲ್ಲದೆ ಬಡವಾಗುವದಕೆ ||೨||

ತಾಯಿಯಬಂಧವೆ ಆತ್ಮದಬಂಧವು| ತಾಯಿಯ ಬಿಡುಗಡೆಆತ್ಮದ ಬಿಡುಗಡೆ
ತಾಯಿಯತೋಳೊಳು ಶೂಲಕೆ ಇಟ್ಟರು | ಸಾಯುವದೇ ನಿಜ ಜೀವನವೆನಲಿಕೆ||೩||

ಮನಸಿನತೋರಿಕೆ ಚಿಂತೆಯಮುದುಡಿಕೆ|ಕನಸಿನಕಾಣಿಕೆನಗೆನೆರೆಬರುವಿಕೆ|
ಮನಸಿನಭಾವಗಳೆಲ್ಲವು ರಾಷ್ಟ್ರದ | ತನುವಿನೊಳಿರುವೊಲುಕಾಣುವ ಪುಣ್ಯಕೆ ||೪||

ವಿಶ್ವವೆ ಒಳಗಣ ಆತ್ಮಶರೀರರು | ವಿಶ್ವದಪ್ರಾಣಿಗಳದರವಯವಗಳು |
ವಿಶ್ವಾಸದ ಬಲದಿಂದದ ಬೆಳೆಸುವ | ವಿಶ್ವಸುಮೂರ್ತಿಯ ಜನ್ಮವಪಡೆಯಲು ||೫||

ಬುಧಜನಮೆಚ್ಚುವ ಬುದ್ಧಿಯಬೆರಗಿನ | ಘನಜಲವಾಹಿನಿಯಿಲ್ಲದೆಸುಲಭದ|
ಹೃದಯದಯೋಗದೆ ಸುಧೆಯನುಸುರಿಸುವ | ಸದಯಾನಂದನ ಕುರಹಾಗಿರಲಿಕೆ ||೬||

---

## " ಚಂದ್ರಿಕೆಯ ಹೊಸಕಚೇರಿ. "

ಮಹಾಶಯರೇ,

ಚಂದ್ರಿಕೆಯ ಆಫೀಸು ಈ ಮೊದಲಿನ ಸ್ಥಳದಿಂದ ಬಾಜಾರದಲ್ಲಿರುವ ಮ|| ರಾ|| ರಾ|| ಶಿವಲಿಂಗಪ್ಪನವರು ಸಂಕದಾಳ ಇವರ ಅಂಗಡಿಯ ಮೇಲಟ್ಟದಲ್ಲಿ ಮಾಡಲಾಗಿದೆ.

—ಸಂಪಾದಕ

# ಅಯ್ಯೋ ! "ಬೇಕು" ತಪ್ಪಲಿಲ್ಲ.

ಕವನಗಾರರು :— ಶ್ರೀ. ಬಾಳೇಹೊಸೂರ ರಾಮರಾಯರು

ಭೋ ! ದೇವಾಧಿದೇವಾ ಜಗನ್ನಿಯಂತಾ !

ಯುಗಯುಗದಿ ದೊರೆಯಲು ದುಸ್ಸಾಧ್ಯವಾದ ಮಾನವ ಜನ್ಮವು ಲಭಿಸಿ ಆಯ್ತು. ಮಿಗಿಲು ಬುದ್ಧಿ ಆಯ್ತು. ಅನ್ನ-ವಸ್ತ್ರವು ಆಯ್ತು. ಧಾನ್ಯ ದವಸವು ಆಯ್ತು. ಫಲವೀವ ಹೊಲವಾಯ್ತು; ಮಾಳಿಗೆಯ ಮನೆಯಾಯ್ತು. ಸುಖದೊಂದು ಸಂಸಾರವು ಆಯ್ತು. ಮಕ್ಕಳು ಮರಿಗಳಾಯ್ತು. ಚಿಕ್ಕದೊಂದು ಬಳಗವಾಯ್ತು. ಆದರೆ (ಉಸುರ್ಗರೆದು) ಧನ್ಯರಲ್ಲಿ ಧನ್ಯತಮನಾದ ಎನಗೆ ನನ್ನ ನಗೆ ಮೊಗದ ಅಂದ ಚಂದವನ್ನು ನೋಡಲು ಅಯ್ಯೋ ! ಮತ್ತೆ ಅನ್ಯರನ್ನಾಶ್ರಯಿಸದೆ ಗತಿಯೇ ಇಲ್ಲದಾಯ್ತು. ಬಿಂಬವನ್ನು ಇದ್ದಕ್ಕಿದ್ದ ಹಾಗೆ ಪ್ರತಿಬಿಂಬಿಸುವ 'ಸಹಜಗನ್ನಡಿ' ಯೊಂದು ಬೇಕು ! ಬೇಕು ! ಬೇಕು !

\+ + + + +

ಜಗದೊಳಿಂದು ಸುಗಮವಾದ ಸಾಧನೆಗಳಿಂದ ಮಿಗಿಲು ಜ್ಞಾನವ ಕೊಂಡುದಾಯ್ತು. ಬಗೆಬಗೆಯ ವಾಕ್-ಚಾಪಲ್ಯದಿಂದ ಪಾಂಡಿತ್ಯ ಪ್ರದರ್ಶನೆಯು ಆಯ್ತು. ಜನ ಮೆಚ್ಚುಗೆ ಆಯ್ತು. ರಾಜಮನ್ನಣೆ ಆಯ್ತು. ದಾನ ಧರ್ಮವು ಆಯ್ತು. ಲೌಕಿಕದ ಖ್ಯಾತಿ ಆಯ್ತು. ಆದರೆ (ಉಸುರ್ಗರೆದು) ಧನ್ಯರಲ್ಲಿ ದನ್ಯನೂ, ಮಾನ್ಯರಲ್ಲಿ ಮಾನ್ಯನೂ ಆದ ಎನಗೆ ನನ್ನ ಅಂದವಾದ ಕೃತಿಗಳ ಹೊಗಳುತೆಗಳುಗಳನ್ನು ಬಗೆದುಕೊಳ್ಳಲು ಅಯ್ಯೋ ! ಮತ್ತೆ ಅನ್ಯರನ್ನಾಶ್ರಯಿಸದೆ ಗತಿಯೇ ಇಲ್ಲದಾಯ್ತು. ಜಗಚ್ಚಿತ್ರವನ್ನು ಚಿತ್ರಿಸುವ ಅದ್ಭುತಶಕ್ತಿಯುಳ್ಳ 'ವ್ಯವಹಾರಗನ್ನಡಿ 'ಯೊಂದು ಬೇಕು ! ಬೇಕು ! ಬೇಕು !

\+ + + + +

ಸೊಗಸಿನ ಜೀವನವ ಸವಿದು ಆಯ್ತು. ಬಗೆಬಗೆಯ ಎಡರು ತೊಡರುಗಳಿಗೆ ಎದೆಗೊಡುವದು ಆಯ್ತು. ಜಗದ ನಡೆ ನುಡಿ ತಿಳಿಯಲು ಯತ್ನಿಸಿದುದೂ ಆಯ್ತು. ಬಗೆ ಹರಿಯದಾಯ್ತು. ಕಾಯವು ಬಗ್ಗಿತು.

ಹಿಗ್ಗಿ ಹೋಯ್ತು. ಜೀವನಕೆ ಬೇಸರವು ಆಯ್ತು. ಹಿಗ್ಗು ಕುಗ್ಗುಗಳ ಜಗ್ಗಾಟದಲ್ಲಿ ಮನವು ನುಗ್ಗಾಯ್ತು. ಮುಗ್ಗು ಜೋಳ ಕಾಣದ ತಿಪ್ಪೆಯು ತಿರುಕರಾಗಿ ಜನಿಸಿ ಬರುವ ಮಾನವ ಜೀವಿಗಳನ್ನು ಉಪ್ಪರಿಗೆಯಮೇಲಿರಿಸಿ, ಬೊಂಬೆಯಂತೆ ಕುಣಿಸುವ ಅತ್ಯದ್ಭುತವಾದ ಶಕ್ತಿಯೊಂದು ಎಲ್ಲಿಯೋ ಇರಬೇಕೆಂಬ ಭಾಸವಾಯ್ತು ಭಾಸವು ಮಾಯವಾಗಿ ನಿಜವಾದ ಅರಿವು ಅಂಕುರಿಸಿದುದಾಯ್ತು. ಅರುವಿನ ಕುರುಹನ್ನು ಪರಿಶೋಧಿಸಲು ಅತ್ತಿತ್ತ ಅಲೆದುದಾಯ್ತು. ಪ್ರಪಂಚವನ್ನೇ ಸುತ್ತುವದಾಯ್ತು. ಮತ್ತೆ ಮತ್ತೆ ವಿಚಾರ ಮಾಡಿಯೂ ಆಯ್ತು. ಆದರೆ (ಉಸುರ್ಗರೆದು) ಮಾನವೀ ಬುದ್ಧಿಗೆ ವಿಷಯವು ನಿಲುಕದಾಯ್ತು. ಧನ್ಯರಲ್ಲಿ ಧನ್ಯನೂ, ಮಾನ್ಯರಲ್ಲಿ ಮಾನ್ಯನೂ, ಜ್ಞಾನಿಗಳಲ್ಲಿ ಜ್ಞಾನಿಯೂ ಆದ ಎನಗೆ ನನ್ನನ್ನೇ ಅರಿತುಕೊಳ್ಳಲು ಅಯ್ಯೋ! ಮತ್ತೆ ಅನ್ಯರನ್ನಾಶ್ರಯಿಸದೆ ಗತಿಯೇ ಇಲ್ಲದಾಯ್ತು. ವಿಶ್ವದ ಆತ್ಮನ ವಿಷಯಕವಾದ ವಿಚಾರಗಳನ್ನು ವಿಶದವಾಗಿ ಹೊರಪಡಿಸಲು ಅತಿ ಶುದ್ಧವಾದ **ಹೃದಯಗನ್ನಡಿ** ಯೊಂದು ಬೇಕು! ಬೇಕು! ಬೇಕು!

---

**ಎಚ್ಚರಿಕೆ:-** ಚಂದ್ರಿಕೆಯಲ್ಲಿ ಪ್ರಕಟವಾಗಿರುವ **ಪಟವರ್ಧನ** ಎಂಬ ಚಿಕ್ಕನಾಟಕವನ್ನು ಲೇಖಕರ ಅಪ್ಪಣೆ ಇಲ್ಲದೆ ಅಭಿನಯಿಸಲಾಗದು.

---

**ಕೃತಜ್ಞತೆ-** ಚಂದ್ರಿಕೆಯ ವಾಚನಾಲಯಕ್ಕೆಂದು 'ಸಂಯುಕ್ತ ಕರ್ನಾಟಕ' ವಾರ ಪತ್ರಿಕೆಯನ್ನು ದಯಪಾಲಿಸಿದ್ದಕ್ಕಾಗಿ ನಾವು ಶ್ರೀ. ಗೋಪಾಳ ನಾಯಕ ಕುಬೇರ ಇವರಿಗೆ ತುಂಬಾ ಕೃತಜ್ಞತೆಯುಳ್ಳವರಾಗಿದ್ದೇವೆ:-

—ಸಂಪಾದಕ.



# ಶರಣರ ಸಾಹಿತ್ಯದಲ್ಲಿನ ಕಾವ್ಯಪ್ರತಿಭೆ.

ಸಂಗ್ರಹಕಾರರು:— ಶ್ರೀ ಬಾಲೇಹೊಸೂರ ರಾಮರಾಯರು.

—ವೀರಶೈವ ಶರಣರ ಸಾಹಿತ್ಯಕ್ಕೆ ಮನಸೋತವರು.



ಪ್ರಭುವಿನ ವಾದದಿಂದ ವೈರಾಗ್ಯ ಸಂಪತ್ತು; ಬಸವನ ವಾದದಿಂದ ಭಕ್ತಿಯ ಸಂಪತ್ತು; ಚೆನ್ನಬಸವನ ವಾದದಿಂದ ಶಿವಪ್ರಸಾದದ ಸಂಪತ್ತು; ಮಡಿವಾಳಯ್ಯನ ವಾದದಿಂದ ಜ್ಞಾನದ ಸಂಪತ್ತು; ಸಕಳೇಶನ ವಾದದಿಂದ ಶಾಂತಿಯ ಸಂಪತ್ತು; ಮೋಳಿಗಯ್ಯನ ವಾದದಿಂದ ದಾಸೋಹದ ಸಂಪತ್ತು; ನೀಲಮ್ಮನ ವಾದದಿಂದ ಲಿಂಗಪೂಜೆಯ ಸಂಪತ್ತು; ನಾಗಮ್ಮನ ವಾದದಿಂದ ಮಹತ್ವ ಸಂಪತ್ತು; ಇದುಕಾರಣ ಕಿನ್ನರ ತ್ರಿಪುರಾಂತಕಲಿಂಗ ಸಾಕ್ಷಿಯಾಗಿ ಪ್ರಮಥರ ನುಡಿಯಲ್ಲಿ ಬೇಸರ ಬೀರದಿರು.

\+ \+ \+ \+ \+

ವಾದ್ಯದೊಳಗಣ ನಾದದ ಪೊಲು; ಪಾಷಾಣದೊಳಗಣ ಪಾವಕನ ಪೊಲು; ಕಿಸಲಯದೊಳಗಣ ರಸದ ಪೊಲು; ಅಸಿಯ ಮೊನೆಯಲ್ಲಿ ತೋರುವ ನಯಕುಸುಲ ಪೊಲು; ಮುಸುಕಿನೊಳಗೆ ತೋರುವ ಆಕಾಶದ ಪ್ರತಿರೂಪಿನ ಪೊಲು; ಗಜಗತಿಯಂತೆ ಮಯೂರನಂತೆ ಉಲುಹಡಗಿದ ವೃಕ್ಷ; ಬಯಲೊಳಡಗಿದ ನಾದದಂತೆ ಹೊರಹೊಮ್ಮದ ಐಕ್ಯ, ಇಂತಿವರೆಂದರಲ್ಲಿ ಸಂದಶರಣಂಗೆ ಸಂದೇಹಪ ರವಿಲ್ಲ, ನಂವಗೋಸಿಯ ಕಂದಪ್ರೀಯ ನಿಸ್ಸಂಗಲಿಂಗ ರಾಮನಾಥ.

---

ಮೇಲಿನ ಪದ್ಯಾಂಶಗಳಲ್ಲಿ ಅಡಕವಾಗಿರುವ ಅರ್ಥ ಗಾಂಭೀರ್ಯ ಪವಲಾಲಿತ್ಯ ವ್ಯವಹಾರಿಕ ದೃಷ್ಟಾಂತಗಳಿಂದ ವೇದಾಂತೋಪದೇಶಮಾಡುವ ಶರಣರಸಾಹಸವನ್ನು ನೋಡಿದರೆ ಅಚ್ಚರಿಯಾಗುವಂತಿದೆ. ತಿಳಿಗನ್ನಡದ ಅತಿಸುಲಭವಾದ ಭಾಷಾಶೈಲಿಯಲ್ಲಿ ವೇದಾಂತದಂತಹ ಮಹತ್ತರವಾದ ವಿಷಯವನ್ನು ವಚನರೂಪದಲ್ಲಿ ಬರೆದುದೂ ಅದರಲ್ಲಿ ಮತ್ತೆ ಕಾವ್ಯರಸವನ್ನು ಹುಟ್ಟಿಸಿದುದೂ ಕನ್ನಡಸಾಹಿತ್ಯಕ್ಕೆ ಅವರುಗಳು ಮಾಡಿದ ಉಪಕಾರವು ಇಷ್ಟಿಷ್ಟೆಂದು ಹೇಳಲು ಬರುವಂತಿಲ್ಲ. ಅಂತಹದೊಂದು ಕಲೆಯೋ ಮಹಿಮಾತಿಶಯವಾದ ಆ ಶರಣರಿಗೆ ಸಾಧಿಸಿತ್ತೆನ್ನಲು ಪ್ರತ್ಯವಾಯವಿಲ್ಲ.

ನಾಟಕವು ಕಲಾ-ಕೌಶಲ್ಯದ ಕೈವಲ್ಯಸ್ಥಾನ. ನಾಟಕ ಲಕ್ಷ್ಮಿಯು ಪರಮ ವೈಭವ ಸಿರಿಯು ದೇಶದ ಉತ್ತಮ ಪರಿಸ್ಥಿತಿಯ ಘನಕುರುಹು. ಭುವನ ನಾಯಕನೇ ಕಪಟ ನಾಟಕಸೂತ್ರಧಾರಿಯೆಂದು ಹೊಗಳಲ್ಪಡುವವನಾಗಿದ್ದಾನೆ. ಈ ವಿಶ್ವವು ಆ ಮನಮೋಹನ ಲೀಲಾರಂಗ ವಿಶ್ವಕ್ಕೂ ವಿಶ್ವನಾಯಕನಿಗೂ ಇರುವ ಪರಸ್ಪರ ಸಂಬಂಧವನ್ನು ಸರಳ ಭಾವದಿಂದ ತೋರ್ಪಡಿಸಿದಬಲ್ಲದ್ದಾಗಿರುವದು ನಾಟಕದ ಕಲೆ. ಅಂದಮೇಲೆ ನಾಟಕವು ಆದರ್ಶ ಸೂರ್ಯನ ವಿವಿಧ ಭಾವಗಳನ್ನು ತೋರ್ಪಡಿಸುವ. ಎಲ್ಲೆ ಇಲ್ಲದ ಆಕಾಶ.

ಶ್ರೀಮತಿ ಕನಕಲಕ್ಷ್ಮೀದೇವಿ, ಎಂ. ಎ.

# ವಿವಿಧ ಸಾಹಿತ್ಯ.

ಉಕ್ಕಿಬರುವ ಕವಿತಾ ಶಕ್ತಿಯಿಂದ ಕೂಡಿದ ಕವಿಗೆ ದರ್ಶನವು ಬಹುದೂರವಾಗಿರುವದು. ಕವಿಯು ಸತ್ಯದೃಷ್ಟಿಯಿಂದ ಸತ್ಯದ ರೂಪವನ್ನು ರಸಭಾವದಿಂದ ತಿಳಿಯತಕ್ಕ ಜ್ಞಾನಿ. ಈ ಆದರ್ಶಗಳ ಕಾಂತಿಯೂ ಸೇರಿದರೆ ಕವಿಯ ವಿಮಲ ಮಾನಸವು ಮತ್ತಷ್ಟು ವಿಶೇಷವಾಗಿ ಪ್ರಜ್ವಲಿಸುವದು, ಇವುಗಳು ಆ ಕವಿಯ ಮಾನಸ-ದಯಾಸಾಗರದಲ್ಲಿ ಅಡಗಿರುವ ರತ್ನಗಳು. ಯಾವಾಗ ಕವಿಯು ಈ ಮಾನವರನ್ನು ಪ್ರೇಮಿಸಿ ಅವರ ಸುಖದುಃಖಗಳನ್ನು ಚಿತ್ರಿಸುವನೋ ಆಗಲೇ ಆದರ್ಶಗಳು ಅಲ್ಲಿಯೇ ಮೂರ್ತಿಮತ್ತಾಗುವವು.

ಶ್ರೀಮತಿ ಕನಕಲಕ್ಷ್ಮೀದೇವಿ, ಎಂ. ಎ.



# ಬಸವಣ್ಣನವರ ಅವತಾರವು !

ಲೇಖಕರು :– ಶ್ರೀಮಾನ್ ನೀಲಕಂಠ ದೇಶಿಕರು, ಚಿಕ್ಕೋಡಿ.

ಶ್ರೀ. ಜ. ಗಂಗಾಧರ ಸಂಸ್ಕೃತ ಕಾಲೇಜ ಹುಬ್ಬಳ್ಳಿ.

ಆರ್ಯರು ಹಿಂದೂ ದೇಶವನ್ನು ಒಳಹೊಕ್ಕು ಅಲ್ಲಿದ್ದ ಅನಾರ್ಯರನ್ನು ದಾಸರೆಂತಲೂ ದಸ್ಯುಗಳೆಂತಲೂ ಹೆಸರಿಟ್ಟು, ಉಪಾಯಾಂತರಗಳಿಂದ ಜಯಿಸಿ ಅವರನ್ನು ದಕ್ಷಿಣ ಹಿಂದುಸ್ಥಾನಕ್ಕೆ ತಳ್ಳಿದಮೇಲೆ ಅಲ್ಲಿ ತಾವು ಸ್ವತಂತ್ರ ಸಾಮ್ರಾಜ್ಯವನ್ನು ಸ್ಥಾಪಿಸಿ ಕೆಲವುಕಾಲ ರಾಜ್ಯವಾಳಿದರು. ಬರಬರುತ್ತ ವೇದಮಂತ್ರಗಳನ್ನು ಪಾಠಮಾಡಿ ವಂಶಪರಂಪರೆಯಾಗಿ ಷಟ್ಕರ್ಮಗಳನ್ನು ಮಾಡತೊಡಗಿದರು. ಅಂದಿನಿಂದ ಆರ್ಯರಿಗೆ ಬ್ರಾಹ್ಮಣರೆಂದು ಹೆಸರಾಯಿತು. ಬ್ರಾಹ್ಮಣರಾದ ಆ ಆರ್ಯರೇ ವೈದಿಕ ಕರ್ಮಗಳನ್ನೂ ವೇದಾಧ್ಯಯನವನ್ನೂ ಮೊದಲಾದ ಶ್ರೇಷ್ಠತರ ಗತಿಯ ಕರ್ಮಗಳನ್ನು ಮಾಡಬೇಕೆಂತಲೂ, ಕ್ಷತ್ರಿಯರು ಗಂಡಾಂತರಗಳಿಂದ ಬ್ರಾಹ್ಮಣರನ್ನು ರಕ್ಷಿಸುವವರೆಂದೂ ವೈಶ್ಯರು ದೇಶ-ವಿದೇಶಗಳೊಡನೆ ವ್ಯಾಪಾರವನ್ನು ಪ್ರಾರಂಭಿಸಿ ಆರ್ಥಿಕ ಸ್ಥಿತಿಯನ್ನು ಸುಧಾರಿಸಬೇಕೆಂದೂ ಶೂದ್ರರಾದವರು ಬ್ರಾಹ್ಮಣರ ಸೇವಾವೃತ್ತಿಯಲ್ಲಿಯೇ ಇರಬೇಕೆಂದೂ, ಹೀಗೆ ನಾಲ್ಕು ವರ್ಣಗಳನ್ನು ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ ಎಂಬ ನಾಲ್ಕು ಆಶ್ರಮಗಳನ್ನು ಕಲ್ಪಿಸಿ ವೇದೋಕ್ತಗಳೆಂದು ಹೇಳುತ್ತ ಅದಕ್ಕನುಗುಣವಾದ ಕರ್ಮ ಮಾರ್ಗವನ್ನೇ ಪ್ರಚಾರಕ್ಕೆ ತಂದು ಜನಸಾಮಾನ್ಯರಲ್ಲಿ ಅಂಧಶ್ರದ್ಧೆಯನ್ನು ಹುಟ್ಟಿಸಿದರು. ಮುಂದೆ ಅಲ್ಪಕಾಲದಲ್ಲಿಯೇ ಬ್ರಾಹ್ಮಣರ ಹೆಚ್ಚಳವು ಹೇಳಲಸದಳವಾಯಿತು. ಎಲ್ಲಿನೋಡಿದರೂ ಕರ್ಮವೇ ಕರ್ಮವು. ಯಜ್ಞದಲ್ಲಿ ಬಲಿಕೊಡುವ ಪಶುಗಳ ಆರ್ತಧ್ವನಿಯೇ ಕೇಳಬರಹತ್ತಿತು ! ಬ್ರಾಹ್ಮಣರ ಹೊರ್ತು ಸಂಸ್ಕೃತವಿದ್ಯೆಯು ಯಾರಿಗೂ ಬರುತ್ತಿದ್ದಿಲ್ಲ. ಮತ್ತು ಆ ವಿದ್ಯೆಯನ್ನು ಕಲಿಯಲು ಇನ್ನುಳಿದವರಿಗೆ ಅಧಿಕಾರವೇ ಇದ್ದಿಲ್ಲ! ಆದ್ದರಿಂದ ಬ್ರಾಹ್ಮಣರು ಹೇಳಿದ್ದೇ ವೇದವಾಕ್ಯವಾಯಿತು !

“ ಜಗತ್ಸರ್ವಂ ದೈವಾಧೀನಂ ದೈವೋ ಮಂತ್ರಾಧೀನಃ
ಮಂತ್ರೋ ಬ್ರಾಹ್ಮಣಾಧೀನಃ ಬ್ರಾಹ್ಮಣೋ ಮಮದೈವತಾ ”

ಅಂದರೆ ಜಗತ್ತೆಲ್ಲವು ದೈವಾಧೀನವು; ದೈವವು ಮಂತ್ರಾಧೀನವು, ಮಂತ್ರವು ಬ್ರಾಹ್ಮಣರ ಆಧೀನವು, ಬ್ರಾಹ್ಮಣನೇ ದೇವತೆ ಎಂದು ಮುಂತಾಗಿ ತಮ್ಮ ಶ್ರೇಷ್ಠತೆಯನ್ನು ಅಜ್ಞ ಜನರಲ್ಲಿ ತೋರಿಸಲಾರಂಭಿಸಿದರು ಈ ರೀತಿಯಾಗಿ ಬ್ರಾಹ್ಮಣರು ತಮ್ಮ ಸ್ವಾರ್ಥಸಾಧನೆಗಾಗಿ ಎಲ್ಲರಮೇಲೆ ಅಧಿಕಾರ ನಡೆಸುತ್ತ ಬಂದದ್ದರಿಂದ ಕ್ಷತ್ರಿಯರು ಅತ್ಯಂತ ಬಲಿಷ್ಠರಾಗಿದ್ದರೂ ಅವರಿಗೆ ಶರಣಾಗತರಾಗಬೇಕಾಯಿತು. ಹೀಗೆ ಬ್ರಾಹ್ಮಣರ ಧರ್ಮಾಧಿಕಾರರ ಉಪಟಳವು ದಿನೇ ದಿನೇ ಹೆಚ್ಚುತ್ತ ನಡೆಯಿತು.

ಅಷ್ಟರಲ್ಲಿ ಬ್ರಾಹ್ಮಣರ ಅನ್ಯಾಯುದ ಅತಿರೇಕವನ್ನು ಹೋಗಲಾಡಿಸುವದಕ್ಕಾಗಿ ಬುದ್ಧನು ಉದಯುವಾದನು. ( ಇವನು ಬುದ್ಧಿಯೇ ಆತ್ಮನು. ಇವನಿಂದಲೇ ಸಕಲ ವ್ಯವಹಾರವು ನಡೆಯುವದು. ಕಾರ್ಯಕಾರಣ ನೇಮದಿಂದ ಸೃಷ್ಟಿಕರ್ತನು ಒಬ್ಬನಿದ್ದಾನೆಂದೂ ಅವನು ಅಚಿಂತ್ಯನೂ, ಅಗಮ್ಯನೂ, ನಿರಂಜನನೂ, ವಾಚಾಮಗೋಚರನೂ ಎಂದು ಹೇಳುವದರಿಂದ ಅವನನ್ನು ಮಾನವನು ಕಂಡು ಹಿಡಿಯಲು ಶಕ್ಯವೇ ಇಲ್ಲ. ಸುಖ-ದುಃಖಗಳು ಅವನಿಂದ ಕೊಡಲ್ಪಡುವದಿಲ್ಲ. ಅವನು ಜಗತ್ತಿಗೆ ಭಿನ್ನನಿರುವನೆಂದು ಸಾಧಿಸಹೋಗಿ ಜಗತ್ತಿಗೆ ಈಶ್ವರನ ಕಾರಣವಿಲ್ಲವೆಂದು ಸಿದ್ಧಾಂತವಾದ್ದರಿಂದ ಬುದ್ಧನು ಪ್ರತ್ಯಕ್ಷ ಅನುಮಾನ ಪ್ರಮಾಣಗಳೆರಡನ್ನೂ ಮನ್ನಿಸುವವನಾದರೂ ನಿರೀಶ್ವರವಾದಿಯೆಂದು ಹೆಸರಾಯಿತು. )

ಇರಲಿ. ಪಶುವಧೆಯಿಂದ ಸ್ವರ್ಗಾದಿಗಳು ಸಿಗುತ್ತಿದ್ದರೆ ಕಟುಗರಿಗೂ ಕೂಡ ಮುಕ್ತಿ ಲಭಿಸಬೇಕಾದೀತು. ಯಜ್ಞಯಾಗಾದಿಗಳಿಂದ ಪಾಪದ ಹೊರತು ಮತ್ತಾವ ಪುಣ್ಯವು ದೊರಕದೆಂದು ಹೇಳುತ್ತ ಜನಾಂಗದಲ್ಲಿದ್ದ ಮೂಢನಂಬಿಗೆಯನ್ನು ಹೊಡೆದೋಡಿಸಿ ವರ್ಣಾಶ್ರಮಗಳೆಂದು ಬಡಬಡಿಸುವ ಬ್ರಾಹ್ಮಣರ ಸದ್ದನ್ನು ಅಡಗಿಸಿ ಬುದ್ಧನು ಬಹುಕಾಲದ ವರೆಗೆ ತನ್ನ ತತ್ವವನ್ನು ಸ್ಥಿರಪಡಿಸಿದನು ! ಬಹುದಿವಸದಿಂದ ಕರ್ಮಠ ಬ್ರಾಹ್ಮಣರನ್ನು ಹಿಂಬಾಲಿಸಿ ಕಂಗೆಟ್ಟುಹೋದ ಹಿಂದೂ ಸಮಾಜವು ಬೌದ್ಧಮತವನ್ನು ಅವಲಂಬಿಸಲಾರಂಭಿಸಿತು. ಆದರೆ ಮುಂದೆ ಕಾಲಚಕ್ರದಂತೆ ಬೌದ್ಧಮತವು ಶಿಥಿಲವಾಗುತ್ತ ಬಂದಿತು. ಈ ಸಂಧಿಯನ್ನು ಕಾಯುತ್ತಿದ್ದ ಬ್ರಾಹ್ಮಣರು ಮತ್ತೆ ತಲೆ ಎತ್ತಿ ವರ್ಣಾಶ್ರಮಗಳನ್ನು ಬೇರೂರಿದರು. ಅಷ್ಟರೊಳಗೆ ಶಂಕರಾಚಾರ್ಯರು ಉದಯರಾಗಿ ಅದ್ವೈತ ಮತವನ್ನೇ ಪ್ರಸಿದ್ಧಿಗೆತಂದು ಕರ್ಮಕಾಂಡಿಗಳನ್ನು ಖಂಡಿಸಿ, ಬುದ್ಧನತತ್ವಗಳನ್ನು ಹೊರದೂಡಿ ಪರ್ಯಾಯದಿಂದ ವರ್ಣಾಶ್ರಮಗಳನ್ನು ಸ್ಥಿರಪಡಿಸಿದರು. ಇವರು ಬ್ರಹ್ಮಸತ್ಯವು ಜಗನ್ಮಿಥ್ಯೆಯು ಎಂಬ ಸಿದ್ಧಾಂತವನ್ನು ಪ್ರಚುರಪಡಿಸುತ್ತ, ಬ್ರಹ್ಮನು ಅಲಿಪ್ತನು. ಯಾವ

ವ್ಯವಹಾರಕ್ಕೂ ನಿಲಕನು. ಪಾಪ ಪುಣ್ಯಗಳು ಬ್ರಹ್ಮನಿಗೆ ಅಂಟುವದಿಲ್ಲ. ಯಾವಕರ್ಮಕ್ಕೂ ಬ್ರಹ್ಮಣನು ಕಾರಣನಲ್ಲ. ಏನು ಮಾಡಿದರೂ ಬ್ರಹ್ಮಂಗೆ ಸಂಬಂಧವಿಲ್ಲವೆಂದು ಅದ್ವೈತ ತತ್ವವನ್ನು ಅಂದರೆ ಕೇವಲ ಜ್ಞಾನ ಮಾರ್ಗವನ್ನು ಹರಡಿದರು. ಇದರಿಂದ ಬುದ್ಧನ ಕಾಲಕ್ಕಿಂತಲೂ ಇವರ ಕಾಲದಲ್ಲಿ ಸಾಮಾಜಿಕ ಸ್ಥಿತಿಯು ಕೆಟ್ಟಿತು. ಅಂದರೆ ಅನಾಚಾರಕ್ಕೆ ಎಡೆಯಾಯಿತು. ಆ ಮೇಲೆ ರಾಮಾನುಜರು ಹುಟ್ಟಿ ಬುದ್ಧ ಮತ್ತು ಶಂಕರಾಚಾರ್ಯ ಇವರ ತತ್ವಗಳನ್ನು ಮಿಶ್ರಮಾಡಿ ವಿಶಿಷ್ಟಾದ್ವೈತವನ್ನು ಸ್ಥಾಪಿಸಿದರು. ಮುಂದೆ ಮಧ್ವಾಚಾರ್ಯರು ಜನ್ಮತಾಳಿ ರಾಮಾನುಜರು ಮಾಡಿದ್ದು ಸರಿಯಲ್ಲವೆಂದು ತಿಳಿದು ಜೀವಾತ್ಮನು ಸ್ವತಂತ್ರನಿರುವನು ಜೀವಾತ್ಮನು ಪರಮಾತ್ಮನು ಭಿನ್ನರಿರುವರೆಂದು ಸಾಧಿಸುತ್ತ ದ್ವೈತಮತವನ್ನು ಸ್ಥಾಪಿಸಿದರು. ಈ ಮಧ್ಯದಲ್ಲಿ ಚಾರ್ವಾಕ (ಅಂದರೆ ನಾಸ್ತಿಕ ಮತ) ವಾದರೂ ಅಸ್ತಿತ್ವದಲ್ಲಿತ್ತು. ಆದರೆ ಇವರೆಲ್ಲರೂ ಏನೇ ಮಾಡಿದರೂ ಹೊಳೆಯಲ್ಲಿ ಹೋಮ ಮಾಡಿದಂತೆಯೇ ಸರಿ. ಇವರೆಲ್ಲರಲ್ಲಿಯ ವರ್ಣಾಶ್ರಮಗಳ ಅಭಿಮಾನವು ಅಳಿದಂತೆ ಕಾಣುವದಿಲ್ಲ. ಯಾಕಂದರೆ ಕನಿಷ್ಟ ಜಾತಿಯವರಿಗೆ ವೈಷ್ಣವ ದೀಕ್ಷೆಯನ್ನು ಕೊಟ್ಟರೂ ಅವರಿಗೆ ಧಾರ್ಮಿಕ ಹಕ್ಕು ಕೊಡಲ್ಪಡಲಿಲ್ಲ. ಹೀಗಾಗಿ ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಮತಗಳಲ್ಲಿ ತಿಕ್ಕಾಟವು ನಡೆದದ್ದರಿಂದ ಸಾಮಾನ್ಯವಾಗಿ ಹಿಂದೂ ಸಮಾಜಕ್ಕೆ ಅಪಾರವಾದ ಹಾನಿಯು ತಗಲಿತಲ್ಲದೆ ತದಂತರ್ಗತವಾದ ವೀರಶೈವ ಮತಕ್ಕೆ ತಗಲಿದ ಹಾನಿಯು ಅಷ್ಟಿಷ್ಟಂತಲ್ಲ. ಒಂದು ಕಡೆಗೆ ರಾಮಾನುಜರೂ ಇನ್ನೊಂದು ಕಡೆಗೆ ಮಾಧ್ವರೂ ಬೇರೊಂದುಕಡೆಗೆ ಚಾರ್ವಾಕರೂ ಇನ್ನೂ ಎಷ್ಟೋ ಮತಸ್ಥಾಪಕರೂ ತಮ್ಮ ತಮ್ಮ ತತ್ವಗಳನ್ನು ಹರಡಲೆತ್ನಿಸಿ ಭಯಂಕರ ಕೋಲಾಹಲವನ್ನೆಬ್ಬಿಸಿದರು! ಈ ಮಧ್ಯದಲ್ಲಿ ಭಕ್ತಿಪಂಥದ ಕೆಲ ಕೆಲ ವ್ಯಕ್ತಿಗಳು ಅವತರಿಸಿದರು. ಅವರಿಂದ ಈ ದೊಂಬಿಯು ಶಾಂತವಾಗಲಿಲ್ಲ. ಸಾಮಾಜಿಕ ಧಾರ್ಮಿಕ, ಸುಧಾರಣೆಗಾಗಿ ಮೊಟ್ಟ ಮೊದಲು ತಲೆಯತ್ತಿದ ಬೌದ್ಧತತ್ವಗಳೇ ನಾಮಶೇಷವಾಗುತ್ತಿರುವಲ್ಲಿ ಇನ್ನುಳಿದ ತತ್ವಗಳ ಪಾಡೇನು? ಆ ಕಾಲದಲ್ಲಿ ಶಕ್ತಿ ವಿಶಿಷ್ಟಾದ್ವೈತಮತಾಚಾರ್ಯರಾದ ಪಂಚಾಚಾರ್ಯರ ಮತ-ಪ್ರಸಾರಣೆಯ ಕಾರ್ಯವು ಅಡಗಿತ್ತು ಮತ್ತು ಹಿಂದೂ ಮಿಶನರಿಯ ಪದ್ಧತಿಯನ್ನು ಸ್ವೀಕರಿಸಿ ಧರ್ಮ ಪ್ರಸಾರಣೆಯ ರೀತಿಯಲ್ಲಿ ಮುಂದೊರೆದಿದ್ದರೂ ಅಷ್ಟೊಂದು ಪ್ರಾಬಲ್ಯಕ್ಕೆ ಬರಲಿಲ್ಲ. ಅಷ್ಟರಲ್ಲಿ ಆ ಅಶಾಂತತೆಯನ್ನು ನಾಶಮಾಡಬೇಕೆಂದೂ, ಸ್ವಾರ್ಥಪರಾಯಣದಿಂದ ಬರೆಯಲ್ಪಟ್ಟ, ಕರ್ಮಠ ಬ್ರಾಹ್ಮಣ್ಯ ಸಿದ್ಧಾಂತವು, ಹಿಂದೂ ದೇಶವನ್ನು ಹಾಳು ಮಾಡುತ್ತಿರುವದೆಂದೂ ಅದನ್ನು ಅಲ್ಲಗಳೆದು ಅಹಿಂಸಾಸ್ಪದವಾದ ಯಜ್ಞ ಯಾಗಾದಿಗಳಿಲ್ಲದ ಲಿಂಗಾಂಗೀ ಧರ್ಮವೇ ಶ್ರೇಷ್ಠವೆಂದೂ ಕೇವಲ ಕರ್ಮಜ್ಞಾನಗಳಿಂದ ಮೋಕ್ಷವಿಲ್ಲೆಂದೂ ಕರ್ಮದಲ್ಲಿಯ ಸಕಾಮತ್ವವನ್ನು ಜ್ಞಾನದಲ್ಲಿಯ ಅಹಂಕಾರತ್ವವನ್ನು ಹೊಡದೋಡಿಸಲು ಭಕ್ತಿಯೇ

ಮುಖ್ಯವೆಂದು || **ಅಲ್ಪಕ್ರಿಯಂ ಬಹುಫಲವ್ ವೀರಶೈವಂ ಮಹೇಶ್ವರಿ ಇತರೇಷಾಂತು ಶೈವಾನಾಂಫಲಮಲ್ಪಂ ಬಹುಕ್ರಿಯಾ ||** **ನವೀರಶೈವ ಸದೃಶಂ ಮತಮಸ್ತಿ ಜಗತ್ರಯೇ । ಸರ್ವಭೋಗಪ್ರದಂ ಪುಣ್ಯಂ ಶಿವಸಾಯುಜ್ಯದಾಯಕಂ ||** ಎಂಬ ವೀರಾಗಮ ಪಾರಮೇಶ್ವರಾಗಮಗಳಲ್ಲಿ ಉಕ್ತವಾದ ವೀರಶೈವ ಮತಾಧಿಕ್ಯವನ್ನು ತೋರ್ಪಡಿಸಬೇಕೆಂದೂ ಲಿಂಗಾಂಗ ಸಾಮರಸ್ಯವೆಂಬ ಅತುಲವಾದ ತತ್ವರತ್ನದ ಬೆಳೆಯನ್ನು ಅಖಿಲರಿಗೆ ತೋರಿಸಬೇಕೆಂದೂ ಸಮಾಜ ಸುಧಾರಣೆಗಾಗಿ ಹೊರಟ ವರ್ಣಾಶ್ರಮ ವಿಭಾಗಗಳು ಬರಬರುತ್ತ ಜಾತಿಗಳಾಗಿ ಸಮಾಜವನ್ನು ಹಾಳುಮಾಡುವದು ಒಳಿತಲ್ಲವೆಂದು ತಿಳಿದು ಆ ಜಾತಿಬದ್ಧ ವರ್ಣಗಳನ್ನು ನಿರ್ನಾಮ ಮಾಡಬೇಕೆಂದೂ ಶಿವನಪ್ಪಣೆಯಮೇರೆಗೆ ಭೂ-ಲೋಕದಲ್ಲಿ ಶೈವಶ್ರೇಷ್ಠರಾದ ಮಾದರಸಿಂದ ಮಾದಲಾಂಬಿಕೆ ಗರ್ಭದಿಂದ ಇಂದು ಇಂದರೆ ೧೨ನೇ ಶತಮಾನದಲ್ಲಿ **ಬಸವಣ್ಣನವರು** ಅವತಾರ ಮಾಡಿದರು. ಜಗದ್ವಂದ್ಯರಾದ ಮಹಾತ್ಮಾ ಗಾಂಧಿಯವರು ಸಧ್ಯದಲ್ಲಿ ರಾಷ್ಟ್ರವನ್ನು ರಸಾತಳಕ್ಕಿಳಿ-ಡುಮಾಡುವ ಪಾಶವೀಯ ಅಜ್ಞಾನವನ್ನು ತೊಲಗಿಸಲು ಉದಯಿಸಿರುವಂತೆ ವೈಷ್ಣವ ಮತಪ್ರಾಬಲ್ಯವನ್ನು ಕುಗ್ಗಿಸಿ, ವೀರಶೈವ ಮತವನ್ನು ಬಸವಣ್ಣನವರು ವೀರಸಿಂಹರಾಗಿ ಉದ್ಧರಿಸಲು ಅವತಾರವನ್ನೆತ್ತಿದರು ! ಅಂದು ಬಸವಣ್ಣನವರು ಉದಯಿಸದಿದ್ದಲ್ಲಿ ವೀರಶೈವ ಮತದ ಅಸ್ತಿತ್ವವು ಇರುತ್ತಿದ್ದಿಲ್ಲ. ಪೈರು ಒಣಗಿ ಹಾಳಾಗುತ್ತಿರುವ ಸಮಯದಲ್ಲಿ ಮಳೆ ಬಂದಂತೆ ವೀರಶೈವ ಧರ್ಮದ ಅವನತಿಯ ಕಾಲದಲ್ಲಿ ಬಸವಣ್ಣನವರು ಅವತರಿಸಿದ್ದೊಂದು ಕುರುಡನಿಗೆ ಕಣ್ಣು ಬಂದಂತೆಯೂ ಹೆಳವನಿಗೆ ಕಾಲು ಬಂದಂತೆಯೂ ವೀರಶೈವ ಸಮಾಜಕ್ಕೆ ಮಹೋಪಕಾರವಾಯಿತು. ಅಂತೆಯೇ ಸಧ್ಯದಲ್ಲಿ ವೀರಶೈವ ಸಮಾಜವು ಎಷ್ಟು ವ್ಯಾಪಕವಾಗಿ ಎಲ್ಲ ಮತಗಳಲ್ಲಿ ಅಗ್ರಗಣ್ಯವಾಯಿತು ! ಬಸವಣ್ಣನವರ ಅವತಾರವು ಕೇವಲ ವೀರ-ಶೈವ ಸಮಾಜಕ್ಕಷ್ಟೇ ಅಲ್ಲ ಇಡೀ ಮಾನವಪ್ರಾಣಿಗೆ ಫಲಪ್ರದವಾದುದು ಮುಂ-ದಿನ ಅವರ ಕಾರ್ಯಕಲಾಪಗಳಿಂದ ಕಂಡುಬರುವದು.

[ ಸಂಪೂರ್ಣ. ]



# ಚಪಲೆ!



ಲೇಖಕ:- ಜೀವಾಜಿ ಶ್ರೀನಿವಾಸ ಕುಲಕರ್ಣಿ
ನೂಲ್ವಿ ವತನದಾರರು.

ಮೂರು ವರ್ಷಗಳ ಹಿಂದಿನ ಹರಟೆ. ಕಾಲೇಜವೆಂಬ ರಂಗಭೂಮಿಯಮೇಲೆ ಘಟಿಸಿದ ಈ ಸಂಸಾರ ನಾಟಕದಲ್ಲಿನ ಒಂದು ಚಿಕ್ಕ ದೃಶ್ಯ. ಅದರಲ್ಲಿಯೂ ನನ್ನ ಪ್ರೇಮಪುತ್ಥಳಿಯ ಮನಮರುಗಿಸುವಂತಹ ಜೀವನ ಚರಿತ್ರೆ ನೋಡಿ. ಈ ನಾಟಕಕ್ಕೆ ಶಾಲೆಯಿಲ್ಲ, ನಾಟ್ಯಕೌಶಲ್ಯವಿಲ್ಲ, ಪ್ರೇಕ್ಷಕರೂ ಇಲ್ಲ, ಪಾತ್ರಗಳೂ ಇಲ್ಲ. ಆದರೂ ವಾಚಕರೆ, ಈ ಬಡಲೆಕ್ಕಣಿಕೆಯು ನಿಮಗೆ ಪ್ರೇಕ್ಷಕರ ಸ್ಥಾನವನ್ನು ಸ್ವೀಕರಿಸಲಿಕ್ಕೆ ಒತ್ತಾಯ ಮಾಡದಿದ್ದರೂ ವಾಚಕರನ್ನು ಮಾಡಿಕೊಳ್ಳಲಿಕ್ಕೆ ಇಚ್ಛಿಸುತ್ತಲಿದೆ.

ಹುಣ್ಣಿಮೆಯ ಚಂದ್ರನಂತೆ ಚಂದವಾದ ಚಪಲೆಯ ಮುಖ. ಕಮಲದ ಪಟಲುಗಳಂತೆ ಒಂದೆಡೆಗೆ ಒಂದು ಕೂಡುವಂಥ ಶುಭ್ರವಾದ ದಂತದ ಸಾಲುಗಳು ತೇಜಃಪುಂಜವಾದ ನಯನ. ಕುಲೀನತೆಯನ್ನೂ ಶಾಲೀನತೆಯನ್ನೂ ಸೂಚಿಸುವಂತಹ—ಗಾಂಭೀರ್ಯವು ತುಂಬಿದ್ದ—ಸ್ಥಿರ ದೃಷ್ಟಿ. ನೋಡಿ, ಆ ಸ್ಥಿರದೃಷ್ಟಿಯು ವಿದ್ಯುತ್ತನ್ನು ಹಾಸ್ಯಮಾಡುತ್ತಲಿದೆ! ಎಷ್ಟು ಮೃದುವಾದ ಪಾದಗಳು. ಅವಳ ಪಾದಗಳ ಕೋಮಲತೆಯನ್ನು ನೋಡಿ ಕಮಲದ ಬಳ್ಳಿಯು ನಾಚಿಕೊಂಡು ಕೆಸರಿನಲ್ಲಿ ಅಡಗಿಕೊಂಡಿರಬೇಕೆಂದೆನ್ನಿಸಿತು. ಭೂಮಾತೆಗೆ ಎಲ್ಲಿ ತ್ರಾಸಾಗುವದೋ ಎಂಬ ಹೆದರಿಕೆಯಿಂದ ನಮ್ರತೆಯಿಂದ ನಡೆಯುವಿಕೆ. ಚಿಗರಿಯ ಚಪಲತನ. ಕೋಕಿಲ ಸ್ವರಕ್ಕಿಂತಲೂ ಕೋಮಲವಾದ ಸುಸ್ವರವು. ಈಗಿನಕಾಲದ ಕುವರಿಯು. ಅವರಲ್ಲಿಯೂ ಹುಟ್ಟು ಪರದೇಶಿಯಾದ್ದರಿಂದ ಒಬ್ಬ ಸಿರಿವಂತ ವರ್ತಕನಲ್ಲಿ ಪುಷ್ಪದಂತೆ ಬೆಳೆದವಳು. ರಕ್ತವರ್ಣದಹೂವಿನಿಂದ ಅವಳ ತಲೆಯು ಯಾವಾಗಲೂ ಶೋಭಿಸುತ್ತಿತ್ತು. ವಾಚಕರೇ! ಅಂತಹ ಮನೋಹರವಾದ ಅವಳ ದೇಹಲತೆಯನ್ನು ನೋಡಿ ಆನಂದಿಸದಿದ್ದರೆ ನೀವು ರಸಿಕರೇ ಅಲ್ಲ.

ನನ್ನ ಮಾತೆಂದರೆ ಅವಳಿಗೆ ವೇದವಾಕ್ಯ. ಅವಳಲ್ಲಿ ನನಗೆ ನಿಸ್ಸೀಮ ಪ್ರೇಮ. ಅವಳೇ ನನ್ನ ಪಿಶ್ವಮೂರ್ತಿ. ಅವಳೇ ನನ್ನ ಪ್ರೇಮದ ಖಣಿ. ಸಾಧ್ವೀಮಣಿಯಾದ ಚಪಲೆಯು ಎಲ್ಲದರಲ್ಲಿಯೂ ನನಗೆ ಅನುರೂಪಳಾದ ಪತ್ನಿಯಾಗಿದ್ದಳು.

ಆದರಲ್ಲೂ ಹಸುಮುಗುವಿನಂತೆ ನಿರ್ಮಲ ಸ್ವಭಾವದವಳೂ ಅಗ್ನಿಗಿಂತಲೂ ಪವಿತ್ರಳೂ ಆಗಿದ್ದಳು. ಕೇಳುವದೇನು ? ನಮ್ಮಿಬ್ಬರ ಪ್ರೇಮವು ಶುಕ್ಲಪಕ್ಷದ ಚಂದ್ರನಂತೆ ದಿನೇ ದಿನೇ ವೃದ್ಧಿಯಾಗುತ್ತ ನಿರ್ಮಲ ಮನಗಳಲ್ಲಿ ಸಂಪೂರ್ಣವಾಗಿ ವ್ಯಾಪಿಸಿಕೊಂಡಿತು. ನಾವು ಯಾವಾಗಲೂ ಕೂಡಿಯೇ ಇರುತ್ತಿದ್ದೆವು, ಕೂಡಿಯೇ ಹೋಗುತ್ತಿದ್ದೆವು ಮತ್ತು ಕಾಲೇಜದಿಂದ ಕೂಡಿಯೇ ಬರುತ್ತಿದ್ದೆವು. ಅವಳನ್ನಗಲಿ ಇರುವದೆಂದರೆ ನನಗೆ ಪ್ರಾಣಸಂಕಟ. ನನ್ನನ್ನಗಲಿ ಇರುವದೆಂದರೆ ಅವಳಿಗೊಂದು ಕುತ್ತು. ನಾನು ಯಾವ ಕಡೆಗೆ ಹೊದರೂ ಅವಳು ನನ್ನನ್ನು ಧರ್ಮಪತ್ನಿಯಂತೆ ಹಿಂಬಾಲಿಸುವಳು ನಾವು ಯಾವ ಕಡೆಗೆ ನಮ್ಮ ದೃಷ್ಟಿಯನ್ನು ಚಾಚಿದರೂ ನಮಗೆ ಸುಖವೆಂಬ ಬೆಳಕು ಹತ್ತುತ್ತಿತ್ತೇ ಹೊರ್ತು ದುಃಖವೆಂಬ ಅಂಧಃಕಾರದ ಸ್ಪರ್ಶವೇ ಇರಲಿಲ್ಲ. ಇದು ಒಂದು ಸಂಸಾರ ಸಾಗರದಲ್ಲಿ ಸುಖಕರವಾದ ಅಲೆ.

— — — — —

ಸಂಸ್ಕೃತ ಸುಭಾಷಿತಕಾರನೊಬ್ಬನು, " भार्या रूपवती शत्रु " ಎಂದು ಸಾರಿ ಸಾರಿ ಹೇಳಿದ್ದಾನೆ. ವಾಚಕರೆ! ಯಾವನಿಗೆ "ಮಿತ್ರ" ಎಂಬ ಶಬ್ದವು ಸಹ ಗೊತ್ತಿದ್ದಿಲ್ಲವೋ ಅಂಥವನಲ್ಲಿ ಈಗ ಸ್ನೇಹಿತರ ಗುಂಪೇ ಗುಂಪು. ಜೇನತುಪ್ಪಕ್ಕೆ ಇರಿವೆಗಳು ಮುಕರಿದಂತೆ ಪ್ರತಿ ನಿತ್ಯವೂ ಬಂದು ಭೆಟ್ಟಿಯನ್ನು ಕೊಟ್ಟು ಅಂಥ ಇಂಥ ವೇಳೆಗೆ ಪುನಃ ಬರುತ್ತೇವೆಂದು ಹೇಳಿ ಹೋಗುತ್ತಿದ್ದರು.

ಒಂದು ವೇಳೆ ಸೂರ್ಯನು ಉದಯವಾಗುವದರಲ್ಲಿ ಹೆಚ್ಚು ಕಡಿಮೆ ಮಾಡಬಹುದು, ಆದರೆ ಈ ನನ್ನ "ಮಿತ್ರ" ರೆಂಬವರು ಬರಲಿಕ್ಕೆ ತಪ್ಪುತ್ತಿರಲಿಲ್ಲ. ಅವಳ ಈ ಸ್ನೇಹವೂ ಒಬ್ಬಳೇ ಅವರ ಸಂಗಡ ತಿರುಗಾಡಲಿಕ್ಕೆ ಹೋಗುವದೂ ನನಗೆ ಸಹನವಾಗಲಿಲ್ಲ. ಮಿತ್ರರೆಲ್ಲರೂ ಶತ್ರುಗಳಂತೆ ಕಾಣಹತ್ತಿದರು. ನೋಡಿ! ಮನಷ್ಯನಿಗೆ ಶಾರೀರಿಕ ವೇದನೆಗಿಂತಲೂ ಮಾನಸಿಕ ವೇದನೆಯೇ ತೀಕ್ಷ್ಣವಾದದ್ದು. ಅವರಲ್ಲಿಯೂ ಸಂದೇಹಸಂಭೂತವಾದ ವೇದನೆಯಂತೂ ಅತ್ಯಂತ ಕಠಿಣವಾದದ್ದು. ಸಂದೇಹಗ್ರಸ್ತರಾದವರಿಗೆ ಗಾಳಿಯಷ್ಟು ಹಗುರಾದ ಅತ್ಯಲ್ಪ ವಿಚಾರಗಳೂ ಸಹ ವೇದವಾಕ್ಯಗಳಂತೆ ಪರಮ ಪ್ರಮಾಣಗಳಾಗಿ ತೋರುವವು. ಅದರಂತೆ ನನ್ನಗತಿಯಾಯಿತು. ಸಂದೇಹಪಿಶಾಚಗ್ರಸ್ತನಾದೆನು. ಮನವು ಕ್ರೋಧ ಮಾತ್ಸರ್ಯಗಳಿಗೆ ರಣರಂಗವಾಯಿತು. ಆದರೆ ಮಾಡಲೇನು ? ಕಣ್ಣಿದ್ದು ಕುರುಡನಾದೆ.

— — — — —

ರಾತ್ರಿಯ ೮ ಘಂಟೆಯಾಗಿದ್ದೀತು. ಆದೇ ನನ್ನ ಊಟವು ಮುಗಿದಿತ್ತು ನಾನೂ ಚಪಲೆಯೂ ತಿರುಗಾಡಲಿಕ್ಕೆಂದು ಕೃಷ್ಣೆಯ ತೀರಕ್ಕೆ ಹೋದೆವು. ಕೃಷ್ಣೆಯು ಆಹ್ಲಾದದಿಂದ ಮಂಜುಳ ದನಿಗೈಯುತ್ತ ಮೃದುವಾಗಿ ಹರಿಯುತ್ತಿದ್ದಳು. ಬೆಳದಿಂಗಳು ಬೆಳ್ಳಗೆ ಬಿದ್ದಿತ್ತು. ಚಂದ್ರನು ಮೇಘಗಳೊಂದಿಗೆ ಕ್ರೀಡಿಸುವನೋ ಏನೋ ಎಂಬಂತೆ ಕೆಲವು ವೇಳೆ ಅವುಗಳ ಕೈಯಲ್ಲಿ ಸಿಕ್ಕುತ್ತಲೂ ತತ್ ಕ್ಷಣವೇ ಬಿಡಿಸಿಕೊಂಡು ಬರುತ್ತಿದ್ದನು. ಮಂದಮಾರುತನು ಮಲ್ಲಿಗೆ ಸುವಾಸನೆಯಿಂದ ಸುಳಿದಾಡುತ್ತಿದ್ದನು. ಇಂಥ ಸಮಯದಲ್ಲಿ ನಾವಿಬ್ಬರು ಕೃಷ್ಣೆಯ ತಡೆಗೆ ಬಂದು ಅಗಲವಾಗಿದ್ದ ಹಾಸುಬಂಡಿಯೊಂದರಮೇಲೆ ಮೃದುಹಾಸದಿಂದ ಏಳುತ್ತಿದ್ದ ಸಣ್ಣ ಅಲೆಗಳ ಸೌಂದರ್ಯವನ್ನು ನೋಡುತ್ತ ಕುಳಿತಿದ್ದೆವು. ನಾವು ಅಲ್ಲಿ ಕುಳಿತು ೧೦ ನಿಮಿಷ ಸಹ ಆಗಿರಲಿಕ್ಕಿಲ್ಲ; ಅಷ್ಟರಲ್ಲಿಯೇ ಹೇಳಿ ಕರೆಯಿಸಿದವರಹಾಗೆ ಅವಳೊಬ್ಬ ಮಿತ್ರನು ಬಂದೇಬಿಟ್ಟನು. "ಈ ಇದಿಯು ನನ್ನನ್ನೇನೂ ಬಿಡುವ ಹಾಗೆ ಕಾಣುವದಿಲ್ಲ" ಎಂದು ಮನಸ್ಸಿನಲ್ಲಿ ಅಂದುಕೊಂಡೆ. ಆದರೂ ರೂಢಿಗನುಸಾರವಾಗಿ ಬರಲಿಕ್ಕೆ ಹೇಳಿದೆನು. "ರಾಮೂ, ಸ್ವಲ್ಪ ವೇಳೆಯ ವರೆಗೆ ಕೆಲಸವಿದ್ದದರಿಂದ ಚಪಲೆಯನ್ನು ಕರೆದುಕೊಂಡು ಹೋಗುತ್ತೇನೆ ಕ್ಷಮೆ ಇರಲಿ." ಎಂದವನೇ ನನ್ನ ಮರುಮಾತಿನ ಹಾದಿ ಸಹ ನೋಡದೆ ಕರೆದುಕೊಂಡು ಹೋಗಿಬಿಟ್ಟ. ನಾನು ಏನೂ ತೋಚದೆ ಧಿಂಗ್ಮೂಢನಾಗಿ ಕುಳಿತುಬಿಟ್ಟೆ. ಎಷ್ಟೋ ವಿಚಾರಗಳು ಮನವೆಂಬ ಆಕಾಶದಲ್ಲಿ ಉದ್ಭವಿಸಿದ ಕಾರ್ಮೋಡಗಳ ಮಧ್ಯದಲ್ಲಿ ಕೋಲಮಿಂಚಿನಂತೆ ಮಿಂಚಿ ಮಿಂಚಿ ಮಾಯವಾದವು. ರಾತ್ರಿಯು ಭೀಕರವಾಗಿ ತೋರಹತ್ತಿತು. ಕೃಷ್ಣೆಯ ಮಂಜುಳವು ಕರ್ಣಕಠೋರವಾಯಿತು. ನಾನು ಕುಳಿತೆನು ಎಷ್ಟೋ ವೇಳೆಯವರೆಗೆ ಕುಳಿತೆನು. ಒಂದು ನಿಮಿಷ ಒಂದು ಯುಗವಾಗಿ ತೋರಹತ್ತಿತು. ಆದರೂ ಅವರ ಸುಳುವೇ ಇಲ್ಲ. ಚಾತಕ ಪಕ್ಷಿಯು ಮಳೆಯ ಹಾದಿ ನೋಡುವಂತೆ ಕಾಯಹತ್ತಿದೆನು. ಇಂಥ ಎಷ್ಟೋ ಯುಗಗಳನ್ನು ಕಳೆದನಂತರ ಇಬ್ಬರೂ ಕೂಡಿಯೇ ಬಂದರು. ನಾನು ಕುಳಿತಲ್ಲಿಯೇ ಸ್ವಲ್ಪ ಅಂತರದಮೇಲೆ ಕುಳಿತರು. ಇವತ್ತಿನ ದಿವಸವೇ ಕಾಲೇಜದಲ್ಲಿ ಆದ ಉಪನ್ಯಾಸದ ಬಗ್ಗೆ ಸರಸಸಲ್ಲಾಪಗಳು ಸುರುವಾದವು. "ಇವಳನ್ನು ಎಲ್ಲಿಗೆ ಕರೆದುಕೊಂಡು ಹೋಗಿದ್ದಿ,—ಯಾತಕ್ಕೆ ಕರೆದುಕೊಂಡು ಹೋಗಿದ್ದಿ" ಮುಂತಾದವುಗಳ ಸಂಬಂಧವಾಗಿ ಒಂದು 'ಚ' ಕಾರ ಶಬ್ದವನ್ನಾದರೂ ನಾನು ಎತ್ತಲಿಲ್ಲ.

ಅಷ್ಟರಲ್ಲಿ ಚಪಲೆಯದೊಂದು ನಿಟ್ಟುಸುರು ಕೇಳಿಸಿತು. ಅದು ಚಿಕ್ಕದು, ಆದರೂ ಹೃದಯಭೇದಕವಾದುದು. ಮೂರ್ಛೆ ಬಂದು ಕೆಳಗೆ ಕುಳಿತೇ ಬಿಟ್ಟಳು. ಅದನ್ನು ಕೇಳಿ ನನಗೆ ಸಿಡಿಲು ಬಡೆದಂತಾಯಿತು. ಅವಳಮೇಲೆ ಇದ್ದ ಕೋಪವು ಅಲ್ಲಿಯೇ ಮಾಯವಾಯಿತು. ಎದೆಯಲ್ಲಿ ದಡುಗುಟ್ಟಿತು. ಮನಸ್ಸು ಹೊಯ್ದಾ

ಡಹತ್ತಿತು—ಬಿರುಗಾಳಿಗೆ ಸಿಕ್ಕ ಡೋಣಿಯಂತೆ. ಅವಳ ಹತ್ತರ ಹೋದೆನು. ಮೈಮೇಲೆ ಕೈಯಾಡಿಸಿ ನೋಡಿದೆನು. ಬಲಗಾಲಿಗೆ ಬಲು ಗಾಯವಾಗಿತ್ತು. ಒಂದು ಬಲವಾದ ಮೊಳೆಯು ನಟ್ಟದ್ದರಿಂದ ಪಾದದ ಒಂದು ಭಾಗದ ಚರ್ಮವು ಚೂರು ಚೂರಾಗಿ ಜೋತಾಡುತ್ತಿತ್ತು. ಮಿತ್ರನಮೇಲಿನ ಕೋಪವು ನನ್ನ ಕಂಬನಿಗಳಲ್ಲಿ ಪರಿಣಮಿಸಿತು. ನಾನು ಹಾಗೂ ಹೀಗೂ ಮಾಡಿ ಮಿತ್ರನ ಸಹಾಯ ಯಾಚನೆ ಬೇಡದೆ, ಕಂದೀಲಕೂಟದವರೆಗೆ ಬಂದೆವು. ಗೋಪು ನನ್ನಮೇಲೆ ಕೋಪಿಸಿಗೊಂಡನೋ ಅಥವಾ ತನ್ನ ಕೃತಿಗಾಗಿ ತಾನೇ ಕೆಡಕೆನಿಸಿಕೊಂಡನೋ ಎಂಬುವದು ಮಾತ್ರ ತಿಳಿಯಲಿಲ್ಲ. ಈ ಜಗತ್ತಿನಲ್ಲಿ ಮನುಷ್ಯನಿಗೆ ಸುಖವೇ ಆಗಲಿ ದುಃಖವೇ ಆಗಲಿ ಎಂದೂ ಒಂದೇ ಬರುವದಿಲ್ಲ. ಸಾಗರದ ತೆರೆಗಳಂತೆ ಒಂದರಮೇಲೊಂದು ನಾ ಮುಂದೆ ನೀ ಮುಂದೆ ಎಂದು ಏರಿ ಏರಿ ಬರುತ್ತವೆ. ಸುಖದ ಅಲೆಗಳಿಗಿಂತ ದುಃಖದ ತೆರೆಗಳೇ ಬಹಳ. ದುಃಖದ ತೆರೆಗಳಿಗೆ ಆಹುತಿ ಆಗುವವರೇ ಬಹಳ. ಇರಲಿ.

ನಾನು ನನ್ನವಳನ್ನು ಮೆಲ್ಲಗೆ ಕರೆದುಕೊಂಡು ಬರುತ್ತಿದ್ದೆನು. ಮನಸ್ಸಿನಲ್ಲಿ ಯಾವದೋ ಒಂದು ವಿಚಾರವಮಾಡುತ್ತ ಒಂದು ಸಂದಿಯ ಹಾದಿಯನ್ನು ಹಿಡಿದು ಹೊರಟೆವು. ಅಷ್ಟರಲ್ಲಿ ಒಂದು ಟಾಂಗೆಯು ಯಮದೂತನಂತೆ ಬಂದು 'ಥಡಕ್' ಎಂದು ನನ್ನವಳ ಕೈಗೆ ತಾಕಿತು. ನನನ್ನಾಕೆಯು ೩—೪ ಮೊಳ ಅಂತರದಾಚೆಗೆ ಬೇರು ಸಹಿತ ಬಿರುಗಾಳಿಗೆ ಕಡಕೊಂಡು ಬಿದ್ದ ವೃಕ್ಷದಂತೆ ನನ್ನ ಕೈತಪ್ಪಿ ಬಿದ್ದಳು. ನನ್ನ ಪ್ರಾಣವೇ ಹಾರಿ ಹೋದಂತಾಯಿತು. ಗಾಯದಮೇಲೆ ಬರೆಕೊಟ್ಟಂತಾಯಿತು. "ಶಿರೆ-ಗಿರೆ ಕುಡದೀದೇನೋ! ಯಾವಕಡೆಗೆ ಹೊಡೀತೀ ನಿನ್ನ ಟಾಂಗಾ" ಎಂದು ಗದ್ದರಿಸಿದೆ. ನಾನು ಏನು ನುಡಿದೆನು ಎಂಬುವದು ನನಗೇ ಗೊತ್ತಿರಲಿಲ್ಲ. ನನ್ನ ಎಲ್ಲ ಲಕ್ಷವು ನನ್ನವಳ ಕಡೆಗೆ ಹೋಗಿತ್ತು. ಅವನ ಉತ್ತರದ ಹಾದೀ ನೋಡದೆ ಚಪಲೆಯನ್ನು ಸಾವಕಾಶವಾಗಿ ಎಬ್ಬಿಸಿ ಸಮೀಪದಲ್ಲಿಯೇ ಇದ್ದ ದವಾಖಾನೆಗೆ ಒಯ್ದೆನು.

ದವಾಖಾನೆಯಲ್ಲಿ ಮಲಗಿಸಿ ಡಾಕ್ಟರರನ್ನು ಕರತಂದು, ಸೂಕ್ಷ್ಮವಾಗಿ ಚಿಕಿತ್ಸೆ ಮಾಡಲಿಕ್ಕೆ ವಿನಂತಿ ಮಾಡಿಕೊಂಡೆನು ಕೆಲಹೊತ್ತಿನಮೇಲೆ ಸ್ವಲ್ಪ ನಡಗುವ ಸ್ವರದಲ್ಲಿ "ಕೈಗಳಿಗೂ ಕಾಲಿಗೂ ಬಲವಾಗಿ ಪೆಟ್ಟು ತಾಕಿದ್ದರಿಂದ ಸ್ವಲ್ಪ ಕಠಿಣ." ಎಂದು ನುಡಿದರು. ಇದೇ ವೇಳೆಗೆ ಅವಳ ಮತ್ತೊಂದು ಬಿಸಿಯುಸಿರು ಕೇಳಿಸಿತು. ಈಗಂತೂ ಕಣ್ಣು ಕತ್ತಲಿಟ್ಟವು. ಮೈ ನಡುಗಿತು. ಕಣ್ಣಲ್ಲಿ ತುಂಬಿದ ಕಂಬನಿ ತುಳುಕಿ ಗಲ್ಲದಗುಂಟ ಸಪ್ಪಿಲ್ಲದ ಪ್ರವಾಹದಂತೆ ಹರಿಯಹತ್ತಿದವು. ಮನವು ಅಸ್ಥಿರವಾಯಿತು. ಮುಖವು ಗಾಬರಿಗೊಂಡಿತು. ಏನೂ ತಿಳಿಯದಾ

ಯಿತು. “ಇವಳ ಅವತಾರವೇ ಮುಗಿಯಿತು.” ಎಂದು ಹೇಳಿ ಡಾಕ್ಟರರು ಹೊರಟುಹೋದರು. ವಾಚಕರೇ ನೀವೇ ಆಗಿನ ನನ್ನ ಸ್ಥಿತಿಯನ್ನು ಕಲ್ಪಿಸಿರಿ. ಅದೇ ಉಸಿರು !—ಅದೇ ಉಸಿರು !—ಅದೇ ಕಡೆಯ ಉಸಿರು ನನ್ನ ಪ್ರೇಮದರಗಿಳಿಯ ಪ್ರಾಣವನ್ನು ಹರಣಮಾಡಿದ್ದು, ಪ್ರೇಮಪಾಶವನ್ನು ಹರಿದದ್ದು ಮತ್ತು ನಮ್ಮ ಸಂಸಾರ ಮೂಲೆಗೂಡಿಸಿದ್ದು !

ಈ ಸುದ್ದಿಯು ಗಾಳಿವೇಗದಿಂದ ಊರಲ್ಲಿ ಪಸರಿಸಿತು. ತಂದೆಯವರಿಗೆ ತಲ್ಪಿದ್ದರಿಂದ ಅವರು ಗಾಬರಿಯಾಗಿ ಅಲ್ಲಿಗೆ ಬಂದು ನೋಡಿ, ಸ್ವಲ್ಪ ಶಾಂತ ದನಿಯಲ್ಲಿ “ಹೋಗಲಿ ಬಿಡು, ಅಳಬೇಡಾ, ನೀನು ಇನ್ನೂ ಚಿಕ್ಕವನು. ನಿನಗೆ ಇನ್ನೊಬ್ಬ ಉತ್ತಮಳಾದ ಮುದ್ದು ಮಡದಿಯನ್ನು ಮಾಡುವೆನು. ಏಳು ಇಲ್ಲಿಂದ ಹೋಗೋಣ ಮನೆಗೆ.” ಎಂದರು. ನನ್ನ ಕಂಠವು ಬಿಗಿದು ಬಂತು ‘ಹುಂ’ ಎಂದು ಹೊರಟುಬಿಟ್ಟೆ.

ವಾಚಕರೆ! ಅದೇ ನಮ್ಮ ಕಡೆಯ ದರ್ಶನ. ನನ್ನ ಮುದ್ದು ಅರಗಿಳಿಯು—ನನ್ನ ಬಾಲ್ಯದ ಗೆಳತಿಯು—ಯೌವನದ ನನ್ನ ಮಾರ್ಗಗಾಮಿನಿಯು—ನನ್ನ ಲಕ್ಷ್ಮಿಯು ನನ್ನನ್ನು ಬಿಟ್ಟು ಹೋದಳು. ಆಗ್ಗೆ ನಾನು ಪಟ್ಟ ಶ್ರಮ ದೇವರೇ ಬಲ್ಲ. ಹಣದ ಹೊಳೆ ಹರಿಸಿದೆನು. ಮಾಡುವ ಎಲ್ಲ ಪ್ರಯತ್ನಗಳನ್ನು ಮಾಡಿದೆನು. ಆದರೆ ಆ ನಿರ್ದಯನಾದ ಕಾಲನ ಕಠಿಣ ಚಿತ್ತಕ್ಕೆ ಅದು ಬರಲಿಲ್ಲ. ಆತ್ಮವು ಜೀರ್ಣವಾದ ದೇಹವನ್ನು ತ್ಯಜಿಸಿ, ನವಶರೀರವನ್ನು ಸೇರುವಂತೆ ಚಪಲೆಯು ನನ್ನನ್ನು ತ್ಯಜಿಸಿ ಯಾವದೋ ಕಡೆಗೆ ಮಾಯವಾದಳು.

ಇದಾಗಿ ಒಂದು ವರ್ಷದ ಹಿಂದಿನ ಮಾತು. ತಂದೆಯವರ ಇಚ್ಛಾನುಸಾರವಾಗಿ ಎರಡನೇಯವಳನ್ನು ಲಗ್ನವಾದೆನು. ಲಗ್ನವಾದೆನು ಇಷ್ಟೆ! ಇವಳು ನನ್ನ ಚಿನ್ನದಂತಹ ಚಪಲೆಯನ್ನು ಹೋಲುವಂತಿದ್ದಿಲ್ಲ. ಭೂಮ್ಯಾಕಾಶದಷ್ಟು ಅಂತರ. ಹೇಗಾದರೂ ಮಾಡಿ ಇಬ್ಬರೂ ಕೂಡಿ ಸಂಸಾರ ಸಾಗಿಸುತ್ತಿದ್ದೆವು. ಆದರೆ ಅದು ರುಚಿಯಿಲ್ಲದ ಸಂಸಾರ.

ನಾನು ಆರಾಮ ಖುರ್ಚಿಯಲ್ಲಿ ಕುಳಿತಾಗ್ಗೆ ಕಣ್ಣೆದುರಿಗೆ ಚಪಲೆಯ ಚಿತ್ರವು ನಿಲ್ಲುತ್ತಿತ್ತು. ಹೌದು! ಅದೇ ಚಪಲೆ! ಅದೇ ಚಪಲೆ! ನನ್ನನ್ನು ನಡುನೀರಿನಲ್ಲಿ ಕೈಬಿಟ್ಟು ತಾನು ಆ ದಂಡೆಯನ್ನು ಮುಟ್ಟಿದಂತಹ ಆ ಚಪಲೆ! “ಇವಳೇನು ಬ್ರಹ್ಮನು ಮೊದಲಿಗೆ ನಿರ್ಮಿಸಿದ ತಿಲೋತ್ತಮೆಯೋ ಲಕ್ಷ್ಮಿಯೋ? ಅಥವಾ ದೇವಕನ್ನಿಯು ಚಪಲೆಯ ರೂಪಧರಿಸಿ ನನ್ನ ಅರ್ಧಾಂಗಿಯಾಗಿ ಬಂದಿರುವಳೋ?” ಎಂಬ ವಿಚಾರಗಳು ಬರುತ್ತಿದ್ದವು. ಒಮ್ಮೊಮ್ಮೆ ಹೀಗೆ ಅನಿಸುತ್ತಿತ್ತಲ್ಲ “ಈ

ಕಲಿಯುಗದಲ್ಲಿ, ಅದರಲ್ಲಿಯೂ ಇಂಥ ಬಡಲೇಖಕನ ಧರ್ಮಪತ್ನಿ. ಅಶಕ್ಯ ತೀರ ಅಶಕ್ಯ" ಇರಲಿ. ಇವಳು ಯಾರೇ ಇರಲಿ ಈಗ ಯಾಕೆ ಅವಳ ವಿಚಾರ, "ಮಿಂಚಿಹೋದಮಾತಿಗೆ ಚಿಂತಿಸಿ ಫಲವೇನು"

ವಾಚಕರೆ! ಇನ್ನೊಂದು ಕಡೆಯ ಮಾತು. ಆದಾದರೂ ಕಥೆಯ ಜೀವಾಳವು. ಈ ಕಥೆಯ ಗುಟ್ಟನ್ನು ಹೇಳದಿದ್ದರೆ ಹುರುಳಿಲ್ಲದ ಹರಟೆಯಾಗಬಹುದು. ಜೀವವಿಲ್ಲದ ದೇಹದಂತೆ ನನ್ನ ಹೆಂಡತಿಯು 'ಹುಟ್ಟ ಪರದೇಶಿ' ಎಂದು ಹೇಳಿದಿದು ವಾಚಕರ ನೆನಪಿನಲ್ಲಿದೆ. 'ಹುಟ್ಟ ಪರದೇಶಿ' ಎಂದರೆ ಲಂಡನ್ ಬಿ.ಎಸ್. ಎ. (B. S. A.) ಕಂಪನಿಯಿಂದ ಬಂದವಳು. ಲಂಡನ್‌ಕ್ಕೆ ಹೋದ ನಮ್ಮ ಬಾಂಧವರು ಆಂಗ್ಲ ಮಹಿಳೆಯರನ್ನು ಲಗ್ನ ಮಾಡಿಕೊಂಡು ಬರುವದನ್ನು ನಾವು ಕೇಳುವೆವು. ಆದರೆ ಹಿಂದೂ ವೈವಾಹಿಕಪದ್ಧತಿಯ ಗುಟ್ಟನ್ನರಿಯದ ಆ ಮಹಿಳೆಯರಲ್ಲಿ ತಿರುಗಿ ಬೀಳುವವರೇ ಬಹಳ. ಆದರೆ ನನ್ನವಳು ಸಾಯುವವರೆಗೂ ನನ್ನಲ್ಲಿ ಇದ್ದು, ನನ್ನ ಉಪ್ಪನ್ನೇ ಉಂಡು ಪರಲೋಕವನ್ನೈಯ್ದಳು. ಅವಳಿಗೆ ಅಲ್ಲಿ ಸುಖಶಾಂತಿಗಳು ಸಿಗಲೆಂದು ಪ್ರಾರ್ಥಿಸುವೆನು. ನೀವಾದರೂ ಹೀಗೆಯೇ ಮಾಡುವಿರೆಂದು ನಂಬಿದ್ದೇನೆ. ನನ್ನ ಮೊದಲಿನವಳು (ಬೈಸಿಕಲ್) ಈಗಿನವಳು (ಮೋಟಾರ ಸಾಯಿಕಲ್).

---

# ಸಾಹಿತ್ಯದಬಗ್ಗೆ ಇದ್ದ ನೋಬೆಲ್ ಬಹುಮಾನವು.

## ಇಟಲಿಯ ನಾಟಕಕಾರನಿಗೆ ದೊರೆಯಿತು.

ಸಾಹಿತ್ಯಕ್ಕೆ ಸಂಬಂಧಿಸಿದ ಈ ಸಾರೆಯ ಬಹುಮಾನವು ಇಟಲಿಯ ನಾಟಕಕಾರನಾದ ಸೀನೇರ ಪೀರಾಂಡೇಲೋ ಎಂಬವನಿಗೆ ಸಿಕ್ಕಿದೆ. ನೋಬೆಲ್ ಬಹುಮಾನವು ಇವನಿಗೆ ದೊರೆತದ್ದು ಇದು ಎರಡನೇಯ ಸಲ.

(ಸಂಯುಕ್ತ ಕರ್ನಾಟಕದಿಂದ ಅವತರಿಸಿದ್ದು)

**ವಿ. ಸೂ.**— ನೋಬೆಲ್ ಬಹುಮಾನದ ವಿಷಯವಾಗಿ ಮುಂದಿನ ಸಂಚಿಕೆಯಲ್ಲಿ ಸವಿಸ್ತರ ಮಾಹಿತಿಯನ್ನು ಕೊಡಲಾಗುವದು.

— ಸಂಪಾದಕರು.

# ಟಾಂಗಾವಾಲಾ.



ಲೇಖಕರು :— } ಶ್ರೀ ವೆಂಕಟರಾವ ಫಡಣೀಸ ಶಿರಹಟ್ಟಿ.
ಶ್ರೀ ರಾಮಾಚಾರ್ಯ ಹೇಮಾದ್ರಿ ಶಿರಹಟ್ಟಿ.

ನಮ್ಮೂರಾಗ ಅಂದಾನಪ್ಪನಽ ಒಬ್ಬಾವಾ ರೊಕ್ಕಸ್ತ. ಅವಂದೊಂದು ಅಣ್ಣ-ತಮ್ಮಂದಿರ ನ್ಯಾಯಾ ಜಜ್‌ಕೋರ್ಟಿಗೆ ಬಿದ್ದಿತ್ತು. ಆದರದೆಶಿಂದ ಅಂದಾನೆಪ್ಪಾ ನನಗೂ ಬಾ ಅಂದಾ ಬೆಳಗಾವಿಗೆ. ಇಬ್ಬರೂ ಬೆಳಗಾವಿ ನೋಡದ ಇದ್ದವ್ರು. ಅದಕ ಹಗಲಗಾಡೀಗೇ ಹೋದ್ವಿ. ರೇಲಿನಿಂದ ಇಳಿದು. ನಮ್ಮ ಗಂಟು-ಗದಡಿ ಇಳಿಸಿಕೊಂಬೋದ್ರಾಗಽ ಹಮಾಲರ ತಂಡ ಬಂತು. ಶಹರದ ಸ್ಟೇಶಂದಾಗ ಹಮಾಲರ ಹಾವಳಿ ಹೆಚ್ಚಿಂದು. ಹಮಾಲೊಬ್ಬಾವಾ ನಮ್ಮ ಗಂಟು-ಗದಡಿ ಎಳಕೊಂಡು ಬಗಲಾಗ ಹಾಕಿದ ಕೂಡ್ಲೆ ನಾವಿಬ್ಭರೂ ಕೈ ಇಳಿಬಿಟಕೊಂಡು ಅವನ ಮಾರಿ ಮಿಕಿ ಮಿಕಿ ನೋಡಿಕೋತ ನಿಂತ್ವಿ. 'ರಾವಸಾಬ, ದೇಖೋ ಏಕಸೋ ಪಚ್ಚೀಸ' ಎಂದು ರಟ್ಟೀಪ್ಯಾಲಿನ ಬಿಲ್ಲೀನಂಬರು ತೋರಿಸ್ದಾ. ಅದಽ ಅವರ ರಜಿಸ್ಟರ ನಂಬರ ಕಾಣಸ್ತದ. ಒಳಗ ಹಮಾಲರ ಕೈಯೊಳಗಿಂದ ಪಾರಾಗಿ ಬರೋದ್ರಾಗಽ ಹೊರಗ ಟಾಂಗಾದವರ ಕಾಟಾ. ಚಿತ್ರಗುಪ್ತರ ಕಣ್ಣು ತಪ್ಪಿಸಿ ಓಡಿ ಬಂದರೂ ಬರಬಹುದು. ಆದರ ಶಹರದ ಟಾಂಗಾದವರ ಕೈಯಾಗ ಸಿಕ್ರಽ ಮನಿಮಾರಿಂದು ಆಶಾ ಬಿಡೋದ್ಽ ಬೆವರು ಹತ್ತಿ ದುರ್ಗಂಧ ನಾರೋ ಆ ಖಾಕಿ ಲಂಡ ಅಂಗಿ, ತ್ಯಾಪಿ ಬಡಿದ ಆ ಚಂಣ್ಣಾ, ಬಾಯಾಗ ದುಡ್ಡಿಗೆ ಆರರ ಬಾಂಬೆ ಸ್ಪೇಶಲ್ ಸಿಗರೇಟು. ಏನ್ಹೇಳ್ಳಿ, ಆ ಅವತಾರ್ನ. ಹಳ್ಳಿಯಿಂದ ಹೋದ್ಮಂದಿ ಆಸ್ಟೇಶನ್ನು ಆ ಮಂದಿ ನೋಡಿ ಘಾಬರಿ ಆಗೋದಽ ಸರಿ. ಮತ್ತ ಆದರಾಗ ಸಾಮಾನಾ ಎಳೆದಾಡ್ಲಿಕ್ಕೆ ಹತ್ತ್ರೋತಿಗೆ ಇವರೇನು ಟಾಂಗಾದವರೋ ಸಂಭಾವಿತ ದರೋಡಿಖೋರ್‍ರೋ ತಿಳಿಯೋ ಹಾಂಗಿಲ್ಲಾ !

ಒಬ್ಬ ಟಾಂಗಾದವಾ ಬಂದು ಅಂದಾನಪ್ಪನ ಕೈಯೊಳಗಿನ ಸಾಮಾನಾ ಜಗ್ಗಾಡ್ಲಿಕ್ಕೆ ಹತ್ತ್ರೋತಿಗೆ 'ಎಲೆ ಎಲೆ ಇವನಽ ನಿಂತರ ನಿಂದ್ರಪಾ. ಹೀಗ್ಯಾಕ ಜಗ್ಗಡತಿ ಸಾಮಾನಾ ಭಾಳ ಅದಾವಽ' ಅಂದಾ. 'ರಾವಸಾಬ ಪಂಧರಾ ಬಗಾ' (ಟಾಂಗಾದ ನಂಬರು) ಟಾಂಗಾವಾಲಾ ಅಂದಾ. ಅಂದಾನಪ್ಪಗ ಮರಾಠಿ

ಟೀಪು— ಓದುಗರು 'ಽ' ಈ ಚಿನ್ಹನಿಸ್ಹಲ್ಲಿ ಎಳೆದು ಓದಬೇಕಾಗಿ ವಿನಂತಿ.

ಅಂದರ ಗೊತ್ತಿಲ್ಲಾ. ನನಗೂ ಅಷ್ಟಕಷ್ಟs. ಎತ್ಲಾಗ ಹೋಗಬೇಕಂತs ಆಲೋಚನೀ ಮಾಡೋದ್ರಾಗs ಸಂಪುಷ್ಟಕ ಬಂದವು ಸಾಮಾನಾ. ಅಂದಾನಪ್ಪಾ ಕಕ್ಕಾವಿಕ್ಕಿ ಆದಾ. ನಾನೂ ಹಾಂಗs ಆದೆ ಅಂತ ಅನಿಸಿಸ್ತು ನನಗ. 'ದೇವರ ಹ್ಯಾಂಗರ ಮಾಡಿ ಠೇಸಣದಿಂದ ಊರಾಗ ನಮ್ಮನ್ನ ಜೀವಂತ ಮುಟ್ಟಸಿದ್ರs ಕಾಯಿ ಒಡಸ್ತೀನಿ' ಅಂತ ಅಂದಾನಪ್ಪಾ ಅಂದಾ. ಅಲ್ಯಾತಕ್ಕ ಬಂದಾನು ದೇವರು ? ಟಾಂಗಾವಾಲಾ, ಬೀಡೀವಾಲಾ, ಚಹಾವಾಲಾ, ಟೋಪಿವಾಲಾ, ಚಂಣದವಾಲಾ, ಚಾಳೀಸವಾಲಾ ಈ ವಾಲಾಗೋಳs ದೇವರ ರೂಪದಿಂದ ತಿರಗತಿರಠಾವ ಅಲ್ಲೆ. ಇಷ್ಟಾಗೋದ್ರಾಗs ಫರಾಳದ ಡಬ್ಬಿ ಹೋತು. ಕಾಲಾಗಿನವು ಮಾಯಾದವು. ಮೂರು ರೂಪಾಯದ ಕೊಡಿ ಗಡಪ್ ಆತು. ಕಚ್ಚಿ ಕಳೀತು. ಏನ್ಹೇಳ್ಲಿ ಗೋಳು. ಬೆಳಗಾವಿಗೆ ಬರಬಾರದ ಬಂದು ಹುಚಮಂಗ ಆದೆ. ನಮ್ಮ ಮಾರಿ ವಾಲಾಗೋಳ ಮುಖಾಂತರ ದೇವರಿಗೆ ಕೇಳಿಸ್ತೋ ಏನೋ ಸರ್ಜಂಟ ಸಾಹೇಬರು ಕೈಯಾಗ ಹಂಟರ (ಚಬಕ) ಹಿಡಕೊಂಡು ಬಂದ್ರು. ಟಾಂಗಾದವರು ಸರಿಯಾಗಿ ನಿಂತುಕೊಂಡು 'ಖಡೀಠಾಜೀಮ' ಕೊಟ್ರು ಅವರಿಗೆ. 'ಕ್ಯಾ ಗಡಬಡ ಹೈ, ಸಾಲಾ ಲೋಕ ತುಮ್ಕು ಪಚಾಸ ಖೇಪ ತಾಕೀದ ದೀಯಾ ಹೈ' ಅಂದು ಕೈಯ್ಯಾಗಿನ ಚಬಕಾ ಎತ್ತಿದ್ರು. ಘಟೋದ್ಗ ಜನ ಮಾಯಾ ಬಾಜಾರ ಆದ್ಹಾಂಗಾತು ಎಲ್ಲಾರು ತಮ್ಮ ತಮ್ಮ ಟಾಂಗಾ ಏರಿದರು. 'ಸಾಲಾ ಕಾ ಹಾಸಿ ಆಯಾ ಕಿಸ್ಕು ಮಾಲುಂ ಬಡಾ ಖರಾಬ ಆದ್ಮಿ ಹೈ.' ಎಂದು ಟಾಂಗಾದವರು ಸಾಹೇಬರಿಗೆ ಆಶೀರ್ವಾದ ಕೊಡ್ಲಿಕ್ಕೆ ಹತ್ತಿದ್ರು. ಅಂದಾನಪ್ಪಾ ಸುಮ್ಮಗ ಇರಬೇಕೋ ಬ್ಯಾಡೊ. ಅವಾ ಭಡಾ ಭಡಾ ಹೋಗಿ ಆ ಸಾಹೇಬರಮುಂದ ತನ್ನ ಫಿರ್ಯಾದಿ ಹೇಳ್ಳಿಕ್ಕೆ ಹತ್ತಿದಾ. 'ಸಾಬರ ನಮ್ದು ಫರಾಳ ಡಬ್ಬಿ, ಕೊಡಿಸ್ರಿ, ಕಾಲಾಗಿನವು ಸುದ್ಧಾ ಬಿಡ್ದ ಹೊತ್ತ ಹಾಕ್ಯಾರ್ರಿ ಇವು, ಈ ವಾಲಾಗೋಳು.' ಸಾಹೇಬರಿಗೆ ಕನಡು ಶಂಖಾ !

'ಏ ಸುವರ್ ಕೈಕು ಬಕ್ ಬಕ್ ಕರ್ ಹಾ ಹೈ. ಚುಪ್ ಚಲೇ ಜಾವ್' ಅಂದಕೋತ ಸಾಹೇಬರು ಒಬ್ಬ ಟಾಂಗಾದವನ್ನ ಒದರಿ ನಮ್ಮಿಬ್ಬರನೂ ಅದರಾಗ ಹೇರಿ ನಮ್ಮನ್ನ ಹಾದಿಗೆ ಹಚ್ಚಿದಾ. ಇಷ್ಟೆಲ್ಲಾ ಶಿಷ್ಟಾಚಾರ ಆಗಿ ಹೊಂಡೋದ್ರಾಗ ಒಂಬತ್ತು ಗಂಟೆ ರಾತ್ರಿ ಆತು. ಟಾಂಗಾದಾಗ ನನಗs ಫರಾಳದ ಡಬ್ಬೀನ ಎದರಿಗೆ ಬಂದು ನಿಂತ್ಹಾಂಗ ಆತು. ನಾ ಇಷ್ಟು ದೊಡ್ಡ ಮಗಾ ಆದೆ. ಪರಊರಾಗ ಸಾಮಾನಾ ಕಳಕೊಂಡದ್ದು ಸುಳ್ಳು ಇನ್ನೂ ತನಕಾ. ತಿರುಗಿ ಬರೋಮುಂದs ಹಸ್ತಚಾಪಲ್ಯದಿಂದ ಒಂದೆರಡು ಸಾಮಾನಾ ಹೆಚಿಗೀನ ಬರೋವು. ಆದದ್ದಾಗ್ಹೋತು. ವಕೀಲರ ಮನ್ಯಾಗ ಏನರ ಸಾಧಿಸಿದರ ಭರ್ತಿ ಹಾಕೋಣಾ ಅಂತಾ ಎಣಿಕಿ ಹಾಕೋದ್ರಾಗs ಟಾಂಗಾ ನಿಂತ್ಯು. ನನಗನಿಸ್ತು ಮನೀನs ಬಂತ ಕಾಣಸ್ತದ ಅಂತಾ ಹೊರಗ ಇಣಕಿ ನೋಡ್ತಿನಿ ಪೋಲೀಸಾ 'ಬತ್ತೀ ಲಗಾವ'

ಅಂದ. ಟಾಂಗಾವವಾ ಹಿಂದಿರುಗಿ ನಮುಗ ಹೇಳಿದಾ 'ರಾವಸಾಬ ಆಪಣ ಗಪ್ ಬಸಾ, ಹೆ ಬೆಳಗಾವ ಆಹೆ. ತುಸು ತುಸು ಅಹುದೋ ಅಲ್ಲೋ ಮರಾಠಿ ಅರ್ಥದ ವಾಸನೀ ಬಡೀತು ನನಗೂ. ಅಂದಾನಪ್ಪಗ ಸುಮ್ಗ ಕೂಡ್ಲಿಕ್ಕೆ ತಿಳಿಸಿದೆ. ಟಾಂಗಾದವಾ ದೀಪಾ ಹಚ್ಚಿದ್ದಿಲ್ಲಾ ಅಂತ ಅವನ್ನ ತರಬಿದ್ದ ಕಾಣಸ್ತದ. ಟಾಂಗಾದವಾ ಪೋಲೀಸಗ ಬೇಕಾವಷ್ಟು ಹೇಳಿಕೊಂಡಾ, ಅವಗೇನು ಕರುಣಾ ಹುಟ್ಟಲಿಲ್ಲಾ. ಕುದರೀ ಲಗಾಮು ಹಿಡಕೊಂಡು ಹೊಂಟಾ ಪೋಲೀಸ ಸ್ಟೇಶನಕ. ಇದನ್ನೆಲ್ಲಾ ನೋಡಿ ಅಂದಾನಪ್ಪಗs ಛಳೀನ ಬಂದ್ವು. ವಕೀಲರಿಗೆ ಆಹೇರದ ಸಲುವಾಗಿ ಹೊಲಾ ಒತ್ತಿ ಹಾಕಿ ಐನೂರು ರೂಪಾಯದ ಹಮ್ಮಿಣಿ ಬಿಗಿದಿದ್ದಾ. ಇದೇನ ಬಂತಪಾ ಪೀಕಲಾಟಾ ಅಂತಾ ನಾನೂ ಥಣ್ಣಗs ಆದೆ. ಹೊಟ್ಟೆಗೆ ಕೂಳಿಲ್ಲಾ ಕಣ್ಣಿಗೆ ನಿದ್ದಿಲ್ಲಾ. ಹಾಂಗೂ ಹೀಂಗೂ ಆ ರಾತ್ರಿ ಅಲ್ಲೇ ಕಳಿದು, ಮರುದಿನ ಬೆಳಗ್ಗೆ ಅದs ಟಾಂಗಾದಾಗs ವಕೀಲರ ಮನಿ ಕಂಡ್ವಿ. ವಕೀಲರಿಗೆ ನಡದ ಸಂಗತಿ ಎಲ್ಲಾ ಹೇಳಿದೆ. 'ಹಳ್ಳಿಯ ಮಂದಿ ನೀವು' ಅಂತಾ ಬಿದ್ದು ಬಿದ್ದು ನಕ್ಕರು. ಒಂದಿನಾ ಮುಂಜಾನೆ ನಾನೂ ಅಂದಾನಪ್ಪಾ ಚಹಾದಂಗಡಿಗೆ ಹೋದ್ವಿ. ಅಂದಾನಪ್ಪಾ ಹೊರಗ ಕೂತಾ. ನಾ ಒಳಗ ಹೋಗಿ ಅವಗೊಂದು ಕಪ್ಪುಚಹಾ ಹೇಳಿ, ನಾನೊಂದು ಕಪ್ಪು ಚಹಾ ತೋಂಡು ಕುಡೀತs ಕುಳಿತಿದ್ದೆ. ಅಷ್ಟರಾಗ ಅಂದಾನಪ್ಪಾ ಒದರಿಕೊಂಡಾ ನನ್ನ. ಮತ್ತೇನಾತೋ ಅಂತಾ ಸತಗೋತ ಚಹಾಕುಡಿಯೋದು ಬಿಟಗೊಟ್ಟs ಹೊರಗ ಬಂದೆ. ಎದುರಿಗೆ ಬೊಟ್ಟು ಮಾಡಿ ತೋರಿಸಿದಾ ಏನೋ ಅಂತಾ ನೋಡಿದೆ. ಒಬ್ಬ ಟಾಂಗಾದವಾ ಪೋಲೀಸರ ಕಣ್ಣಾಗ ಮಣ್ಣು ಹಾಕೋ ಯುಕ್ತಿ ನಡಿಸಿದ್ದ.

ಟಾಂಗಾದಾಗ ೪—೫ ಮಂದಿನ್ನ ತುಂಬಿ ಸುತ್ತ ಪಡದೆ ಕಟ್ಟಿ ಇನ್ನಮ್ಯಾಲೆ ಕುದುರಿ ಬಿಡಾಂವಾ ಅದs ವ್ಯಾಳ್ಯಕ್ಕನs ಪೋಲೀಸೊಬ್ಬಾ ಬಂದು ಕೇಳಿದಾ 'ಪ್ಯಾಸಿಂಜರ ಎಷ್ಟ ಅವ' ಅಂತ. 'ಸಾಬ, ದೋ ಅವರತ ಹೈ. ಘೋಷೆಕಾ' ಮಾಡತಾನೇನು ಪೋಲೀಸಾ ಥಣ್ಣಗs ಆದಾ. ಇದನ್ನ ನೋಡಿಕೋತ ನಿಂತಿದ್ದ ಅಂದಾನಪ್ಪನ ಸ್ಮೃತೀನs ತಪ್ಪಿ ಹೋತು. ಬಸಿಯೊಳಗಿನ ಚಹಾ ಧೋತರ ಮ್ಯಾಲಿ ಬಿತ್ತು. ಕೈಯೊಳಗಿನ ಕಪ್ಪು ಅಡ್ಡಾಗಿ ಸಿಂಗಲ್‌ಚಹಾ ಕಿಸೇದಾಗ ಇಳಿತು 'ಶಹರದೂರೊಳಗಿನವರ ಅದರಾಗs ಅಲ್ಲಿ ಪೋಲೀಸರ ಕಣ್ಣಾಗ ಮಣ್ಣು ಹಾಕ್ತಾರ ಈ ಟಾಂಗಾವಾಲಾದವರು. ಅಂದಮ್ಯಾಲೆ ನಮ್ಮಂಥಾ ಹಳ್ಳಿ ಜನರನ ಟೊಪ್ಪಿಗಿ ಹಾಕದ ಬಿಟ್ಟಾರ್ರೆ?' ನಾ ಅಂದೆ. ತುಸು ಹೊತ್ತಿನಮ್ಯಾಲೆ ಇಬ್ಬರೂ ಮನಿಗೆ ಬಂದ್ವಿ. ನಾವು ಹೋದ ಕೆಲಸಾನೂ ಆಗಲಿಲ್ಲಾ. ಮತ್ತs ಮುದ್ದತ ಬೇಡಿಕೊಂಡು ಉಡೋ ಲಕ್ಷ್ಮಣಾ ಅಂತಾ ಊರಿಗೆ ಬಂದ್ವಿ. ಬರೇ ಟಾಂಗಾದವರ ಉಸಾಬರಿ ಮಾಡ್ಲಿಕ್ಕೆ ಹೋದ್ಹಾಂಗಾತು ಬೆಳಗಾವಿಗೆ. ಅಲ್ಲಿ ಕರ್ಮ ಕಥಿ ಮಾತ್ರ ಕಡೆತನಕಾ ನೆನಪು ಉಳಿಯೋ ಹಾಂಗ ಆತು, ಇಷ್ಟ ಖರೆ.

# " ಕನ್ನಡದ ಕಗ್ಗೊಲೆ "



ವೃತ್ತಪತ್ರಿಕೆಗಳು.

ಸಾಹಿತ್ಯದಲ್ಲಿ ಐಕ್ಯತೆಯನ್ನು ಸಾಧಿಸುವದರಿಂದೆಷ್ಟು ಪ್ರಯೋಜನವಿದೆಯೋ ಅದರ ಸಾವಿರ ಪಾಲಿನಷ್ಟು ಪ್ರಯೋಜನವು ವೃತ್ತಪತ್ರಿಕಾಕರ್ತರ ಸಹಕಾರದಲ್ಲಿ ಅಡಗಿದೆ. ಪತ್ರಿಕೆಗಳು ನಾಡಿನ ಜೀವ. ಅವು ಸ್ಥಾಪಿಸಲಾರದ ಕೆಲಸವಿಲ್ಲ. ಸಮಾಜಲೋಕದಲ್ಲಿ, ಸಾಹಿತ್ಯ ಪ್ರಪಂಚದಲ್ಲಿ; ರಾಜಕಾರಣ ಜೀವನದಲ್ಲಿ ಅಸಾಧ್ಯ ವಿಪ್ಲವವೇಳುವ ಶಕ್ತಿ, ಯುಕ್ತಿಗಳು ಪತ್ರಿಕೆಗಳಿಗಿವೆ. ಜನತೆಯ ಅಜ್ಞಾನಾಂಧಕಾರವನ್ನು ತೊಲಗಿಸಿ, ಭವ್ಯ ಜೀವನದ ನವಸೌರಭದ ಸೊಗಸನ್ನು ತೋರಿಸಿಕೊಡಬಲ್ಲ ಮಹಚ್ಛಕ್ತಿಯಿದೆ. ಇಂದಿನ ಪಾಶ್ಚಾತ್ಯ ಪ್ರಪಂಚದ ಜನಾಂಗಗಳು ನಾಗರಿಕತೆಯಲ್ಲಿ, ಉಚ್ಚಸ್ಥಾನ ಪಡೆಯುವಂತಾದುದಾದರೂ ಪತ್ರಿಕೆಗಳ ವಿಪುಲಪ್ರಯತ್ನದಿಂದ ಭಾಷೋಜ್ಜೀವನಕ್ಕೆ, ಸಮಾಜೋಜ್ಜೀವನಕ್ಕೆ, ಎಲ್ಲ ಉಜ್ಜೀವನಕ್ಕೂ ವೃತ್ತಪತ್ರಿಕೆಗಳೇ ಉತ್ತಮ ಸಾಧನ. ಕರ್ನಾಟಕದಲ್ಲಿ ಎಷ್ಟಿಲ್ಲವೆಂದರೂ ಸುಮಾರು ೧೦ ದಿನಪತ್ರಿಕೆಗಳಿವೆ. ೩೦-೪೦ ವಾರಪತ್ರಿಕೆಗಳಿವೆ. ಅಲ್ಲದೆ ಪಕ್ಷ, ಮಾಸಿಕ, ತ್ರೈಮಾಸಿಕ ಪತ್ರಿಕೆಗಳು ಬೇರೆ ಬೇಕಾದಷ್ಟಿವೆ. ಆದರೇನು ? ಅವು ತಮ್ಮ ಕರ್ತವ್ಯವನ್ನು ಯಶಸ್ವಿಯಾಗುವಂತೆ ಸಾಧಿಸಲು ಯತ್ನಿಸುತ್ತಿವೆಯೇ ? ವೃತ್ತಪತ್ರಿಕೆಗಳನ್ನು ಎಷ್ಟಿಲ್ಲವೆಂದರೂ ಲಕ್ಷಾಂತರಮಂದಿ ಕನ್ನಡಿಗರು ದಿನವೂ ಓದುತ್ತಿದ್ದಾರೆ. ಸಾಹಿತ್ಯಗ್ರಂಥಗಳನ್ನು ಪಠಿಸುವವರಿಗಿಂತ ವೃತ್ತಪತ್ರಿಕೆಗಳನ್ನು ಪಠಿಸುವವರ ಸಂಖ್ಯೆಯೇ ಹೆಚ್ಚು; ಅಲ್ಲದೆ ಪರಿಣಾಮಕಾರಿ. ಅದರ ಭಾಷೆ, ನೀತಿ ಮತ್ತು ಔದಾರ್ಯಗಳು ವಿಶಾಲ ಕರ್ನಾಟಕದ ತತ್ವವನ್ನು ಬಲಪಡಿಸಬೇಕು. ನಮ್ಮ ಕನ್ನಡ ಪತ್ರಿಕೆಗಳಿಲ್ಲ ಜನ್ಮವೆತ್ತುವದು, ವಿಶಾಲಕರ್ನಾಟಕದ ಹಿತೈಕಪರದೃಷ್ಟಿಯಿಂದಲೇ ಕಾರ್ಯಭಾರ ನಡೆಸುತ್ತಿರುವದೂ, ಏಕೀಕರಣವನ್ನುಂಟು ಮಾಡಲೋಸುಗವೇ. ಆದರೆ ಉಪಯೋಗಿಸುವ ಭಾಷಾಸಾಂಪ್ರದಾಯದಲ್ಲಿ ಸಂಕುಚಿತ ದೃಷ್ಟಿಗೆ ಅಗ್ರತಾಂಬೂಲಕೊಡುತ್ತಿರುವದು ಶೋಚನೀಯ ಸಂಗತಿ ! ಉತ್ತರ ಕರ್ನಾಟಕ ಪತ್ರಿಕೆಗಳನ್ನು ಓದಿ ಅರ್ಥಮಾಡಿಕೊಳ್ಳುವವರು ಮೈಸೂರಿನಲ್ಲಿ ಎಷ್ಟು ಮಂದಿ ಇದ್ದಾರೆ ? ಮೈಸೂರಿನ 'ಕನ್ನಡ'ವನ್ನು ಅರ್ಥಮಾಡಿಕೊಳ್ಳುವವರು ಉತ್ತರ ಕರ್ನಾಟಕದಲ್ಲಿ ಎಷ್ಟು ಮಂದಿ ಇದ್ದಾರೆ ? ಕೆಲವರನ್ನು ಬಿಟ್ಟರೆ. ಉಳಿದವರಿಗೆ ಒಂದು ಪಂಕ್ತಿಯೂ ಅರ್ಥವಾಗುವದಿಲ್ಲ. ಇದರಿಂದ ವಿಶಾಲಕರ್ನಾಟಕ ತತ್ವಕ್ಕೆ ಕುಂದಲ್ಲವೆ ? ಪರಭಾಷಾ ಪತ್ರಿಕೆಗಳನ್ನು ನೋಡಿ. ಒಬ್ಬರೊಂದು, ಮತ್ತೊಬ್ಬರೊಂದು ಮಾರ್ಗ ಹಿಡಿದು ನಡೆಯುತ್ತಿವೆಯೆ ? ನಮ್ಮವರೇಕೆ ವೃತ್ತಪತ್ರಿಕೆಗಳ ಭಾಷೆಯಲ್ಲಿ ಐಕ್ಯತೆಯನ್ನು ಸಾಧಿಸದೆ ಹಿಂದುಳಿದಿದ್ದಾರೆ ?

ವಿಶ್ವಕರ್ನಾಟಕ ಪತ್ರಿಕಿಯಿಂದ ಎತ್ತಿ ಬರೆಯಲಾಗಿದೆ.

# ಎದೆಗಿಚ್ಚು !

ಲೇಖಕ :— **ನಾಗೇಶ.**

( ೬ ನೇ ಸಂಚಿಕೆಯಿಂದ ಮುಂದರಿದದ್ದು. )

**೩.**

ರಾವಬಹಾದ್ದೂರ ಸಂಗಪ್ಪನವರು ಶಿರಪುರ ಗ್ರಾಮದವರೇ. ಅಲ್ಲಿ ಅವರ ಮನೆಯೂ ಹೊಲಗಳೂ ಇದ್ದವು. ಅವರು ಜನ್ಮ ಗ್ರಾಮವನ್ನು ಬಿಟ್ಟು ನಾಲ್ವತ್ತೈದು ವರ್ಷಗಳಾಗಿದ್ದವು. ಧಾರವಾಡದಲ್ಲಿ ಡೆಪ್ಯುಟಿಕಲೆಕ್ಟರರ ಸ್ಥಳವು ದೊರೆತ ಮೇಲೆ ಅವರು ಮಾಳಮಡ್ಡಿಯಲ್ಲಿ ಒಂದು ಸುಂದರವಾದ ಮನೆಯನ್ನು ಕೊಂಡು, ಅಲ್ಲಿಯೇ ಇರತೊಡಗಿದರು. ಅವರು ಸೇವಾವೃತ್ತಿಯಿಂದ ನಿವೃತ್ತರಾಗಿ ಐದು ವರ್ಷಗಳಾಗಿದ್ದವು. ತಮ್ಮ ಭೂಮಿಯ ಸಾಗುವಳಿಗಾಗಿ, ವರ್ಷಕ್ಕೊಮ್ಮೆ ಶಿರಪುರಕ್ಕೆ ಬರುತ್ತಿದ್ದರು. ಶಿವಮೂರ್ತಿಶೆಟ್ಟಿಯಾದರೂ ಬೇಸಿಗೆಯ ಬಿಡುವಿನಲ್ಲಿ ತನ್ನ ಗ್ರಾಮವೆಂಬ ಅಭಿಮಾನದಿಂದ ನಾಲ್ಕೆಂಟು ದಿನ ಅಲ್ಲಿದ್ದು ಹೋಗುತ್ತಿದ್ದನು. ಹೀಗಾಗಿ ಶಿರಪುರದವರಿಗೆ ಸಂಗಪ್ಪನವರೂ, ಶಿವಮೂರ್ತಿಶೆಟ್ಟಿಯೂ, ಚಿರಪರಿಚಿತರಾಗಿದ್ದರು; ಮಾನನೀಯರೂ ಆಗಿದ್ದರು. ಶಿವಗಂಗೆಯು ಮಾತ್ರ ಶಿವಮೂರ್ತಿಶೆಟ್ಟಿಯನ್ನು ಶ್ರೀ ಫಕೀರೇಶನ ರಥೋತ್ಸವದ ಸಮಯದಲ್ಲಿಯೂ ಶ್ರೀ ಬಸವೇಶ್ವರರ ಜಯಂತ್ಯುತ್ಸವದಲ್ಲಿಯೂ ಕೆಲವು ಬಾರಿ ನೋಡಿದ್ದಳು. ಅವನ ನಡೆ–ನುಡಿಗಳನ್ನೂ ಅರಿತಿದ್ದಳು. ವಿದ್ಯಾವಂತನೂ ಶ್ರೀಮಂತನೂ ಆದ ಶಿವಮೂರ್ತಿಯೊಡನೆ ತನ್ನ ವಿವಾಹವಾಗುವದೆಂದು ಶಿವಗಂಗೆಯು ಮೊಟ್ಟಮೊದಲು ಸಂಭ್ರಮಗೊಂಡಿದ್ದಳು. ಆದರೆ ಅವನ ನಡತೆ–ನಡಾವಳಿಗಳ ಚಿತ್ರವು ಕಣ್ಣೆದುರಿಗೆ ಬಂದಕೂಡಲೇ ಅವಳ ಮನಸ್ಸು ಹಿಂಜರಿಯತೊಡಗಿತು. ಅವಳ ಮುಖದಲ್ಲಿ ವಿಷಾದದ ಚಿನ್ಹವು ಎದ್ದುಕಾಣತೊಡಗಿತು. ತನ್ನ ಮನೋದಯವನ್ನು ತಾಯಿಗೆ ತಿಳಿಸಬೇಕೆಂದು ಸಂಕಲ್ಪ ಮಾಡಿಕೊಂಡು, ಅವಳು ಮೌನವ್ರತವನ್ನು ಧರಿಸಿದ್ದಳು. ಸೋಮಶೇಖರಶೆಟ್ಟಿಯು ಹೊರಗೆ ಹೋದೊಡನೆಯೇ ಅವಳು ತಾಯಿಯನ್ನು ಕುರಿತು— "ಅಮ್ಮಾ, ನೀವು ಆರಿಸಿದ ವರನು ಶ್ರೀಮಂತನೂ, ವಿದ್ವಾಂಸನೂ, ದೊಡ್ಡ ಅಧಿಕಾರವನ್ನು ಹೊಂದಲು ತಕ್ಕವನೂ ಆಗಿರುವನೇನೋ ನಿಜವು. ನಾನು ಶಿವಮೂರ್ತಿಶೆಟ್ಟಿಯ ಆಚಾರ-ವಿಚಾರಗಳನ್ನು ಪೂರಾ ಅರಿತಿರುವೆನು. ಎಷ್ಟು ಸಂಪತ್ತಿದ್ದರೇನು ? ಎಷ್ಟು ವಿದ್ಯೆ ದೊರಕಿಸಿದ್ದರೇನು ? ಎಂತಹ ಅಧಿಕಾರ ಹೊಂದಿದ್ದರೇನು ?

ಸ್ವಧರ್ಮದ ಆಚಾರ-ವಿಚಾರಗಳಂತೆ ನಡೆಯದಿದ್ದ ಮನೆತನದ ಶರೀರ ಸಂಬಂಧ ಮಾಡುವದು ನಿಜವಾಗಿ ಧರ್ಮತತ್ವಗಳಂತೆ ನಡೆಯುವ ಜನರಿಗೆ ಹಿತಾವಹವೆನಿಸುವದೆ? ಶಿವಮೂರ್ತಿಶೆಟ್ಟಿಗೆ ಗುರು-ಲಿಂಗ-ಜಂಗಮರಲ್ಲಿ ಭಕ್ತಿಯಿಲ್ಲ. ಬಸವಾದಿ ಪ್ರಮಥರಮೇಲೆ ನಂಬಿಗೆಯಿಲ್ಲ. ಅವನ ಸುಧಾರಣೆಯ ಕ್ಷೇತ್ರವು ದಿನದಿನಕ್ಕೆ ವಿಸ್ತರಿಸತೊಡಗಿದೆ. ಮೈಮೇಲೆ ಗುರುಕೊಟ್ಟ ಲಿಂಗವಾದರೂ ಇರುವದೋ ಇಲ್ಲವೋ ಎಂಬದು ಸಹ ಸಂದೇಹಾಸ್ಪದವಾಗಿರುತ್ತದೆ. ಆಂಗ್ಲಭೂಮಿಯಲ್ಲಿ ಅವತರಿಸಿದವನಂತೆ ಅವನ ವರ್ತನವಿದ್ದಮೇಲೆ ಶಿವಾಚಾರದಂತೆ ನಡೆಯುವ ನೀವು ಅಂತಹನಿಗೆ ನನ್ನನ್ನು ಧಾರೆಯೆರೆದುಕೊಡುವಿರಾ? ಪಾಶ್ಚಾತ್ಯ ಸಂಸ್ಕೃತಿಯಿಂದ ಅಂಧನಾದ ಶಿವಮೂರ್ತಿಶೆಟ್ಟಿಗೆ ನನ್ನ ಆಚಾರವಿಚಾರಗಳು ಸರಿದೋರುವವೆ? ಆಂಗ್ಲ ಪುರುಷರಂತೆ ಉಡಿಗೆ-ತೊಡಿಗೆ ಧರಿಸುತ್ತಿದ್ದ ಅವನು ವಿವಾಹನಂತರದಲ್ಲಿ ನನಗೆ 'ಮಡಮ್' ದೀಕ್ಷೆಯನ್ನು ಕೊಡಲು ಹವಣಿಸಲಿಕ್ಕಿಲ್ಲವೆ? ಲಿಂಗ, ವಿಭೂತಿ, ಬಿಲ್ವ ಮೊದಲಾದ ಶಿವಾಚಾರ ಪದ್ಧತಿಗಳಿಗೆ ನಾನು ಹೊರತಾಗಬೇಕಾಗುವದಲ್ಲವೆ? ಗುರು-ಲಿಂಗ-ಜಂಗಮ ಸೇವೆಗೆ ಹೊರತಾದಮೇಲೆ ಅವರೆಂತಹ ವೀರಶೈವರು? ನಾನು ಧರ್ಮಬಾಹ್ಯಳಾಗಿ ಕೇವಲ ಐಶ್ವರ್ಯದಿಂದ ಪ್ರಾಪ್ತವಾಗುವ ಸುಖೋಪಭೋಗಗಳಲ್ಲಿ ಮುಳುಗಿ ಆಯುಷ್ಯವನ್ನು ವ್ಯರ್ಥಮಾಡಲಾ? ಅಮ್ಮಾ, ನೀವು ತಿಳಿದು ನೋಡಿ, ತಂದೆಯವರಿಗೆ ತಿಳಿಯಹೇಳಿರಿ. ಮಗಳು ಅವಿಧೇಯಳೆಂದು ಕ್ಷೋಭೆಗೊಳ್ಳಬೇಡಿರಿ. ತಂದೆಯವರೆದುರಿಗೆ ಹೃದ್ಗತವನ್ನು ಬಿಚ್ಚಿಡಲಿಕ್ಕೆ ನನಗೆ ಧೈರ್ಯಸಾಲದು. ಅಂತೆಯೇ ನಿಮ್ಮ ಮುಂದೆ ಎಲ್ಲಸಂಗತಿಗಳನ್ನು ಹೇಳಿರುತ್ತೇನೆ. ಸಂಗಪ್ಪನವರು ನನ್ನನ್ನು ಸೊಸೆಯನ್ನಾಗಿಮಾಡಿಕೊಳ್ಳಬೇಕೆಂದು ಇಚ್ಛಿಸಿರಬಹುದು ಆದರೆ ಶಿವಮೂರ್ತಿಶೆಟ್ಟಿಯು ಅವರ ಮಾತು ನಡೆಯಿಸುವನೆಂಬದರ ವಿಶ್ವಾಸವಿಲ್ಲ. ನಾನು ಹಳೆಯ ಸ್ಥಿತಿರೀತಿಪದ್ಧತಿಯುವಳೂ, ಹಳ್ಳಿಯ ಬಾಲೆಯೂ ಎಂಬದು ಪದವೀಧರನಾದ ಅವನಿಗೆ ತಿಳಿದಿರುವದು. ಒಂದು ವೇಳೆ ತಂದೆಯವರ ಆಗ್ರಹಕ್ಕಾಗಿ ಅವರ ಮಾತನ್ನು ನಡೆಯಿಸಿದರೂ ಮುಂದೆ ಸಂಸಾರವು ಸುಖದಾಯಕವಾಗಲಾರದೆಂಬ ಭಯವು ನನ್ನನ್ನು ಬಾಧಿಸುತ್ತಿದೆ. ಅಂತೆಯೆ ನಿರ್ದಾಕ್ಷಿಣ್ಯದಿಂದ ಎಲ್ಲ ಸಂಗತಿಗಳನ್ನು ನಿಮಗೆ ತಿಳಿಸಿರುವೆನು" ಶಿವಗಂಗೆಯ ಮಾತುಗಳು, ಗೌರಮ್ಮನಿಗೆ ಯಥಾಸ್ಥಿತವಾಗಿ ತೋರಿದವು. ಅವಳು ಸುಧಾರಕರೆಂದು ಜಂಬಬಡೆಯುವ ಎಷ್ಟೋ ಸ್ವಚ್ಛಂದ ವೃತ್ತಿಯ ತರುಣರ ತಾಂಡವ ನೃತ್ಯವನ್ನು ಕಂಡಿದ್ದಳು. ಉಡಿಗೆ ತೊಡಿಗೆ, ಆಹಾರ ವಿಹಾರ ಮೊದಲಾದವುಗಳ ವಿಷಯವಾಗಿ ಮಾತ್ರ ಪಾಶ್ಚಾತ್ಯರ ಅನುಕರಣ ಮಾಡುತ್ತ ಉದ್ಯೋಗ, ಸಾಹಸ, ಬುದ್ಧಿ, ಕೌಶಲ್ಯಗಳಲ್ಲಿ ಆಸಕ್ತರಾಗದ ತಿರುಗಾಡುವ ತರುಣರನೇಕರು ಅವಳ ದೃಷ್ಟಿಪಥದಲ್ಲಿ ಹಾಯ್ದು ಹೋಗಿದ್ದರು. ಶಿವಮೂರ್ತಿಯಾದರೂ ವಿಲಾಯತಿಗೆ ಹೋಗಿಬಂದಂತಹ ವರನಿಂದ ಶಿವಗಂಗೆಗೆ ಸುಖವು ದೊರೆಯಲಾರದೆಂದು ಅವಳ ಬುದ್ಧಿಗೆ ತೋಚಿತ್ತು. ಈ ವಿಷಯವಾಗಿ

ಪತಿಯ ಮನಸ್ಸು ತಿರುಗಿಸಬೇಕೆಂದು ಅವಳು ಯೋಚಿಸಿಕೊಂಡು, ಮಗಳನ್ನು ಕುರಿತು— “ ಶಿವಗಂಗಾ, ನಿನ್ನ ಮಾತುಗಳು ಯಥಾರ್ಥವಾದವುಗಳು. ಈ ವಿಷಯದಲ್ಲಿ ನಾನು ಅವರಿಗೆ ತಿಳಿಸಿ ಹೇಳುವೆನು. ಇನ್ನು ನಿಶ್ಚಿಂತಳಾಗಿರು. ಸರ್ವಬಗೆಯಿಂದಲೂ ಸರಿಸಮಾನಸ್ಕಂಧರಾದವರೊಡನೆ ಶರೀರಸಂಬಂಧ ಮಾಡುವದೊಳಿತು. ಶಿವಮೂರ್ತಿಯ ಸ್ವಭಾವವು ನಿನಗೂ, ನಿನ್ನ ಸ್ವಭಾವವು ಶಿವಮೂರ್ತಿಗೂ ಸರಿಹೋಲವಂತಾವರೆ ಸಂಸಾರವು ಸವಳಾಗಿ ಹೋದೀತು ನೆಲ್ಲೀಕಾಯಿತಿಂದು ನೀರು ಕುಡಿದಂತಾಗುತ್ತಿದ್ದರೆ ಅದಕ್ಕೆ ನಿಜವಾದ ಸಂಸಾರವೆನ್ನಬೇಕು. ತಂಗೀ, ಶಿವಗಂಗಾ, ನಾನು ಎಲ್ಲ ವಿಷಯುಗಳನ್ನು ತಿಳಿಸಿ ಅವರನ್ನು ದಾರಿಗೆ ತರುವೆನು. ನೀನು ಯೋಚನೆಗೊಳಗಾಗಬೇಡ. ” ತನ್ನ ತಾಯಿಯು ಈ ಮಾತುಗಳನ್ನು ಕೇಳಿ ಶಿವಗಂಗೆಯು ನಿಶ್ಚಿಂತಳಾದಳು.

## ೪.

ಸೋಮಶೇಖರ ಶೆಟ್ಟಿಯು ಸಂಗಪ್ಪನವರೊಡನೆ ಶರೀರಸಂಬಂಧ ಮಾಡಲಿಕ್ಕೆ ಆತುರನಾಗಿದ್ದನು. ಅವನು ಮನೆಯಿಂದ ಹೊರಟವನು, ಸಂಗಪ್ಪನವರ ಮನೆಗೆ ಹೋಗಿ ನಾಲ್ಕು ಜನ ಪ್ರಮುಖರ ಸಮಕ್ಷ ಮದುವೆಯನ್ನು ನಿಶ್ಚಯಿಸಿಬಿಟ್ಟನು. ಕೊಡುವ ಕೊಳ್ಳುವ ವ್ಯವಹಾರದ ಮಾತುಕಥೆಗಳೆಲ್ಲವೂ ಮುಗಿದವು. ಅನಂತರದಲ್ಲಿ ಅವನು ಮನೆಗೆ ಬಂದು ಗೌರಮ್ಮನಿಗೆ ಎಲ್ಲ ವಿಷಯುಗಳನ್ನು ತಿಳಿಸಿದನು. ಈಗ ಮಾತ್ರ ಪತಿಯ ಮಾತುಗಳಿಂದ ಅವಳಿಗೆ ಆನಂದವಾಗಲಿಲ್ಲ. ಅವಳು ಕ್ಲೇಶಗೊಂಡು ಸುಮ್ಮನೆ ಕುಳಿತಳು. ಶೆಟ್ಟಿಯು ಪತ್ನಿಯ ಮ್ಲಾನವಾದ ಮುಖಚರ್ಯವನ್ನು ನೋಡಿ— “ ಸಂತೋಷಜನಕ ವಾರ್ತೆಯನ್ನು ಕೇಳಿ ನಿನ್ನ ಮುಖವು ಬಾಡಿತೇಕೆ ?

“ ನೀವು ಒಮ್ಮೆಲೆ ಮಾತುಕೊಟ್ಟು ಬಂದದ್ದು ಒಳಿತಾಗಲಿಲ್ಲ.”

“ ಅದೇಕೆ ? ” ಶೆಟ್ಟಿಯು ಗೌರಮ್ಮನಿಗೆ ಪ್ರಶ್ನ ಮಾಡಿದನು.

“ ಶಿವಮೂರ್ತಿಯು ನಮ್ಮ ಶಿವಗಂಗೆಗೆ ಅನೂರೂಪನಾದ ವರನಲ್ಲ.”

“ ಅನುರೂಪನಾಗಿರದಿದ್ದರೂ ಅವಳಿಗಿಂತ ಶ್ರೇಷ್ಠನಿರುವನು.” ಎಂಬದಾಗಿ ಶೆಟ್ಟಿಯು ವಿನೋದದಿಂದ ಮಾತನಾಡಿದನು.

ಅದಕ್ಕೆ ಗೌರಮ್ಮನು “ ಶ್ರೇಷ್ಠನಲ್ಲ. ಕನಿಷ್ಠನೇ ಸರಿ ! ” ಎಂದು ಹೀಯಾಳಿಸಿದಳು.

“ ಹೀಗೇಕೆ ಹುಚ್ಚಿಯಂತೆ ಮಾಡುವೆ ? ”

“ ಕೇವಲ ಐಶ್ವರ್ಯ-ಅಧಿಕಾರಗಳಿದ್ದ ಮಾತ್ರದಿಂದ ಮನುಷ್ಯನಿಗೆ ವರಿಷ್ಠ

ತೆಯು ಪ್ರಾಪ್ತವಾಗುವದಿಲ್ಲ" "ಸ್ವಧರ್ಮದಲ್ಲಿ ನಿರತರಾದವರು ಬಡವರಾಗಿದ್ದರೂ ಅವರು ವರಿಷ್ಠರೆಂದು ತಿಳಿಯಲ್ಪಡುವರು." ಎಂದು ಗೌರಮ್ಮನು ಆಸ್ಥೆಯಿಂದ ಮಾತಾಡಿದಳು.

ಕೂಡಲೇ ಶೆಟ್ಟಿಯು "ಇದು ನನ್ನ ಹಳೇ ವಿಚಾರ ಈ ಮಾತು ಅಂತಿರಲಿ ಶಿವಮೂರ್ತಿಯು ಸುವಿಚಾರಿಯೂ ಸದ್ಗುಣಿಯೂ ಇರುವವನನ್ನು ಮಾತ್ರ ನಾನು ಒಲ್ಲೆನು"

"ಧರ್ಮಾಚರಣೆಯು ತಿಲಾಂಶವಾದರೂ ಇಲ್ಲದವನಿಗೆ ಸದ್ಗುಣಿಯೆನ್ನಬಹುದೇ? ಪರದೇಶದವರ ಉಡುಗೆ ತೊಡಿಗೆ ಆಟ-ನೋಟ, ಆಹಾರ ವಿಹಾರಗಳನ್ನು ಅನುಕರಿಸುತ್ತ ಸ್ವಧರ್ಮಾಚರಣೆಯನ್ನೂ ಸ್ವಧರ್ಮದ ತತ್ವಗಳನ್ನೂ ಪೂರಾ ಮರೆತ ಜನರ ಆಪ್ತತ್ವ ಬೆಳೆಸುವದು ಹಳ್ಳಿಯವರಾದ ನಮಗೆ ಯೋಗ್ಯವಾಗಲಾರದು. ಇದೇ ಶಿವಗಂಗೆಯ ಅಭಿಪ್ರಾಯವು."

"ಅವಳು ಮೂಢಮತಿಯು" ಎಂದು ಸೋಮಶೇಖರಶೆಟ್ಟಿಯು ನುಡಿದು. ಮಗಳನ್ನು ಕುರಿತು— "ಶಿವಗಂಗಾ!" ಶಿವಗಂಗೆಯು ಒಳಗಿಂದ ತಂದೆಯ ಬಳಿಗೆ ಬಂದು— "ಯಾಕೆ ಅಪ್ಪಾ?" "ಇದೇನವ್ವಾ! ಇದ್ದ ಒಬ್ಬ ಮಗಳನ್ನು ಚಲೋ ಮನೆಗೆ ಕೊಡಬೇಕೆಂದು ಯೋಚಿಸಿದರೆ ಇದೇನು ಅಡ್ಡಿ ತಂದಿರುವೆ?"

"ಅವರ ಮನೆಯು ಹೊಡೆದ ಕಲ್ಲು ಕಟ್ಟಿನದು ಇರುವದೇನಪ್ಪಾ?" ಶಿವಗಂಗೆಯು ಗಟ್ಟಿಮನಸ್ಸು ಮಾಡಿ ಮಾತಾಡಿದಳು.

"ಹುಚ್ಚಿ! ಹೀಗೆ ಮಾತಾಡಿದರೆ ಹೇಗೆ? ಈಗಿನ ಸುಶಿಕ್ಷಿತ ತರುಣರು ಅದರಲ್ಲಿಯೂ ಪಟ್ಟಣವಾಸಿಗಳು ಎಲ್ಲರೂ ಹಳ್ಳಿಯೊಳಗಿನವರಂತೆ ಲಿಂಗಾರ್ಚನೆ ವಿಭೂತಿ ರುದ್ರಾಕ್ಷಿಗಳೆನ್ನುತ್ತಾ ಕುಳಿತುಕೊಳ್ಳುವದಿಲ್ಲ. ಈಗಿನ ಕಾಲದಲ್ಲಿ ಯಾವಧರ್ಮಗಳಲ್ಲಿ ಎಷ್ಟು ಎಷ್ಟು ಜನರು ಸ್ವಧರ್ಮದ ಆಚಾರವಿಚಾರಗಳಂತೆ ನಡೆಯುತ್ತಿರುವರೆಂದು ತಿಳಿದಿರುವೆ? ಆಚರಣಶೀಲರಾದ ಜನರು ನೂರಕ್ಕೆ ಒಬ್ಬರಂತೆ ದೊರೆಯುವದು ಸಹ ಕಠಿಣವಾಗಿದೆ. ಇಂತಹ ಕಾಲದಲ್ಲಿ ನೀನು ಧರ್ಮದ ಹುಚ್ಚಿನಿಂದ ಮನಬಂದಂತೆ ನಡೆದರೆ ಪೇಚಾಟವಾದೀತು. ನಾನು ನಿನಗೆ ಅಹಿತವಾಗಬೇಕೆಂದು ಬಯಸುತ್ತಿರುವೆನೆಂದು ತಿಳಿದಿರುವೆಯಾ? ನಿನ್ನ ಪೂರ್ವ ಸುಕೃತದಿಂದ ನಿನಗೆ ಯೋಗ್ಯನಾದ ವರನು ದೊರಕಿರುವನು. ಈ ವೇಳೆಯಲ್ಲಿ ನೀನು ಮೂರ್ಖತನ ಮಾಡಬೇಡ. ಆಚರಣಶೀಲ ಪತ್ನಿಯ ಸಹವಾಸದಿಂದ ಸ್ವಧರ್ಮ ಸಂಸ್ಕೃತಿಗೆ ಹೊರತಾದ ಪತಿಯು ನಡವಳಿಕೆಯು ಸುಧಾರಿಸುವದರಲ್ಲಿ ಸಂದೇಹವಿಲ್ಲ. ನೀನು ಅನನುಭವಿಕಳು. ಭಾವೀ ಆಯುಷ್ಯವು ಹೇಗೆ ಸುಖಪ್ರದವಾದೀತೆಂಬದರ ಗುಟ್ಟನ್ನು ನೀನರಿಯೆ. ನೀನು ಯಾವ ವಿಧದ ಯೋಚನೆಗೂ ಚಿಂತೆಗೂ ಒಳಗಾಗದೆ ಶಿವಮೂರ್ತಿಯನ್ನು ಆನಂದದಿಂದ ವರಿಸಲೊಪ್ಪತಕ್ಕದು. ನಾನು ಸಂಗಪ್ಪನವರಿಗೆ ವಚನ

ಕೊಟ್ಟು, ಮದುವೆಯ ಮುಹೂರ್ತವನ್ನು ನಿಶ್ಚಯಿಸಿಕೊಂಡು ಬಂದಿರುವೆನು. ನೀನು ಇಲ್ಲದ ಹಟ ಹಿಡಿದು ಸುಯೋಗವನ್ನು ಕಳೆದುಕೊಳ್ಳಬೇಡ. ನನ್ನನ್ನು ನಾಲ್ಕು ಜನರಲ್ಲಿ ಮುಖವೆತ್ತಿ ಅಡ್ಡಾಡದಂತೆ ಮಾಡಬೇಡ."

"ಅಪ್ಪಾ, ಹೆತ್ತವರಿಗೆ ದುಃಖವೀಯುವದಕ್ಕಾಗಿಯೇ ದೇವರು ನನ್ನನ್ನು ಸೃಷ್ಟಿಸಿಲ್ಲ. ಅಲ್ಪಬುದ್ಧಿಗೆ ತೋಚಿದಷ್ಟು ತಿಳಿಸಿರುವೆನು. ನಾನು ನಿಮ್ಮ ಇಚ್ಛೆಗೆ ಹೊರತಿಲ್ಲ." ಶಿವಗಂಗೆಯು ನಿರುಪಾಯಳಾಗಿ ನುಡಿದಳು.

"ಶಿವಗಂಗಾ, ಶಿವಮೂರ್ತಿಗೆ ಕನ್ಯೆಯನ್ನು ಕೊಡಲಿಕ್ಕೆ ದೊಡ್ಡ ದೊಡ್ಡ ಅಧಿಕಾರಸ್ಥರೂ, ಶ್ರೀಮಂತರೂ, ಪ್ರತಿಷ್ಠಿತ ವ್ಯಾಪಾರಸ್ಥರೂ ಸಿದ್ಧರಿದ್ದರೂ ಕೇವಲ ನಿನ್ನ ಗುಣಕ್ಕಾಗಿ ಮೆಚ್ಚಿ ಸಂಗಪ್ಪನವರು ತಮ್ಮ ಮಗನಿಗೆ ನಿನ್ನನ್ನು ತೆಗೆದುಕೊಳ್ಳಲು ಒಪ್ಪಿರುವರು. ಶಿವಮೂರ್ತಿಯಾದರೂ ನಿನ್ನನ್ನು ವರಿಸಲೊಪ್ಪಿರುವನಂತೆ. ಅಂತೇ ಅವರು ನನ್ನ ಮುಂದೆ ಮದುವೆಯ ಪ್ರಸ್ತಾಪ ತೆಗೆದರು."

"ಜೋಡು ಜೋಡಾಗಿರಬೇಕು. ಇಜ್ಜೋಡಾದರೆ ಸಂಸಾರ ರಥವು ಸುಯಂತ್ರಿತವಾಗಿ ನಡೆಯಲಾರದು. ಮಗಳು ಮಾತು ಕೇಳಲಿಲ್ಲವೆಂಬ ಅನುತಾಪ ಶಿಖಿಯು ನಮ್ಮ ಎದೆಯನ್ನು ಸುಡುವದೇನೋ ನಿಜವು. ಮುಂದೆ ಏನಾದರೂ ಹೀನಕಾರ್ಯವು ಜರುಗಿದರೆ ನಿಮ್ಮ ಮಗಳೇ ನಿಮಗೆ ಎದೆಗಿಚ್ಚಾಗಬಹುದು."

"ಛೀ ಹುಚ್ಚೀ! ಸುಮ್ಮನೆ ಅಭದ್ರವಮಾತುಗಳನ್ನಾಡಬೇಡ. ಪರಮ ಗುರುವಿನ ಅನುಗ್ರಹಕ್ಕೆ ಪಾತ್ರಳಾದ ನೀನು ಸುಖಸಾಗರದಲ್ಲಿ ಲೋಲಾಡತೊಡಗುವೆ. ನಿನಗೆ ಒಳಿತು ಮಾಡಬೇಕೆಂದು ನನ್ನ ಉತ್ಕಟೇಚ್ಛೆಯಿದ್ದರೂ ನೀನು ಚಂಡಿತನ ಮಾಡಿ ನನ್ನ ಮಾತು ಕೇಳದಿರುವೆಯಾ ?"

"ಅಪ್ಪಾ, ನಾನು ಎಂದಾದರೂ ನಿಮ್ಮ ಮಾತನ್ನು ಮೀರಿರುವೆನೆ ? ನೀವು ನನ್ನ ಸುಖವನ್ನು ಹೇಗೆ ಬಯಸುವಿರೋ, ಹಾಗೆ ನಾನಾದರೂ ನಿಮಗೆ ಸೌಖ್ಯವಾಗಬೇಕೆಂದೇ ಹಾರೈಸುವೆನು. ಮುಂದೆ ನನಗೆ ಕೇಡಾದರೆ ನಿಮಗೆ ದುಃಖವಾಗುವದೆಂದೇ ಇಷ್ಟು ಬಗೆಯಾಗಿ ವಾದವಿವಾದ ಮಾಡಿದೆನು. ನನಗೆ ನನ್ನ ಸುಖದುಃಖಗಳ ಪರಿವೆಯಿಲ್ಲ. ಮುಪ್ಪಿನವರಾದ ನಿಮ್ಮ ಕಣ್ಣುಗಳು ಕಡೆತನಕ ಒಳಿತನ್ನೇ ಕಾಣಬೇಕೆಂದು ಇಚ್ಛಿಸುವದು ಪುತ್ರಿಯಾದ ನನ್ನ ಧರ್ಮವಲ್ಲವೇ ?"

"ಶಿವಗಂಗೆ, ನೀನು ಸೌಖ್ಯ ಹೊಂದಿ ನಮಗೂ ಸೌಖ್ಯ ಕೊಡುವಿಯಮ್ಮಾ. ನೀನು ಯಾವಬಗೆಯ ಆಲೋಚನೆಗೊಳಗಾಗದೆ ಶಿವಮೂರ್ತಿಯನ್ನು ವಿವಾಹ ಮಾಡಿಕೊಳ್ಳಲೊಪ್ಪು."

ಶಿವಗಂಗೆಯು ತಂದೆಯ ಅತ್ಯಾಗ್ರಹಕ್ಕಾಗಿ ಅವನ ಮಾತಿಗೆ ಒಪ್ಪಿದಳು. ಆಗ ಸೋಮಶೇಖರಶೆಟ್ಟಿಗೆ ಹಿಡಿಸಲಾರದಷ್ಟು ಆನಂದವಾಯಿತು, ಶಿವಗಂಗೆಯ ಮನಸ್ಸು ಮಾತ್ರ ಒಂದೇ ಸವನೆ ಕುದಿಯತೊಡಗಿತ್ತು.

## ೫.

ಶಿವಗಂಗೆಯ ವಿವಾಹವು ಶಿವಮೂರ್ತಿಶೆಟ್ಟಿಯೊಡನೆ ಶಿರಪುರದಲ್ಲಿ ಒಳ್ಳೇ ವಿಜೃಂಭಣೆಯಿಂದ ನೆರವೇರಿತು. ವಿವಾಹಕಾಲದಲ್ಲಿ ಭಿಕ್ಷುಕರಿಗೂ ಜೋಗಿ-ಜಂಗ ಮರಿಗೂ ದಕ್ಷಿಣೆ ದಾನಾದಿಗಳು ಕೊಡಲ್ಪಟ್ಟವು. ಶ್ರೀಮಂತರ ಮನೆಯ ವಿವಾಹ ಪ್ರಸಂಗದಲ್ಲಿ ನಡೆಯುವ ಹಣದ ಸೂರೆಯನ್ನು ಬಣ್ಣಿಸುವದು ಅಸಾಧ್ಯವೇ ಸರಿ. ವಿವಾಹಕಾರ್ಯವು ಮುಗಿವಕೂಡಲೇ ನಿಬ್ಬಣದವರೂ ಆಗತಜನರೂ ತಮ್ಮ ಊರುಗಳಿಗೆ ತೆರಳಿದರು.

ಶಿವಗಂಗೆಯು ಪತಿಯ ಮಂದಿರಕ್ಕೆ ಹೋದಳು. ಧಾರವಾಡದಂತಹ ಪಟ್ಟಣದಲ್ಲಿ ತನ್ನ ಆಯುಷ್ಯವು ಸುಖಮಯವಾಗುವದೆಂದು ಅವಳು ಆನಂದಬಡಕೊಡಗಿದ್ದಳು. ಪತಿಯ ಪ್ರೇಮಳ ಸಹವಾಸದಲ್ಲಿ ಸಂಸಾರವು ಅಮೃತೋಮಮವಾಗುವದೆಂದು ಅವಳು ಹಿರಿಹಿರಿ ಹಿಗ್ಗತೊಡಗುವಳು. ಶಿವಮೂರ್ತಿಯಾದರೂ ಲಾವಣ್ಯಮಯವಾದ ಪತ್ನಿಯ ಸಹವಾಸದಲ್ಲಿ ಆನಂದಬಡುವೆನೆಂದು ಕಲ್ಪಿಸಿಕೊಂಡಿದ್ದನು.

ಶಿವಮೂರ್ತಿಯು ಸುಧಾರಕರಲ್ಲಿ ಅಗ್ರೇಸರನಾಗಿದ್ದನು. ಅವನು ಜಾತಿನೀತಿಗಳನ್ನು ಮನ್ನಿಸುತ್ತಿದ್ದಿಲ್ಲ. ಪಾಶ್ಚಾತ್ಯ ಆಚಾರ ವಿಚಾರಗಳನ್ನು ಅವನು ಸಂಪೂರ್ಣವಾಗಿ ಅನುಕರಿಸಿದ್ದನು. ಪತ್ನಿಯು ತನ್ನೊಡನೆ ಸಭೆಗೂ, ವಾಚನಾಲಯಕ್ಕೂ ನಾಟಕ, ಚಿತ್ರಪಟಗಳಿಗೂ, ತಿರುಗಾಡಲಿಕ್ಕೂ ಬರಬೇಕೆಂದು ಅವನು ಇಚ್ಛಿಸುತ್ತಿದ್ದನು. ತನ್ನ ನಾಲ್ಕುಜನ ಮಿತ್ರಮಂಡಳಿಯೊಡನೆ ಕ್ರಿಕೆಟ್ ಮೊದಲಾದ ಆಟಗಳಲ್ಲಿ ತನ್ನ ಪತ್ನಿಯೂ ಇರಬೇಕೆಂದು ಅವನ ಅಭಿಲಾಷೆ ಇತ್ತು. ಹಳ್ಳಿಯವಳೂ ಹಳೆಯ ಪದ್ಧತಿಯವಳೂ ಶೈವಾಚಾರನಿರತಳೂ ಆದ ಶಿವಗಂಗೆಗೆ ಪತಿಯ ಈ ಅಲ್ಲದ ಸಲ್ಲದ ಇಚ್ಛೆಯು ಎಷ್ಟು ಮಾತ್ರವೂ ಸರಿದೋರುತ್ತಿದ್ದಿಲ್ಲ. ಅವಳು ಪತಿಯನ್ನು ದಾರಿಗೆ ತರಬೇಕೆಂದು ಬಹುವಿಧವಾಗಿ ಯತ್ನಿಸುತ್ತಿದ್ದಳು. ಶಿವಮೂರ್ತಿಯಾದರೂ ಪತ್ನಿಯನ್ನು ತನ್ನ ಪಂಥಕ್ಕೆ ಸೇರಿಸಿಕೊಳ್ಳಬೇಕೆಂದು ಬಹಳವಾಗಿ ಯತ್ನಿಸುತ್ತಿದ್ದನು ಗಂಡ-ಹೆಂಡರ ಪೂರ್ವ ಪಶ್ಚಿಮಗಳ ಕದನವು ಮೊದಮೊದಲು ಸೌಮ್ಯವಾಗಿ ನಡೆದಿತ್ತು; ಪ್ರಣಯಪೂರ್ಣವಾಗಿರುತ್ತಿತ್ತು. ಬರಬರುತ್ತ ಪ್ರೀತಿಪೂರ್ಣವಾದ ಕದನವ ಸ್ವರೂಪವು ಕಠೋರ ಪರಿಸ್ಥಿತಿಯನ್ನು ಹೊಂದಿತು. ಶಿವಗಂಗೆಯು ಹತಾಶಳಾಗಿ ಪತಿಗೆ ಉಪದೇಶಮಾಡುವದನ್ನು ಬಿಟ್ಟಳು. ಆದರೂ ಶಿವಮೂರ್ತಿಯು ಪತ್ನಿಗೆ ತೊಂದರೆಕೊಡುತ್ತಲಿದ್ದನು. ಗ್ರಾಮ್ಯಪದ್ಧತಿಯ ಹೆಂಡತಿಯನ್ನು ಗಂಟುಹಾಕಿಕೊಂಡದ್ದಕ್ಕಾಗಿ ಅವನು ತನ್ನ ತರಗತಿಯ ಮಿತ್ರಮಂಡಳಿಯ ಉಪಹಾಸಕ್ಕೆ ಪಾತ್ರನಾಗಿದ್ದನು. ತನ್ನ ಪತ್ನಿಯು ಸುಧಾರಕಾಗ್ರಣ್ಯಳಾದಹೊರತು ಅವನ ಆತ್ಮಕ್ಕೆ

ಶಾಂತಿಯು ದೊರೆಯುವಂತಿದ್ದಿಲ್ಲ. ಆದ್ದರಿಂದ ಅವನು ತನ್ನ ಯೋಗ್ಯತೆಮೀರಿ ಸಾಹಸ ಮಾಡತೊಡಗಿದ್ದನು. ಆದರೆ ಶಿವಗಂಗೆಯು ಮನೋವೃತ್ತಿಯಲ್ಲಿಯೂ ಆಚರಣೆಯಲ್ಲಿಯೂ ಅಭ್ಯಂತರವಾಗದಾಯಿತು. ಆ ಹಳ್ಳಿಗಾಡು ಪತ್ನಿಯನ್ನು ತ್ಯಜಿಸಿ ಸುಧಾರಕಳಾದ ಒಬ್ಬ ರೂಪವತಿಯನ್ನು ಮದುವೆಯಾಗಬೇಕೆಂಬ ವಿಚಾರವು ಅವನ ಮನಸ್ಸಿನಲ್ಲಿ ಹುಟ್ಟಿತು. ಆದರೆ ಸಂಗಪ್ಪನವರು ಜೀವಂತವಿರುವವರೆಗೆ ಅವನ ಮನೋದಯವು ಈಡೇರುವಂತಿದ್ದಿಲ್ಲ. ಅಷ್ಟರಲ್ಲಿ ಅವನಿಗೆ 'ಆಯ್.ಸಿ.ಎಸ್.' ಅಭ್ಯಾಸಕ್ಕಾಗಿ ವಿಲಾಯತಿಗೆ ಹೋಗುವ ಪ್ರಸಂಗಪ್ರಾಪ್ತವಾಯಿತು.

ಶಿವಮೂರ್ತಿಯು ವಿಲಾಯತಿಗೆ ಪ್ರಯಾಣಮಾಡಿದನು. ಶಿವಗಂಗೆಯು ತವರೂರಿಗೆ ಬಂದಳು. ಪತಿಯು ವಿಲಾಯತಿಗೆ ಹೋಗುವಾಗ ಅವಳು ಅವನಿಗೆ ಅನೇಕವಿಧದ ಉಪದೇಶಮಾಡಿದ್ದಳು. ಸುಧಾರಕನಾದ ಶಿವಮೂರ್ತಿಯು ಆಂಗ್ಲ ಭೂಮಿಯಲ್ಲಿ ಯಾವ ಸ್ಥಿತಿಗತಿಯನ್ನು ಹೊಂದುವನೋ ಏನೋ ಎಂದು ಅವಳು ಭಯಗೊಂಡಿದ್ದಳು.

ಶಿವಮೂರ್ತಿಯು ಹೋದ ನಾಲ್ಕು ತಿಂಗಳಲ್ಲಿ ಸಂಗಪ್ಪನವರು ಹೃದಯ ಕ್ರಿಯೆಯು ಕಟ್ಟಾಗಿ ಒಮ್ಮಿಂದೊಮ್ಮೆ ಮರಣಹೊಂದಿದರು. ತಂದೆಯ ಮರಣ ವಾರ್ತೆಯನ್ನು ಕೇಳಿ ಶಿವಮೂರ್ತಿಗೆ ದುಃಖವೆನಿಸಿತು. ಅವನು ಧಾರವಾಡಕ್ಕೆ ಬಂದು ತಂದೆಯ ಉತ್ತರಕ್ರಿಯಾದಿಗಳನ್ನು ತೀರಿಸಿ ವಿಲಾಯತಿಗೆ ಹೋದನು. ಸಂಗಪ್ಪನವರ ಉತ್ತರಕ್ರಿಯೆಗೆ ಶಿವಗಂಗೆಯು ತಂದೆತಾಯಿಗಳೊಡನೆ ಧಾರವಾಡಕ್ಕೆ ಹೋಗಿದ್ದಳು. ಆಗ ಅವಳೂ ಸೋಮಶೇಖರಶೆಟ್ಟಿಯೂ ಗೌರಮ್ಮನೂ ಶಿಕ್ಷಣವನ್ನು ಸಾಕುಮಾಡಬೇಕೆಂದು ಶಿವಮೂರ್ತಿಗೆ ಬಹಳವಾಗಿ ಹೇಳಿದರು; ಆದರೆ ಅವರ ಉಪದೇಶದ ಪರಿಣಾಮವೇನೂ ಶಿವಮೂರ್ತಿಯಮೇಲೆ ಆಗಲಿಲ್ಲ.

ಶಿವಮೂರ್ತಿಯು ಸುಧಾರಣೆಯ ಕ್ಷೇತ್ರವನ್ನು ಚನ್ನಾಗಿ ಬೆಳೆಸಿದನು. ತಂದೆಯ ಬೆದರಿಕೆಯೂ ಇಲ್ಲದಂತಾದ್ದರಿಂದ ಮೂರ್ತಿಮಂತ ಆಂಗ್ಲ ಪುರುಷರಾದಂತಾದನು. ಅವನಿಗೆ ಒಂದೇ ಕೊರತೆಯಾಗಿತ್ತು. ಸಾಹೇಬನ ಜೊತೆಯಲ್ಲಿ..........? ಆಂಗ್ಲ ಭೂಮಿಯಲ್ಲಿ ಯಾತರ ಕೊರತೆಯುಂಟಾದೀತು? ಧನಕನಕಸಂಪನ್ನನಾದ ಶಿವ ಮೂರ್ತಿಗೆ ಅಲ್ಲಿ ಮೊಡಮ್‌ಗಳ ಕೊರತೆಯಾಗುವದೇ?

ಶಿವಮೂರ್ತಿಯು ವಿಲಾಯತಿಗೆ ಹೋದಮೇಲೆ ಎರಡು ತಿಂಗಳುಗಳವರೆಗೆ ತನ್ನ ಮಾವನ ಹಾಗೂ ಪತ್ನಿಯಸಂಗಡ ಪತ್ರವ್ಯವಹಾರ ನಡೆಯಿಸಿದ್ದನು. ಮುಂದೆ ಅವನು ತನ್ನ ದೇಶವನ್ನೇ ಮರೆತುಬಿಟ್ಟನು. ಸೋಮಶೇಖರಶೆಟ್ಟಿಯು ತಂತಿಯನ್ನು ಕಳಿಸಿದರೂ ಅವನಿಂದ ಉತ್ತರವೇ ಬರಲಿಲ್ಲ. ಆಗ ಎಲ್ಲರೂ ಗಾಬರಿಯಾದರು. ಮುಂದೆ ಒಂದು ವಾರಕ್ಕೆ ಅಂಚೆಯವನು ಒಂದು ಪತ್ರವನ್ನು ತಂದು

ಸೋಮಶೇಖರಶೆಟ್ಟಿಯಕಡೆಗೆ ಕೊಟ್ಟನು. ಆ ಪತ್ರವು ಶಿವಮೂರ್ತಿಯದೇ ಎಂಬದು ಗೊತ್ತಾದ್ದರಿಂದ ಮನೆಯವರೆಲ್ಲರಿಗೂ ಪರಮಾನಂದವಾಯಿತು. ಶೆಟ್ಟಿಯು ಪತ್ರವನ್ನೊಡೆದು ಓದತೊಡಗಿದನು. ಶಿವಗಂಗೆಯು ಬಳಿಯಲ್ಲಿಯೇ ನಿಂತಿದ್ದಳು. ಪತ್ರವನ್ನೋದುವದಾದಕೂಡಲೇ ಶೆಟ್ಟಿಯು ದೀರ್ಘವಾದ ನಿಟ್ಟುಸುರು ಬಿಟ್ಟು— "ಶಿವಗಂಗಾ, ನಿನ್ನ ಪುಣ್ಯ ತೀರಿತವ್ವಾ!" ಗೌರಮ್ಮನು ಗಾಬರಿಯಿಂದ ಪತಿಯನ್ನು ಕುರಿತು— "ಯಾಕೆ ಶಿವಮೂರ್ತಿಯ ಆರೋಗ್ಯವು ಕೆಟ್ಟಿರುವದೇನು?"

ಶಿವಗಂಗೆಯು ಪತ್ರವನ್ನೋದಿದಳು. ಪರಕ್ಷಣದಲ್ಲಿ ಭೂಮಿಗೆ ಬಿದ್ದು ಪ್ರಳಾಪಿಸತೊಡಗಿದಳು. ಆಗ ಶೆಟ್ಟಿಯು ಮಗಳನ್ನು ಸಮಾಧಾನಗೊಳಿಸಲಿಕ್ಕೆ ಯತ್ನ ಮಾಡಿದನು. ಆಗ ಗೌರಮ್ಮನು ಪತಿಯನ್ನುದ್ದೇಶಿಸಿ— "ಶಿವಮೂರ್ತಿಗೇನಾಗಿದೆ?" ಎಂದು ಭಯಕಾತುರಳಾಗಿ ಆತುರದಿಂದ ಕೇಳಿದಳು.

"ಅವನಿಗೇನೂ ಆಗಿಲ್ಲ. ಎಲ್ಲ ಗೋಳಾಟವು ನಮ್ಮ ಪಾಲಿಗೆ ಬಂತು. ಅವನು ವಿಲಾಯತಿಯಲ್ಲಿ ಒಬ್ಬ ಆಂಗ್ಲ ಯುವತಿಯನ್ನು ವಿವಾಹವಾಗಿರುವನು. ಮುಂದೆ ಅವನು ಇಲ್ಲಿಗೆ ಬರುವದಿಲ್ಲ. ಇಲ್ಲಿಯ ಆಸ್ತಿಯನ್ನೆಲ್ಲ ಮಾರಿ, ಅಲ್ಲಿಯೇ ವಾಸವಾಗಿರಬೇಕೆಂದು ಅವನು ನಿರ್ಧರಿಸಿರುವನು. ಶಿವಗಂಗೆಯನ್ನು ಹೆಂಡತಿಯನ್ನಾಗಿ ಮಾಡಿಕೊಂಡ ತಪ್ಪಿಗಾಗಿ ವರುಷಾ ಕೆಲವು ಹಣವನ್ನು ಕೊಡುವನಂತೆ. ಮನಸ್ಸಿದ್ದರೆ ಪುನರ್ವಿವಾಹಕ್ಕೆ ತನ್ನ ಒಪ್ಪಿಗೆ ಇರುವದೆಂದು ಅವನು ತಿಳಿಸಿರುವನು"

ಗೌರಮ್ಮನು ಬಡಬಡಕೊಂಡು ಅಳಲಾರಂಭಿಸಿದಳು. ಆಗ ಅವಳು ಅಳುತ್ತಲೆ ಪತಿಗೆ— "ಶಿವಗಂಗೆಗೆ ಸೌಖ್ಯವಾಗಬೇಕೆಂದು ನೀವು ಎಷ್ಟು ಬಗೆಯಾಗಿ ಸಾಹಸಮಾಡಿದರೂ ವ್ಯರ್ಥವಾಯಿತು. ಅವಳಮೇಲೆ ಶಿವನೇ ಮುನಿದಿರುವಾಗ ಯಾರೇನು ಮಾಡುವರು?"

"ಅಪ್ಪಾ! ಸುಧಾರಕರೊಡನೆ ಶರೀರಸಂಬಂಧ ಮಾಡಬೇಡವೆಂದೂ, ಮಾಡಿದರೆ ನಾನೇ ನಿಮಗೆ ಕಡೆತನಕ ಎದೆಗಿಚ್ಚಾಗಬಹುದೆಂದೂ ಮೊದಲೇ ಹೇಳಲಿಲ್ಲವೇ?"

ಶಿವಗಂಗೆಯು ಹೀಗೆ ನುಡಿದಕೂಡಲೇ ಸೋಮಶೇಖರಶೆಟ್ಟಿಯು ದೊಡ್ಡ ದನಿಯಿಂದ ಅಳುತ್ತ— "ಅವ್ವಾ! ಶಿವಗಂಗಾ, ಸಾಯುವತನಕ ನೀನು ನಮಗೆ ಎದೆಗಿಚ್ಚಾದೆ,"

—: ಸಂಪೂರ್ಣ. :—

ನಮ್ಮ ಹಿಂದಿನ ಸಾಹಿತ್ಯವನ್ನು ಹಳಿಯುವವರಲ್ಲಿ ಕೇಳಿದರೆ ಕನ್ನಡ ಭಾಷಾಭಿಮಾನಿಗಳಿಗೆ ಕೆಂಡದಂಥ ಕೋಪವು ಬರುತ್ತದೆ. ಇದೇನೋ ಸ್ವಾಭಾವಿಕವಾದದ್ದು. ಆದರೂ ಸ್ವಲ್ಪ ಶಾಂತಚಿತ್ತರಾಗಿ ಪರ್ಯಾಲೋಚಿಸಿದರೆ ಈ ಆಕ್ಷೇಪವು ನಿರಾಧಾರವಾದದ್ದಲ್ಲವೆಂದು ಒಪ್ಪಿಕೊಳ್ಳಲೇಬೇಕಾಗುತ್ತದೆ. ಇಷ್ಟವಿಲ್ಲದಿದ್ದರೂ, ಸತ್ಯಕ್ಕೆ ಕಟ್ಟುಬಿದ್ದು ಒಪ್ಪಿಕೊಳ್ಳಬೇಕಾಗುತ್ತದೆ. ಆದರೆ ಇಲ್ಲಿ ಒಂದು ಮಾತು ಹೇಳಬಹುದು ಏನಂದರೆ—

# ನಮ್ಮ ಮಾತು.

—ಈ ಆಕ್ಷೇಪವು ಮಿತಿಮೀರಿದೆ. ಇದರಲ್ಲಿಯೆ ತೃಪ್ತಿಯ ಆವೇಶದ ಅತ್ಯುಕ್ತಿಯಿದೆ. ನಮ್ಮ ಗ್ರಂಥ ರಾಶಿಯೆಲ್ಲವೂ ಬರಿಯ ಜೊಳ್ಳಲ್ಲ, ಅದರಲ್ಲಿ ಕಾಳೂ ಇವೆ. ಅಷ್ಟೇ ಅಲ್ಲ, ಶ್ರೇಷ್ಠವಾದ ಬೀಜದ ಕಾಳೂ ಕೆಲವು ಇವೆ. ಬರಿಯ ಮಾತಿನ ಟೊಳ್ಳು ಪುಸ್ತಕಗಳು ಹಲವು ಇದ್ದರೆ, ಭಾವರಸಪುಷ್ಟಿಯುಳ್ಳ ಕಾವ್ಯಗಳೂ ಕೆಲವು ಇವೆ.

ಶ್ರೀ. ಬೇಂದ್ರೆ ದತ್ತರಾಯರು, ಪುಣೆ.

## ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರಘಾ-ರಾಜೇಂದ್ರ ಮಹಾಸ್ವಾಮಿಗಳವರು ಚಿತ್ರಕಲ್ ದುರ್ಗ ಹಾಗು ಶ್ರೀ ಶಿರಃಪುರ ಶೂನ್ಯ ಸಿಂಹಾಸನಾಧೀಶ್ವರ ಶ್ರೀ ಫಕ್ಕೀರಸ್ವಾಮಿಗಳವರು ಶಿರಹಟ್ಟಿ ಇವರ

## ಆನಂದಾತಿಶಯದ ಮಿಲನ ! ಅಕಲ್ಪಿತ ಯೋಗಾಯೋಗ !

ಜಗದ ಆವುದೇ ಒಂದು ವ್ಯವಹಾರವನ್ನು ತಕ್ಕೊಳ್ಳಿರಿ. ಅದು ಆದಿಭೌತಿಕ ಜೀವನಕ್ಕೆ ಸಂಬಂಧಿಸಿದುದೇ ಇರಲಿ, ಆಧ್ಯಾತ್ಮಿಕ ಜೀವನಕ್ಕೆ ಸಂಬಂಧಿಸಿದುದ್ದೇ ಇರಲಿ. ಇಚ್ಛಿಸಿದಂತೆ ನಡೆಯಲು ಒಂದು ಕಾಲವು ಪ್ರಾಪ್ತವಾಗಬೇಕಾಗುವದು ಕಂಡುಂಡ ಮಾತಾಗಿದೆ. ಮನದ ಕಾಮನಾಪೂರ್ತಿಯು ವೈಯಕ್ತಿವಾಗಿರಲಿ ಸಾಂಘಿಕವಾಗಿರಲಿ ಅದಕ್ಕೊಂದು ಪರಿಪಕ್ವವಾದ ಕಾಲವು ಪ್ರಾಪ್ತವಾದಾಗ ಮಾತ್ರ ಫಲಿಸಬಲ್ಲದು. ಅದೇನೊ ಹೀಗೂ ಆಗುವದುಂಟು. ಆಯಾ ವ್ಯಕ್ತಿಗಳಿಗೆ ಇಷ್ಟವಾದ ಕಾರ್ಯವು ಯಾಚಿತವಾಗಿ ಅತಿಶ್ರಮದಿಂದಲೂ ಕೂಡ ಸಂಭವಿಸದ ಪ್ರಸಂಗವು ಒಂದು ಸಮಯ ಆಯಾಚಿತವಾಗಿ ಶ್ರಮವಿಲ್ಲದಲೆ ಸಂಭವಿಸುವದೆಂಬ ಮಾತನ್ನು ಅನುಭವದಿಂದ ಹೇಳುವದುಂಟು. ಹೀಗೆಯೇ ಶ್ರೀ ಜಗದ್ಗುರುಗಳ ಹಾಗೂ ಶ್ರೀಫಕೀರಸ್ವಾಮಿಗಳ ಮಿಲನವು ಕಳೆದ ಬುಧವಾರ ತಾ. ೧೪-೧೧-೩೪ ನೇ ದಿವಸ ಲಕ್ಷ್ಮೇಶ್ವರ ಮುಕ್ಕಾಮಿನಲ್ಲಿ ಆಯಿತು.

ಸಂಸಿಯಲ್ಲಿ ಸ್ಥಾಪಿತವಾದ ಶ್ರೀ ಫಕೀರಸ್ವಾಮಿಗಳ ಮಠದಿಂದ ಸಹಜವಾಗಿ ಶ್ರೀಗಳವರು ಲಕ್ಷ್ಮೇಶ್ವರಕ್ಕೆ ಆಗಮಿಸಿದ್ದರು. ಅದೇಕಾಲಕ್ಕೆ ಶ್ರೀ ಜಗದ್ಗುರುಗಳ ಅಲ್ಲಿಗೆ ಬಿಜಯಂಗೈದರು. ಅದೇನು ಕಾರಣದಿಂದಲೋ ಅಂದು ನಮ್ಮ ಶ್ರೀ ಫಕೀರಸ್ವಾಮಿಗಳವರು ಜಗದ್ಗುರುಗಳನ್ನು ಕಾಣಲು ಒಳ್ಳೇ ಆತುರತೆಯುಳ್ಳವರಾಗಿ ತಮ್ಮ ಅಭಿಲಾಷೆಯನ್ನು ಭಕ್ತರ ಮುಖಾಂತರ ಜಗದ್ಗುರುಗಳಿಗೆ ಹೇಳಿಕಳುಹಿದರು. ಅಂದಿನ ಯೋಗವು ಬಹಳೇ ಶುಭದಾಯಕವಾದುದರಿಂದಲೋ ಅಥವಾ ಆಧ್ಯಾತ್ಮಿಕ ಭಾವದಿಂದಲೋ ಸರ್ವರೂ ಒಬ್ಬರಿಗೊಬ್ಬರು ದರ್ಶನೋತ್ಸುಕರಾಗಿ ಸಮ್ಮತಿಯನ್ನಿತ್ತರು.

ಸಂಕೇತದಂತೆ ಆದಿನ ಮಧ್ಯಾಹ್ನದಲ್ಲಿ ಶ್ರೀಮಂತ ದೊಡ್ಡಬಸಪ್ಪಣ್ಣಾ ತಟ್ಟಿ ಇವರಲ್ಲಿ ಉಭಯಸ್ವಾಮಿಗಳವರ ಮಿಲನವಾಯಿತು. ಪೂಜಾ-ಅರ್ಚ್ಯಾ ಮೊದಲಾದ ನಿತ್ಯನೈಮಿತ್ತಿಕ ಕಾರ್ಯಗಳನ್ನು ಉಭಯ ಸ್ವಾಮಿಗಳು ಅಲ್ಲಿಯೇ ತೀರಿಸಿಕೊಂಡು ದರ್ಶನಾನಂದದಲ್ಲಿ ಲೋಲುಪರಾದರು. ಭಕ್ತಸಮುದಾಯದೊಂದಿಗೆ ಭೋಜನದ ಕಾರ್ಯವೂ ಬಹು ವಿಜ್ರಂಭಣೆಯಿಂದ ನಡೆಯಿತು.

ಲಕ್ಷ್ಮೇಶ್ವರದಲ್ಲಿ ಒಂದು ಶ್ರೀ ಫಕೀರಸ್ವಾಮಿಗಳವರ ಮಠವಿರುವದು. ಆ ಮಠಕ್ಕೆ ದಯಮಾಡಿಸಬೇಕೆಂದು ಬಿನ್ನವಿಸಿಕೊಂಡಿದ್ದರಿಂದ ಜಗದ್ಗುರುಗಳು ಅಂದು ಸಂಜೆಯ ೫|| ಘಂಟೆಗೆ ಮಠಕ್ಕೆ ದಯಮಾಡಿಸಿದರು.

ಅಂದು ಮಠವನ್ನು ತಳಿರು-ತೋರಣಗಳಿಂದ ಶೃಂಗರಿಸಲ್ಪಟ್ಟಿತ್ತು. ಪರಮ ವೈರಾಗ್ಯಶಾಲಿಗಳಾದ ಉಭಯ ಸ್ವಾಮಿಗಳ ಸಂದರ್ಶನಕಾಲಕ್ಕೆ ಲಕ್ಷ್ಮೇಶ್ವರದಲ್ಲಿನ ಮೆ|| ಮಾಮಲೇದಾರರೂ ಶಿರಸ್ತೇದಾರ ಮೊದಲಾದ ಸರಕಾರೀ ಅಮಲದಾರರೂ ಶ್ರೀಮಂತ ದೊಡ್ಡಬಸಣ್ಣಾ ತಟ್ಟಿ ಹಾಗೂ ಶ್ರೀಮಂತ ದೇಸಾಯರೂ ಶ್ರೀಮಂತ ಮಾನ್ವಿ ಕೋಟಪ್ಪನವರು ಮೊದಲಾದ ಸದ್ಭಕ್ತ ಶಿಖಾಮಣಿಗಳೂ ಇತರೇ ಭಕ್ತ ಮಹಾಜನಗಳೂ ಆಗಮಿಸಿದ್ದರು. ಆದುದರಿಂದಲೇ ಸಮಾರಂಭಕ್ಕೆ ಒಂದು ವಿಶೇಷ ಪ್ರಕಾರದ ಕಳೆ ಕಟ್ಟಿತ್ತು. ಶ್ರೀ ಜಗದ್ಗುರುಗಳು ಅಲ್ಲಿ ಸುಶ್ರಾವ್ಯವಾದ ಭಾಷಣಗೈದರು. ವ್ಯಾಖ್ಯಾನ ಮುಗಿದನಂತರ ಸರ್ವ ಮಹನೀಯರು ಆಶೀರ್ವಾದ ವನ್ನು ಹೊಂದಿದರು, ಒಟ್ಟಾರೆ ಕಾರ್ಯವು ಬಹಳೇ ವಿಜೃಂಭಣೆಯಿಂದ ಜರುಗಿತು.

ಆ ಮುಂದೆ ಶ್ರೀ ಫಕೀರಸ್ವಾಮಿಗಳವರು ಶಿರಹಟ್ಟಿಯ ತಮ್ಮ ಮಠಕ್ಕೆ ಆಗಮಿಸಬೇಕೆಂಬದಾಗಿ ಜಗದ್ಗುರುಗಳನ್ನು ಕೇಳಿಕೊಂಡದ್ದರಿಂದ ಅವರು ಒಪ್ಪಿಗೆಯನ್ನಿತ್ತರು. ಮರುದಿನ ಅಂದರೆ ತಾ||೧೫-೧೧-೩೪ ನೇ ಗುರುವಾರ ದಿವಸ ಶಿರಹಟ್ಟಿಗೆ ಉಭಯ ಸ್ವಾಮಿಗಳವರು ಒಂದೇ ಮೋಟಾರಿನಲ್ಲಿ ಮಧ್ಯಾಹ್ನ ೧೨ ಘಂಟೆಗೆ ದಯಮಾಡಿಸಿದರು. ಇಲ್ಲಿಯು ಮಠವು ತಳಿರು ತೋರಣಗಳಿಂದ ಶ್ರಿಂಗರಿಸಲಾಗಿತ್ತು. ಉಭಯ ಸ್ವಾಮಿಗಳವರ ಸಂಗಡ ಲಕ್ಷ್ಮೇಶ್ವರ ಮಹಾಜನಗಳೂ ಆಗಮಿಸಿದ್ದರು. ಇಲ್ಲಿಯ ಮಹಾಜನಗಳು ವಾದ್ಯ ವೈಭವದೊಡನೆ ಜಗದ್ಗುರುಗಳನ್ನು ಕಾಣಿಸಿಕೊಂಡು ಉಭಯ ಸ್ವಾಮಿಗಳವರನ್ನು ಉತ್ಸವದಿಂದ ಬ್ರಹನ್ಮಠಕ್ಕೆ ಕರತಂದರು. ಶ್ರೀಗಳು ಮಠಕ್ಕೆ ದಯಮಾಡಿಸಿದೊಡನೆ ಶ್ರೀ ಕರ್ತೃವಿನ ಗದ್ದುಗೆಯಲ್ಲಿಳಿದು ದರ್ಶನ ತಗೆದುಕೊಂಡು ಮಂಗಳಾರುತಿಯನ್ನು ಪೂರೈಸಿ ಮಠದ ಸದರಿನಲ್ಲಿ ಆಗಮಿಸಿದರು. ಉಭಯಸ್ವಾಮಿಗಳವರು ಸದರಿನಲ್ಲಿ ಸಿಂಹಾಸನದಲ್ಲಿ ವಿರಾಜಮಾನರಾದನಂತರ ಸರ್ವ ಭಕ್ತಸಮುದಾಯವನ್ನು ಕುಳ್ಳಿರಿಸಿ, ಜಗದ್ಗುರುಗಳವರು ಈ ಮಠದ ವಿಷಯವಾಗಿ ಒಂದು ತಾಸಿನವರೆಗೆ ಒಳ್ಳೇ ಸ್ಫೂರ್ತಿದಾಯಕವಾದ ಭಾಷಣ ಮಾಡಿದರು. ಸರ್ವರೂ ಆನಂದಿತರಾದರು. ಆ ಮೇಲೆ ಸರ್ವರೂ ಶ್ರೀ ಗಳವರಿಂದ ಆಶೀರ್ವಾದ ಪಡೆದು ಗಮನಿಸಿದರು.ಮಧ್ಯಾಹ್ನದಲ್ಲಿ ಮಠದಲ್ಲಿಯೇ ಭೋಜನ ಸಮಾರಂಭವು ಜರುಗಿತು.

ಅಂದೇ ಸಂಜೆ ೫ ಘಂಟೆಗೆ ಸರ್ವ ಮಹನೀಯರು ಬರಬೇಕೆಂಬದಾಗಿ ಶ್ರೀಗಳವರು ಆಜ್ಞೆಯಿತ್ತುದರಿಂದ ಪುನಃ ಸಕಲ ಭಕ್ತರೂ ಶ್ರೀಮಂತ ಸಾವುಕಾರ ಶೆಟ್ಟಿ ಮೊದಲಾದವರೂ ಆಗಮಿಸಿದರು. ಸಂಜೆ ೭ ಘಂಟೆಗೆ ಸರಿಯಾಗಿ ಸಭೆ ಸೇರಿತು. ಆ ಕಾಲಕ್ಕೆ ಜಗದ್ಗುರುಗಳು "ಆಸ್ತಿಕಭಾವ" ಈ ವಿಷಯದ ಮೇಲೆ ಸುಶ್ರಾವ್ಯವಾದ ಉಪನ್ಯಾಸ ಮಾಡಿದರು. ಈ ಉಪನ್ಯಾಸದಿಂದ ಸರ್ವ ನಾಗರಿಕರೂ ಸಂತುಷ್ಟರಾದರು. ಜಗದ್ಗುರುಗಳ ವಿಷಯ ವಿವೇಚನ ಪದ್ಧತಿಯೂ ಅವರ

ಅಸ್ಖಲಿತ ವಾಣಿಯೂ ಮತ್ತು ಇಂದಿನ ಸಮಾಜಕ್ಕೆ ಒಪ್ಪಿತವಾಗುವಂತಹ ಅವರ ಉಪನ್ಯಾಸದ ರೀತಿಯೂ ಪ್ರಶಂಸನೀಯವಾಗಿತ್ತು. ಸಂಜೆ ೮ ರವರೆಗೆ ಅಂದರೆ ೧ ತಾಸು ಉಪನ್ಯಾಸವಾದನಂತರ ಸಕಲರೂ ಆಶೀರ್ವಾದ ಹೊಂದಿ ತಮ್ಮ ಸ್ಥಳಕ್ಕೆ ಗಮನಿಸಿದರು.

ಮರುದಿನ ಅಂದರೆ ಶುಕ್ರವಾರ ತಾ||೧೬—೧೧—೩೪ ನೇ ದಿವ್ಸ ಮುಂಜಾನೆ ಶ್ರೀ ಜಗದ್ಗುರುಗಳು, ತಮ್ಮ ಸ್ವಕೀಯಮಠ (ಕಲ್ಲುಮಠ) ದಲ್ಲಿ ಆಗಮಿಸಿದರು. ಅಲ್ಲಿಯೂ ಭಕ್ತಸಮುದಾಯವು ನೆರೆಯಿತು. "ವೀರಶೈವ ಏಕೀಕರಣ" ಈವಿಷಯದ ಮೇಲೆ ಸುಶ್ರಾವ್ಯವಾದ ಉಪನ್ಯಾಸವನ್ನು ಮಾಡಿ ಭಕ್ತಜನರನ್ನು ಆನಂದತುಂದಿಲರನ್ನಾಗಿ ಮಾಡಿದರು. ಮುಂದೆ ೯ ಘಂಟೆಗೆ ಸರ್ವರಿಗೂ ಆಶೀರ್ವಾದವನ್ನಿತ್ತು ಅಪ್ಪಲಿಂಗಪ್ಪನ ಗುಡಿಯನ್ನು ನೋಡಿಕೊಂಡು ಖಾನಾಪುರಕ್ಕೆ ದಯಮಾಡಿಸಿದರು. ಖಾನಾಪುರದಲ್ಲಿ ಮ. ರಾ. ವೀರಭದ್ರಪ್ಪನವರು ಪಾವಾಡಶೆಟ್ಟಿ ಇವರಲ್ಲಿ ಬಿನ್ನಹ ಕೀರಿಸಿ, ಭೋಜನೋತ್ತರದಲ್ಲಿ ಮುಗಗಂದಕ್ಕೆ ದಯಮಾಡಿಸಿದರು.

ಇಂತಹದೇ ಒಂದು ಯೋಗವು ( ಹಿಂದಿನ ಜಗದ್ಗುರು ಶ್ರೀ ರುದ್ರಸ್ವಾಮಿಗಳು ಹಾಗು ಇಲ್ಲಿಯ ಶ್ರೀ ಚನ್ನವೀರ ಸ್ವಾಮಿಗಳ ಮಿಲನ ಸಂದರ್ಭವು) ಹಿಂದಿನ ಭಾವಸಂವತ್ಸರದ ಶ್ರಾವಣ ಮಾಸದಲ್ಲಿ ಪ್ರಾಪ್ತವಾದುದನ್ನು ಹಿರಿಯರು ಹೇಳುತ್ತಿದ್ದರು. ಅಂದಿನಿಂದ ಇಂದಿನವರೆಗೆ ಪ್ರಾಪ್ತವಾದ ಪ್ರಸಂಗವು ಇಂದು ಪ್ರಾಪ್ತವಾದುದಕ್ಕಾಗಿ ನಮ್ಮ ಕಣ್ಣುಗಳಿಗೊಂದು ಹಬ್ಬವೇ ಆಗಿದೆಯೆಂದರೆ ಅತಿಶಯೋಕ್ತಿಯಾಗಲಾರದು. ಈ ಕಪಿಲಾಷಷ್ಠಿಯೋಗವು ಪ್ರಯತ್ನಪಟ್ಟು ಆದುದಲ್ಲ. ಅನಾಯಾಸವಾಗಿ ಅತಿಶಯವಾದ ಪ್ರೇಮದ್ಯೋತಕವಾಗಿ ಆದುದರಲ್ಲಿ ಏನೊಂದು ಶುಭಸೂಚನೆಯೇ ಇರಬೇಕೆಂದು ನಮ್ಮ ಭಾವನೆ.

ಶ್ರೀ ಜಗದ್ಗುರುಗಳು ಇಲ್ಲಿಗೆ ದಯಮಾಡಿಸಿದಾಗ ನಮ್ಮ ಚಂದ್ರಿಕೆಯ ಮಂಡಲದವರು ಅರ್ಪಿಸಿದ ಸಾಹಿತ್ಯ ಕುಸುಮಾಂಜಲಿ.

— ಆಳಲು ಭಕ್ತಿ —

ದುರ್ಗವು ಮಾನವ ದೇಹವು | ದುರ್ಗದೆ ಪರಶಿವನು ತಾನುಅಡಗಿಹಭದ್ರಾ||
ದುರ್ಗಮಭವದಾಲಂಪಟ | ದುರ್ಗಮದಾಶಸ್ತ್ರದಿಂದಭೇದಿಸಿಮುದದಿ||೧||
ದುರ್ಗವ ಭೇದಿಸೆದೊರೆವುದು | ದುರ್ಗಮಕೈವಲ್ಯ ಪದವದಾನಂದಮಯಾ||
ದುರ್ಗದಿ ಶೋಭಿಪಮುರಘಾ | ದುರ್ಗದರಾಜೇಂದ್ರ ಪೊರೆಯೊ ಕರುಣಿಸು ದಯದಿ ||೨||

ಶಿರಹಟ್ಟಿ ಚಂದ್ರಿಕೆಯ ಮಂಡಲ,
ತಾ. ೧೬-೧೧-೩೪. } ಕನ್ನಡಿಗರ ಅಡಿಯಾಳು,
ಸಂಪಾದಕ.

## ಸಂದೇಶಗಳು —

ಶಿರಹಟ್ಟಿಯಲ್ಲಿ ಶ್ರೀ ಫಕೀರೇಶ್ವರ ಸ್ವಾಮಿಗಳವರ ಆಶ್ರಯದಿಂದ "ವೀರಶೈವ ಚಂದ್ರಿಕೆ" ಎಂಬ ಮಾಸಪತ್ರಿಕೆಯು ಜನ್ಮವೆತ್ತಿದೆ. ಯಾವತ್ತೂ ಮತದವರು ಕೂಡಿಕೊಂಡು ಪತ್ರಿಕೆಯನ್ನು ನಡೆಯಿಸುತ್ತಿರುವುದು ತುಂಬಾ ಅಭಿಮಾನದ ಸಂತಿಯು. ವಿನೋದಪರವಾದ ಲೇಖನ-ಕವನಗಳನ್ನು ಪ್ರತಿಸಂಚಿಕೆಯಲ್ಲಿ ಸೇರಿಸಿದ್ದಾದರೆ ಪತ್ರಿಕೆಗೆ ಮತ್ತಿಷ್ಟು ಕಳೆ ಏರಬಹುದೆಂಬಾಶಯವಿದೆ. ನನ್ನ ಕೈಲಾದಮಟ್ಟಿಗೆ ಬರಹರೂಪದಿಂದ ಪತ್ರಿಕೆಯ ಅಭಿವೃದ್ಧಿಗೆ ಸಹಾಯನಾಗುತ್ತೇನೆ. "ವೀರಶೈವ ಚಂದ್ರಿಕೆ"ಯು ಬೆಳೆದು ದೊಡ್ಡ ಮರವಾಗಲಿ. ಫಲಗಳಂಬಿಡಲಿ. ವಿಶ್ವಕರ್ನಾಟಕದ ಅಭಿಮಾನಿಗಳಾದ ಕನ್ನಡಿಗರು ಆ ಫಲಗಳಂ ಊಟಮಾಡಲಿ. ದಯಾಮಯನಾದ ವೀರೇಶನು ಚಂದ್ರಿಕೆಗೆ ಯಶವನ್ನುಂಟುಮಾಡಲಿ.

ಬ್ಯಾಡಗಿ, ೧೬—೧೦—೩೪ } ತಾಯ್ನುಡಿಯ ಸೇವಕ,
**ಹೊನ್ನುರಡಿ ಮಲ್ಲನಗೌಡಾ**

---

ಚಂದ್ರಿಕೆಯನ್ನು ಓದಿ ನೋಡಿದೆ. ವಿವಿಧ ಪ್ರಾಂತದವರ ಅಭಿಪ್ರಾಯಗಳಿಂದ ತುಂಬಿದ ತಮ್ಮ ಪತ್ರಿಕೆಯು ಕರ್ನಾಟಕದಲ್ಲೆಲ್ಲ ತನ್ನ ಬೆಳಕನ್ನು ಬೀರಲೆಂದು ಹಾರೈಸುತ್ತೇವೆ. ಜಗತ್ಕಲ್ಯಾಣಕ್ಕಾಗಿ ಜಾತಿ ಮತಗಳನ್ನು ಹಿಂದೆ ದೂಡಿ, ತಮ್ಮ ಮತವನ್ನು ಹೆಚ್ಚಿಸಿದ ಶ್ರೀ ಬಸವೇಶ್ವರರು ನಿಮ್ಮನ್ನು ಸದಾ ಅನುಗ್ರಹಿಸಲಿ.

ಮಂಗಳೂರು, ೧೬—೧೦—೩೪. } **ವಿದ್ವಾನ್ ಬಿ. ಶಂಕರಭಟ್ಟರು,**
( ದ. ಕಾ. ) ಮಂಗಳೂರು.

---

ಪರಭಾಷೆಯ ಕಾಳ್ಗಿಚ್ಚಿಗೆ ನಾವಿಂದು ಬಲಿಯಾಗಹತ್ತಿರುವದು ಕಣ್ಣಿಗೆ ಕಂಡ ಕಠೋರವಾದ ಪರಿಸ್ಥಿತಿ. ಹೀಗಾಗಲಿಕ್ಕೆ ನಮ್ಮ ಕನ್ನಡ ಬಂಧುಗಳು ತಾಯ್ನುಡಿಯ ಗ್ರಂಥಗಳನು ಓದಲಿಕ್ಕೆ ಮೂಗು ಮುರಿಯುವದೇ ಕಾರಣ. ಕರ್ನಾಟಕವು ಜೀವಂತವಾಗಿ ಉಳಿಯಬೇಕಾದರೆ, ಅದು ಒಂದು ರಾಷ್ಟ್ರವೆಂದೆನ್ನಿಸಿಕೊಳ್ಳಬೇಕಾದರೆ, ಅಂತಹ ಸುಧಾರಣೆಯಾಗಬೇಕು. ಅಂತಃಕರುಣವು 'ರೂಪಾಂತರ' ಹೊಂದಬೇಕು, ಆತ್ಮಜ್ಯೋತಿಯು ಬೆಳಗಬೇಕು. ಇದಾಗದೆ ಅದಾಗದು. ಪರಭಾಷೆಯಿಂದ ಕಾರ್ಗತ್ತಲೆಕವಿದ ಕರ್ನಾಟಕದಲ್ಲಿ ದಾರಿಕಾಣದ ಕನ್ನಡಿಗರಿಗೆ, ಕೈ ದೀವಟಿಗೆಯಾಗಿ ಹೊರಟ ಚಂದ್ರಿಕೆಯ ಧ್ಯೇಯವು ಉದಾತ್ತವಾಗಿದೆ. ಉಜ್ವಲವಾಗಿದೆ. ಚಂದ್ರಿಕೆಯು ಉತ್ತರೋತ್ತರ ಅಭಿವೃದ್ಧಿ ಹೊಂದಲಿ. ತಾಯ್ನುಡಿಯ ಸೇವೆಮಾಡಿ ಕೀರ್ತಿಶಾಲಿಯಾಗಿ ಚಿರಕಾಲ ಬಾಳಲಿ !

ಶಿರಹಟ್ಟಿ, ೨೦—೧೦—೩೪. } ಕನ್ನಡ ತಾಯಮ್ಮನ ಮುಪ್ಪಿನ ಸೇವಕ,
**ಹುಜೂರದಾತ ಶ್ರೀನಿವಾಸರಾಯರು**

# ವಿಮರ್ಶ.

"ರಾಜಹಂಸ" ವಿಶೇಷ ಸಂಚಿಕೆ—ಬೆಲೆ ೪ ಆಣೆ—ಧಾರವಾಡ. ಮುಖಪತ್ರದ ಅಂದಚಂದವು ಒಳ್ಳೇ ಮನೋಹರವಾಗಿದೆ. ಕನ್ನಡದ ಮಾಸಪತ್ರಿಕೆಯ ಸಂಪಾದಕರು ಅವರ ಈ ಸಾಹಸ ಮಾದರಿ ತಕ್ಕೊಳ್ಳಬೇಕಾಗಿದೆ. ವಿಷಯಗಳು ಚನ್ನಾಗಿವೆ. ಕನ್ನಡಿಗರು ಅವರ ಈ ಕಾರ್ಯಕ್ಕೆ ಪ್ರೋತ್ಸಾಹಿಸಬೇಕು.

ರಾ. ಬಾ. ಬಾಲೇಹೊಸೂರ,
ವಿಮರ್ಶಕಾರರು.

---

# ತುಣುಕುಮಿಣುಕು.

ಇದೊಂದು ಪದ್ಯಕಾವ್ಯವು. ಅನೇಕ ಪದ್ಯರೂಪದ ಕೃತಿಗಳಿವೆ. "ದೇವಕಿಯ ಪ್ರಳಾಪ" ಎಂಬ ಕಾವ್ಯವು ಉತ್ತಮವಾದದ್ದಾಗಿದೆ. ಶ್ರೀ ಪವಾರ ಅವರು ಕನ್ನಡಿಗರಾಗಿರದಿದ್ದರೂ ಕನ್ನಡ ನಾಡಿನಲ್ಲಿ ತಳವೂರಿ, ಕನ್ನಡ ತಾಯಿಯ ಅನ್ನವನ್ನುಂಡು ಈ ಬಗೆಯಾಗಿ ಕೃತಜ್ಞತೆ ಅರ್ಪಿಸಿದ್ದು ಉಳಿದ ಇಂತಹ ಜನರಿಗೆ ಮಾದರಿ ತಕ್ಕೊಳುವದಾಗಿದೆ. ಅದುಕಾರಣಕನ್ನಡಿಗರು ಅವರ ಕೃತಿಗೆ ತುಂಬಾ ಉತ್ತೇಜನ ಸನ್ನೀಯಬೇಕು.

ಗ್ರಂಥ ದೊರೆಯುವ ಸ್ಥಳ— ಕ್ಷತ್ರಿಯ ಹಿತವರ್ಧಕ ಸಂಘ,
ಬೆಲೆ ೨ ಆಣೆ. ದಾಜೀಬಾನ ಪೇಟೆ, ಹುಬ್ಬಳ್ಳಿ.

ರಾ. ಬಾ. ಬಾಲೇಹೊಸೂರ,
ವಿಮರ್ಶಕಾರರು.

---

# ಮೂರು ರತ್ನಗಳು.

ಬೌದ್ಧ ಧರ್ಮದ ರಹಸ್ಯವನ್ನು ಯೋಗ್ಯವಾದ ರೀತಿಯಲ್ಲಿ ಲೋಕಜನಗಳೆದುರಿನಲ್ಲಿರಿಸುವದೇ ಗ್ರಂಥಕರ್ತರ ಗುರಿ. ಮಾನವ ಜೀವಿಯು ತನ್ನ ಅಂತಿಮಧ್ಯೇಯವನ್ನು ಕಂಡುಕೊಳ್ಳಲಿಕ್ಕೆ ಸಮ್ಯಕದರ್ಶನ—ಸಮ್ಯಕಜ್ಞಾನ-ಸಮ್ಯಕ ಚರಿತ್ರೆ ಈ ಮೂರು ರತ್ನಗಳನ್ನು ದೊರಕಿಸಿಕೊಳ್ಳಲೇಬೇಕು. ಎಂಬೀ ವಿಷಯದ ವಿವೇಚನೆಯೇ ಶ್ರೀ. ಕೇ. ಭುಜಬಲ ಶಾಸ್ತ್ರಿಗಳ ಕೃತಿಯಲ್ಲಿ ಸಮಾವಿಷ್ಟವಾದುದು.

ಗ್ರಂಥ ದೊರೆಯುವ ಸ್ಥಳ— ಶ್ರೀ ಪರ್ಮಶೆಟ್ಟಿ ಪಣಪಿಲ ಅರಮನೆ,
ನೆಲ್ಲಿಕಾರು. ಪೋಸ್ಟು. ದ. ಕಾ.
ಬೆಲೆ— ಉಚಿತವಾಗಿ ಕೊಡುವದು.

ರಾ. ಬಾ. ಬಾಲೇಹೊಸೂರ,
ವಿಮರ್ಶಕಾರರು.

## ಕನ್ನಡಿಗರ ಕಡೆಯ ಕಾಳಗ

ಅಗಡಿಯಲ್ಲಿ ಹೊರಟ ಕನ್ನಡ ಗ್ರಂಥಮಾಲೆಯ ೧ನೇ ಪುಷ್ಪ.

ಲೇಖಕರು— **ಕರಿಯಪ್ಪ ಹುಚ್ಚಣ್ಣನವರು.** ಬೆಲೆ ೦-೩-೦

ಸಾಮಾನ್ಯವಾಗಿ ಕನ್ನಡಿಗರಲ್ಲಿ ಉಂಟಾದ ಹೊಸ ಹುರುಪಿನ ದ್ಯೋತಕವಾಗಿ ಇಂತಹ ಅನೇಕ ಚಿಕ್ಕ ಚಿಕ್ಕ ಕಥೆ-ಕಾದಂಬರಿಗಳು ಹೊರಡುತ್ತಿರುವದು ಶುಭೋದಯವೇ ಸರಿ! ಭಾಷೆಯು ಸರಳವಾಗಿದ್ದು; ಮಧುರವಾಗಿದೆ. ರೋಮಾಂಚಕವಾಗಿದೆ. ಕನ್ನಡಿಗರು ಲೇಖಕರ ಪ್ರಯತ್ನಕ್ಕೆ ಪ್ರೋತ್ಸಾಹನೆ ಕೊಡಬೇಕು.

## ವೀರಮತಿ

ಅರುಣೋದಯ ಗ್ರಂಥಮಾಲೆಯ ಪುಷ್ಪ. ಬೆಲೆ ೧ ಆಣೆ.

ಲೇಖಕರು— **ವೆಂಕಟರಾವ ಫಡಣೀಸ ಶಿರಹಟ್ಟಿ.**

ಕನ್ನಡ ನಾಡಿನ ಸೇವೆಯನ್ನು 'ಅಳಲು ಭಕ್ತಿ ಮಳಲ ಸೇವೆ' ಎಂಬಂತೆ ಸಾಧಾರಣವಾಗಿ ಗ್ರಂಥಕರ್ತರು ಚಿಕ್ಕ ಕಥೆಗಳನ್ನು ಬರೆಯಲು ಪ್ರಯತ್ನಿಸಿದುದು ಸ್ತುತ್ಯವೇ ಸರಿ. ಅವರ ಈ ಕೃತಿಗೆ ಕನ್ನಡಿಗರು ಉತ್ತೇಜನವೀಯಬೇಕು.

ಬಿ. ರಾಮರಾವ,
ವಿಮರ್ಶಕಾರರು.

---

# ವಿಕಟಮಾವ.

ಒಂದು ಉತ್ತಮವಾದ ಹಾಸ್ಯಪತ್ರಿಕೆ. ಇದರಲ್ಲಿ ಮನಸ್ಸಿಗಿಂಪಾಗಿರುವಂತೆ ಸಾಮಾಜಿಕ, ವ್ಯವಹಾರಿಕ, ರಾಜಕೀಯ ವಿಷಯಗಳು ವಿನೋದಕರವಾದ ರೀತಿಯಲ್ಲಿ ಬರುವವು. ಅಲ್ಲದೆ ಅನೇಕ ಚಿತ್ರಪಟಗಳೂ ಸಹ ಬರುವವು. ಉತ್ತಮರೀತಿಯಲ್ಲಿ ಕಡಿಮೆ ಬೆಲೆಯ ಪತ್ರಿಕೆಯೆಂದರೆ ಇದೇ. ಇಂದೇ ಚಂದಾದಾರರಾಗಿರಿ! ವಾರ್ಷಿಕ ಚಂದಾ ಅಂಚೆವೆಚ್ಚ ಸೇರಿ ೧ ರೂಪಾಯಿ. ಬಿಡಿಸಂಚಿಕೆ ೧ ಆಣೆ. ಪ್ರಕಟಣೆ ದರಕ್ಕೂ ಏಜನ್ಸಿ ವಿವರಗಳಿಗೂ ಕೂಡಲೇ ಬರೆದುಕೊಳ್ಳಿರಿ.

**ವಿಕಟಮಾವನ ಕಾರ್ಯಾಲಯ,**

ಹೊಳೇ ನರಸೀಪುರ. (ಹಾಸನ ಡಿ.)

---

**ಈ ಸಂಚಿಕೆಯಲ್ಲಿ ಬಳ್ಳಾರಿ ಟಿ. ಎಚ್. ಎಂ. ಆ್ಯಂಡ್ ಕಂ. ಇವರ ಪಂಚಾಂಗದ ಜಾಹೀರಾತುಗಳನ್ನು ಕಳುಹಿದ್ದೇವೆ. ಅವರ ಈ ಸಂವತ್ಸರದ ಕಲ್ಪವೃಕ್ಷ ಸಿದ್ಧಾಂತ ಪಂಚಾಂಗರತ್ನವನ್ನು ಎಲ್ಲರೂ ಅವಶ್ಯವಾಗಿ ಕೊಳ್ಳಿರಿ!**

---

### ಸೂಚನೆ —

ಚಂದ್ರಿಕೆಯ ವಾಚನಾಲಯಕ್ಕೆಂದು ವಿನಿಮಯಕ್ಕೆ ಬರುವ ಪತ್ರಗಳಲ್ಲಿ ಬಹುತರ ಪತ್ರಗಳು ವೇಳೆಗೆ ಸರಿಯಾಗಿ ಬರುವದಿಲ್ಲ. ಚಂದ್ರಿಕೆಯ ವಾಚನಾಲಯದ ಓದುಗರಿಗೆ ತೊಂದರೆಯಾಗಿದೆ. ಅದುಕಾರಣ ಆಯಾ ಪತ್ರಿಕೆಗಳ ಸಂಪಾದಕರು ಈ ಮುಂದೆ ತಮ್ಮ ಪತ್ರಗಳನ್ನು ಕಾಲಕಾಲಕ್ಕೆ ಕಳುಹಿಸಿ ವಾಚನಾಲಯದ ಈ ತೊಂದರೆಯನ್ನು ದೂರಮಾಡುವವರಾಗಿ ನಂಬಿದ್ದೇವೆ.

—ಸಂಪಾದಕರು



# ಫಿನಾಯಿಲ್



ಪ್ರಸಿದ್ಧ ತೀಕ್ಷ್ಣವಾದ ಫಿನಾಯಿಲ್ ಇದು ಗವ್ಹರ್ನಮೆಂಟನಲ್ಲಿ ಪಾಸಾಗಿರುತ್ತದೆ. ಹಾಸ್ಪಿಟಲ್, ರೇಲ್ವೆ ಗರ್ವರ್ನಮೆಂಟ ಡಿಪಾರ್ಟಮೆಂಟನಲ್ಲಿ ಮತ್ತು ಮುಂಬಯಿ, ಪುಣೆ, ಮದ್ರಾಸ, ಬೆಳಗಾವಿ, ವಿಜಾಪೂರ, ಬಾಗಲಕೋಟ, ಬೈಲಹೊಂಗಲ, ಇಳಕಲ್ಲ, ರಾಮದುರ್ಗ, ಸವಣೂರ ಸ್ಟೇಟ ಮುಂತಾದ ಎಲ್ಲ ಸ್ಥಳಗಳಲ್ಲಿ ಇದೇ ಫಿನಾಯಿಲವನ್ನು ಹೆಚ್ಚಿಗೆ ಉಪಯೋಗಿಸುತ್ತಾರೆ. ಅನೇಕ ಕಂಪನಿಗಳಲ್ಲಿ ತಯಾರಾದ ತರತರಹದ ಜಾತಿಯ ಫಿನಾಯಿಲ್ ಇದಕ್ಕೆ ತುಲನೆ ಮಾಡಿ ಉಪಯೋಗಿಸಿದಲ್ಲಿ ಈ ನಮ್ಮ ಕಂಪಸಿಯ ಫಿನಾಯಿಲ್ ಅತಿ ತೀಕ್ಷ್ಣವಾದದ್ದೆಂದು ಕಂಡುಬಂದಿದೆ

ಈ ಫಿನಾಯಿಲ್‌ವನ್ನು ಗಟಾರ, ಪಾಯಖಾನೆ ಮೊದಲಾದ ಹೊಲಸು ಜಾಗೆಯಲ್ಲಿ ಸಿಡಿಸಿದರೆ ಹವೆಯಲ್ಲಿರುವ ಎಲ್ಲತರದ ಜಂತುಗಳನ್ನು ನಾಶಮಾಡಿ, ಹವೆಯನ್ನು ಶುದ್ಧಮಾಡುವದು. ಪ್ರತಿಯೊಂದು ಊರಿನ ವ್ಯಾಪಾರಸ್ಥರು ಇದೇ ಫಿನಾಯಿಲ್ ಸ್ಟಾಕ ಇಡುತ್ತಾರೆ.

## ಉಪಯೋಗಿಸುವ ಪ್ರಮಾಣ :

೧ ಇದು ಬಹಳ ತೀಕ್ಷ್ಣವಿರುವದರಿಂದ ಇದರ ಒಂದು ಭಾಗದಲ್ಲಿ ೨೦೦ ಭಾಗ ನೀರು ಕೂಡಿಸಿ ಜಂತುಗಳಿದ್ದ ಸ್ಥಳದಲ್ಲಿ ಮೇಲಿಂದಮೇಲೆ ಸಿಂಪಡಿಸಬೇಕು

೨ ಒಂದು ಬಕೇಟ ನೀರಿನಲ್ಲಿ ಇದನ್ನು ಸ್ವಲ್ಪ ಕೂಡಿಸಿ ದಿನಾಲು ಸ್ನಾನ ಮಾಡಿದರೆ ಎಲ್ಲತರದ ಅಂಟುರೋಗಗಳು ದೂರಾಗುವವು.

೩ ಊರಲ್ಲಿ ಪ್ಲೇಗು, ಮೈಲೀಬೇನೆ ಮೊದಲಾದವುಗಳು ಇದ್ದಲ್ಲಿ ೫೦ ಭಾಗ ನೀರನ್ನು ಕೂಡಿಸಿ ಸ್ನಾನ ಮಾಡಬೇಕು.

೪ ಪ್ರಾಣಿಗಳಿಗೆ ಹುಣ್ಣುಗಳಾಗಿದ್ದರೆ ಇದರಲ್ಲಿ ೩ ಭಾಗ ನೀರನ್ನು ಕೂಡಿಸಿ ಆಗಿಂದಾಗ್ಗೆ ಆ ಹುಣ್ಣಿನಮೇಲೆ ಹಚ್ಚತಕ್ಕದ್ದು.

೫ ಅಶುದ್ಧವಾದ ಹವೆಯು ಇದ್ದ ಸ್ಥಳದಲ್ಲಿ ಈ ಮಿಶ್ರಣದಿಂದ ನೆಲವನ್ನು ತೊಳೆಯಬೇಕು.

೬ ಊರಲ್ಲಿ ಪ್ಲೇಗು ಇದ್ದಾಗ ಈ ಫಿನಾಯಲಿನ ೧ ಭಾಗದಲ್ಲಿ ೬೦ ಭಾಗ ನೀರನ್ನು ಕೂಡಿಸಿ ಹಾಕಿಕೊಳ್ಳುವ ಎಲ್ಲ ಅರಿವೆಗಳನ್ನು ಎದ್ದಿ ಒಣಗಿಸಬೇಕು.

**ದಿವಾನ ಆ್ಯಂಡ್ ಕಂಪನಿ, ಗದಗ.**

# ಅತ್ಯುತ್ತಮವಾದ ಕೆಲವು ಅನುಭವಸಿದ್ಧ ಔಷಧಗಳು.

ಕೇವಲ ಮೋಹಕವಾದ ಲೇಬಲುಗಳಿಂದ ಕೂಡಿದ ಹಾಗು ಆಡಂಬರದ ಜಾಹೀರಾತುಗಳಿಗೆ ಮೋಸಹೋಗಿ ಸಲ್ಲದ ಔಷಧಗಳನ್ನು ತರಿಸಿ ನಿಮ್ಮ ದೇಹಾರೋಗ್ಯದ ಹಾನಿಯನ್ನು ಮಾಡಿಕೊಳ್ಳಬೇಡಿ! ಕಸ್ತೂರಿಯ ವಾಸನೆಯನ್ನು ಬಾಯಿಂದ ಹೇಳಬೇಕಾದವಶ್ಯವಿಲ್ಲ. ಹಾಗೆ ನಮ್ಮ ಔಷಧಗಳಲ್ಲಿರುವ ಗುಣದಬಗ್ಗೆ ಖಾತ್ರಿ ಮಾಡಿಕೊಳ್ಳಬೇಕು.

## ಔಷಧಗಳ ವಿವರ:

(೧) ಕಾಲರಾಪಿಲ್ಸ ೧೦೦ಕ್ಕೆ ೫ ರೂ. (೨) ವ್ಯಾಧಿಗಜಕೇಸರಿ ೧ ರೂ ೨ ತೊಲಿ (೩) ಹುರಕಿನ ಚೀಟು ೧೦೦ಕ್ಕೆ ೫ ರೂ. (೪) ವ್ಯಾಧಿಹರಗುಟಿಕಾ ೧ ರೂ. ೨ ತೊಲಿ (೫) ಥಂಡಿಜ್ವರಕ್ಕೆ ೨೪ ಮಾತ್ರೆಗೆ ೧ ರೂ. (೬) ಬಚನಾಗಾದಿಗುಟಿಕಾ ೧ ರೂ ೨ ತೊಲಿ (೭) ಅಶ್ವಗಂಧಿಚೂರ್ಣ ೧ರೂ. ೪ ತೊಲಿ (೮) ಸಂಜೀವಿನಿ ಗುಟಿಕಾ ೧ ರೂ. ೨ ತೊಲಿ. (೯) ನಾಗಾರ್ಜುನಚೂರ್ಣ ೧ ರೂ. ೪ ತೊಲಿ (೧೦) ಹಿಂಗ್ವಾದಿಚೂರ್ಣ ೧ ರೂ. ೨ ತೊಲಿ (೧೧) ಪುಷ್ಯಾನುಗಚೂರ್ಣ ೧ ರೂ. ೪ ತೊಲಿ (೧೨) ಗುಲ್ಮಜಲೋದರಮಹೋದರ ಚೂರ್ಣ ೧ ರೂ. ೨ ತೊಲಿ (೧೩) ಭಾಸ್ಕರಲವಣ ೧ ರೂ. ೪ ತೊಲಿ (೧೪) ಅಗ್ನಿಕುಮಾರ ರಸ ೧ ರೂ. ೧ ತೊಲಿ (೧೫) ಮಹಾಜರಾಂಕುಶ ೨ ರೂ. ೧ ತೊಲಿ (೧೬) ವಾತುವಿಧ್ವಂಸ ರಸ ೧ ರೂ. ೪ ತೊಲಿ (೧೭) ಮೃತ್ಯುಂಜಯ ರಸ ೨ ರೂ. ೧ ತೊಲಿ (೧೮) ಮಹಾಯೋಗರಾಜ ಗುಗ್ಗಳ ೪ ರೂ. ೧ ತೊಲಿ (೧೯) ಪ್ರದವಾದಿ ರಸ ೨ ರೂ. ೧ ತೊಲಿ (೨೦) ಕಾಮೇಶ್ವರ ೪ ರೂ. ೧ ತೊಲಿ (೨೧) ಗರ್ಭಿಣಿಗೆ ೧೪ ಮಾತ್ರೆಗೆ ೫ ರೂ. (೨೨) ಮೂಲವ್ಯಾಧಿಗೆ ೧೪ ಮಾತ್ರೆಗೆ ೧ ರೂ. (೨೩) ಶೂಲವಜ್ರಣಿ ೫ ರೂ. ತೊಲಿ ೧ (೨೪) ಯಾವತ್ತೂ ವ್ರಣಗಳಿಗೆ ಮಲಮು ಡಬ್ಬಿ ೨ ಆಣೆ (೨೫) ಸರ್ವವಾತಕ್ಕೆ ೫ ರೂ. ೧ ತೊಲಿ (೨೬) ಪರಿಣಾಮಶೂಲಿಗೆ ೨ ರೂ. ೧ ತೊಲಿ (೨೭) ಸುದರ್ಶನ ಚೂರ್ಣ ೧ ರೂ. ೪ ತೊಲಿ (೨೮) ಶ್ಲೇಷ್ಮಿಗೆ ೧ ರೂ. ೨ ತೊಲಿ.

ಅನುಪಾನ— ಪಥ್ಯ ಔಷಧಗಳಕೂಡ ವಿವರಿಸುವದು. ಹೆಚ್ಚಿನ ಮಾಹಿತಿ ಬೇಕಾದಲ್ಲಿ ಕೆಳಗಿನ ವಿಳಾಸಕ್ಕೆ ಬರೆದು ತಿಳಕೊಳ್ಳಬಹುದು.

ನಮ್ಮ ವಿಳಾಸ:— **ಬ. ಕೆ. ಪಾಟೀಲ ಶಿರಹಟ್ಟಿ**

ಪ್ರೋ. ಶಿರಹಟ್ಟಿ

ವಾರ್ಷಿಕ ಚಂದಾ ೧-೮-೦, ಅ... ಪೋಸ್ಟ ಸೇರಿ ೧-೧೧-೦.
ಬಿಡಿ ಸಂಚಿಕೆ ೦-೩-೦.

ಶಿರಹಟ್ಟಿ.

ಶ್ರೀ ಫಕ್ಕೀರೇಶ್ವರ ಸ್ವಾಮಿಗಳ ಕೃಪಾಛತ್ರದಲ್ಲಿ ನಡೆದ,

ಶ್ರೀ

# ವೀರಶೈವ ಚಂದ್ರಿಕೆ.

ನೈತಿಕ, ಸಾಮಾಜಿಕ, ಧಾರ್ಮಿಕ ವಿಷಯಗಳಿಂದೊಡಗೂಡಿದ
ತಿಳಿಗನ್ನಡ ಮಾಸಪತ್ರಿಕೆ.

ಹುಟ್ಟು : ಶಕೆ ೧೮೫೫. ಶ್ರೀ ಬಸವ ಜಯಂತಿ.

| ಸಂಪುಟ | ಹೊಸ್ತಲ ಹುಣ್ಣಿವೆ. | ಸಂಚಿಕೆ |
|---|---|---|
| ೧. | ೨೦ — ೧೨ — ೧೯೩೪. | ೮. |

ಕಂದ

ತೆನ್ನಯನಾಡ-ನುಡಿಗ |
ಳುನ್ನತಿಯಂ ಮಾಳ್ಪಕಜ್ಜ ಕಿನ್ನೆಣೆಯುಂಟೇ ||
ಕನ್ನಡದೇಳ್ಗೆಯಬಗೆಯಂ|
ಕನ್ನಡಿಗರ್ ತಿಳಿದುಕೊಡಲಿದಕ್ಕಾಶ್ರಯ
ಮಂ ||೧||

ಕಂದ

ಬಂದವರಂಬರಿಸದಿಹಂ |
ಸಂದವರಂಸಂತವಿಸದನಹ ತಾಯ್ನುಡಿಯಂ ||
ವಂದಿಸದಿರುವಂ ಮನುಜನೊ! |
ಬಂಧ್ಯನೊ! ಕಾಣಳಿಗೆ ಪುಟ್ಟಿ ಫಲವೇನಿಸಿಹ
ನೋ! ||೨||

ಕವಿ- ವಾಜಪೇಯ ಜ್ಞಾನಂದಾರ್ಯರು.

ಕನ್ನಡ ಜನಾಂಗವನ್ನು ಐಹಿಕ ಪಾರತ್ರಿಕವೆಂಬ ಎರಡೂ ತರಹದ ಉನ್ನತಿಯ ಮೆಟ್ಟಲಿಗೇರಿಸುವ ದೃಷ್ಟಿಯಿಂದಲೂ ಕನ್ನಡ ಸಾಹಿತ್ಯದೊಳಗಿನ ಉಚ್ಚ ಕೋಟಿಯ ವಾಙ್ಮಯವೆಂಬ ದೃಷ್ಟಿಯಿಂದಲೂ ಸಮಾನ ಯೋಗ್ಯತೆಯವಾದ ಈ ಎರಡೂ ಶಾಖೆಗಳನ್ನು ಕನ್ನಡ ಸಾಹಿತ್ಯ ಭಕ್ತರು ಇದು ನನ್ನದು ಇದು ಬೇರೆಯವರದು ಎಂದು ಸಂಕುಚಿತ ಭಾವನೆಗೆ ಎಳ್ಳಷ್ಟು ಎಡೆಗೊಡದೆ ಸಮಾನ ದೃಷ್ಟಿಯಿಂದ ಆದರಿಸಲು ಮುಂದುವರಿಯಬೇಕೆಂದು ನಾನು ಹೇಳುವದು.

ಮುಗಳಿಖೋಡ ಕೃಷ್ಣರಾಯರು,
ವಿಜಾಪೂರ ಜಿಲ್ಲಾ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು.

ಸಂಪಾದಕರು ಹಾಗೂ ಪ್ರಕಾಶಕರು,
ಆಲೂರ ಮುರಿಗೆಪ್ಪ ಶೆಟ್ಟರು.

ಬಾಲಸುಧಾ ೪ ಔಂಸಿನ ಬಾಟ್ಲಿಗೆ ೦-೭-೦, ೮ ಔಂಸಿನ ಬಾ. ೦-೧೨-೦.




ವಾಸಕ ೪ ಔಂಸಿನ ಬಾಟ್ಲಿ ಕಿಮ್ಮತ್ತು ೦—೬—೦.

## —ಬಾಲ ಸುಧಾ—

ಚಿಕ್ಕ ಮಕ್ಕಳ ಹೊಟ್ಟೆ ದೊಡ್ಡದಾಗುವದು, ಅಜೀರ್ಣದಿಂದ ಹೊಟ್ಟೆ ಉಬ್ಬುವದು, ಝಾಡಿಸುವದು, ಹೊಟ್ಟೆನೋವು, ಮಲಬದ್ಧತೆ ಮುಂತಾದ ಅಪಚನದ ವಿಕಾರಗಳು, ಮುಟ್ಟ ದೋಷಗಳು. ರಿಕೆಟ್ಸ್. ಕೆಮ್ಮು, ನೆಗಡಿ ಮುಂತಾದ ಕಫವಿಕಾರಗಳು, ಯಕೃದಭಿವೃದ್ಧಿ ಪ್ಲೀಹಾಭಿವೃದ್ಧಿ ಮುಂತಾದ ಭಯಂಕರ ರೋಗಗಳು ಶೀಘ್ರ ಕಡಿಮೆಯಾಗಿ ಚಿಕ್ಕ ಬಾಲಕರು ಸಶಕ್ತರೂ, ಪುಷ್ಟರೂ, ಸುಂದರರೂ ಆಗುವರು.

## —ವಾಸಕ—

ಈ ಔಷಧದಿಂದ ಕಫಕ್ಷಯ, ದಮ್ಮು, ಕೆಮ್ಮು, ನೆಗಡಿ, ಇನ್‌ಫ್ಲುಯಂಝಾ, ನ್ಯೂಮೋನಿಯಾ, ಸಣ್ಣ ಹುಡುಗರ ಪಕ್ಕೆ ಬಡಕೊಳ್ಳುವ ಭಯಂಕರ ರೋಗ (ಬ್ರಾಂಕೋನ್ಯೂಮೋನಿಯಾ) ಕೊಡಗಕೆಮ್ಮು. ಕಫಜ್ವರ, ಕಫ ಗಟ್ಟಿಯಾಗುವದು, (ತ್ರಿದೋಷಜ್ವರದಲ್ಲಿ) ಮುಂತಾದ ತ್ರಾಸದಾಯಕ ಭಯಂಕರ ರೋಗಗಳು ಖಾತ್ರಿಯಿಂದ ಗುಣ. ಬಹುದಿವಸ ದಮ್ಮಿನಿಂದ ಬಳಲುವ ಎಷ್ಟೋ ಜನರು ಇದನ್ನು ಉಪಯೋಗಿಸಿ ಸುಖಹೊಂದಿದ್ದಾರೆ.

**ಕರ್ನಾಟಕ ಆಯುರ್ವೇದಿಕ ಫಾರ್ಮಸಿ,**
**ಶಿರಹಟ್ಟಿ. ಜಿಲ್ಲಾ ಧಾರವಾಡ.**

ಕವಿತ್ವವು ಪ್ರಾಯದ ಕನ್ಯೆಯಂತಿರುವದು ಬಲಾತ್ಕರಿಸಿದರೆ ಹೇಗೆ ವಿರಸವೋ ಹಾಗೆಯೇ ಅಕ್ಷರಗಳನ್ನು ಎಳೆದೆಳೆದು ಕೂಡಿಸಿದ ಕವಿತ್ವವು ವಿರಸವು. ಅವನು ಕವಿಯಾಗಲಾರನು. ಕವಿಯು ಸ್ಫೂರ್ತಿದಾಯಕವಾದ ಸಹಜ ಓಜಸ್ಸೇ ಕವಿತ್ವವು. ಅಂತಹ ಕವಿತ್ವದಿಂದ ಭಗವಂತನು ಪ್ರೀತನಾಗುವನು. ಅಂತೆಯೇ ಕನಕದಾಸ-ಪುರಂದರದಾಸ ನೊದಲಾದ ಪ್ರಾಸಾದಿಕ ಕವಿವರ್ಯರು ಭಗವಂತನನ್ನು ಕುಣಿದಾಡಿಸಿದರು

ವೈ ತಿರುಮಲೆ ವಿದ್ವಾನ ವೆಂಕಟಾಚಾರ್ಯರ ತಿರುಳು

# ಪದ್ಯಶ್ರೀಮೆ.

ನೈಜವಾದ ಕವಿತ್ವವು ಕಲ್ಲನ್ನು ಕರಗಿಸಲು ಬಹುದು. ಮಾತಾಡಿಸಬಹುದು. ಅಂಧತ್ವವನ್ನು ಹೋಗಲಾಡಿಸಬಹುದು. ಆದರೆ ಶತಬಂಧಿಸಂಧನಗಳಿಂದ ಶಲಾಕಾಸಾಧನಮುಳ್ಳ ಶಕಟಕ್ಕೆ ಮುಹೂರ್ತಪ್ರಯಾಣದಲಿ ಚಕ್ರಕ್ಕಪಾಯಮಂ ಬಂದರೆ ಮುಂದೊಂದಂಗುಲವಾದರೂ ಹೇಗೆ ಗಮಿಸಲರಿಯದೋ ಹಾಗೆ ಲಕ್ಷಣವಿಲ್ಲದ ತಿರುಳಿಲ್ಲದ ಅಕ್ಷರಲಕ್ಷಗಳನ್ನು ಹೊಂದಿಸಿದ ಕವಿತ್ವವು ಮುಂದರಿಯದು.

—ಭ್ರಾಂತೇಶ.

ವೀರಶೈವ ಚಂದ್ರಿಕೆ.

ಬಯಲುಮೂರ್ತಿಯಾಗಿನಿಂದನೊಬ್ಬ ಶರಣ. ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ. ಆತನ ಶಾಂತಿಸ್ಫುರಣೆಯಿಂದ ಹುಟ್ಟಿದಾತ ವಿಷ್ಣು. ಆತನ ಕೋಪ ಕ್ರೋಧದಿಂದ ಹುಟ್ಟಿದಾತ ರುದ್ರ. ಈ ಮೂರು ಸೀಕವಂತಿರಲಿ. ಆ ಶರಣನನರಿದು ಶರಣೆನುತಿರ್ದೆನು ಕೂಡಲ ಸಂಗಮದೇವಾ. —ಶ್ರೀ ಬಸವೇಶ್ವರ.



| ಸಂಪುಟ ೧ | ಶ್ರೀಮನ್ನೃಪಶಾಲಿವಾಹನ ಶಕೆ ೧೮೫೬ ಹೊಸ್ತಿಲ ಹುಣ್ಣಿವೆ. | ಸಂಚಿಕೆ ೮ |
|---|---|---|



# ಕನ್ನಡ ನಾಡಿನ ರಾಷ್ಟ್ರಗೀತೆ.

ಉದಯವಾಗಲಿ ನಮ್ಮ | ಚಲುವ ಕನ್ನಡ ನಾಡು ||
ಬದುಕು ಬಲು ಹಿನಸಿಧಿಯು || ಸದಭಿಮಾನದ ಗೂಡು ||ಪಲ್ಲ||

ರಾಜನ್ಯರಿಪುಪರಶು | ಭರನ ಜನನಿಯ ನಾಡು |
ಆಜಲಧಿಯನು ಜಗಿದ | ಹನುಮನುದಿಸಿದ ನಾಡು ||
ಓಜೆಯಿಂ ಮೆರೆದರಸು | ಗಳ ಸಾಹಸದ ಸೂಡು |
ತೇಜವನು ನಮಗೀವ | ವೀರಸ್ಮಂದದ ಬೀಡು ||೧||

ಲೆಕ್ಕಿಗಮಿತಾಕ್ಷರರು ಬೆಳದು ಮೆರದಿಹ ನಾಡು |
ಜಕ್ಕಣನ ಶಿಲ್ಪಕಲೆ | ಯಚ್ಚರಿಯ ಕರುನಾಡು |
ಚೊಕ್ಕ ಮತಗಳ ಸಾರಿದವರಿಗಿದು ನೆಲೆವೀಡು |
ಜೊಕ್ಕಸದ ಕಣಜವಿದು | ಶಿರಿಯು ನಲಿಯುವ ನಾಡು ||೨||

ಪಾವನೆಯರಾ ಕೃಷ್ಣೆ | ಭೀಮೆಯರ ತಾಯ್ನಾಡು |
ಕಾವೇರಿ ಗೋದೆಯರು | ಪೈದೊಳೆದ ನಲುನಾಡು ||
ಆವಗಂ ಬಗೆಯ ನಗಿಸುವ | ಕಬ್ಬಿಗರ ಹಾಡು |
ಕಾವಗದುಗಿನ ವೀರನಾರಾಯಣನ ಬೀಡು ||೩||

# ರಾಷ್ಟ್ರಗೀತೆಯ ನೋಟೇಶನ್.

ರಾಗ— ತಿಲಕಕಾಮೋದ ತಾಳ ಝಂಪೆ ಮಾತ್ರಾ ೧೦.

ಆರೋಹ
ಅವರೋಹೆ } ಸಾ ರಿ ಗ ಸಾ ರಿ ಮ ಪ ನಿ ಸಾ ನಿ ಧ ಪ ಮ ಗ ರಿ ಗ ಸಾ

೨ ನಿಷಾಧಗಳು

ಧಿನ್ನಾಧೀಧಿನ್ನಾತೀನ್ನಾತೀತಿನ್ನಾ | ಧೀನ್ನಾಧೀಧಿನ್ನಾತೀನ್ನಾತೀತಿನ್ನಾ |
ಉ ದ ಯ ವಾಽ ಗ ಲಿ ನಽ ಮ್ಮ | ಚ ಲು ವ ಕಽ ನ್ನ ಡ ನಾಽ ಡು |

ಪ ಸಾ ನಿ ಸಾಽ ನಿ ಧ ಮ ಗ ಸಾ | ರಿ ಪ ಮ ಗ ಸಾ ರಿ ಮ ಗಽ ಸಾ |
ಬದುಕು ಬಲುಹಿನ ನಿಧಿಯು | ಸದಭಿಮಾಽನದಗೂಽಡು

ರಿ ರಿ ಮ ಪ ನಿ ಸಾ ನಿ ಸಾಽ ಸಾ | ಪ ನಿ ಸಾ ರಿ ಸಾ ರಿ ಮ ಗಽ ಸಾ ||ಪಲ್ಲ||
ರಾಽ ಜಽ ನ್ಯ ರಿ ಪು ಪ ರ ಶು | ಧ ರ ನ ಜ ನ ನಿ ಯ ನಾಽ ಡು |

ರಿ ಮ ಪ ನಿ ನಿ ಪ ನಿ ಸಾಽ ಸಾ | ಪ ನಿ ಸಾ ರಿ ಸಾ ರಿ ಮ ಗ ಽ ಸಾ |
ಆ ಽ ಜ ಲ ಧಿ ಯ ನು ಜಿ ಗಿ ದ | ಹ ನು ಮ ನು ದಿ ಸಿ ದ ನಾಽ ಡು ||

ಪ ನಿ ಸಾ ಸಾ ನಿ ಸಾ ನಿ ಸಾಽ ಸಾ | ಪ ನಿ ಧ ಮ ಗ ರ ಮ ಗಽ ಸಾ |
ಓಽ ಜೆ ಯಿಂ ಮೆ ರೆ ದ ರ ಸು | ಗ ಳ ಸಾಽ ಹ ಸ ದ ಸೊಽ ಡು |

ರಿ ಮ ಮ ಪ ಪ ಮ ಪ ರಿ ಮ ಮ | ರಿ ಮ ಪ ನಿ ನಿ ಸಾ ನಿ ಸಾಽ ಸಾ |
ತೇ ಜ ವ ನು ನ ಮ ಗಿಽ ವ | ವಿಽ ರ ವೃಂ ದ ದ ಬೀ ಡು ||
ಪ ನಿ ಸಾ ರಿ ಸಾ ರಿ ಮ ಗಽ ಸಾ | ನಿ ಧ ಮ ಗ ಸಾ ರಿ ಮ ಗಽ ಸಾ ||೧||

ಕಾಂಬೋಜಿ

ಸಾ ರಿ ಗ ಮ ಪ ಧ ಸಾ | ಸಾ ನಿ ಧ ಪ ಮ ಗರಿ ಸಾ ನಿ ಪ ದ ಸಾ ( ೨ನಿಷಾಧ
ಲಿ ಕ್ಕಿ ಗ ಮಿ ತಾಽ ಕ್ಷ ರ ರುಽ | ಬೆ ಳೆ ದು ಮೆ ರ ದಿ ಹ ನಾಽ ಡು |
ಪ ಧ ಸಾ ಸಾ ಸಾ ಸಾ ಸಾ ನಿ ನಿ ಧ | ಮ ಪ ಧ ಧ ಧ ಧ ಸಾ ನಿ ಧ ಪ |
ಜ ಕ್ಕಽ ಣ್ಣ ನ ಶಿಽ ಲ್ಪ ಕ ಲೆ | ಯಽ ಚ್ಚ ರಿ ಯ ಕ ರು ನಾಽ ಡು |
ಗ ಪಽ ಪ ಪ ಪ ಧ ಪ ಮ ಗ | ಗ ಗ ಪ ಪ ಧ ಪ ಧ ಸಾಽ ಸಾ ||
ಚೊಽ ಕ್ಕ ಮ ತ ಗ ಳ ಸಾಽ ರಿ | ದ ವ ರಿ ಗಿ ದು ನೆ ಲೆ ವೀ ಡು |
ಧಽ ಸಾ ರಿ ಗ ಸಾ ರಿ ಗಽ ಗ | ಸಾ ರಿ ಗ ಮ ಗ ರಿ ಸಾ ನಿ ಧ ಪ |
ಬೊಽ ಕ್ಕ ಸ ದ ಕ ಣ ಜ ಯ | ಶಿ ರಿ ಯು ನ ಲಿ ಯು ವ ನಾಽ ಡು |
ಪ ನಿ ಸಾ ರಿ ಸಾ ರಿ ಮ ಗಽ ಸಾ | ನಿ ಧ ಮ ಗ ಸಾ ರಿ ಮ ಗಽ ಸಾ ||೨||

ಭೂಪ.

ಸಾ ರಿ ಗ ಪ ಧ ಸಾ । ಸಾ ಧ ಪ ಗ ರಿ ಸಾ
ಪಾಽ ವ ನೆ ಯ ರಾಽ ಕೃಽ ಷ್ಣೆ । ಭೀ ಮೆ ಯ ರ ತಾ ಯ್ ನಾಽ ಡು ।
ಪ ಧ ಸಾ ಸಾ ಸಾ ಸಾ ಧ ಪ ಧ ಧ । ಗ ಪ ಧ ಪ ಧ ಪ ಗ ರಿಽ ಸಾ ।
ಕಾಽ ವೇ ರಿ ಗೋ ದೆ ಯ ರು । ವೈಽ ದೊ ಳೆ ದ ನ ಲು ನಾಽ ಡು ।
ಸಾ ರಿ ಗ ಪ ಪ ಗಽ ಗ ರಿ ಗ । ಗ ಪ ಧ ಪ ಧ ಪ ದ ಸಾಽ ಸಾ ।
ಆಽ ವ ಗಂ ಬ ಗೆ ಯ ನ ಗಿ । ಸು ವ ಕಽ ಬ್ಬಿ ಗ ರ ಹಾಽ ಡು ।
ಪ ಧ ಸಾ ರಿ ಗ ಸಾ ರಿ ಗಽ ಗ । ಸಾ ರಿ ಗ ಗ ರಿ ಗ ರಿ ಸಾಽ ಸಾ ।
ಕಾಽ ವ ಗ ದು ಗಿ ನ ವೀ ರ । ನಾಽ ರಾಽ ಯ ಣ ನ ಬೀ ಡು ।
ಪ ನಿ ಸಾ ರಿ ಸಾ ರಿ ಮ ಗಽ ಸಾ । ನಿ ಧ ಮ ಗ ಸಾ ರಿ ಮ ಗಽ ಸಾ ॥೩॥

**ಟೀಪು—** ಪ್ರತಿಯೊಂದು ನುಡಿಯ ಕೊನೆಯ ಚರಣವನ್ನು ತಿಲಕಕಾಮೋದ ರಾಗದಿಂದ ಮುಗಿಸಲಾಗಿದೆ.

**ಬಿಜಾಪೂರ ನಾರಾಯಣರಾಯರು, ಶಿರಹಟ್ಟಿ.**

---

# ಭಿಕ್ಷೆ.

ನವಲಗುಂದ ಕೈಬರಹದ ವಿದ್ಯಾರಣ್ಯ ಮಾಸಿಕದೊಳಗಿನ "ಚಾತಕವಿಲಾಪ"

ವಾ. ಷ.

ಮನವೆಂಬ ತಿರುಕನೇ ವಿವಿಧ ವಿಷಯುಗಳೆಂಬ ।
ಮನೆಗಳಂ ತಿರುತಿರುಗಿ ಕಡೆಗೆ ಬಳಲುವದೇಕೆ ।
ದನುಜಾರಿಯೆಂಬ ಸಿರಿವಂತನರಮನೆಯಬಳಿಸಾರದೇಂ ದೂರಿಲ್ಲವು ॥
ಸ್ನೇಹದೊಳು ಹೃದಯಾಬ್ಜದಲ್ಲಿ ಹೊಳೆಹೊಳೆಯುತಿಹ ।
ಚಿನುಮಯಾತ್ಮಕನ ಚರಣಂಗಳಂ ನೆನೆನೆನೆದು ।
ಘನತರ ವಿರಾಗದಿಂ ಮೋಕ್ಷ ಭಿಕ್ಷೆಯ ಬೇಡಿ ಪೂರ್ಣಸುಖಿಯಾಗು ಸತತ ॥೧॥

# ಜನಪದ ಸಾಹಿತ್ಯ.



## ಹಳ್ಳಿಯ ಹಾಡುಗಳು.

ಸಂಗ್ರಾಹಕರು :— "ತಿಮ್ಮಣ್ಣ"

ಕಳಕಪ್ಪನ ಗುಡದಾಗ ಗುರುಗುಡುದೇನಪ್ಪ | ರುದ್ರಪಾದವ ಕಸಿಹಲಗಿ |
ರುದ್ರಪಾದವಕಸಿಹಲಗಿ ಬಡವರ | ಕಬ್ಬಕ್ಕಿ ಹಿಂಡು ಕದಲೀತೋ ||೧||
ಕೆಂಧೂಳಕೆರಿಯ್ಯಾಗ ಮಂದ್ಯಾಕ ನೆರದೈತೊ | ನಂದಿಕೋಲಾಟಾನವಿಲಾಟ |
ನಂದಿಕೋಲಾಟ ನವಿಲಾಟ ನಮ್ಮಬಸವ | ಹೇವ ಒಗದಲ್ಲಿ ಚಲ್ಲಾಟ ||೨||
ತೆಗ್ಗಿಲ್ಲ ತೆವರಿಲ್ಲ ಮುಗ್ಯಾವೋ ಎರಡಾನಿ | ತೆಗ್ಗಿನಾಗೈತೊ ಯಮನೂರು |
ತೆಗ್ಗಿನಾಗೈತೊ ಯಮನೂರ ಒಡೆಯುಗ | ದೊರಿಯಿದ್ದು ಕೈಮುಗಿದಾನೋ ||೩||
ಹಾಸೆಬಂಡಿಯುವ್ಯಾಲ ಹಾದುಹೋದವರ್ಯಾರೊ | ಪಾದ ಮುಡ್ಯಾವೋ ಪರಿ ಪರಿ |
ಪಾದ ಮುಡ್ಯಾವೋ ಪರಿ ಪರಿಯ ಪಾಂಡವರು | ಹಾದು ಹೋಗ್ಯಾರೊ ಜಳಕಕ್ಕ ||೪||
ಜಿಡಿದ ಹರಕಿ ಮಾಡವ ಇದ್ದರ ಕಾಡತಾನಲ್ಲ ಪರಿ ಪರಿ |
ಕಾಡತಾನಲ್ಲ ಪರಿ ಪರಿ ಯಮನೂರೊಡೆಯ | ಬೇಡತಾನಲ್ಲ ಕುದರೀಯ ||೫||
ಕರಿದು ಕಮಲಪ್ಯಾಟಿ ಬಿಳಿದು ಬಂಕಾಪೂರ | ಶರಗು ಕೇಳಿದರ ಶ್ಯಾಪುರವ |
ಶರಗು ಕೇಳಿದರ ಶ್ಯಾಪೂರವ ಬಲುಮುಂದಿ ಕೇಳ್ಯಾರ | ದೊರಿ ನನ್ನ ಅಣ್ಣ ಉಡಸ್ಯಾನು ||೬||
ಕಾಶೀಗೆ ಹೋಗುವದು ಏಸೊಂದು ದಿನ ಬೇಕ | ತಾಸೊತ್ತಿನ ದಾರಿ ಯಮನೂರ |
ತಾಸೊತ್ತಿನ ದಾರಿ ಯಮನೂರೊಡೆಯುಗ | ಕೂಸೆತ್ತಿ ಕೈಯಮುಗದೇನ ||೭||
ಅಪ್ಪ ಯಮನೂರೊಡೆಯ ತೆಪ್ಪುದೊಡ್ಡದವಾರ | ಟೊಪ್ಪಿಗಿ ಮಗನ ದೈವಾಡ |
ಟೊಪ್ಪಿಗಿ ಮಗನ ದೈವಾಡ ದರ್ಗಾಕ | ತಪ್ಪದೈದವಾರ ಬರತೇನಿ ||೮||
ನಿನ್ನನಾನೋಡಾಕ ಹೊನ್ನಲ್ಲ ಚಿನ್ನಲ್ಲ | ಬಿಂಮುಲಿಗುಂಡಿನ ಮಗಮುಂದ |
ಬಿಂದುಲಿಗುಂಡಿನಮುಂದ ಅದನೋಡಿ | ಕಂದನ ನೋಡಿ ಮರತೇನ ||೯||
ಶಡಗರದ ಶ್ಯಾವಿಗಿ ಬಡಿವಾರದ ಪುಡಿಜೆಲ್ಲ | ಗದುಗಿನ ವೀರಣ್ಣಾಗ ಎಡಿ ಮಾಡಿ |
ಗದುಗಿನ ವೀರಣ್ಣಾಗ ಎಡಿಮಾಡಿ ಬೇಡಿಕೊಂಡೆ | ಶಡಗರದತವರ ನನಗಿರಲೆ ||೧೦||
ಹಾವಹಾವಂದರ ಹರನೆಲ್ಲಿ ನಡಿಗ್ಯಾನ | ಹಾವಲ್ಲವೇಳ ಹಂಪಿ ವಿರೂಪಾಕ್ಷ |
ಹಾವಲ್ಲವೇಳ ಹಂಪಿವಿರುಪಾಕ್ಷನ ಗುಡಿಯಿಂದ ಹಾವಾಗಿ ಗಂಗಿ ಹರದಾಳ ||೧೧||

# ಹದಿನಾರುಸೋಮವಾರಗಳ ಪದ್ಯಕಥೆ.

## ಶ್ರೀ ಶಿವವ್ರತ.

( ಶಿವಾನಂದ ದೀಕ್ಷಿತವಾಜಪೇಯವಿರಚಿತಂ )

(ಮುಂದೆ ಸಾಗಿದ್ದು.)

ಭಾ. ಷಟ್ಪದಿ.

( ಸಾಧುವು ರಾಣಿಯನ್ನು ಮನೆಗೆ ಕರಕೊಂಡು ಬಂದದ್ದು )

೪೦ ಅವಳಕಂಡಾ ಮೂರ್ಛೆಗುಪಶಮ |
ನವನುರೆಯೆಸಗಿಯಾಕೆಯಿಂದೆ |
ಲ್ಲವಿವರಂಗಳ ತಿಳಿದು ಮಗಳೇ! ಅಂಜಬೇಡಿನ್ನು ||
ಭವನಸಕ್ಕೈತಂದಿಷ್ಟು ಮನೆಗೆಲ |
ಸವನೆಸಗಿನೀಂ ಸುಖಮಿರೆನ್ನಯ |
ಕುವರಿಯೆಂದಾಗವಳ ತಾಂ ಕರೆತಂದನಾಗೃಹಕೆ ||

( ಅಡಿಗೆಯಲ್ಲಿಯೂ ಹುಳಗಳು ಬಿದ್ದದ್ದು-ಸಾಧುವು ಶ್ರೀ ಶಿವನನ್ನು ಧ್ಯಾನಿಸಿದ್ದು )

೪೧ ಇತ್ತವಳು ಮನೆಗೆಲಸವಂ ಮಾ ।
ಡುತ್ತಿರಲು ಪಾಕದಲಿ ಹುಳಗಳು |
ಮುತ್ತಿಬಿದ್ದು ವಿಳಾಪಿಸುತ್ತಿರೆ ಸಾಧುವಿದಕಂಡು ||
ಪುತ್ರಿಯಿಂತೆರವಳಲವಿಹತಿಗೆ
ಚಿತ್ತದಲಿ ಸಂಸ್ಮರಿಸೆ ಶಿವನನು |
ಕೃತ್ತಿವಾಸನು ನಲಿದು ಮನದಿನೇನೊ! ಸಾಧು! ಎನೆ ||

( ಶ್ರೀ ಶಿವನಿಗೆ ಸಾಧುವಿನ ಪ್ರಾರ್ಥನೆ )

೪೨ ಶಿವನೆ! ಎನ್ನಯ ಕುವರಿಯೆನ್ನಿಸು |
ವಿವಳ ದುರ್ದಶೆಯುಳಲುಗಳ ಮೂ |
ಲವೆನಿಸುವುದೇನದಕೆಸಪುದೇನಿದನು ಪೇಳ್ಪೆನ್ನ ||

ತವೆ ತಣಿಸಿ ಬಡವುಗಳನುದ್ಧರಿ |
ಸುವ ಮಹೇಶನು ನೀನೆ! ನಿನ್ನಂ |
ಸ್ತವಿಸಿಹೆನು ಮನದಾಸೆಪೂರ್ತಿಪುದೆನಲು ಭವನಾಗ ||

( ಶ್ರೀ ಶಿವನು ಸಾಧುಗೆ ಹೇಳಿದ್ದು-ರಾಜನು ರಾಣಿಯನ್ನು ಹುಡುಕಿ ತರಲಿಕ್ಕೆ ದೂತರನ್ನು ಕಳಿಸಿದ್ದು )

೪೩ ಸಾಧುವೆಲೊ! ಮದ್ವ್ರತಕೆ ಸತಿಯಿಂದ |
ಳಾದರವ ಮಾಡದಕೆ ವಿವಿಧ ವಿ |
ಷಾದವಾಂತಿಹಳದನೆಮನ್ನಿಸಿ ಮಾಡೆ ಸುಖಿಸುವಳು ||
ಆದಪುದಭೀಷ್ಟವೆನಲವಳಿಂ |
ಸಾಧು ವಿಧಿಯಿಂ ವ್ರತವ ಮಾಡಿಸೆ |
ಭೂಧವನರಸಿಯರಸಿಯುಂತರೆ ಚರರನಟ್ಟಿದನು ||

( ಚರರು (ದೂತರು) ರಾಣಿಯನ್ನು ಗೊತ್ತು ಹಚ್ಚಿ ಬಂದು ರಾಜನಿಗೆ ತಿಳಿಸಿದ್ದು )

೪೪ ಚರರಿರದೆ ಪಲನಾಡುಗಳನಂ |
ಚರಿಸಿಯುವಳಿಹ ಪುರಕೆ ಬಂದಾ |
ಪರಮಸಾಧುಗೆ ನತಿಸಿ ರಾಣಿಯ ಕಳುಹವಾಳ್ದದಕೆ ||
ನೆರೆ ವಿನಯದಿಂ ಬೇಡಿಕೊಳಲು |
ತ್ವರವನಾ ಸಾಧುವದಕುಸುರದ |
ಲಿರಲವರು ಬಂದರುಹಿಕೊಂಡರು ದೊರೆಗದೆಲ್ಲವನು ||

( ಅರಸನು ಅಮಾತ್ಯನೊಡನೆ ಸಾಧುವನ್ನು ಕಂಡುಕೊಂಡದ್ದು-ಸಾಧುವಂದದ್ದು )

೪೫ ಇತ್ತದನು ಕೇಳ್ದೊಡನೆಯರಸನ |
ಮಾತ್ಯನಿಂ ಬಂದಾಪುರಕೆ ನಂದು |
ವೆತ್ತು ಸಾಧುಗೆ ನತಿಸಿ ನುಡಿದಿರಲೆಲ್ಲ ಸಂಗತಿಯು ||
ಉತ್ತಮಾಲಿಂಗನವ ನಲವಿಂ |
ದಿತ್ತು ದೊರೆಗಾಸಾಧು ತಾಳ್ದು |
ಪತ್ತಿಗೇಸೀಕುವರಿ ಪಾತ್ರಳೆ! ದೈವದಾಟವಿದು ||

ಈಗಿನ ಕಾಲದಲ್ಲಿ ಹೊಸಮಾದರಿಯ ಕವನಗಳೆಂದು ಹಲವರು ಒರೆಯುತ್ತಲಿದ್ದಾರೆ. ನಿಜವಾಗಿಯೂ ಅವುಗಳಲ್ಲಿ ಜೀವವಿರುವದು ಬಹುಸ್ವಲ್ಪ ಜನರ ಕವಿತೆಗಳಲ್ಲಿ. ಈಗಿನ ಕವಿತೆಗಳಲ್ಲಿ ಅಂಥ ಸ್ಫೂರ್ತಿಯ ಪ್ರೇರಣೆಯೂ ಲಕ್ಷಣವೂ ಛಂದೋಬಂಧವೂ ಇರುವದಿಲ್ಲ. ಆದ್ದರಿಂದ ಇವು ಸ್ಫುಟವಾದ ಆನಂದವನ್ನು ಕೊಡುವದಕ್ಕೆ ಅಸಮರ್ಥವಾಗಿವೆಂಬದೆನ್ನಬಹುದಾಗಿದೆ.

# ಕಾವ್ಯ ಕುಂಜ.

ಪ್ರಾಚೀನ ವಾಙ್ಮಯವು ಹುಳಗಳ ದವಡೆಯಿಂದ ಉಳಿದು ಬಾಳಿ ಇಂದಿನ ಜೀವಿಗಳಿಗೆ ಉಪಕಾರಿಯಾದಂತೆ, ಇಂದಿನ ಕವನಗಳು ಮುಂದಿನವರ ಜೀವನಕ್ಕೆ ಮಾರ್ಗದರ್ಶಿಗಳಾಗಿ ಬಾಳಬಹುದೇ? ಎಂಬದರ ಶಂಕೆಗೆ ಇವು ಆಸ್ಪದಗಳಾಗಿವೆ.

ರಾವಸಾ|| ಪಿ. ಜಿ. ಹಳಕಟ್ಟಿ,
ಸಾಹಿತ್ಯ ಪರಿಷತ್ತಿನ ಸ್ವಾಗತಾಧ್ಯಕ್ಷರು, ವಿಜಾಪೂರ.



# ನಾವಿಕ.



## ( ಲಲಿತ ರಗಳೆಯಲ್ಲಿ )

ಕವಿ :— ಶ್ರೀ. ಶಂಕರಭಟ್ಟರು ಅಗ್ನಿಹೋತ್ರಿ ನವಲಗುಂದ

ಬಾರೊ ಬಾ ನಾವಿಕನೆ   ವಾರಿನಿಧಿ ವಾಹಕನೆ
ಗಹನವಾಗಿಹ ನೀರು   ಬಹಳ ದೂರದ ಊರು
ಆ ಮೊಂದು ಮೊಸಳೆಗಳು   ಬಾಯ್ದೆರೆದು ಬರುತಿಹವು
ತಿರುಗಣಿಯ ಮಡುಗಳವು   ಇರುತಿಹವು ಭೀಕರವು
ಬಿರುಗಾಳಿ ಬೀಸುತಿದೆ   ಶರಧಿ ತಾನುಕ್ಕುತಿದೆ
ಹೇಗೆ ದಾಟುವದಯ್ಯ   ಸಾಗುವದು ಹೇಗಯ್ಯ
ಅದು ನೋಡು   ದೂರದಲಿಹುದುಬಂಡೆ ನೀರಿನಲಿ
ಅದಕೆ ಬಡಿದರೆ ನೌಕೆಯದು   ಒಡೆಯುವದು ಜೋಕೆ
ಸುತ್ತು ಮುತ್ತಲು ನೋಡು   ಕತ್ತಲೆಯು ನೆಲೆನೀಡು
ದಿಕ್ಕು ತಪ್ಪೀತಯ್ಯ   ಪುಕ್ಕ ನಾನಿಹೆನಯ್ಯ
ಎಚ್ಚರದಿ ನಡೆಸುವದು   ಅಚ್ಚರಿಯ ಪಡೆಸುವದು
ಬೇಡುವೆಯಾ ನೀನೇನು   ನೀಡುವೆನು ನಾನದನು

.... .... ....

ಆಹಹ ನೋಡೀಕಡೆಗೆ   ಬಹಳ ಜನರೀ ಎಡೆಗೆ
ಕೆಲರೀಸಗಾಯಿಗಳ   ರಬ್ಬರಿನ ಚೀಲಗಳ
ಬೆಂಡುಗಳ ಪೆಂಡಿಗಳ   ಕಲ್ಹಾರ ಗಣೆಗಳ
ಬೆನ್ನಲ್ಲಿ ಕಟ್ಟಿಹರು   ಮುನ್ನೋಡಿ ಬರುತಿಹರು
ಕೆಲರು ತೋಳ್ಕಸುವಿಂದೆ   ಹಲರು ಕಾಲ್ಕಸುವಿಂದೆ
ಈಸುತ್ತ ಬರುತಿಹರು   ತ್ರಾಸವನು ಪಡುತಿಹರು
ಬಲಗುಂದಿಹರು ಕೆಲರು   ಮುಳುಗುತ್ತಲಿರುತಿಹರು
ಜಡರು ತಾವ್ ಕೆಲರು   ನಡಕೆ ಕಲ್ಕಟ್ಟಿಹರು
ಕೃತುಗಳೆನ್ನುತ ಕೆಲರು   ವ್ರತಗಳೆನ್ನುತ ಪಲರು
ಯೋಗವೆನ್ನುತ ಕೆಲರು   ಯಾಗವೆನ್ನುತ ಕೆಲರು
ಹಿಡಿದಿಹರು ಮೂಗನ್ನು   ನುಡಿಯುವರು ಮಂತ್ರವನು

ಮಸ್ತಕದೊಳಿಟ್ಟಿಹರು ಪುಸ್ತಕಗಳನು ಕೆಲರು
ನೀರ ಗುಟಕರಿಸುತ್ತ ಪಾರವನ ಗೆಯ್ಯುತ್ತ
ಮುಳುಗುತ್ತ ತೇಲುತ್ತ ಸುಳಿಯಲ್ಲಿ ಸಿಲುಕುತ್ತ
ಅಲ್ಲಿಯೇ ತಿರುಗುವರು ನಿಲ್ಲದಲೆ ಕೆಲ ಜನರು
ನಿನ್ನಕಡೆಗೀಕ್ಷಿಸದೆ ಬನ್ನ ಬಡುವರು ಜರಿಪೆ
ಕೆಲವರೀ ನೌಕೆಯನು ಸುಲಭದಿಂದೇರಿಹರು
ಆನಂದದಿಂದಿಹರು ಗಾನ ಮಾಡುತಲಿಪರು
ಆನಂದದಶ್ರುಗಳು ಕಣ್ಣಿನಿಂದುದುರುವವು
ರೋಮಾಂಚವೆದ್ದಿಹವು ಮೈಮೇಲೆ ತೋರುವವು
ಶರಧಿಯಲಿ ಬಿದ್ದಂಥ ನರರನ್ನು ನೋಡುತ್ತ
ಕೈಮಾಡಿ ಕರೆಯುತ್ತ ಮೈಮುಟ್ಟಿ ಎತ್ತುತ್ತ
ನೌಕೆಯಲಿ ಹತ್ತಿಸುವರಾ ಕೆಲರು ಸಜ್ಜನರು
ಕೆಲರು ಭಯವಿಲ್ಲದಲೆ ಜಲದಲ್ಲಿ ಹಾರುತಲೆ
ಮುಳುಗುತಿಹ ಮನುಜರನು ಎಳೆದು ತರುತಿಹರಿನ್ನು

.... .... ....

ಇರಲಿರಲಿದೇನೆಲ್ಲವರುಹುವೆನು ಕೇಳ್ ಸೊಲ್ಲ
ನಿನ್ನ ಬಿಟ್ಟರೆ ನಾಕೆ ಛಿನ್ನವಾಗಿಹ ಜೋಕೆ
ನಾವಿಕನೆ ನಿನ್ನನ್ನು ಸೇವಿಸುವೆನೈ ನಾನು
ಒಮ್ಮೆ ನೀ ನಿಟ್ಟಿಸೈ ಸನ್ಮಾರ್ಗ ಮುಟ್ಟಿಸೈ
ಗುರು ರೂಪ ನಾವಿಕನೆ ವರಮೋಕ್ಷದಾಯಕನೆ
ಭವ ವಾರಿ ನಿಧಿಯಿಂದೆ ಜವದಿ ಮುಟ್ಟಿಸೊ ತಂದೆ.

## "ಕನ್ನಡ ಕವಿತೆ."

ಕಳೆವಳೆದ ಸಸಿಯಂತೆ ಮನದ ।
ನ್ನೆಲವಿಲಾಸದ ಸುಖದೊಲಳಿ ಮಂ ।
ಡಳದದನಿಯಂತರಳ ಮಲ್ಲಿಗೆಯಂತೆ ಕೋಗಿಲೆಯ ॥
ಕಳರವದೊಲೆಳ ಗಾಳಿಯಂದದಿ ।
ವಿಳಸಿತಾಮ್ರದ ಫಲದರುಚಿಯಂ ।
ತೆಳೆಯುವದು ಜನಮನವ "ಕನ್ನಡ ಕವಿತೆ" ಕೇಳ್ಗೆಳೆಯಾ ॥೧॥

—ನವಲಗುಂದದ "ವಿದ್ಯಾರಣ್ಯ" (ಕೈಬರಹದ) ಮಾಸಪತ್ರಿಕೆಯಿಂದ

# ಬಡತನದ ಬಾಳು!



ಲೇಖಕರು- Master Mahishi ( Student Honnawar High-School )

ಬಡತನದ ಬಾಳಿನಲಿ | ಕಡುತರದ ಗೋಳಿನಲಿ |
ಬಡುತಿರುವ ಬವಣೆಯನು ತಾಳಲಾರೆ | ಬಿಡುಗಡೆಯ ದಾರಿಯನು ಕಾಣಲಾರೆ ||೧||

ಬಾಳಿನಲಿ ಬೆಳಕಿಲ್ಲ | ಕೂಳಿನಲಿ ರುಚಿಯಿಲ್ಲ |
ಕೀಳು ಕೀಳಾಗಿ ಹೋಗಿಹುದು ಬಾಳು | ವೇಳೆವೇಳೆಗೆ ಸಿಗದಿಹುದು ಕೂಳು ||೨||

ಗೋಳ ಕೇಳುವರಿಲ್ಲ | ಕೇಳಿ ಮರುಗುವರಿಲ್ಲ |
ತಾಳಲಾರೆನೀ ಬಡತನದ ಬೇಗೆ | ಹೇಳು ದಾರಿಯಾವುದು? ಇದನು ನೀಗೆ ||೩||

ಸಂಸಾರದೊಡಲಿಂದ | ಸಂಕಟದ ಮಡಲಿಂದ |
ಕಡೆಹಾಯಿಸಲು ಬೇಕು ಎಂದು ಎನ್ನ । ಅಡಿಯ ಪಿಡಿದು ಬೇಡಿಕೊಂಬೆನು ನಿನ್ನ ||೪||

ಧರೆಯಲ್ಲಿ ನರಜನ್ಮ | ಬರುವಡೆ ಬೇಕು ಪುಣ್ಯ |
ಆದರೀ ಬಡತನದಿ ಹುಟ್ಟಿ ಬಂದು | ವೇದನೆಯ ತಾಳಲಾರೆನಾ ಇಂದು ||೫||

ಮಡದಿ-ಮಕ್ಕಳ ಕಾಟ ! ನಡೆದಿಹುದು ವಿಧಿಯಾಟ ! |
ಬಿಡದೆನಗೆ ವಿಧಿಯು ಬಿಡುಗಡೆಯ ಹೊರತು ! | ಬಿಡಿಸುವವರುಂಟೆ ನಿನ್ನ ಹೊರತು ? ||೬||

---

## ಕನ್ನಡ ಜಾಣ್ಣುಡಿ.

ಕವನಗಾರರು:- ಹ. ರಾ. ಕಾಲವಾಡ ಪೇ. ಮಾಸ್ತರ ತಿರ್ಲಾಪೂರ

|| ಕಂದ ||

ಇರಲಿಕ್ಕೆ ಬೇಕೆನುಪುದೇಂ ? |
ತರುಣರ ಕಣ್ಮುಂದೆ ಜಾರೆಯಿಸಗುವದೇಂ, ಪೇಳ್ ||
ಅರಸೊಲಿಯಲೇನಹನು ? ಮನೆ |
ಮುರಕಂ, ಬಲುಧನಿಕನಪ್ಪನೆಂಬುದುಕ್ರಮವೇ ||೧||

# ಸಂಸಾರದ ನವಿಲು.

ಲೇಖಕರು :— ಶ್ರೀ ಜಿ. ಶ್ರೀ. ಕುಲಕರ್ಣಿ, ಇಂಟರ ಆರ್ಟ್ಸ ವಿಲಿಂಗ್ಡನ್
ಕಾಲೇಜ ಸಾಂಗಲಿ.

(ನದಿಯ ತೀರಕ್ಕೆ ತಿರುಗುವದಕ್ಕೆಂದು ಹೋದಾಗ ಉತ್ಪನ್ನವಿಸಿದ ವಿಚಾರಗಳು)

ನವಿಲೇ! ನಿನ್ನ ನಯವಾದ ನರ್ತನ ನಿಲಿಸಬೇಡ! ನನ್ನನ್ನು ನೋಡಿ ನದಿಯೆಡೆಗೆ ನಡೆಯಬೇಡ! ನಿಲ್ಲು. ನಿಲ್ಲು ಎಲೈ ನೀಲಕಂಠವೇ ನಿಲ್ಲು! ನಿನ್ನ ನಲುಮೆಯ ನರ್ತನದ ನಯವನ್ನಾದರೂ ನನಗೆ ನೀಡು!

\+ \+ \+ \+ \+

ಮಯೂರವಾದರೂ ಎಷ್ಟು ಮನೋಹರ! ಎಷ್ಟು ಮಾಟ! ಎಷ್ಟು ಮುದ್ದು! ಮುದ್ದನ್ನಮೊಗದಲ್ಲಿ ನಕ್ಷತ್ರ ನಡುಗಿಸುವ ನಯನಗಳು! ಸಂಪಿಗೆಯ ಗೊನೆಯಂತೆ ಇರುವ ಚೂಪಾದ ಚುಂಚು! ಎಲೈ ಶಿಖಿಯೇ! ಈ ನಿನ್ನ ಮೋಹಿಸುವ ಪೈಬಣ್ಣವನ್ನು ಇಂದ್ರನಿಂದ ಕದ್ದಿರುವಿಯೋ? ಅಥವಾ ರವಿಯು ನಿನ್ನ ನಯನ ಮನೋಹರವಾದ ನೃತ್ಯಕ್ಕೆ ಮನಸೋತು ನುಣುಪಾದ ಈ ಬಣ್ಣವನ್ನಿತ್ತಿರುವನೋ? ನಾನರಿಯೆ! ಸರ್ವಾಂಗ ಸುಂದರವಾದ ಈ ನಿನ್ನ ಸ್ವರೂಪಕ್ಕೆ ತಲೆಯ ತುರಾಯಿಯೊಂದು ಸುವರ್ಣಕ್ಕೆ ಕುಂದಣಹಾಕಿದಂತೆ!

\+ \+ \+ \+ \+

ಎಲೈ ಕೇಕಿಯೇ ನಿನ್ನ ಆಲಯವಾದರೂ ಎಷ್ಟು ಆನಂದ ಬೀರುವಂತಹದು. ಶಾಂತಿ-ಸುಖಗಳ ತವರುಮನೆಯೋ! ಗಾಂಭೀರ್ಯದ ನೆಲೆಗೊಂಡಿದೆ. ನಿಸರ್ಗವು ನಿನ್ನ ನರ್ತನದಿಂದ ಮೋಹಪರವಶವಾಗಿ ನಗುವಂತೆ ಭಾಸವಾಗುವದು. ಪ್ರೇಮವೆಂಬ ಗಾಳಿಯು ಎಲ್ಲೆಡೆಯಲ್ಲಿ ಸುಳಿಯುತ್ತಿರುವದು. ಎಷ್ಟೆಂದು ವರ್ಣಿಸಲಿ ಆ ನಿನ್ನ ನಿಲಯದ ಮಹಿಮೆಯನ್ನು!

\+ \+ \+ \+ \+

ಎಲೈ ದೇವಿಯ ವಾಹನವೇ! ಪೂರ್ವಕಾಲದಲ್ಲಿ ನೀನು ಸರಸ್ವತಿಯ ವಾಹನವಾಗಿದ್ದೆಯೆಂದು ಕೇಳಿದ್ದೆ. ಆದಾವ ಕಾರಣದಿಂದ ಆವಳು ನಿನ್ನನ್ನು ತನ

ವಾಹಕವನ್ನಾಗಿ ಮಾಡಿಕೊಂಡಿರಬಹುದು. ನಿನ್ನ ರೂಪಕ್ಕೆ ಮರುಳಾಗಿ ತನ್ನ ಸಾರಥಿಯನ್ನಾಗಿ ಮಾಡಿಕೊಂಡಳೋ ? ಲೋಹಚುಂಬಕವು ಲೋಹವನ್ನಾಕರ್ಷಿಸುವಂತೆ ನಿನ್ನ ನರ್ತನವು ಅವಳ ಮನಸ್ಸೆಳೆದೊಯ್ಯಿತೋ ? ಅಥವಾ ಆ ನಿನ್ನ ಆಲಯದ ಸ್ವರ್ಗೀಯ ಸೌಖ್ಯವನ್ನು ಸೇವಿಸುವದಕೋ ನಾನರಿಯೆ ! ಪ್ರತಿನಿತ್ಯವೂ ಆ ಪರಮ ಪವಿತ್ರೆಯಾದ ದೇವಿಯ ಪಾದಾಂಘ್ರಿ ಕಮಲಗಳ ಸೇವೆಗೈದು ಪರಮ ಶಾಶ್ವತವಾದ ಸುಖವೊಂದುವ ಮಯೂರನೇ ನೀನೇ ಧನ್ಯ !

\+ + + + +

ಎಲಾ ಇದೇನು ! ಕಣ್ಣಲ್ಲಿ ಕಂಬನಿ ! ಕೇಕಿಯೇ ಅದೇಕೆ ಅಳುವದು ? ಕುಣಿದು ಕುಣಿದು ದಣಿದಿರುವಿಯೋ ? ಅಥವಾ ನಿನ್ನ ಆ ಅಳುನಿಂದ ಹೊರಸೂಸುವದು ಆನಂದಾಶ್ರುಗಳ ಪ್ರವಾಹವೋ ? ಗಗನವನ್ನು ಭೇದಿಸುವ ಆಕ್ರೋಶಕ್ಕೆ ಅದಾವ ಕಾರಣ ! ಮಿಗೆ ಸರಸ್ವತಿಯ ಆಸರವು ತಪ್ಪಿತೋ ! ನರ್ತನವ ನಿಲಿಸಲು ಆರೂ ಬಾರದಕೋ ? ಸಗ್ಗದಿಂ ಭೂಮಿಗಿಳಿದುದಕೆ ಆವ ಸುಖವ ಕಾಣದಕೊ ? ಹೇಳು; ಭಯಪಡದೆ ಹೇಳು ! ಸಾವಧಾನದಿ ಹೇಳು ! ಎಲೈ ಭುಜಂಗಭುಕವೇ ! ನೋಡೆನು ನಿನ್ನೀ ದುಸ್ಥಿತಿಯನ್ನು ! ನನಗಾದರೂ ಕರುಳು ಕತ್ತರಿಸಿದಷ್ಟು ವೇದನೆ ಯಾಗುತ್ತಿದೆ. ಅಂ ಇದೇನು ಅಳುವು ಹೆಚ್ಚಿತು. ನಯನಮನೋಹರ ನವಿಲೇ ನಿಲ್ಲಿಸು. ಆ ನಿನ್ನ ರೋದನವ, ಲಾಲಿಸು ಎನ್ನ ಈ ವಚನವ.

\+ + + + +

ಜಗದಲಿ ಮಾನವನ ಗತಿಯಾದರೂ ನಿನ್ನದೇ ! ಜನುಮವೆತ್ತಿದಾರಭ್ಯ ಎಡೆಬಿಡದ ಕುಣಿವ, ಅಶ್ರುಗಳ ಸುರಿಸುವ, ಕುಣಿಕುಣಿದು ದಣಿವ, ನೀರ್ಗುದುರೆಯಂತೋಡ್ವ, ಸಂಸಾರ ಸುಖವ ಬಯಸುವ, ನೀರ್ಗುಳ್ಳೆಯೆಂಬ ಹಡಗವನೇರಿ ದಾಂಟಲಿಚ್ಛಿಸುವ, ಅಪಾರವಾದ ಸಂಸಾರಸಾಗರದ ಮಧ್ಯದೋಳ್ ದುಃಖರೂಪ ಅದ್ಭುತ ಮೊಸಳೆಗಳ ತುತ್ತಿಗೀಡಾಗುವ, ಸಹಾಯ ಯಾಚನೆಗೆ ಆಕ್ರೋಶಿಸುವ ಎಲೈ ಶಿಖಿಯೇ ನಿನ್ನ ಗತಿಯೂ ಹೀಗೆಯೇ ! ಒಂದಿಲ್ಲೊಂದುದಿನ ನಿಶ್ಚಯ. ಅದುಕಾರಣವೇ ಮಯೂರನೇ, ನಿನ್ನ ವಶಕ್ಕಿನ್ನ ದಿನಗಳನ್ನು ಆನಂದದಿಂದ ಕಳೆ. ಈ ಸ್ಥಳ ಬಿಡುವದರೊಳಗೆ ಎಲೈ ಮೇಘನಾದ ಪ್ರಿಯನೇ ! ನಿನ್ನ ನರ್ತನ ಕೌಶಲ್ಯವನ್ನು ನನಗೆತೋರಿ ಮಹಾನಂದವ ನೀಡು ! ನಿನಗೆ ಮೇಘನಾದದಲ್ಲಿ ಹೇಗೆ ಆನಂದವೋ ಹಾಗೆಯೇ ನನಗಾದರೂ ನಿನ್ನ ನರ್ತನದಲ್ಲಿಯೇ ವಿಶ್ವ ಆನಂದ ! ಅದುಕಾರಣ ಕುಣಿ ಹೂಂ ಆರಂಭಿಸು !

\+ + + + +

ನಾ ನಾಡಿದ ಮಾತುಗಳಾಲಿಸಿಯೋ? ಅಥವಾ ನನ್ನ ವಿನತಿಯ ಮಾನ್ಯಮಾಡುವದಕ್ಕೋ? ನಾ ತಿಳಿಯೆ. ಮಯೂರವು ಮಾತ್ರ ಕೆಲಸಿಮಿಷ ವಿಚಾರದಲ್ಲಿ ಮುಳಗಿದಂತೆ ನಟಿಸಿ ಮತ್ತೆ ಅತಿಮನೋಹರವಾಗಿ ಕುಣಿದೊಮ್ಮೆ ಮಾಯವಾಯಿತು. ನಾನೆಷ್ಟೋ ಬಾರಿ ಅದೇ ಸ್ಥಳಕ್ಕೆ ತಿರುಗಾಡುವದಕ್ಕೆ ಹೋದೆ. ಆದರೆ ಆ ಪಕ್ಷಿಯು ಮಾತ್ರ ದೃಷ್ಟಿಗೆ ಬಿದ್ದಿಲ್ಲ. ನನ್ನ ವಚನಗಳಿಗೇನೇ ನಾಚಿಕೊಂಡಿತೋ? ಏನೋ?

---

# ಕರ್ನಾಟಕದ ಶಿಲ್ಪ ಕಲೆಯ ಮೇಲ್ಮೆ

## ರಾಮಚಂದ್ರಾಪುರ ಸಂಸ್ಥಾನಕ್ಕೋಸ್ಕರ ತಯಾರಾದ "ಹಸ್ತಿದಂತ ಸಿಂಹಾಸನ"

(ಸೊರಬದ ಮೈಸೂರ ಪ್ರಾಂತದಲ್ಲಿ)

ಈ ಹಸ್ತಿದಂತ ಸಿಂಹಾಸನವನ್ನು ಶ್ರೀ. ಎಚ್. ಪುಟ್ಟಪ್ಪಾ; ಮತ್ತು ಹಿರಿಯಣ್ಣಪ್ಪಾ ಗುಡಗಾರ, ಮೊದಲಾದ ಹದಿನೆಂಟು ಜನರು ಕೂಡಿ ೧೯೧೮ ರಿಂದ ೧೯೩೩ ರ ವರೆಗೆ, ಅಂದರೆ ಸರಾಸರಿ ಹದಿನಾಲ್ಕು ವರುಷಗಳ ವರೆಗೆ ಏಕೋಪ್ರಕಾರವಾಗಿ ಕೆಲಸಮಾಡಿ ತಯಾರಿಸಿದ್ದಾರೆ. ಸಿಂಹಾಸನದ ಅಜಮಾಸು ಬೆಲೆಗೂ ಎರಡೂವರೆ ಲಕ್ಷ ರೂಪಾಯಿಗಳಿಗೆ ಮಿಕ್ಕಿದೆ.

**ಸಿಂಹಾಸನದ ವರ್ಣನೆ:—** ಸಿಂಹಾಸನವು ಸುಮಾರು ೭—೮ ಫೂಟು ಎತ್ತರವಿದೆ. ಹಸ್ತಿದಂತದಲ್ಲಿ ನಾನಾ ಪ್ರಕಾರದ ಚಿತ್ರಗಳಿಂದ ಕೂಡಿದ್ದಾಗಿದೆ. ಹಿಂದಿನ ಭಾಗಕ್ಕೆ ಸುವರ್ಣದ ತಗಡು ಕೂಡ್ರಿಸಲ್ಪಟ್ಟಿದೆ.

ಮೇಲಿನ ಚಿತ್ರಗಳಲ್ಲಿ ಭಾರತ, ಭಾಗವತ, ರಾಮಾಯಣ, ದಶಾವತಾರಗಳಲ್ಲಿಯ ಮುಖ್ಯವಾದ ಚಿತ್ರಗಳು ಕೊರೆಯಲಾಗಿದ್ದು ಮೇಲ್ಭಾಗದಲ್ಲಿ ರೇಶಿಮೆಯ ಛತ್ರವಿದೆ. ಛತ್ರವು ಸುತ್ತಲೂ ಮುತ್ತುಗಳಿಂದ ಶೃಂಗರಿಸಲ್ಪಟ್ಟಿರುವದರಿಂದ ಒಳ್ಳೇ ಶೋಭಾಯಮಾನವಾಗಿದೆ. ಛತ್ರದ ಮೇಲ್ಭಾಗದಲ್ಲಿ ಸುವರ್ಣದ ಕಲಶವಿರುತ್ತದೆ.

ಕನ್ನಡ ಸಾಹಿತ್ಯದಲ್ಲಿ ಭಕ್ತಿ, ಜ್ಞಾನ, ವೈರಾಗ್ಯ ಮತ್ತು ಮುಕ್ತಿ ಈ ವಿಷಯುಗಳು ಬರುವದೇ ಹೆಚ್ಚು. ಪ್ರಾಪಂಚಿಕವಿಷಯುಗಳು ನಿಸ್ಸಾರವಾದವು. ಕ್ಷಣಿಕ ವಾದವು. ಮುಕ್ತಿ ಸಾಮ್ರಾಜ್ಯವನ್ನು ಪಡೆಯುಬೇಕೆಂದು ಕವಿಗಳು ಸಾರುತ್ತಿರುವರು. ವೈರಾಗ್ಯ ಮತ್ತು ಮೋಕ್ಷ ಇವುಗಳು ಜೈನಕವಿಗಳ ಜಪಮಂತ್ರ. ಅನೇಕ ಕಾವ್ಯಗಳಲ್ಲಿ ರುದ್ರಭಾವನೆಯು ವ್ಯಕ್ತಪಡುತ್ತಿದೆ. ಆದರೆ ಘನತೆಯನ್ನು ಪಡೆದ ಉತ್ತಮ ಜೀವನದಲ್ಲಿ ಸ್ವಾತಂತ್ರ್ಯವಿರುವದು, ಮೋಕ್ಷವಿರುವದು.

# ವಿವಿಧ ಸಾಹಿತ್ಯ.

ಆದಿಕವಿ ಪಂಪನು ಬರೆದದ್ದು ಮತಗ್ರಂಥವಾದರೂ ಸುಲಭ ಶೈಲಿಯುಲ್ಲಿ ಬರೆದು ದೈವಸಂಬಂಧವಾದ ವಿಷಯುಗಳನ್ನು ಒಂದು ವಿಚಿತ್ರವಾದ ಸುಲಭರೀತಿಯಿಂದ ಬರೆದಿರುವನು, ಇದು ಅವನ ಪ್ರತಿಭೆಯ ಫಲ. ಕವಿಯು ಜೈನನೆಂದು ಉಪೇಕ್ಷೆ ಮಾಡಲಾಗದು. ಜೈನ, ವೀರಶೈವ, ಬ್ರಾಹ್ಮಣ ಕವಿಗಳಾದರೇನು ? ಅವರೆಲ್ಲರೂ ನಮ್ಮವರೇ ! ನಮ್ಮ ಸಂಕುಚಿತ ಮನಸ್ಸನ್ನು ವಿಕಸಿತಗೊಳಿಸಿ ವಿಶಾಲದೃಷ್ಟಿಯಿಂದ ಪ್ರಪಂಚವನ್ನು ನೋಡಲು ನಮ್ಮ ಕಣ್ಣುಗಳನ್ನು ಅವರು ತೆರೆಯಿಸುವರು.

ಶ್ರೀಮಾನ್ ಬಿ. ಯಂ. ಶ್ರೀಕಂಠಯ್ಯನವರು ಬೆಂಗಳೂರು



# ಗೆಲುವಿನ ಬೆಲೆ.

ಲೇಖಕರು — ಶ್ರೀ. ಬಾಲೇಹೊಸೂರ ರಾಮರಾಯರು ಶಿರಹಟ್ಟಿ.

ದೃಶ್ಯ— ಒಂದು ನಗರದಲ್ಲಿರುವ ಮನೆಯ ಮುಂಭಾಗದಲ್ಲಿ ವೃದ್ಧನಾದ ಮುದುಕನೊಬ್ಬನು ತನ್ನ ಮೊಮ್ಮಗನ ಸಂಗಡ ಮಾತಾಡುತ್ತ ಕುಳಿತಿರುವನು.

ಬಾಲಕ— ಆನಂದದಾಯಕವಾದ ಸಂಗತಿ! ಅಮೌಲ್ಯವಾದ ಸಂಗತಿ! ಘನವಾದ ಸಂಗತಿ! ತಾತಯ್ಯಾ ನೀವಿನ್ನೂ ಕೇಳಿರಲಿಲ್ಲವೇ? ನಮ್ಮ ರಾಜರಿಗಿಂದು ಸಂಪೂರ್ಣವಾದ ಗೆಲುವು ದೊರೆತಿದೆ. ಯುದ್ಧರಂಗದಲ್ಲಿ ವಿಜಯವನ್ನು ಸಂಪಾದಿಸುವಾಗ್ಗೆ ನಮ್ಮ ಜನಕ್ಕೆಷ್ಟು ಶ್ರಮವಾಗಿರಬಹುದು. ಅಂತಹ ಭಯಂಕರವಾದ ಸಾಹಸವನ್ನೂ ಶೌರ್ಯವನ್ನೂ ತೋರಿದ್ದರಿಂದಲ್ಲವೇ ನಮ್ಮ ಜನಕ್ಕೆ ಅಪೂರ್ವವಾದ ವಿಜಯವು ದೊರೆತಿದುದು. ಅದುಕಾರಣವೇ ಈ ದಿನ ನಗರದಲ್ಲೆಲ್ಲ ದೀಪೋತ್ಸವವು ನಡೆಯುತಕ್ಕದ್ದಿರುವದು.

ತಾತ— ಅನೇಕ ಮಾನವಪ್ರಾಣಿಗಳ ಭಯಂಕರವಾದ ಕೊಲೆಯಿಂದ ಕೂಡಿದ ಈ ಸಂಗತಿಯು ಮಗೂ! ನಿನಗೊಳ್ಳೇ ಆನಂದದಾಯಕವಾಗಿ ತೋರುವದಲ್ಲವೇ?

ಬಾಲಕ— ಹಾಗೇನೂ ಇಲ್ಲ! ಆದರೂ ನಮ್ಮ ರಾಷ್ಟ್ರಕ್ಕೆ ವಿಜಯವು ಹೀಗೆ ಆನಂದಪಡಿಸಲು ನಮಗೊಂದು ತರದ ಅಭಿಮಾನವೆನಿಸುವದು ಸಹಜ!

ತಾತ— ನಿಜಾ! ರಾಷ್ಟ್ರದ ಹೆಚ್ಚಳವನ್ನು ಬಯಸುವದು ನಮ್ಮೆಗಳ ಕರ್ತವ್ಯವೇ ಸರಿ. ಆದರೆ ಅದರಿಂದ ನಮ್ಮನ್ನುಳಿದು ಬೇರೆಯವರಿಗೆ ಕೇಡಾಗಿರಬಾರದು. ಯಾವದೊಂದು ರಾಷ್ಟ್ರದಲ್ಲಿ ಕೇವಲ ಪ್ರಜಾಜನಗಳ ಹಿತಕ್ಕಾಗಿ ಯುದ್ಧಗಳು ಸಂಭವಿಸುವದು ಅತಿ ವಿರಳ. ಅಂತಹ ಅವಶ್ಯಕತೆಯೇ ಪ್ರಾಪ್ತವಾ

ದಾಗ ಎಷ್ಟೋ ಭೀಕರವಾದ ಚಿತ್ರಗಳು ನಮ್ಮ ಕಣ್ಣೆದುರಿನಲ್ಲಿ ಬಂದು ನಿಲ್ಲುವವು. ಮತ್ತೂ ಆ ವಿಷಯುವಾಗಿ ವಿಚಾರಮಾಡಿದರೆ ಯಾವ ಮನುಷ್ಯನೂ ಹೀಗೆ ನಮ್ಮಂತೆ ಆನಂದಪಡಲು ಸಾಧ್ಯವಿಲ್ಲ.

**ಬಾಲಕ—** ನಮ್ಮ ವೈರಿಗಳು ನಮ್ಮನ್ನು ಅನೇಕ ವಿಧವಾಗಿ ಪೀಡಿಸಿದಾಗ ನಾವವರನ್ನು ಹೊಡೆದಟ್ಟುವೆವು. ಆಗ್ಗೆ ನಮಗಾದ ಆನಂದವನ್ನು ವ್ಯಕ್ತಪಡಿಸು ವದು ಸರಿಯಾಗಲಿಕ್ಕಿಲ್ಲವೆಂದು ನಿಮ್ಮ ಅಂಬೋಣವೋ ಹೇಗೆ ?

**ತಾತ—** ಅಯ್ಯೋ ಪಾಪವೇ! ಮಗೂ ಕೇಳು ಹಾಗಾದರೆ! ಬಾಹ್ಯರೀತಿ ಯಿಂದ ನೋಡುವ ನಮ್ಮಂಗಳಿಗೆ ಆವ ಪಂಗಡದವರ ಉದ್ದೇಶಗಳು ಘಾತುಕವಾದು ವೆಂಬದನ್ನು ನಿರ್ಣಯಿಸಲು ಸಾಧ್ಯವಿಲ್ಲ. ಸಾಧಾರಣವಾಗಿ ಎರಡೂ ಪಂಗಡದವ ರಲ್ಲಿಯೂ ದೋಷಗಳು ಇದ್ದೇ ಇರುತ್ತವೆ. ವಿಜಯಶ್ರೀಯು ಇವರೀರ್ವರನ್ನೂ ದುರ್ಮಾರ್ಗದಲ್ಲಿ ಪ್ರವೃತ್ತರನ್ನಾಗಿ ಮಾಡುತ್ತಾಳೆ. ಇವೆಲ್ಲ ವಿಷಯುಗಳನ್ನು ಬದಿ ಗಿಟ್ಟು, ಕೇವಲ ಯುದ್ಧದಲ್ಲಿ ದೊರೆತ ಗೆಲುವಿಗಾಗಿ ಆವನೊಬ್ಬನು ಆನಂದಪಡುವ ದಾದರೆ, ಅವನು ಆನಂದಪಡುವದು ತನ್ನನ್ನುಳಿದು ಬೇರೆ ತನ್ನ ಬಾಂಧವರ ದುಃಖ ಕ್ಕಾಗಿಯೇ ಸರಿ! ಮತ್ತೂ ಈ ವಿಷಯುಗಳ ಕಲ್ಪನೆಯು ನಿಜವಾಗಿ ಅವನಲ್ಲೊಂ ದುವೇಳೆ ಜನಿಸಿದ್ದೇಯಾದರೆ ಅವನು ತನ್ನ ಆನಂದಕ್ಕಾಗಿ ಸ್ವಲ್ಪ ಮಟ್ಟಿಗೆ ತಡೆಪಾ ಕಬಹುದು. ಇದೋ ಕೇಳು ಓರ್ವ ಡಾಕ್ಟರನು ಬಂದು ನಮ್ಮೆದುರಿನಲ್ಲಿ ತಾನು ಈ ದಿನ ನಾಲ್ಕಾರು ಜನಗಳ ಕಾಲುಗಳನ್ನು ಕಡಿದೊಗೆದೆನೆಂದು ಹೇಳಿದಲ್ಲಿ ನೀನ ವನ ಆ ಕೃತಿಯುಬಗ್ಗೆ ಏನೆಂದು ಅಭಿಪ್ರಾಯಪಡುವಿ. ಎಲ್ಲಿ ಹೇಳು ನೋಡುವಾ ?

**ಬಾಲಕ—** ನಿಶ್ಚಯಾ! ನಾನವನನ್ನು ಅತಿ ಕಠಿಣ ಹೃದಯಿಯೆಂತಲೇ ಭಾವಿಸುವೆನು.

**ತಾತ —** ಅದೇಕೆ ? ಶಸ್ತ್ರಕ್ರಿಯೆ ಮಾಡಿದವನು (ತಾನು) ಹೇಳಿದ ಜನರು ತಮ್ಮ ಇಚ್ಛೆಯಿಂದಲೇ ಅವನಕಡೆಯಿಂದ ಕಾಲು ಕಡಿಯಿಸಿಕೊಂಡಿರುವರು. ಅವರಿಗ ದರಿಂದ ಹಿತವು ಕೂಡಾ ಆಗಿದೆ. ಆದರೆ ಯುದ್ಧದಲ್ಲಿ ಎರಡೂ ಪಂಗಡದ ದಂಡಾಳು ಗಳ ಹಿತವೆಷ್ಟುಮಾತ್ರವೂ ಇರುವದಿಲ್ಲ. ಅಲ್ಲದೆ ಅನೇಕ ಜನಗಳಿಗೆ ಉಪಾಯುವಿ ಲ್ಲದಲೆ ರಣಾಂಗಣದಲ್ಲಿ ದುಮುಕುವ ಪ್ರಸಂಗವು ಒದಗುತ್ತದೆ. ಮಗೂ, ಸ್ವಲ್ಪ ಲಕ್ಷವಿಟ್ಟು ಕೇಳು. ನೀನಿಂದು ಸಂತೋಷಪಡುತ್ತಿರುವ ಯುದ್ಧದಲ್ಲಿ ಹತ್ತುಸಾವಿರ ಜನರು ಮಡಿದಿರುವರು. ಇವರನ್ನುಳಿದು ಮತ್ತೆ ಅಷ್ಟು ಜನರು ಗಾಯುಹೊಂದಿ ದ್ದಾರೆ.

**ಬಾಲಕ—** ಎರಡೂ ಪಂಗಡದವರಲ್ಲಿ ಕೂಡಿಯೋ ಅಥವಾ!

**ತಾತ—** ಛೀ! ಎರಡೂ ಪಂಗಡದವರಲ್ಲಿ ಕೂಡಿಯೇ ಮತ್ತೆ! ಅದರಲಿ ಸ್ವಲ್ಪ ವಿಚಾರಮಾಡಿ ನೋಡು! ಇಂದು ಮುಂಜಾನಿಲ್ಲಿ ಹತ್ತು ಸಾವಿರ ಜನರು

ಯುದ್ಧಭೂಮಿಗೆ ಕಳುಹಿಸಲ್ಪಟ್ಟರು. ಅವರಲ್ಲಿ ಯುದ್ಧಭೂಮಿಯಮೇಲೆ ತಮಗಾದ ದುಃಖವನ್ನು ಅನುಭವಿಸುವದಕ್ಕೀಗ ಜೀವಿಸದಿದ್ದರೂ ತಮಗಾಗಿ ದುಃಖಪಡುವದಕ್ಕೆ ಮಾತ್ರ ತಮ್ಮ ತಂದೆ, ತಾಯಿ, ಹೆಂಡರು, ಮಕ್ಕಳನ್ನು ಹಿಂದುಳಿಸಿಯೇ ಇದ್ದಾರೆ. ಈ ಅಸಂಖ್ಯಜನರ ದುಃಖಕ್ಕೆ ಕಾರಣವು ಇಂದಿನ ಯುದ್ಧದ ಹೊಡತವೇ ಅಲ್ಲದೆ ಮತ್ತೇನು ? ಗಾಯಹೊಂದಿದವರ ಸ್ಥಿತಿಗಿಂತ, ಪ್ರಾಣವನ್ನು ತೊರೆದ ಈ ಜನಗಳ ಸ್ಥಿತಿಯು ಎಷ್ಟೋ ಪಾಲಿಗೆ ಬೇಕು. ನಾವು ಮಾತಾಡುತ್ತಿರುವ ಇಷ್ಟು ಸ್ವಲ್ಪ ಸಮಯದಲ್ಲಿಯೇ ಮತ್ತೆ ಎಂಟು ಸಾವಿರ ಜನಗಳು ಗಾಯಹೊಂದಿದರು. ಅವರಲ್ಲಿ ಕೆಲವರು ಮರಣೋನ್ಮುಖರು, ಮತ್ತೆ ಕೆಲವರು ಇನ್ನೊಂದು ಕ್ಷಣಕ್ಕೆ ಸಾಯುವವರು, ಮತ್ತೆ ಕೆಲವರು ಅನೇಕವಿಧ ನೋವಿನಿಂದ ತೊಳಲುತ್ತ ಅತಿ ದುಃಖದಿಂದ ಜೀವಿಸುವರು.

**ಬಾಲಕ**— ತಾತಾ ! ಈ ಸಂಗತಿಯು ಮಾತ್ರ ಕೇಳಲು ಭೀಕರವಾದುದೇನೋ ನಿಜಾ ! ಇದೋ ಭೀತಿಯಿಂದ ನನ್ನ ಮೈಗೆ ಮುಳ್ಳು ಬರುತ್ತಲಿವೆ. ಅಯ್ಯೋ ! ನನ್ನನ್ನು ಸ್ವಲ್ಪ ಬಿಗಿಯಾಗಿ ಹಿಡಿದುಕೊಳ್ಳಿರಿ.

**ತಾತ**— ಆದರೆ, ಅದೋ ನೋಡು ಮಗೂ ! ಪ್ರತಿಯೊಬ್ಬನು ಈ ವಿಷಯಗಳನ್ನು ಗಮನಿಸದೆ ಹೇಗೆ ಆನಂದಪಡುತ್ತಲಿರುವನು.

**ಬಾಲಕ**— ನಿಜ ನಿಜಾ ! ಅವರಲ್ಲಿ ಯಾರೂ ಈ ವಿಷಯವನ್ನು ಗಮನಿಸಿದಂತೆ ಕಾಣುವದಿಲ್ಲ. ತಮ್ಮ ಬಾಂಧವರನೇಕರು ದುಃಖದಿಂದ ಬಳಲುತ್ತಿರಲು, ತಾವು ಹೀಗೆ ಹರುಷಪಡುವದು ಉಚಿತವಲ್ಲ. ಎಂಬೀ ಸಂಗತಿಯು ಅವರ ಲಕ್ಷ್ಯಕ್ಕೆ ಬಾರದೇ ಇರದು. ಮಾತ್ರ ಅವರು ಈ ಬಗ್ಗೆ ಸ್ವಲ್ಪ ವಿಚಾರಮಾಡಬೇಕಾಗುವದು.

**ತಾತ**— ಮಗೂ ! ಹಿಂದೊಮ್ಮೆ ಬಡಪ್ರಾಣಿಯಾದ ಅಜಿತಕುಮಾರನು ತುಂಬಿದ ಬಂಡಿಯ ಮೇಲಿಂದ ಬಿದ್ದು ಕಾಲು ಮುರಿದುಕೊಳ್ಳಲು, ನಗರದಲ್ಲಿನ ಯಾವತ್ತೂ ಜನರು ಅವನಿಗಾಗಿ ಮರುಗಿದ ಸಂಗತಿಯನ್ನು ನೀನು ಇಷ್ಟರಲ್ಲಿಯೇ ಮರೆತು ಬಿಟ್ಟಿಯಾ ?

**ಬಾಲಕ**— ಇಲ್ಲ. ಅದುಹೇಗೆ ಮರೆಯಲಿ ! ತಾತಾ, ಆದಿನ ನನಗೆ ಇಡೀ ರಾತ್ರಿ ನಿದ್ರೆ ಬರಲಿಲ್ಲ.

**ತಾತ**— ಆದರೆ ನೋಡಿದಿಯಾ ! ಪ್ರತಿಯೊಬ್ಬನು ಈ ವಿಷಯಗಳನ್ನೇ ಗಮನಿಸದೆ ಹೇಗೆ ಆನಂದಪಡುತ್ತಿರುವನು.

**ಬಾಲಕ**— ನಿಜಾ ! ಅವರೆಲ್ಲರೂ ಈ ವಿಷಯವನ್ನು ಗಮನಿಸಿದಂತೆ ಕಾಣುವದಿಲ್ಲ. ತಮ್ಮ ಬಾಂಧವರನೇಕರು, ದುಃಖದಿಂದ ಬಳಲುತ್ತಿರಲು, ತಾವು ಹೀಗೆ ಹರುಷಗೊಳ್ಳುವದು ಉಚಿತವಲ್ಲ. ಈ ಸಂಗತಿಯು ಅವರ ಲಕ್ಷ್ಯಕ್ಕೆ ಬಾರದೇ ಇರದು ಮಾತ್ರ ಅವರು ಈ ಬಗ್ಗೆ ಸ್ವಲ್ಪ ವಿಚಾರಮಾಡಬೇಕಾಗುವದು.

**ತಾತ**— ಇದೋ ಇಲ್ಲಿ ನೋಡು. ಸಹಸ್ರಾವಧಿ ಜನರು ಮಡಿದು

ಬಿದ್ದಿರುವರು. ಇವರಿಗಾಗಿ ನಿನ್ನಲ್ಲಿ ಸ್ವಲ್ಪಾದರೂ ಕನಿಕರ ಹುಟ್ಟುವದೋ ? ಇವರಲ್ಲಾರಾದರೂ ಜೀವಿಸಿದ್ದಾದರೆ ನಮ್ಮುಗಳಿಗೆ ಅವರ ಸ್ಥಿತಿಯ ಬಗ್ಗೆ ಎಂಥ ಕರುಣಾಸ್ಪದವಾದ ವಿಚಾರಗಳು ಜನಿಸುತ್ತಲಿದ್ದವು ಬಲ್ಲೆಯಾ ? ಇದಂತೂ ಸಧ್ಯದ ಸ್ಥಿತಿಯಾಯಿತು. ಈ ಮೊದಲು ನಾನು ನೋಡಿದ ಒಬ್ಬ ದಂಡಾಳುವಿನ ಕರ್ರ್ಮ ಕಥೆಯೊಂದನ್ನು ಹೇಳಬೇಕೆಂದಿರುವೆನು. ಅದನ್ನು ಕೇಳುತ್ತಲೇ ನಿನ್ನ ತಲೆಯಲ್ಲಿ ಈ ವಿಷಯವಾಗಿ ಚನ್ನಾಗಿ ಪ್ರಕಾಶ ಬೀಳುವದರಲ್ಲಿ ಸಂದೇಹವಿಲ್ಲ.

**ಬಾಲಕ—** ತಾತಾ ! ಅದು ಅಷ್ಟು ಕರುಣಾಸ್ಪದವಾಗಿದೆಯೋ ? ಎಲ್ಲಿ ಹೇಳಿ ! ಬೇಗ ಹೇಳಿ ತಾತಯ್ಯ.

**ತಾತ—** ಹಾಗಾದರೆ ಕೇಳು ! ಚನ್ನಾಗಿ ಲಕ್ಷವಿಟ್ಟು ಕೇಳು ! ಹಿಂದೆ ನಾನು ಕಲಿಯುತ್ತಿದ್ದಾಗ್ಗೆ ಇಲ್ಲಿಯೇ ಸಮೀಪದ ಹಳ್ಳಿಯಲ್ಲಿ ಒಂದು ಶಾಲೆಯಿತ್ತು. ಅದೇ ಊರಲ್ಲಿ ಒಬ್ಬ ಸೇಕಾರನಿದ್ದ. ಅವನಿಗೊಬ್ಬ ಮಗನಿದ್ದ. ಆತನ ಹೆಸರು ಸೋಮನಾಥ. ಸೋಮನಾಥನು ಆದೇ ತಾರುಣ್ಯದೆಶೆಯನ್ನು ಹೊಂದಿ ಬಲವುಳ್ಳವನೂ, ಸುಂದರನೂ ಆಗಿದ್ದನು. ಅಲ್ಲದೆ ತಂದೆ ತಾಯಿಗಳಿಗೆ ಆತನೊಳ್ಳೆ ಸಹಾಯಕನಾಗಿದ್ದನು. ತಾಯಿತಂದೆಗಳಿಗೆ ಇವನೊಬ್ಬನೇ ಮಗನಿದ್ದರಿಂದ ಸೋಮನಾಥನನ್ನವರು ಬಹಳವಾಗಿ ಪ್ರೀತಿಸುತ್ತಿದ್ದರೆಂದರೆ ಅದೇನೂ ಅಚ್ಚರಿಯವಲ್ಲ. ಇರಲಿ. ಒಂದಾನೊಂದು ದಿನ ಸೋಮನಾಥನು ಆವುದೋ ಒಂದು ಕಾರ್ಯದ ನಿಮಿತ್ತವಾಗಿ ನೆರೆ ಹಳ್ಳಿಗೆ ಹೋಗಿರಲು ಅವನ ಸಂಗಡಿಗನೊಬ್ಬನು ಇವನನ್ನು ಸರಾಯಿ ಮಾರುವ ಅಂಗಡಿಗೆ ಕರೆದೊಯ್ದನು. ಸರಾಯಿಯು ಸೋಮನಾಥನಿಗೆ ಸೇರದಿದ್ದರೂ, ಮಿತ್ರನ ಆಗ್ರಹಕ್ಕಾಗಿ ಸ್ವಲ್ಪ ಮಟ್ಟಿಗೆ ಸೇವಿಸಲೇ ಬೇಕಾಯಿತು. ಮದಿರೆ ಅಂಗಡಿಯಿಂದ ಹೊರಗೆ ಬರುವಷ್ಟರಲ್ಲಿ ಯುದ್ಧದ ದಂಡಾಳುಗಳನ್ನು ಕೂಡಿರುವ ಒಬ್ಬ ಗುಮಾಸ್ತನು ಇವರಿಗೆ ಭೆಟ್ಟಿಯಾದನು. ಅವನು ತರುಣವಯಸ್ಕನಾದ ಸೋಮನಾಥನನ್ನು ನೋಡಿ “ ಎಂತಹ ಪುಷ್ಟನೂ, ಧೃಢಕಾಯದವನೂ ಆಗಿರುವನಿವನು ” ಸೈನಿಕನಾಗಲಿಕ್ಕೆ ಒಳ್ಳೇ ಯೋಗ್ಯನಾಗಿರುವನು. ಆದ್ದರಿಂದ ಸ್ವಲ್ಪ ಯತ್ನಿಸಿ ನೋಡುವಾ ! ಬಿದ್ದರೆ ಬೀಳಲಿ ಬಲಿಗೆ ! ಅನಾಯಾಸವಾಗಿ ದೊರೆತ ಬೇಟೆಯನ್ನು ವ್ಯರ್ಥವಾಗಿ ಕಳೆದುಕೊಳ್ಳಬಾರದು ವಿಂಬುದಾಗಿ ತನ್ನ ಮನದಲ್ಲಿ ಯೋಚಿಸಿದನು.

**ಬಾಲಕ—** ಹೂಂ. ಮುಂದೇನಾಯಿತು ತಾತಾ ಹೇಳಿ ! ಬೇಗನೆ ಹೇಳಿ !

**ತಾತ—** ಮುಂದೇನಾಗುವದು. ಏಜಂಟರು ಮತ್ತೆ ಸೋಮನಾಥನನ್ನು ಮದಿರಾ ಸೇವನೆಗಾಗಿ ಕರೆದೊಯ್ದು, ಆತನಿಗೆ ಬಹುವಾಗಿ ಮದಿರೆಯನ್ನು ಸೇವಿಸುವಂತೆ ಒತ್ತಾಯ ಪಡಿಸಿದನು. ಅದುಕಾರಣವೇ ಮುಂದೆ ಬೇಗನೇ ಅರುವು ಇಲ್ಲದ ಹಾಗಾಯಿತು. ಆಗ ಏಜಂಟನು ಅವನಿಂದ ತನಗೆ ಬೇಕಾದಂತೆ ಜವಾಬುಪೊಂದ

ನ್ನು ಆರಿಂದಲೋ ಬರೆಯಿಸಿ ಅದಕ್ಕೆ ಒಪ್ಪಿಗೆಯೆಂದು ಸೋಮನಾಥನ ರುಜು ತಕ್ಕೊಂಡನು. ಮರುದಿನ ಬೆಳಿಗ್ಗೆ ಎಜಂಟನು ಸೋಮನಾಥನನ್ನು ರಿಕ್ರೂಟಿಂಗ ಆಫೀಸರನ (ಯುದ್ಧದ ಸೈನ್ಯ ಭರತಿ ಮಾಡಿಕೊಡುವ ಅಧಿಕಾರಿ) ಕಡೆಗೆ ತಕ್ಕೊಂಡು ಹೋದನು. ಅಗ್ಗೆ ಅಧಿಕಾರಿಯು ಸೋಮನಾಥನನ್ನು ಕುರಿತು “ ನೀನು ನಿನ್ನ ಸ್ವಖುಷಿಯಿಂದ ಈ ಜವಾಬಿನ ಮೂಲಕ ಸೈನ್ಯಕ್ಕೆ ಭರತಿಯಾಗಿರುವಿ. ಆ ಬಗ್ಗೆ ಇದೋ ಈ ಪ್ರತಿಜ್ಞಾಪತ್ರಕ್ಕೆ ರುಜು ಹಾಕು! ಎಂದು ಗದ್ದರಿಸಿದನು. ಮದಿರೆಯ ಮಬ್ಬಿನೊಳಗಿಂದ ಜಾಗೃತನಾದ ಸೋಮನಾಥನು ತಾನು ಗೈದ ಕೃತಿಗಾಗಿ ಬಹಳವಾಗಿ ವ್ಯಸನಪಟ್ಟನು. ಆದರೆ ತನಗಂದು ಒದಗಿದ ಸಂಕಟದಿಂದ ಪಾರಾಗಬೇಕಾಗಿದ್ದಲ್ಲಿ, ನಾಲ್ಕು ವರಹಗಳಷ್ಟು ಲಂಚವಾದರೂ ಕೊಡಲೇ ಬೇಕಾಗುತ್ತಿತ್ತು. ಅಷ್ಟು ಹಣವನ್ನು ಕೂಡ ಅವನೆಲ್ಲಿಂದ ತರಬೇಕು. ಅವನಿಗಾವುದೂ ತೋಚದಾಯಿತು. ಇಂತಹ ಕೃತಿಯನ್ನು ಮಾಡಿ ತನ್ನ ಮಿತ್ರ ಜನಗಳಿಗೆ, ಹೇಗೆ ಮೋರೆ ತೋರಿಸಲೆಂಬ ಭೀತಿಯು ಅವನನ್ನು ಮಿತಿಮೀರಿ ಬಾಧಿಸಿತು. ಆದ್ದರಿಂದ ಅವನು ಉಪಾಯಗಾಣದೆ ಅಮುಲದಾರರ ಹೇಳಿಕೆಯಂತೆ ಪ್ರತಿಜ್ಞಾಲೇಖನಕ್ಕೆ ರುಜುಹಾಕಿಬಿಟ್ಟನು.

**ಬಾಲಕ**— ಅಹಹಾ! ಎಂತಹ ಜುಲುಮೆಯಿದು ಈ ಅಮುಲದಾರನದು? ಒಳ್ಳೇದು ತಾತಾ ಮುಂದೆ?

**ತಾತ**— ಕೂಡಲೇ ಸೋಮನಾಥನು ಅಮುಲದಾರನೊಂದಿಗೆ ಹೊರಟು ಹೋದನು. ಸೋಮನಾಥನ ಈ ವಾರ್ತೆ ಕೇಳಿ ವೃದ್ಧರಾದ ಅವನ ತಾಯಿ-ತಂದೆಗಳ ಎದೆಯೊಡೆದು ನೀರಾಯಿತು.

**ಬಾಲಕ**— ಅಹಹಾ! ಎಂತಹ ಅಸಹ್ಯನಾದ ವೇದನೆ! ಆ ಮಾತಾ-ಪಿತೃಗಳಿಗೆ ಅಂದಿನದು!

**ತಾತ**— ಕೆಲವು ದಿನಗಳ ತನಕ ಸೋಮನಾಥನಿದ್ದ ಸೈನ್ಯದ ಭಾಗವು ಒಂದೇ ಕಡೆಯಲ್ಲಿ ಬಿಡಾರ ಹೊಡೆದುಕೊಂಡಿತ್ತು. ಆಬಳಿಕ ಒಮ್ಮಿಂದೊಮ್ಮೆ ಯುದ್ಧದ ಪ್ರಸಂಗವು ಬಂದೊದಗಲು ಅದೇ ಸೈನ್ಯದ ಭಾಗಕ್ಕೆ ಪರದೇಶಕ್ಕೆ ಹೋಗಲು ಹುಕುಂ ಆಯಿತು.

**ಬಾಲಕ**— ಅಯ್ಯೋ ಪಾಪವೇ! ಊರಲ್ಲಿನ ಆತನ ವೃದ್ಧರಾದ ತಾಯಿ ತಂದೆಗಳ ಗತಿಯೇನಾಗಿರಬಹುದು?

**ತಾತ**— ಆಗುವದೇನು? ಅವರ ಹೃದಯಗಳು ಬೆಂದು ಬೆಂಡಾದವು. ಸೋಮನಾಥನು ಹೋದಂದಿನಿಂದ ಅವರಿಗವನಿಂದ ಒಂದೇ ಒಂದು ಪತ್ರವು ಮಾತ್ರ ಬಂದಿತ್ತು.

**ಬಾಲಕ—** ಯುದ್ಧಭೂಮಿಯಲ್ಲಿ ಸೋಮನಾಥನು ಎಂತಹ ವಿಪತ್ತಿಗೀಡಾದನೋ ಏನೋ ?

**ತಾತ—** ಆಯಿತು ! ಸೋಮನಾಥನು ತನ್ನ ಊರಿನಿಂದ ಹೋಗಿ ಎಷ್ಟೋ ವರುಷಗಳು ಗತಿಸಿದವು. ಒಂದು ಬೇಸಿಗೆ ಕಾಲದಲ್ಲಿ ಪ್ರಖರವಾದ ಸೂರ್ಯನ ತಾಪದಿಂದ ಬಳಲಿದ ಜನಗಳು ಸಂಧ್ಯಾಕಾಲದಲ್ಲಿ ತಮ್ಮ ಗುಡಿಸಲುಗಳಮುಂದೆ ಆಗಲೇ ಬೀಸುವ ತಂಗಾಳಿಗೆ ಮೈಯೊಡ್ಡಿ ಕುಳಿತಿದ್ದರು. ಅಷ್ಟರಲ್ಲಿ ಕಂಕುಳಲ್ಲಿ ಕೋಲುಗಳನ್ನಿಟ್ಟುಕೊಂಡು ಎಡವುತ್ತ ಮುಗ್ಗುತ್ತ ಸೈನಿಕರಂತೆ ಉಡುಪುಧರಿಸಿದ ಪುರುಷನೊಬ್ಬನು ಅದೇ ಹಳ್ಳಿಗೆ (ಸೋಮನಾಥನ ಊರು) ಪ್ರಾಪ್ತನಾದನು. ಅವನ ಮುಖವು ನಿಸ್ತೇಜವಾಗಿತ್ತು. ಗಲ್ಲಗಳು ಕಂದಿದ್ದವು. ಕಣ್ಣುಗಳು ಒಳನಟ್ಟಿದ್ದವು. ನೋಡುವವರಿಗೆ ಅವನು ಅತಿಶಯ ದುಃಖಕ್ಕೆ ಈಡಾಗಿರಬೇಕೆಂಬಂತೆ ಕಂಡುಬರುತ್ತಿತ್ತು. ಕೂಡಲೇ ಹಳ್ಳಿಯ ಜನಗಳೆಲ್ಲ ಅವನ ಸುತ್ತಲು ನೆರೆದರು. ಆಗ್ಗೆ ಓರ್ವ ತರುಣಿಯು ಒಮ್ಮಿಂದೊಮ್ಮೆ “ಅಯ್ಯೋ ! ತಾರುಣ್ಯದೆಶೆಯಲ್ಲಿ ಪ್ರೇಮಪಾಶದಿಂದ ನನ್ನ ಮನವನ್ನು ಸೆಳೆದ ಸೋಮನಾಥನೆ !” ಎಂದು ಸುರಿ ಮೂರ್ಛೆ ಹೋದಳು. ಈ ಶಬ್ದಗಳನ್ನು ಕೇಳಿದ ಸೋಮನಾಥನಾದರೂ ಕೂಡಲೇ ದೇಹಭಾನವನ್ನು ಕಳೆದುಕೊಂಡವನಾಗಿ ನೆಲಕ್ಕುರುಳಿದನು. ನೆರೆದವರೆಲ್ಲರೂ ಬಹಳವಾಗಿ ಸೋಜಿಗಗೊಂಡರು. ಅವರಲ್ಲಿನ ಕೆಲವರು ಸೋಮನಾಥನ ತಂದೆ-ತಾಯಿಗಳನ್ನಲ್ಲಿಗೆ ಕರೆದುತಂದರು. ಆಗವರಿಗಾದ ದುಃಖವನ್ನು ಹೇಳಲು ಸಾಧ್ಯವಿಲ್ಲ. ಆದರೂ ಕೂಡಿದ ಜನರು ಸೋಮನಾಥನಿಗೂ ತರುಣಿಗೂ ತಲೆಗೆ ತಣ್ಣೀರು ತಟ್ಟಿ ಅವರನ್ನೆಚ್ಚರಗೊಳಿಸಿ ಹಾಗೂ ಹೀಗೂ ಮಾಡಿ ವೃದ್ಧರಾದ ತಂದೆ-ತಾಯಿಗಳನ್ನು ಸಮಾಧಾನಪಡಿಸಿದರು. ಇಂತಹ ಹೃದಯದ್ರಾವಕವಾದ ದೃಶ್ಯವನ್ನು ಕಣ್ಣಾರೆ ನೋಡುವದಕ್ಕೆ ನಾನು ಅಂದು ಅದೇ ಸ್ಥಳದಲ್ಲಿ ಇದ್ದೆನು. ಕೊನೆಗೊಮ್ಮೆ ಎಲ್ಲರೂ ಕೂಡಿ ಸೋಮನಾಥನನ್ನು ಅವನ ಮನೆಗೊಯ್ದು ಮುಟ್ಟಿಸಿದರು. ಅಂದು ರಾತ್ರಿ ಊಟವಾದಬಳಿಕ ಹಳ್ಳಿಗರೆಲ್ಲರೂ ಸೋಮನಾಥನ ಸಮಾಚಾರವನ್ನು ಕೇಳುವದಕ್ಕಾಗಿ ಕೂಡಿದರು. ಆಗ್ಗೆ ಸೋಮನಾಥನು ತಾನೇ ಸ್ವತಃ ಹೇಳಿದುದೇ ಈ ಕಥಾನಕವು.

**ಬಾಲಕ—** ಎಂತಹ ಭಯಂಕರವಾದ ಕಥಾನಕವಿದು ! ಏನು ಸೋಮನಾಥನ ಈ ಗತಿ ! ಎಷ್ಟು ದುಃಖವಿದು ಸೋಮನಾಥನ ಮಾತಾ-ಪಿತೃಗಳದು. ಇದೆಲ್ಲವನ್ನೂ ಕೇಳುತ್ತಲೆ ಮೈಮೇಲೆ ರೋಮಾಂಚನೆಗಳು ಬರುತ್ತವೆ.

**ತಾತ —** ಕೇಳು ಮಗೂ ! ನೀನೇ ನೋಡು ಹ್ಯಾಗಿದೆ ಈ ಸಮಾಚಾರಾ !

**ಬಾಲಕ—** ಅಯ್ಯೋ ಅದೆಂತಹ ಅನಾಹುತ ! ಒಂದು ಜೀವನಕ್ಕಾಗಿ ಮತ್ತೊಂದು ಜೀವನದ ಹತಿ ! ಎಷ್ಟು ದಿವ್ಯವಾದ-ಪವಿತ್ರವಾದ ಪ್ರೇಮವದು. ಆ

ತರುಣಿಯದು ಸೋಮನಾಥನಲ್ಲಿ ! ಅದುಕಾರಣವೇ ಸೋಮನಾಥನ ಬರುವಿಗಾಗಿ ಕಾದಿ, ಕೊನೆಗೊಮ್ಮೆ ಅವನ ದರುಶನವಾಗುತ್ತಲೆ, ಅವನಿಗುಂಟಾದ ದುಃಖದ ಸ್ಥಿತಿಯನ್ನು ಸಹಿಸಲಾರದೆ, ಅಸು ತೊರೆದಳಲ್ಲವೇ ? ಆ ತರುಣಿಯು ಅಹಹಾ! ಇದ್ದರೆ ಇರಬೇಕು ಇಂತಹ ಅಚಲವಾದ ಪ್ರೇಮ ! ಇರಲಿ ತಾತಾ, ಆಮುಂದೇ ನಾಯಿತು. ತಾತಾ ಸೋಮನಾಥನದು !

**ತಾತ—** ಆಮೇಲೆ ಆಗುವದೇನು ? ಅದೇ ದಿನ ರಾತ್ರಿ ಬೆಳಗಿನ ಜಾವದಲ್ಲಿ ಯುದ್ಧಭೂಮಿಯಲ್ಲುಂಟಾದ ಅನೇಕ ಘಾಯಗಳಿಂದ ತೊಳಲಿ ಬಾಧೆಗೊಂಡ ದೇಹವನ್ನೊಮ್ಮೆ ಸೋಮನಾಥನು ತೊಲಗಿಬಿಟ್ಟನು. ಇಹಲೋಕದ ಯಾತ್ರೆಯನ್ನೇ ಮುಗಿಸಿದನು. ಇಂತು ಪುತ್ರಶೋಕವ್ಯಥೆಯನ್ನು ತಡೆಯಲು ಸಾಮರ್ಥ್ಯವಿಲ್ಲದವರಾದ ಅವನ ವೃದ್ಧ ಮಾತಾಪಿತೃಗಳೂ ಅದೇ ದಿನ ತಮ್ಮ ಇಹಲೋಕದ ಯಾತ್ರೆಯನ್ನು ಮುಗಿಸಿದರು.

**ಬಾಲಕ—** ಸಾಕು ಮಾಡು ತಾತಯ್ಯಾ. ನಾನಿನ್ನು ಕೇಳಲಾರೆ. ಈ ಕರುಣಾಸ್ಪದವಾದ ಸೋಮನಾಥನ ಈ ಕರ್ಮಕಥೆಯನ್ನು !

**ತಾತ—** ಅದೇಕೆ ಮಗೂ! ಇಂತಹ ಅನೇಕ ಹಾಗೂ ಇದಕ್ಕೂ ಹೆಚ್ಚಾಗಿ ಶೋಚನೀಯವಾದ ಸ್ಥಿತಿಗೊಳಗಾದ ಸಾವಿರಾರು ಸೈನಿಕರೆಷ್ಟೋಜನಗಳು ಅಂದಿನ ಯುದ್ಧಭೂಮಿಯಲ್ಲಿ ಆಹುತಿಯಾಗಿರುವರು. ಅವರುಗಳ ದುರ್ದೆಶೆಗಾಗಿ ನೀನಿಂದು ಆನಂದಪಡುತ್ತಿರುವಿಯಲ್ಲವೇ ? ಮಗೂ ! ಈಗಲಾದರೂ ತಿಳಿಯಿತೋ ನಿನಗೆ ಇಂದು ಮೂಢಜನಗಳು ಆನಂದಪಡುತ್ತಲಿರುವ " ಗೆಲುವಿನ ಬೆಲೆ ! "

---

## " ನೋಬೆಲ್ಲ " ಪಾರಿತೋಷಕವೂ ಅದರ ಇತಿಹಾಸವೂ

ಲೇಖಕರು:- ಶ್ರೀ. ಬಾಲೇಹೊಸೂರ ರಾಮರಾಯರು, ಶಿರಹಟ್ಟಿ.

### ನೋಬೆಲ್ಲ ಆಲ್‌ಫ್ರೇಡ ಬರ್ನಹಾರ್ಡ ಅವರ ಚರಿತ್ರೆ—

ನೋಬೆಲ್ಲನು ಯುರೋಪದೊಳಗಿನ ( ಸ್ವೀಡನ್‌ದ ರಾಜಧಾನಿ ) ಸ್ಟಾಕ್‌ಹೋಮನಗರದಲ್ಲಿ ಜನ್ಮ ತಾಳಿದನು (೧೮೩೩). ಮೊದಲಿನಿಂದ ಇವನ ಒಲವು ಯಂತ್ರಶಾಸ್ತ್ರದಕಡೆಗೆ ಇದ್ದುದರಿಂದ ವ್ಯವಹಾರಕ್ಕೆ ತಕ್ಕಮಟ್ಟಿಗೆ ಶಿಕ್ಷಣ ಹೊಂದಿದಕೂಡಲೇ ಪೇಟ್ರೋಗ್ರೇಡ (ರಶಿಯಾದ ರಾಜಧಾನಿ) ದಲ್ಲಿದ್ದ ತನ್ನ ತಂದೆಯವರ " ಟಾರ್ಪೆಡೋ " (ಜಲಯುದ್ಧದಲ್ಲಿ ಹಡಗಗಳನ್ನು ಒಡೆಯಲು ಉಪಯೋಗಿಸುವ ಸ್ಫೋಟಕ ದ್ರವ್ಯದಿಂದ ಕೂಡಿದ ಯಂತ್ರ ) ಗಳನ್ನು ತಯಾರಿಸುವ ಕಾರಖಾನೆಯಲ್ಲಿ ಕೆಲಸಕ್ಕೆ ಸೇರಿದನು. ಮುಂದೆ ಕೆಲದಿನಗಳಮೇಲೆ ಮರುಳಿ ಸ್ಟಾಕಹೋಮಕ್ಕೆ ಬಂದನು. ಕೂಡಲೇ ಸ್ಫೋಟಕ ದ್ರವ್ಯಗಳನ್ನು ತಯಾರಿಸುವ ರಸಾಯನ ಶಾಸ್ತ್ರದ ಅಭ್ಯಾಸ ನಡೆಯಿಸಿದನು. ಅದರಲ್ಲಿ ಅವನಿಗೊಳ್ಳೇ ಯಶದೊರೆ

ಯಿತು. 'ಬ್ಲಾಸ್ಟಿಂಗ' (ಒಣಕಲ್ಲು ಒಡೆಯುವದಕ್ಕೆ ಹಚ್ಚುವ ಸುರಂಗದಮದ್ದು) 'ಜಿಲೆಟಾಯಿನ' (ನೀರಲ್ಲಿರುವ ಕಲ್ಲಿಗೆ ಹಚ್ಚುವ ಸುರಂಗದ ಮದ್ದು) ಹಾಗೂ 'ಬ್ಲಾಸ್ಟಾಯಿಟ' ಎಂಬ ಅತಿ ಭಯಂಕರವಾದ ಶಕ್ತಿಯುಳ್ಳ ಸ್ಫೋಟಕ ದ್ರವ್ಯ ಇವೇ ಅವನ ಅಗಾಧ ಜ್ಞಾನದ ಫಲವಾಗಿ ಹೊರಬಿದ್ದ ಶೋಧಗಳು. ಅವನಿಂದ ತಯಾರಿಸಲಾದ ಈ ಸ್ಫೋಟಕ ದ್ರವ್ಯದಲ್ಲಿ 'ಕಾರ್ಬಾಯಿಟ' ಎಂಬ ಪದಾರ್ಥದ ಸಮಾವೇಶವಾಗುತ್ತದೆ.

ಇದೇ ವೇಳೆಗೆ ಬ್ರಿಟಿಶ್ ಸರಕಾರದವರು ತಮ್ಮಲ್ಲಿನ ಇಬ್ಬರಿಗೆ (ಶಾಸ್ತ್ರಜ್ಞರು) 'ಕಾರ್ಬಾಯಿಟ'ದ ಪೇಟೆಂಟ (ಸಕಲ ಬಾಧ್ಯತೆ) ಕೊಟ್ಟರು. ಆಗ ನೋಬೆಲ್ಲನು ಅವರ ವಿರುದ್ಧ ಫಿರ್ಯಾದು ಮಾಡಿದನು. ಅದರ ತೀರ್ಪು ಮಾತ್ರ ಅವನಂತೆ ದೊರೆಯಲಿಲ್ಲ. ಆದರೆ ಅವನು ತಯಾರಿಸಿದ 'ಸ್ಫೋಟಕ ದ್ರವ್ಯ' (ಕಾರ್ಬಾಯಿಟ ದಿಂದ ಕೂಡಿದ್ದು) ಮಾರುವದಕ್ಕೆ ಮಾತ್ರ ಸ್ವಾತಂತ್ರ್ಯತೆ ಉಳಿಯಿತು.

ನೋಬೆಲ್ಲನು ತಾನು ತಯಾರಿಸಿದ ಸ್ಫೋಟಕ ದ್ರವ್ಯದಿಂದ ಅಪಾರ ಹಣ ಗಳಿಸಿದನು. ಸಾಧಾರಣವಾಗಿ ಅವನ ಸಂಪತ್ತಿಯು ಸುಮಾರು ೧೭೫೦೦೦ ಪೌಂಡು ಇದ್ದಿರಬೇಕೆಂದು ಹೇಳುವದುಂಟು. ಇಂತಹ ಈ ಅದ್ಭುತ ಸಂಪತ್ತಿಯು ಉಪಯೋಗವು ಲೋಕಜನಗಳ ಕಲ್ಯಾಣಕ್ಕಾಗಿ, ಕೆಲಮಟ್ಟಿಗಾದರೂ ಆಗಬೇಕೆಂಬ ಸದಭಿಲಾಷೆಯಿಂದ ತಾನು ಗಳಿಯಿಸಿದ ಹಣದ ಬಹುಭಾಗವನ್ನು ಧಾರೆಯೆರೆದು ಕೊಟ್ಟದುದನ್ನು ನೋಡಿದರೆ, ಅವನೆಂತಹ ಉದಾತ್ತಹೃದಯಿಯಾಗಿದ್ದನೆಂಬದು ವ್ಯಕ್ತವಾಗುತ್ತದೆ. ಆ ಹಣದ ವಿನಿಯೋಗವು ಯೋಗ್ಯರೀತಿಯಿಂದಾಗಬೇಕೆಂಬ ಆಕಾಂಕ್ಷೆಯಿಂದ ನೋಬೆಲ್ಲನು ತನ್ನ ಊರಿನ (ಸ್ಟಾಕಹೋಮದ) ಕೆಲಮಹಾಜನಗಳದೊಂದು ಮಂಡಲ (Board of Directors) ವನ್ನು ನಿಯಮಿಸಿದನು.

ನೋಬೆಲ್ಲನು ಈ ಕಾರ್ಯಕ್ಕಾಗಿ ಕಾದಿಟ್ಟ ಹಣದ ಮೇಲಿನ ಬಡ್ಡಿಯಲ್ಲಿ "ನೋಬೆಲ್ಲ ಪಾರಿತೋಷಕವು" ಇಂದು ಕೊಡಲಾಗುವದು. ಪಾರಿತೋಷಕವು ಕೆಳಗೆ ಬರೆದ ವಿಷಯುಗಳಿಗಾಗಿ ಕಾದಿಡಲ್ಪಟ್ಟಿದೆ. ೧ ರಸಾಯನ್ನ ಶಾಸ್ತ್ರ, ೨ ಪದಾರ್ಥವಿಜ್ಞಾನ ಶಾಸ್ತ್ರ, ೩ ವೈದ್ಯಶಾಸ್ತ್ರ, ೪ ವಿಶ್ವ ಸಾಹಿತ್ಯ, ೫ ಶಾಂತತಾ ಪ್ರಸ್ಥಾಪನೆ (ಜಗದ ಶಾಂತಿಗಾಗಿ ಯತ್ನಬಟ್ಟು ಯಶದೊರಕಿಸಿದವನಿಗೆ) ಮೇಲಿನ ಪ್ರತಿಯೊಂದು ವಿಷಯುಗಳಬಗ್ಗೆ ಗ್ರಂಥ ಬರೆದವರಿಗೆ (ಪ್ರತಿವರುಷ) ಪಾರಿತೋಷಕವು ಕೊಡಲಾಗುವದು. ಪಾರಿತೋಷಕವು ಸುಮಾರು ೬೫೦೦ ಪೌಂಡು ಬೆಲೆಯುಳ್ಳದ್ದಾಗಿದೆ. ಲೋಕಕಲ್ಯಾಣಾರ್ಥವಾಗಿ ಇಂತಹ ಘನವಾದ ಕೃತಿಯೊಂದನ್ನು ಮಾಡಿ ತನ್ನ ಹೆಸರು ಜಗತ್ತಿನ ಇತಿಹಾಸದಲ್ಲಿ ಚಿರಕಾಲ ಬಾಳುವಂತೆ ಮಾಡಿದ "ನೋಬೆಲ್ಲನು" ನಿಜವಾಗಿಯೇ ಧನ್ಯನು. ಇದೀಗ ಅವನ ಜನುಮ ಸಾರ್ಥಕತೆ. ಇಂತು ಮಹಾಕಾರ್ಯ ಗೈದು ನೋಬೆಲ್ಲನು ೧೮೯೬ರಲ್ಲಿ ಕಾಲವಶನಾದನು.

ಭಾರತದಲ್ಲಿ ಬಂಗಾಲಿಗಳಾದ ರವೀಂದ್ರನಾಥ ಟಾಗೋರರಿಗೂ, ಮದರಾಸಿನ ಸಿ. ವ್ಹಿ. ರಾಮನ್ ಪ್ರಭೃತಿಗಳಿಗೂ ನೋಬೆಲ್ಲ ಪಾರಿತೋಷಕವು ದೊರೆತಿದೆ.

# ದೈವಘಟನೆ.

ಲೇಖಕರು :— ಶ್ರೀ. ಮಹಿಷಿ ಕೃಷ್ಣ ಶರ್ಮಾ.

## ೧ನೇ ಪ್ರಕರಣ.

## ಮನೋಬಯಕೆ.

---

ಸಹ್ಯಾದ್ರಿಯ ಗುಡ್ಡಗಾಡು ಪ್ರದೇಶದ ಪೂರ್ವಭಾಗವು. ಆಗಲೇ ಶಿವರಾತ್ರಿಯು ಕ್ರಮಿಸಿಹೋದದ್ದರಿಂದ ಸೂರ್ಯನ ಪ್ರಚಂಡವಾದ ಕಿರಣಗಳು ಕಾಯ್ದ ಹಂಚಿನಂತೆ ತಪ್ತವಾಗಿ ಪರ್ವತಗಳಲ್ಲಿಯ ಸಮಸ್ತ ಮರುತರುಗಳುಕೂಡ ಬಾಡಲಿಕ್ಕಾಗಿವೆ. ಅದರಲ್ಲಿಯೂ ಎರಡು ವರ್ಷಗಳಿಂದಲೂ ಮಳೆಗಾಲವಿಲ್ಲದೆ ಅರಣ್ಯದಲ್ಲಿ ಪಕ್ಷಿಗಳಿಗೂ ಕೂಡ ನೀರಿಲ್ಲದಾಗಿದೆ. ಮೃಗಗಳೆಲ್ಲವೂ ಸೂರ್ಯನಾರಾಯಣನ ಪ್ರಖರವಾದ ಬಿಸಿಲಿಗೆ ಕಂಗೆಟ್ಟು ಹಾಹಾರಿದವುಗಳಾಗಿ ಎಲ್ಲಿಯಾದರೂ ಸ್ವಲ್ಪ ನೆರಳು ಸಿಕ್ಕರೆ ಸಾಕೆಂದು ಗಿರಿಕಂದರಗಳಲ್ಲಿಯೂ, ಪಲ್ಲವರಹಿತವಾಗಿದ್ದರೂ ಚಿಂತೆಯಿಲ್ಲ, ದೊಡ್ಡ ದೊಡ್ಡ ಮರಗಳ ಅಲ್ಪಸ್ವಲ್ಪವಾಗಿ ಬಿದ್ದಿರುವ ನೆರಳಿನಲ್ಲಿಯೂ ಆಶ್ರಯಿಸತೊಡಗಿವೆ. ಅರಣ್ಯದಲ್ಲಿ ಎಲ್ಲಿಯೂ ನೀರಿನ ಅಂಶವುಕೂಡ ಇಲ್ಲದಾದ್ದರಿಂದ ಗುಡ್ಡಗಾಡಿನಲ್ಲಿಯ ಕಾಲುಮಾರ್ಗಗಳಿಂದ ಕ್ರಮಿಸುತ್ತಿರುವ ದಾರಿಕಾರರು ತಮ್ಮೆದುರಿಗೆ ಕಾಣುತ್ತಿರುವ ಮೃಗಜಲಕ್ಕೇ ನೀರೆಂದು ಧಾವಿಸುತ್ತ "ಇತ್ತಕಡೆಗೆ ಗಿಡಗಳ ವಟ್ಟಣೆ ಕಾಣುತ್ತದೆ, ಇಲ್ಲಿ ನೀರಿದೆ. ಅತ್ತ ಅವು ಕಂಡಂತಾಗುತ್ತವೆ, ಅಲ್ಲಿ ನೀರಿದೆ. ಬೇರೊಂದು ಕಡೆಗೆ ಶಿಂದಿ ಮುಂತಾದ ಜಲಾಶಯದಲ್ಲಿ ಬೆಳೆಯುವಂತಹ ಗಿಡಗಳಿವೆ, ಅಲ್ಲಿ ನೀರಿರಬಹುದು." ಎಂದು ತಿರುತಿರುಗಿ ಬೇಸತ್ತು ತಾವು ಎಲ್ಲಿ ನೋಡಿದ್ದು ! ಮೃಗಜಲವೇ ಎಂದು ನಿಶ್ಚಯಿಸಿ, ಸಮೀಪದಲ್ಲಿಯೇ ಇದ್ದದ್ದೊಂದು ಮರದ ಬೊಡ್ಡೆಯನ್ನಾಗಲಿ ಅಥವಾ ಒಂದು ಬಂಡೆಗಲ್ಲನ್ನಾಗಲಿ ಆಶ್ರಯಿಸಿ, "ದೇವರೇ, ಕುಡಿಯಲಿಕ್ಕೆ ನೀರು ಸಹ ಸಿಗಬಾರದೇ ? ಹೊಟ್ಟೆಯಲ್ಲಿ ಅನ್ನವಿಲ್ಲದಿದ್ದರೂ ಒಂದು ಗುಟುಕು ನೀರನ್ನಾದರೂ ಕುಡಿದು ತೃಷಾಶಾಂತಿಯನ್ನು ಮಾಡಿಕೊಳ್ಳೋಣವೆಂದರೆ ಅದುಕೂಡಾ ನಮ್ಮ ಪಾಲಿಗಿಲ್ಲವೇ ? ಇಂತಹ ಮಹದಪರಾಧವು ಯಾರಿಂದ ಘಟಿಸಿರುವದು ? ನಮ್ಮಿಂದಲೋ, ನಮ್ಮ ಪೂರ್ವಜರಿಂ

ದಲೋ, ಅಥವಾ ನಮ್ಮ ರಾಷ್ಟ್ರದೊರೆಗಳಿಂದಲೋ ? ತಿಳಿಯದಾಯಿತು. " ಎಂದು ಏನೇನೋ ವಟಗುಟ್ಟುತ್ತ ಮೃತಪ್ರಾಯರಾದವರಂತೆ ಸಿಕ್ಕಷ್ಟೇ ನೆರಳಿನಲ್ಲಿ ಕಾಲು ಚಾಚಿ ಬೀಳತೊಡಗಿದ್ದಾರೆ. ನಾಗರಿಕರೆಲ್ಲರೂ ಬಿಸಿಲಿನ ತಾಪವನ್ನು ತಾಳಲಾರದೆ ಮೈಮೇಲಿನ ಅರಿವೆಗಳನ್ನೆಲ್ಲ ಬಿಸುಟಿ ಉಸ್ಸೆಂದು ನೆರಳನ್ನು ಆಶ್ರಯಿಸಹತ್ತಿದ್ದಾರೆ. ಹಾಗು ಕಾಡಿನಲ್ಲಿ ಮೇಯುವದಕ್ಕೆಂದು ಹೋದ ದನಗಳು ಎಲ್ಲಿಯಾದರೂ ಸ್ವಲ್ಪ ನೆರಳಿದ್ದ ಸ್ಥಳವನ್ನು ಆಶ್ರಯಿಸಿ, ಬಾಯಾರಿ ಬಳಲುತ್ತಿರುವ ತಮ್ಮ ಕರುಗಳಿಗೆ ತಮಗೆ ಬೇಕಾದಷ್ಟು ತ್ರಾಸವಾಗಿದ್ದರೂ ತಮ್ಮ ಒಣ ಮೊಲೆಗಳನ್ನು ಉಣಿಸುತ್ತಲಿವೆ.

ಈ ಪ್ರಕಾರವಾಗಿ ಎಲ್ಲ ಕಡೆಯಲ್ಲಿಯೂ ನಿಃಶಬ್ದವಾದ ಅರಣ್ಯದಲ್ಲಿ ಹುಳಹುಪ್ಪಡಿಗಳ 'ಡಿವರ್' ಎಂಬ ಸಪ್ಪಳದ ವಿನಃ ಪಕ್ಷಿಗಳ ಕಿಲಿಕಿಲಾಟ, ಮನುಷ್ಯ, ಮೃಗ ಮುಂತಾದ ಯಾವ ತರದ ಸಪ್ಪಳವೂ ಇಲ್ಲದಂತಾಗಿದೆ. ಇಂತಹ ಪ್ರಖರವಾದ ಬಿಸಿಲಿನಲ್ಲಿ•ಹದಿನೇಳು ಹದಿನೆಂಟು ವರ್ಷದ ಓರ್ವ ತರುಣಿಯು ತಲೆಯಮೇಲೊಂದು ಮಣ್ಣಿನ ಕೊಡವನ್ನು ಹೊತ್ತುಕೊಂಡು ಜಲಶೋಧಾರ್ಥವಾಗಿ ಅತ್ತಿತ್ತ ಸಂಚರಿಸಿ ಬೇಸತ್ತು ಒಂದು ವೃಕ್ಷದ ಆಶ್ರಯಕ್ಕೆ ಕುಳಿತು, ಅವಳು ತನ್ನಲ್ಲಿ ತಾನೇ "ಜಗಜ್ಜನನೀ, ಮುಂಜಾವಿನಿಂದಲೂ ಪ್ರಯತ್ನಿಸುತ್ತಿರುವ ನನಗೆ ಒಂದು ಮುಕ್ಕ ನೀರು ಕೂಡಾ ಸಿಗಬಾರದೇ ? ಇಂದಿನವರೆಗೆ ನಾನು ನಮ್ಮ ಬಿಡಾರದಿಂದ ಒಂದು ಮೈಲು, ಎರಡು ಮೈಲು ಅಥವಾ ಮೂರು ಮೈಲುಗಳನ್ನು ತಿರುಗಿ ಎಲ್ಲಿಯಾದರೂ ನೀರಿನ ಶೋಧವನ್ನರಿತು ತೆಗೆದುಕೊಂಡು ಒಂದು ಪ್ರಹರದೊಳಗಾಗಿಯೇ ನನ್ನ ಸ್ಥಳವನ್ನು ಕಾಣುತ್ತಲಿದ್ದೆನು. ಆದರೆ ಇಂದು ಮಾತ್ರ ಎಲ್ಲೆಲ್ಲಿಯೂ ನೀರಿನ ಅಂಶವು ಕೂಡ ನನಗೆ ಹತ್ತಲೊಲ್ಲದಲ್ಲ ! ಮಧ್ಯಾಹ್ನ ಸಮಯವಾಗುತ್ತ ಬಂತು. ಇನ್ನೂ ನೀರು ಹುಡುಕಿಕೊಂಡು ನಾನು ನನ್ನ ಸ್ಥಳವನ್ನು ನೋಡಲೆಂದು? ನನ್ನ ಬಂಧುವು ಇಷ್ಟರಲ್ಲಿಯೇ ಕಂದಮೂಲಾದಿಗಳೊಡನೆ ಗುಡಿಸಲಿಗೆ ಬಂದು ಒಡನೆಯೇ 'ಭಗಿನಿ ಎಲ್ಲಿ ?' ಎಂದು ಅತ್ತಿಗೆಯನ್ನು ಕೇಳುತ್ತಿರಬಹುದಲ್ಲವೇ ? ಅದರಲ್ಲಿ ನಮ್ಮ ತಂದೆಯವರು ಕಾಲವಾದಂದಿನಿಂದ ನನಗಾಗಿ ಆ ನನ್ನ ಬಂಧುವು ದಿನಕ್ಕೆ ಒಂದೆರಡುಸಾರೆಯಾದರೂ ಕಣ್ಣೀರು ಹಾಕುತ್ತ, ನಾನು ಸ್ವಲ್ಪ ಕಣ್ಣೆದುರಿಗಿಲ್ಲವಾದರೆ ಆತನು ಬಾಯಲ್ಲಿ ನೀರು ಸಹ ಹಾಕದೆ, 'ಭಗಿನೀ, ನಾನೇನೂ ಆಶಿಸುವದಿಲ್ಲ. ದುರ್ದೈವದೀಂದ ನನಗೊದಗಿದ ಸಂಕಟಕ್ಕಾಗಿ ನಾನು ಕಾಳ್ಜಿಗೆಡಿಲ್ಲ. ಆದರೆ ತಾತನು ಮರಣಕಾಲಕ್ಕೆ ನಿನಗಾಗಿ ದುಃಖಪಡುತ್ತ ನಿನ್ನ ಲಗ್ನವೊಂದನ್ನು ಮಾತ್ರ ಸಮಾನಸ್ಕಂಧರಲ್ಲಿ ಮಾಡೆಂದು ನನ್ನಿಂದ ವಚನ ತಕ್ಕೊಂಡು ಪ್ರಾಣಬಿಟ್ಟನು. ತದನುಸಾರ ಮಾಡಬೇಕೆನ್ನುವಷ್ಟರಲ್ಲಿ ದುರ್ವಿಧಿಯು ನನ್ನನ್ನು ಕಾಡಿಗಟ್ಟಿತು. ಈಪ್ರಕಾರ ಕರ್ತವ್ಯಮೂಢನಾದ ನಾನು ನೀಚನು, ಪಾಪಿಯು, ದುರಾತ್ಮನು," ಮುಂ

ತಾದ ಬೀಭತ್ಸ ನುಡಿಗಳನ್ನಾಡುತ್ತಿರುವಲ್ಲಿ, ಅಲ್ಲಿಯೇ ಎಲ್ಲಿಯಾದರೂ ಮರೆಯಲ್ಲಿ ಕೆಲಸದಲ್ಲಿದ್ದ ನಾನು ಓಡುತ್ತ ಹೋಗಿ ಅವನಿಗಿ ಸಮಾಧಾನ ಹೇಳುತ್ತ ಬಂದಿರುವೆನು. ಇಂತಹ ನನ್ನ ಪ್ರಿಯ ಬಂಧುವು ನನ್ನ ಮಾರ್ಗಪ್ರತೀಕ್ಷಣೆಮಾಡಿ ಗುಡಿಸಲಲ್ಲಿ ನಿಲ್ಲುವದಾಗದೆ ಅವನಾದರೂ ನನ್ನನ್ನು ಹುಡುಕುತ್ತ ಹೊರಟಿರಬಹುದು. ಅತ್ತ ಇದೆಲ್ಲ ಸಮಾಚಾರವನ್ನು ನೋಡುತ್ತಿದ್ದ ನನ್ನ ಅತ್ತಿಗೆಯ ಚಿತ್ತವೂ ಭ್ರಾಂತನಾಗಿರಬಹುದು. ಹಾಗೂ ನನ್ನ ಚಿಕ್ಕ ಪ್ರದಸ್ಯುವೂ "ಅತ್ಯಾ ಅತ್ಯಾ" ಎನ್ನುತ್ತ, "ಅವ್ವಾ ಅತ್ತೆಯಲ್ಲಿ ಹೋಗಿರುವಳು ? ಈಗ ತಾತನು ಎಲ್ಲಿ ಹೋದನು ?" ಎಂದು ಹಂಬಲಿಸುತ್ತಿರಬಹುದಲ್ಲವೇ ?' ತಾಯಿ, ಭವಾನಿ ; ಎಂದು ಸ್ವಲ್ಪ ಸುಮ್ಮನೆ ಕುಳಿತು ಚಕಿತಳಾಗಿ, "ಆಂ ! ಇದೇನು ? ನಾನು ಹೀಗೆಯೇ ಯೋಚಿಸುತ್ತ ಕುಳಿತರೆ ಮುಂದಿನ ಗತಿಯೇನು ? ಎಲ್ಲಿಯಾದರೂ ಜಲವನ್ನು ಶೋಧಿಸಿಕೊಂಡು ತೀವ್ರವಾಗಿ ಗುಡಿಸಲಿಗೆ ಹೋಗಲೇಬೇಕು." ಎಂದು ಚಟ್ಟನೆ ಎದ್ದು, "ಇನೆರಡೂ ದಿಕ್ಕೂಗಳಂತೂ ಮುಗಿದಂತಾದವು. ಇನ್ನು ಪೂರ್ವದಿಕ್ಕನ್ನಷ್ಟು ನೋಡೋಣವೆಂದು ಮೈಲರ್ಧಮೈಲು ಮಾರ್ಗ ಕ್ರಮಿಸುತ್ತಿರುವಷ್ಟರಲ್ಲಿ ಆದೇ ಬಡವಾಡಿ ಹೋದ ಆನೆಯಹೆಜ್ಜೆಗಳೂ, ಕಾಡಾಕಳುಗಳ ಹೆಜ್ಜೆಗಳೂದಾರಿಗುಂಟಬಿದ್ದಿರುವದನ್ನು ನೋಡಿ ಅವಳು ಮನದಲ್ಲಿ ಹಿರಿ ಹಿರಿ ಹಿಗ್ಗಿ, "ಆಯಿತು. ನನ್ನ ಕೆಲಸವಾಯಿತು. ಇಲ್ಲಿಂದ ಸಮೀಪದಲ್ಲಿಯೇ ಒಂದಾನೊಂದು ಸರೋವರವಿರಬಹುದು. ಅಂತೇ ಈ ತೊಯ್ದು ಹೆಜ್ಜೆಗಳು ಇಲ್ಲಿ ಮೂಡಿರುವವಲ್ಲವೆ ?" ಎಂದು ತನಗಾದ ಸಂತೋಷದಲ್ಲಿ ಮಾರ್ಗಾಯಾಸದ ಪರಿವೆಯಿಲ್ಲದೆ ಆ ಹೆಜ್ಜೆಗಳೊಂದಿಗೆ ಧಾವಿಸುತ್ತ ಬರುತ್ತಿರುವಷ್ಟರಲ್ಲಿ ಸ್ಫಟಿಕದೋಪಾದಿಯಲ್ಲಿ ಮಿಣುಕು ಹೊಡೆಯುತ್ತಿರುವ ನೀರಿನದೊಂದು ಕೊಳವು ಅವಳ ಕಣ್ಣಿಗೆ ಬಿತ್ತು. ಅದನ್ನು ಕಂಡಕೂಡಲೇ ನಮ್ಮ ತರುಣಿಯು ಬೆರಗಾಗಿ "ಅಹಹ, ದೇವಾ ! ಇದೆಂತಹ ಜಲಾಶಯವು ! ಇಂತಹ ಸರಸಿಯು ನಗರಸಮೀಪವಾಗಿದ್ದರೆ ವಿಧಾತನಿರ್ಮಿತವಾದ ನರರಂತಹ ಪ್ರಾಣಿಗಳು ಕಲಕು ಮಾಡಿ ಇದರ ವೈಭವವನ್ನು ಕಡಿಮೆಮಾಡುವರೆಂದೇ ಇದನ್ನು ಇಂಥ ಕಟ್ಟಾರಣ್ಯದಲ್ಲಿ ಮಾಡಿಟ್ಟಿರುವಿಯೋ ಅಥವಾ ಭೂಮಾತೆಯು ತನ್ನ ಸೌಂದರ್ಯವನ್ನು ನೋಡಿಕೊಳ್ಳುವ ಕೈಗನ್ನಡಿಯಂತಿದ್ದ ಈ ಸರೋವರವನ್ನು ಬೇಕಾಗಿಯೇ ಇಂತಹ ನಿರ್ಮಾನುಷವಾದ ಅರಣ್ಯದಲ್ಲಿ ಬಚ್ಚಿಟ್ಟಿರುವಳೋ ? ತಿಳಿಯದಾಯಿತು. ನಾನಂತೂ ತಂಗೊಳವನ್ನು ನೋಡಿ ಧನ್ಯಳಾದೆನು. ನನ್ನ ಹಸಿವೆನೀರಡಿಕೆಗಳು ಹರಿಸಿ ಹೋದವು ತಿಂಗಳಿನಿಂದಲೂ ಸ್ನಾನವಿಲ್ಲದ ನಾನು ಈ ಹೊತ್ತು ಧಾರಾಳವಾದ ನೀರಿನಿಂದ ಮೈತೊಳೆದುಕೊಂಡು ಜಲತುಂಬಿದ ಕೊಡದೊಂದಿಗೆ ಒಂದೇ ಪ್ರಹರದಲ್ಲಿ ಕುಟೀರವನ್ನು ಕಾಣುವೆನು." ಎಂದು ಸುತ್ತು ಮುತ್ತು ಯಾರೂ ಇಲ್ಲದ್ದನ್ನು ಕಂಡು ನಮ್ಮಾತರುಣಿಯು ಮೈಮೇಲಿನ ವಸ್ತ್ರಗಳನ್ನು ತೆಗೆದಿಟ್ಟು ಸ್ವಚ್ಛದಿಂದ ಮೆರಿಯುತ್ತಿರುವ ಆ ಸರೋವರದಲ್ಲಿ ಸ್ನಾನಕ್ಕಾಗಿ ಇಳಿದಳು.

ಮೊದಲೇ ಬೆಳ್ಳಿಯ ಮೀನದಂಥವಳು. ಕೈಲಾಸಗಿರಿಯೇ ಕರಗಿ ನೀರಾಗಿ ಸ್ಫಟಿಕದ ಹರಿವಾಣದಲ್ಲಿ ಹಾಕಿಟ್ಟಂತೆ ಇದ್ದ ಸರೋವರದ ನೀರಿನಲ್ಲಿ ತೊಯ್ದ ಅವಳ ಅಂಗಕಾಂತಿಯನ್ನೇನು ವರ್ಣಿಸುವದು ? ತಾಪಸಿಯು ತಪದ ಫಲವನ್ನು ಮಣ್ಣು ಗೂಡಿಸುವದಾಗಿ ದೇವಾಜ್ಞೆಯಾದ ಅಪ್ಸರೆಯು ತನ್ನ ಮೈಕಾಂತಿಯನ್ನು ಮತ್ತಿಷ್ಟು ಹೊಳಪುಗೊಡುವದಕ್ಕೆಂದು ಆಸರಸಿಯಲ್ಲಿ ಬಿದ್ದಿರುವಳೋ ! ಅಥವಾ ಗಂಧರ್ವ ಕನ್ಯೆಯೇ ತನ್ನ ಪ್ರಿಯಕರನೊಂದಿಗೆ ಆ ನೀರಿನಲ್ಲಿ ಚಲ್ಲಾಟವಾಡಿ ಮನದಣಿಯದೆ ಆದೇ ತನ್ನ ಪ್ರಿಯಕರನನ್ನು ತಪ್ಪಿಸಿ ಪುನಃಬಂದು ಆ ಕೊಳದಲ್ಲಿ ಮೀಯುತ್ತಿರು ವಳೋ, ಅಥವಾ ಪ್ರತ್ಯಕ್ಷ ಸ್ವರ್ಗಲಕ್ಷ್ಮಿಯೇ ಭೂಲೋಕಕ್ಕಿಳಿದುಬಂದು ಬಿಳಿದಾ ವರೆಗೆಳಿಂದ ತುಂಬಿದ ಕ್ಷೀರಸಾಗರದಂತೆಸೆವ ಇಂತಹ ಸರೋವರವನ್ನು ಕಂಡು ಬಿಟ್ಟುಹೋಗುವದಾಗದೆ ಆ ಜಲಾಶಯದಲ್ಲಿ ಇಳಿದಿರುವಳೋ, ಎಂದು ನೋಡು ವವರ ಕಣ್ಣಿಗೆ ಕಂಗೊಳಿಸುವ ನಮ್ಮ ತಾರಾಕುಮಾರಿಯು ಸ್ನಾನಮಾಡುತ್ತಿರಲು ಮಗಧ ದೇಶಾಧಿಪತಿಯಾದ ವಿಶ್ವಾವಸುವೆಂಬ ರಾಜಕುಮಾರನು ತನ್ನ ಅಶ್ವ ದೊಂದಿಗೆ ಆ ಸರೋವರವಿದ್ದೆಡೆಗೆ ಪ್ರಾಪ್ತನಾದನು. ಆತನು ಕ್ರಮಿಸಿ ಬಂದಿರುವ ಮಾರ್ಗಾಯಾಸವನ್ನು ಕಳೆದುಕೊಳ್ಳುವದಕ್ಕಾಗಿಯೂ, ತಪತಿಯ ಪ್ರಖರವಾದ ಬಿಸಿಲಿನಿಂದ ಬಾಯಾರಿ ಬೆಂಡಾಗಿದ್ದ ಆತನು ತನಗೆ ಮೊದಲೇ ಗೊತ್ತಿದ್ದ ಈ ತಂ ಗೊಳದಲ್ಲಿ ಸ್ನಾನಮಾಡಿ ಸ್ವಲ್ಪ ನೀರನ್ನು ಕುಡಿದು, ತನ್ನ ಕುದುರೆಗಾದರೂ ಸ್ವಲ್ಪ ವಿಶ್ರಾಂತಿಗೊಟ್ಟು ನೀರು ಕುಡಿಸಿ ನಂತರ ತನ್ನ ರಾಜಧಾನಿಗೆ ಹೋಗಬೇಕೆಂದು ದೇಶಪರ್ಯಟನಮಾಡಿ ದಣಿದಿದ್ದ ಅವನು ಕುದುರೆಯನ್ನು ಸಮೀಪದಲ್ಲಿದ್ದ ಒಂದು ವೃಕ್ಷದ ನೆರಳಿನಲ್ಲಿ ಕಟ್ಟಿ, ಅದಕ್ಕೆ ಸ್ವಲ್ಪ ಎಳೆಗರಿಕೆಯನ್ನು ತರಲೋಸುಗ ಆ ಸರೋವರದ ಕಡೆಗೆ ಬರುತ್ತಿರಲು, ತಾರಾಕುಮಾರಿಯು ಅಪರಿಚಿತನಾದ ಈ ತರು ಣನನ್ನು ನೋಡಿ ಭಯಚಕಿತಳಾಗಿ ಒಮ್ಮೆಲೇ ಹಾರಿಬಿದ್ದು ಮೇಲಕ್ಕೆದ್ದುಬಂದು, ಗಡಿಬಿಡಿಯಿಂದ ತನ್ನ ವಲ್ಕಲಗಳನ್ನು ಧರಿಸಲಾರಂಭಿಸಿದಳು. ಇದೆಲ್ಲವನ್ನೂ ನೋಡಿದ ರಾಜಪುತ್ರನು ಅವಳ ರೂಪಾತಿಶಯಕ್ಕೆ ಬೆರಗಾಗಿ ಅವನು ತನ್ನಲ್ಲಿ ತಾನೇ— “ ಅಹಹ ! ಈ ತರುಣಿಯು ಯಾರಿರಬಹುದು ? ಇಂತಹ ನಿರ್ಮಾ ನುಷವಾದ ಅರಣ್ಯದಲ್ಲಿ ಓರ್ವಳೇ ನಿರ್ಭಯದಿಂದ ಮೈತೊಳೆಯಲು ಬಂದ ಇವ ಳೇನು ಗಂಧರ್ವಕನ್ಯೆಯೋ, ನಾಗಕನ್ಯೆಯೋ, ರಂಭೆಯೋ, ರಮೆಯೋ ಯಾರಿರ ಬಹುದು ? ಯಾಕೆಂದರೆ ಕಾಯ್ದ ಹಂಚಿನಂತೆ ನೆಲಕಾಯ್ದ ಇಂತಹ ಬಿಸಿಲಿನ ತಾಪವನ್ನು ಸಹಿಸುತ್ತ, ಕುದುರೆಗಳ ಖುರಪುಟಕ್ಕೆ ಸಹ ಬರೆ ಕೊಡುತ್ತಿರುವ ಇಂತಹ ಘೋರಮಾರ್ಗಕ್ರಮಣಮಾಡಿ, ನರರಹಿತವಾಗಿಯೂ ಭೀಕರವಾಗಿಯೂ ಇರುವ ಈ ಸ್ಥಳದಲ್ಲಿ ಏಕಾಂಗಿಯಾಗಿ ಬಂದು ನಿರ್ಭಯದಿಂದ ಈ ಕೊಳದಲ್ಲಿ ಸ್ನಾನಮಾಡಿ ಹೋಗುವಳೆಂದರೆ ಮನುಷ್ಯಕನ್ನಿಕೆಯು ಧೈರ್ಯವೇನೂ ತಳ್ಳಿ

ಇನ್ನು ಅಲ್ಲಿ ಕಾಣುವದೇನು ? ಮಣ್ಣಿನಕೊಡವು. ( ಸ್ವಲ್ಪ ವಿಚಾರಿಸಿ ) ಛೇ, ಇವಳು ದೇವಗಂಧರ್ವ ಮುಂತಾದವರ ಕನ್ಯೆಯಿರದೆ, ಕೇವಲ ಮನುಷ್ಯರೂಪಿಯೇ ಇದ್ದು, ಯಾವನೊಬ್ಬ ರಾಷ್ಟ್ರದೊಡೆಯನ ಹೊಟ್ಟೆಯಲ್ಲಿ ಜನ್ಮ ತಳೆದ ಇವಳು ಕಾಲವಶದಿಂದ ಇಂತಹ ಪರಿಸ್ಥಿತಿಯನ್ನು ಹೊಂದಿದಂತೆ ತೋರುತ್ತದೆ. ಅಹ! ಸುಂದರಿ, ಏನು ನಿನ್ನಯ ರೂಪಸೌಂದರ್ಯವು ? ಜಟಾಧಾರಿಯಾದ ನೀನು ಕಾಷಾಯ ವಸ್ತ್ರಗಳನ್ನು ಧರಿಸಿದ್ದರೂ ನಿನ್ನ ಚಂದ್ರನಂತಹ ರೂಪವು ಮರೆಮಾಜು ವದೇ ಹೇಗೆ ? ವೈಡೂರ್ಯವನ್ನು ಎಂತಹ ಚಿಂದಿಯಿಂದ ಸುತ್ತಿದರೇನು ! ಆ ಚಿಂದಿಯ ಸೂಕ್ಷ್ಮ ಛಿದ್ರಗಳಿಂದಲೇ ಆ ರತ್ನಕಾಂತಿಯು ಹೊರಬೀಳದೇ ಹೇಗೆ ನಿಲ್ಲುವದು ? ನವಯೌವನದಿಂದ ಕೂಡಿದ ನೀನು ಅದಾವ ನಿರ್ಭಾಗ್ಯನ ಉದರ ದಲ್ಲಿ ಜನಿಸಿ ನಿನ್ನ ಅವಸ್ಥೆಯು ಹೀಗಾಗಿರುವದು ?" ಮುಂತಾದ ಇನ್ನೂ ಅನೇಕ ವಿಧದಿಂದ ಅವಳ ರೂಪಲಾವಣ್ಯವನ್ನು ವರ್ಣಿಸುತ್ತಿರುವಷ್ಟರಲ್ಲಿ, ತನ್ನ ಎದುರಿಗೆ ನಿಂತಿದ್ದ ರಾಜಕುವರನನ್ನು ನೋಡಿದ್ದರೂ ನೋಡದವಳಂತೆ ತಾರಾಕುಮಾರಿಯು ತನ್ನ ಮಣ್ಣಿನಕೊಡವನ್ನು ತುಂಬುತ್ತ ಓರೆನೋಟದಿಂದ ಯುವಕನನ್ನು ನೋಡಿದ ಅವಳು ಮನದಲ್ಲಿ ಏನೇನೋ ಅನ್ನುತ್ತ ಕೊಡವನ್ನೆತ್ತಿ ತಲೆಯಮೇಲಿಡುತ್ತಿರಲು,

ರಾಜಪುತ್ರ— ( ಧಾವಿಸುತ್ತ ಅವಳಿದ್ದೆಡೆಗೆ ಬಂದು ) " ಸುಂದರಿ, ಕೊಡವು ಬಹಳೇ ಭಾರವಿದ್ದಂತೆ ತೋರುತ್ತದೆ. ಬೇಕಾದರೆ ಹೊರಿಸುವೆನು ನಿಲ್ಲು." ಎಂದನು.

ತಾರಾಮತಿ— ( ಅಪರಚಿತನಾದ ರಾಜಪುತ್ರನು ಅಂದದ್ದನ್ನು ಕೇಳಿ ) " ಅಪರಿಚಿತರೆ, ತಾವು ಯಾರು ? ತಮ್ಮ ದೇಶವಾವದು ? ಹಾಗು ತಮ್ಮ ಹೆಸ ರೇನು ? " ಎಂದು ಕೇಳಿದಾಕ್ಷಣವೇ ಅತ್ಯಾನಂದದಿಂದ ಮೊದಲೇ ನಾಲ್ಕಾರು ಮಾತುಗಳನ್ನಾದರೂ ಆಡಬೇಕೆಂದಿದ್ದ ನಮ್ಮ ತರುಣನು ಮಲ್ಲಿಗೆ ಹೂವುಗಳು ಸುರಿದಂತೆ ಹೊರಬೀಳುವ ಅವಳ ಭಾಷಣವನ್ನೂ, ಹಾಗೂ ಮಾತಾಡುವಾಗ್ಗೆ ದಾಳಿಂಬಬೀಜದಂತೆ ಕ್ವಚಿತ್ತಾಗಿ ಕಂಗೊಳಿಸುವ ಅವಳ ದಂತಪಂಕ್ತಿಯನ್ನೂ, ಆ ಸ್ವಚ್ಛಂದದಿಂದ ಸರೋವರದಲ್ಲಿ ನಲಿದಾಡುತ್ತಿರುವ ಕುಮುದಗಳಂತಿದ್ದ ಅವಳ ಕಣ್ಣುಗಳನ್ನೂ, ಹಾಗೂ ಬಿಳಿತಾವರೆಗಳಂತಹ ಅವಳ ಮುಖಕಾಂತಿಯನ್ನೂ ನೋಡಿ ಬೆರಗಾದವನಂತೆ ಮತಿಮೂಢನಾಗಿ,

ರಾಜಪುತ್ರ— " ಮಂಗಲಾಂಗಿ, ನಾನು ಇದೇ ಮಗಧ ರಾಷ್ಟ್ರಕ್ಕೆ ಒಡೆ ಯನು. ನನ್ನ ಹೆಸರು ವಿಪ್ರಾವಸುವು. ಪಾಟಲೀಪುತ್ರವು ನನ್ನ ರಾಜಧಾನಿಯು. ನೀನು ನೈ ತೊಳೆಯುತ್ತಿದ್ದ ಸರೋವರವಾದರೂ ನನ್ನ ಹದ್ದಿನಲ್ಲಿಯೇ ಅದೆ. ದೇಶ ಪರ್ಯಟನಕ್ಕೆಂದು ಹೋದ ನಾನು ನನ್ನ ರಾಜಧಾನಿಗೆ ಹೋಗುತ್ತಿರಲು, ಬಿಸಿಲಿನ ತಾಪದಿಂದ ಬಳಲಿದವನಾಗಿ ಸ್ವಲ್ಪ ವಿಶ್ರಾಂತಿಯನ್ನು ಪಡೆಯುವದಕ್ಕೆಂದು ಈ ಸರಸಿಯಿದ್ದೆಡೆಗೆ ಬಂದೆನು. ಇಂದು ನನ್ನ ಎಂತಹ ಸುದೈವದಿಂದಲೋ ನಿನ್ನ ದರ್ಶ

ನವಾಯಿತು. ಓಳ್ಳೇದು ಸುಂದರಿ, ನೀನು ಯಾರು ? ನಿನ್ನ ನಾಮಾಕ್ಷರಗಳಾವು? ನಿನ್ನ ದೇಶವಾವದು ? ನಿನ್ನ ಲಗ್ನವಾಗಿರುವದೇ ಹೇಗೆ ? ಹಾಗು ಈ ತರದ ನಿನ್ನ ದುರ್ದೆಶೆಗೆ ಕಾರಣವೇನು ? ನೀನಂತೂ ರಾಜಕುಲೋತ್ಪನ್ನಳಿರುವೆಯೆಂದು ನನ್ನ ಊಹೆಯು. ಇದು ನಿಜವೇ ? " ಎಂದು ಆಶಾಮುದ್ರೆಯಿಂದ ಕೇಳಿದನು.

ತಾರಾಮತಿ— ( ' ನಿನ್ನ ಲಗ್ನವಾಗಿದೆಯೋ ? ' ಎಂಬ ಅಕ್ಷರಗಳು ಕಿವಿಗೆ ಬಿದ್ದಾಕ್ಷಣವೇ ಉಸ್ಸೆಂದು ಮೇಲೆ ಹೊತ್ತಿದ್ದ ಕೊಡವನ್ನು ಕೆಳಗಿಳಿಸುತ್ತ ) "(ಸ್ವ) ದುರ್ದೈವವೇ, ಆದಾವ ವಿಷಯಕ್ಕಾಗಿ ನಾನು ಹಗಲಿರುಳು ಕುದಿಯುತ್ತಿರುವೆನೋ ಅದೇ ವಿಷಯದ ಪ್ರಸ್ತಾಪವಾಗಿ ನನ್ನ ಮಾನಖಂಡನವನ್ನು ನಡಿಸಿರುವೆಯಲ್ಲವೇ?" ಎಂದೆನ್ನುತ್ತ ಕಣ್ಣಲ್ಲಿ ನೀರು ತುಂಬಿದವಳಾಗಿ ಅವಳು ಅಳಲಾರಂಭಿಸಿದಳು.

ರಾಜಪುತ್ರ— (ಅವಳ ದುಃಖವನ್ನುನೋಡಿ ಕನಿಕರದಿಂದ) " ಕೋಮಲೆ ನಾನು ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನೀಯದೆ ನಿನ್ನಲ್ಲಿ ನೀನೇ ಏನೋ ಅಂದು ಕೊಂಡು ಅಳುವದಕ್ಕೆ ಪ್ರಾರಂಭಿಸಿದೆಯಲ್ಲ ! ನನ್ನ ಪ್ರಶ್ನೆಗಳಿಂದ ನಿನಗೆ ಇಷ್ಟೊಂದು ದುಃಖವಾಗಿದ್ದರೆ ನನ್ನ ಪ್ರಶ್ನಾವಲಿಯನ್ನೇ ಸಾಕುಮಾಡುವೆನು. " ಎಂದು ಸುಮ್ಮ ನಾದನು.

ತಾರಾಮತಿ— ( ರಾಜಪುತ್ರನು ಖಿನ್ನನಾದದ್ದನ್ನು ನೋಡಿ ) " ಮಹಾ ರಾಜ ಹಾಗಲ್ಲ. ನಾನು ನನ್ನ ದುಷ್ಟದೈವವನ್ನು ನೆನಿಸಿ ದುಃಖಬಡುತ್ತಿರುವೆನು. ಅಗ್ರಾಹ್ಯವಸ್ತುವಿನಲ್ಲಿ ನನ್ನ ಮನೋಬಯಕೆಯನ್ನು ಪ್ರಕಟಿಸಿದಲ್ಲಿ ನನಗಾಗತಕ್ಕ ಲಾಭವೇನು ? ತಾವಂದಂತೆ ನಿಜವಾಗಿಯೂ ನಾನು ರಾಜಕುಲೋತ್ಪನ್ನಳಿದ್ದು ನನ್ನ ಪುರಾಕೃತ ಪಾಪದ ಫಲವನ್ನು ಈ ಜನ್ಮದಲ್ಲಿ ಭೋಗಿಸುತ್ತಿರುವೆನು. ಇದ ಕ್ಕಿಂತಲೂ ಹೆಚ್ಚಿಗೆ ವಿದಿತಪಡಿಸಲು ಸದ್ಯಕ್ಕೆ ನನಗೆ ಅಶಕ್ಯವಾಗಿರುವದು. ನನ್ನ ಹೆಸರು ತಾರಾಮತಿಯು. " ಹೀಗೆಂದು ಮುಂದೆ ಮಾತಾಡುವದಾಗದೆ, ಹಾಗೇ ಕಣ್ಣನಲ್ಲಿ ನೀರು ಸುರಿಸುತ್ತ ನೆಲವನ್ನು ನೋಡಹತ್ತಿದಳು.

ರಾಜಪುತ್ರ— ( ಅವಳ ದೀನಮುದ್ರೆಯನ್ನು ನೋಡಿ ) " ನವಮೋಹ ನಾಂಗಿಯೇ, ನನಗೆ ಬೇರೆ ಆದಾವ ವಿಷಯವೂ ಬೇಕಿಲ್ಲಾ. ನಿನ್ನ ಲಗ್ನವಾಗಿರು ವದೋ ಇಲ್ಲವೋ ? ಇದೊಂದೇ ಪ್ರಶ್ನಕ್ಕೆ ಉತ್ತರವನ್ನಿತ್ತು ನನ್ನ ಮನವನ್ನು ಶಾಂತ ಗೊಳಿಸು. " ಎಂದು ಕೇಳುತ್ತಿರುವಲ್ಲಿ ತರುಣಿಗೆ ಮತ್ತಿಷ್ಟು ದುಃಖವು ಒತ್ತಿಬಂದು ಬಿಕ್ಕಿ ಬಿಕ್ಕಿ ಅಳುತ್ತ, " ದುರ್ಭಾಗ್ಯಳೆಂದು ಮೊದಲೇ ಹೇಳುತ್ತಿದ್ದ ನನಗೆಲ್ಲಿಯ ಲಗ್ನವು ? " ಎಂದಳು. ರಾಜಪುತ್ರನು ಅನಿವಾರವಾದ ಅವಳ ದುಃಖವನ್ನು ನೋಡಿ ಸಹಿಸಲಾರದೆ " ಸುಂದರೀ, ಸಾಕು. ನನಗೆ ಮತ್ತೇನೂ ಬೇಡ. ನಾನು ಈ ಮಗಧ ರಾಷ್ಟ್ರಕ್ಕೆ ಒಡೆಯನೆಂಬವನ್ನು ಈ ಮೊದಲೇ ನಿನಗೆ ವಿದಿಸಿದ್ದು ನನ್ನ ಲಗ್ನವನ್ನಾದರೂ ಇಂದಿನ ವರೆಗೆ ನಾನು ಮಾಡಿಕೊಂಡಿರುವದಿಲ್ಲ. ಜಗನ್ಮೋಹಕ

ತಿರುವ ನಿನ್ನ ಸಮಾಗಮ ಸುಖವೇ ನನಗೆ ಲಭಿಸಲೆಂದು ವಿಧಾತನು ನನ್ನ ಹಣೆಯಲ್ಲಿ ಲಿಖಿಸಿದ್ದನ್ನು ಕಂಡು ಈಗ ನನಗಾದ ಆನಂದಕ್ಕೆ ಪಾರವಿಲ್ಲದಾಗಿದೆ. ನನ್ನೀ ಮನೋರಥವನ್ನು ಪೂರ್ಣಮಾಡುವದು ನಿನ್ನ ಮನದಲ್ಲಿ ಉದ್ಭವಿಸಿದರೆ, ಹೀಗೆಯೇ ನನ್ನೊಡನೆ ನಡೆ. ವಿಧಿಪೂರ್ವಕವಾಗಿ ನಿನ್ನ ಕೈಹಿಡಿದು ನಿನ್ನನ್ನು ನನ್ನ ಪಟ್ಟಮಹಿಷಿಯಾಗಿ ಮಾಡುವೆನು. ” ಹೀಗೆಂದು ಆಶಾಪೂರಿತ ಮುದ್ರೆಯಿಂದ ಅವಳ ಕಡೆಗೆ ನೋಡುತ್ತ ನಿಂತುಕೊಂಡನು.

ತಾರಾಮತಿ— ( ಈ ಭಾಷಣವನ್ನು ಕೇಳಿ ಮನದಲ್ಲಿ ಆನಂದ ಭರಿತಳಾಗಿದ್ದರೂ ತೋರ್ಪಡಿಸದೆ ಸ್ವಲ್ಪ ವಿಚಾರಗ್ರಸ್ತಳಂತೆ ನಿಂತು ನಸುನಗುತ್ತ ) “ ಮಹಾರಾಜ ತಾವನ್ನುವದೆಲ್ಲವೂ ನನಗೆ ಶ್ರುತವು. ಆದರೆ ಪ್ರಾಯದ ಮಬ್ಬಿನಲ್ಲಿ ಏನೇನೋ ಹುಚ್ಚರಂತೆ ನಟಿಸಿ ಮುಂದಿನ ಯಾವ ವಿಚಾರವನ್ನೂ ಮಾಡದಲೇ ನನ್ನಂಥ ಅನಾಥ ಅಬಲೆಯರನ್ನು ‘ ನಿನಗೆ ಹಾಗೆಮಾಡುವೆನು. ಹೀಗೆಮಾಡುವೆನು. ’ ಎಂದು ಬೇಕಾದಷ್ಟು ವರಪ್ರದಾನಮಾಡಿ ಕರೆದೊಯ್ದು ಮುಂದೆ ನಮ್ಮನ್ನು ಅದಾವಗತಿಗೆ ವೈಯುವಿರೆಂಬದನ್ನು ಹೇಳಲಾಗುವದಿಲ್ಲ. ಯಾಕಂದರೆ ಪ್ರಾಯದ ಮದದಲ್ಲಿ ಹೊರಟ ಭಾಷಣವು ನೀರಿನಮೇಲಿನ ಗುಳ್ಳೆಯಂತೆ ಕ್ಷಣಿಕವಾದದ್ದೆಂದು ಹೇಳುವದು. ” ಹೀಗೆಂದು ಇನ್ನೂ ಏನೇನೋ ಅನ್ನಬೇಕೆನ್ನುವಷ್ಟರಲ್ಲಿ—

ರಾಜಪುತ್ರ— ( ನಡುವೇ ಬಾಯಿಹಾಕಿ ) “ ಸುಂದರಿ ಏನಿದು ? ಸಾಮಾನ್ಯಮನುಷ್ಯರಲ್ಲಿಯೇ ನನ್ನನ್ನೂ ಗಣಿಸಿದೆಯೊ ? ಕುರುಕುಲಶ್ರೇಷ್ಠನಾದ ಶಂತನುಪುತ್ರಭೀಷ್ಮನ ಪ್ರತಿಜ್ಞೆಯನ್ನು ನೀನುಕೇಳಬಲ್ಲಿಯಷ್ಟೆ ? ಅದೇ ವಂಶಕ್ಕೆ ಅಲ್ಪಸ್ವಲ್ಪ ಹತ್ತಿದ ನಾನು ಕೊಟ್ಟ ಭಾಷೆಗೆ ಎಂದಾದರೂ ತಪ್ಪುವೆನೋ ಹೇಗೆ ? ವಿಚಾರಶೂನ್ಯಳಂತೆ ಹೀಗೆಮಾಡಬೇಡ. ” ಎಂದು ದೈನ್ಯದಿಂದ ಅವಳ ಸಮೀಪಕ್ಕೆ ಹೋದನು.

ತಾರಾಮತಿ—. ( ನಿಂತಲ್ಲಿಯೇ ಸ್ವಲ್ಪುಸಾವರಿಸಿಕೊಂಡು ) “ ಮಹಾರಾಜ ಅಹುದು. ಅದೆಲ್ಲವೂ ನಿಜವು. ಸಿಟ್ಟಾಗಬೇಡಿರಿ. ತಮ್ಮಂತಹ ಅನೇಕ ರಾಜರು ನನ್ನಂಥ ಅನಾಥರಾದ ಎಷ್ಟೋ ಜನ ಅಬಲೆಯರನ್ನು ಬೇಕು ಬೇಕಾದಂತೆ ಭಾಷೆಕೊಟ್ಟು ಕರೆದೊಯ್ದು ತಮ್ಮ ಪಟ್ಟಮಹಿಷಿಯನ್ನೇ ಮಾಡಿಟ್ಟು, ಅವಳಮೇಲೆ ಎಷ್ಟು ಜನ ಹೆಂಡಿರನ್ನು ಮಾಡಿಕೊಂಡಿರುವದಿಲ್ಲ ? ನಂತರ ಅಂತಹ ಸವತಿಮಾತ್ಸರ್ಯದಿಂದ ‘ ನನ್ನ ಮನೋಹರನು ನನ್ನೆಡೆಗೆ ಎಂದು ಬರುವನು ? ಬರುವನೋ ಇಲ್ಲವೋ ? ’ ಎಂದು ಕಷ್ಟಬಡುತ್ತ ಬಳಲುವದಕ್ಕಿಂತ ಪ್ರಸ್ತುತಕ್ಕೆ ನನಗಿಷ್ಟ ಈ ಅರಣ್ಯವಾಸವೂ ಹಾಗೂ ಅನಾಥ ಸ್ಥಿತಿಯೂ ಪರಮಸುಖಕರವಲ್ಲವೇ? ” ಎಂದಳು.

ರಾಜಪುತ್ರ— ( ಸುಂದರಿಯ ವಾಕ್ಚಾತುರ್ಯಕ್ಕೆ ಮೆಚ್ಚಿ ಆವೇಶದಿಂದ ) “ ಮನೋಹರೆ, ಇದೇ ನಿನ್ನ ಚಿಂತೆಯಲ್ಲವೆ ? ಹಾಗಾದರೆ ಸ್ವಲ್ಪ ತಡೆ. ” ಎಂದು

ಚಟ್ಟನೆ ಎದ್ದು ಸರೋವರದಲ್ಲಿಹೋಗಿ ತನ್ನ ಎರಡೂ ಕೈಗಳಿಂದಲೂ ಬೊಗಸಿಯಲ್ಲಿ ನೀರುತುಂಬಿ ತಂದು, "ಸುಂದರಿ, ಇದುನೋಡು ಸ್ವರ್ಗಲೋಕವಾಸಿಯಾದ ಬ್ರಹ್ಮಾದಿ ದೇವತೆಗಳ ಸಮಕ್ಷಮ ನಾನು ಕೈಕೊಳ್ಳುವ ಘೋರ ಪ್ರತಿಜ್ಞೆಯನ್ನು ಕೇಳು." ಎಂದು ನೆಲದಮೇಲೆ ನೀರುಬಿಡುತ್ತ "ನಾನು ಸಂಪೂರ್ಣ ಮನಸ್ಸಿನಿಂದ ಕೈಹಿಡಿಯಲಿಚ್ಛಿಸುವ ನಿನ್ನ ಹೊರ್ತು ಜಗತ್ತಿನಲ್ಲಿಯ ಯಾವತ್ತೂ ಸ್ತ್ರೀ ರತ್ನಗಳು ನನ್ನ ಮಾತಾಭಗಿನಿಯರು." ಎಂದವನೇ ಅಂಜಲಿಯಲ್ಲಿಪ್ಪ ಉದಕವನ್ನು ಭೂಮಿ ಯಮೇಲೆ ಬಿಟ್ಟು ಆವೇಶದ ಭರದಲ್ಲಿ ಏನೂ ತೋಚದಂತಾಗಿ ಪ್ರತ್ಯಕ್ಷ ಶಿಲಾಮೂರ್ತಿಯಂತೆ ನಿಂತುಕೊಂಡನು.

ಅಹಹ! ವಿಪ್ರಾವಸು ಧನ್ಯನು! ನೀನೇ ಧನ್ಯನು!! ನಿನ್ನಂಥ ಅನೇಕ ನರರತ್ನಗಳಿಗೆ ಜನ್ಮಕೊಟ್ಟ ಈ ನಮ್ಮ ಭರತಮಾತೆಯೇ ಧನ್ಯಳು!!! ರಾಜ-ನಂದನನ ಈ ಭೀಷ್ಮ ಪ್ರತಿಜ್ಞೆಯನ್ನು ಕೇಳಿ ಆಕಾಶದಲ್ಲಿ ದುಂದುಭಿಗಳಾದವು. ದೇವತೆಗಳು ಆತನಮೇಲೆ ಪೂಮಳೆಗರೆದರು. ಹಾಗೂ ಈ ಘೋರಪ್ರತಿಜ್ಞೆಯು ತಾರಾಮತಿಯ ಕಿವಿಗೆ ಬಿದ್ದಾಕ್ಷಣವೇ ಅವಳಿಗೆ ಹರ್ಷವಾಯುವಾದಂತಾಗಿ, ಅವಳು ಆನಂದದ ಭರದಲ್ಲಿ "ದೇವರೆ, ಅಂತೂ ನನ್ನ ದುರ್ದೈವವು ಚಲಿಸಿ ಸುದೈವವಾಗಿ ನನ್ನ ಮನೋಬಯಕೆಯು ಕೊನೆಗಾಣಿತೆ?" ಎಂದೆನ್ನುತ್ತ ಸ್ಮೃತಿದಪ್ಪಿದವಳಂತೆ ಒಮ್ಮೆಲೇ ಭೂಮಿಗೊರಗಿದಳು. ಇದನ್ನು ನೋಡುತ್ತಿದ್ದ ವಿಪ್ರಾವಸುವು ಬೆಟ್ಟಿ ಬಿದ್ದು ಆಶ್ಚರ್ಯದಿಂದ "ಆಂ! ಇದೇನು? ನನ್ನ ಪ್ರತಿಜ್ಞೆಯನ್ನು ಕೇಳಿ ಇವಳೇಕೆ ಹೀಗೆ ಸ್ಮೃತಿದಪ್ಪಿ ಬೀಳಬೇಕು." ಎಂದು ಕೂಡಲೇ ತಾನೂ ನೆಲಕ್ಕೆ ಕುಳಿತು ಅವಳನ್ನು ತನ್ನ ತೊಡೆಯಮೇಲೆ ತಕ್ಕೊಂಡು ಪರೀಕ್ಷಿಸಿ "ಅಹ! ಇದು ಮೂರ್ಛೆಯು ಅಯ್ಯೋ! ಬುಭುಕ್ಷಿತ ಪ್ರಾಣಿಯು ಮುಂದೆ ಸುಗ್ರಾಸಭೋಜನವನ್ನಿಟ್ಟಹಾಗಾಗಿ, ಮೊದಲೇ ಅರಣ್ಯ ತ್ರಾಸದಿಂದ ಕಂಗೆಟ್ಟ ಇವಳು, ಮುಂದಾಗತಕ್ಕ ಸುಖೋಪಭೋಗವನ್ನು ಪ್ರತ್ಯಕ್ಷ ಅನುಭವಿಸಿದಂತಾಗಿ ಇದೀಗ ನಿಶ್ಚೇಷ್ಟಿತಳಾಗಿರುವಳಲ್ಲವೆ? (ಅತ್ತಿತ್ತ ನೋಡಿ) ಚಿಂತೆ ಇಲ್ಲಾ." ಎಂದು ಅಲ್ಲಿಯೇ ಕೊಡದಲ್ಲಿದ್ದ ನೀರಿನಿಂದ ಅವಳ ನೇತ್ರಯನ್ನು ಬಡಿದು, ಕೈಕಾಲು ತಿಕ್ಕಿ ತನ್ನ ಟೊಂಕಕ್ಕೆ ಸುತ್ತಿದ್ದ ಶಲ್ಲೆಯೊಂದನ್ನು ಹಾಸಿ ಸ್ವಲ್ಪ ಹೊತ್ತಿನವರೆಗೆ ಅವಳನ್ನು ವೃಕ್ಷದ ನೆರಳಿನಲ್ಲಿ ಮಲಗಿಸಿದನು. ಹಾಗು ತಾನು ಮನದಲ್ಲಿಯೇ, 'ಮನಸಾಚಿಂತಿತಂಕಾರ್ಯಂ ದೈವಂ ಅನ್ಯತ್ರಚಿಂತಯೇತ್' ಎಂದು ವ್ಯಾಕುಲನಾಗಿ ತನ್ನ ಕುದುರೆಯಿದ್ದೆಡೆಗೆ ಧಾವಿಸಿ ಬಂದು, ಅದನ್ನು ಮುಂದಿನ ಪ್ರಯಾಣಕ್ಕಾಗಿ ಸಿದ್ಧಗೊಳಿಸಿ ಕಡಿವಾಣವನ್ನು ಕೈಯಲ್ಲಿ ಹಿಡಿದುಕೊಂಡು ತಿರುಗಿ ಬರುವಷ್ಟರಲ್ಲಿ ತಾರಾಮತಿಯು ಮೈಮೇಲೆ ಅಲ್ಪ ಸ್ವಲ್ಪ ಎಚ್ಚರವು ಬರಲಾರಂಭಿಸಿತ್ತು. ಅದನ್ನುಕಂಡು ರಾಜೋತ್ತಮನು ಆನಂದಭರಿತನಾಗಿ ಅವಳನ್ನು ಸಾವಕಾಶವಾಗಿ ಕುದುರೆಯಮೇಲೆ ಹಾಕಿಕೊಂಡು ಅವಳೊಂದಿಗೆತಾನೂ ಅಶ್ವವನ್ನು ಓಡಿಸುತ್ತ ತನ್ನ ನಗರಾಭಿಮುಖವಾಗಿ ನಡೆದನು. [ಮುಂದೆಸಾಗುವದು]

ಸಾಹಿತ್ಯವು ನಮ್ಮ ಹೃದಯವನ್ನು ಮಿಡಿದು ಆನಂದ ಗೊಳಿಸಲುಬೇಕು. ನಮ್ಮ ಅರಿವನ್ನು ಹೆಚ್ಚಿಸಿ ತಿಳುವಳಿಕೆಯ ಬಲದಿಂದ ಮನಸ್ಸಿನ ದಾರ್ಢ್ಯವನ್ನು ಹೆಚ್ಚಿಸಲುಬೇಕು. ಸಾಹಿತ್ಯವು ನಿಜವಾಗಿಯೂ ದೇಶೋನ್ನತಿ ಸಾಧಕವಾದ ಶಕ್ತಿಯಾಗಿ ಪರಿಣಮಿಸಬೇಕಾದರೆ ಕವಿಗಳ ಸವಿಗನಸುಗಳಂತಿರುವ ಕಲ್ಪನೆಯ ಕೃತಿಗಳಿಗೂ ಲೇಖಕರ ಕತೆ, ಕಾದಂಬರಿಗಳಿಗೂ ಆಶ್ರಯಕೊಡುವಂತೆಯೇ ವಿಜ್ಞಾನ ಸಂಶೋಧಕರ ಸಾಧನೆಗಳಿಗೂ ಸಮಾಜ ಪರಿಷ್ಕಾರಣಗಾರರ ಕಾರ್ಯಸಿದ್ಧಿಯ ಸಂಬಂಧವಾದ ಕೃತಿಗಳಿಗೂ ಸಾಹಿತ್ಯವು ಆಶ್ರಯ ಕೊಟ್ಟು ಎಲ್ಲಬಗೆಯ ಗ್ರಂಥಗಳನ್ನು ಪರಿಪೋಷಿಸಬೇಕು.

ದಿವಾಣಬಹಾದ್ದೂರ ಸರಮಿರಝಾ ಇಸ್ಮಾಯಿಲ್
ಮೈಸೂರು.

# ನಮ್ಮ ಮಾತು.

ವರ್ತಮಾನಕಾಲದ ವಾಙ್ಮಯದ ಮುಖ್ಯದೋಷವೆಂದರೆ ನಮ್ಮ ವಾಙ್ಮಯವು ಮುಂದೆ ಇಂಥಾದ್ದೊಂದು ವಿಶಿಷ್ಟವಾದ ಮಾರ್ಗವನ್ನು ಹಿಡಿದು ಸಾಗತಕ್ಕದ್ದಿರುವದೆಂಬ ವಿಷಯದಲ್ಲಿ ಐಕ್ಯಮತವಿಲ್ಲದಿರುವದು. ಇದರಮೂಲಕ ಮನಬಂದವರು ಮನಬಂದಂತೆ ಬರೆಯುತ್ತಾರೆ. ಕನ್ನಡ ನಾಡಿನಲ್ಲಿ ಜಾಗ್ರತೆಯುಂಟಾಗದಿರುವದೇ ಇದಕ್ಕೆ ಕಾರಣ. ಗ್ರಂಥಕರ್ತರೂ ಕೃಂಥಕಾರರಾಗತಕ್ಕವರೂ ಒಂದೆಡೆಗೆ ಸೇರಿ ಗದ್ಯ-ಪದ್ಯ ವಾಙ್ಮಯದ ಧ್ಯೇಯವನ್ನು ನಿಶ್ಚಯಿಸುವದು ಅವಶ್ಯಕವಿದೆ.

ಆಲೂರ ವೆಂಕಟರಾಯರು.

# ಸಂಪಾದಕರ ಸವಿನುಡಿ.

ಚಂದ್ರಿಕೆಯ ೩ನೇ ಸಂಚಿಕೆಯಲ್ಲಿ ಪ್ರಕಟವಾದ ಸಿದ್ಧರಾಮನ ಚರಿತ್ರೆಯಲ್ಲಿ ಅಡಕವಾದ “ ಶ್ರೀ ರೇವಣಸಿದ್ಧರು ( ಪಂಚಾಚಾರ್ಯರಲ್ಲಿ ಒಬ್ಬರು ) ಶ್ರೀ ಬಸವೇಶ್ವರರ ಸಮಕಾಲೀನರೋ ಅಥವಾ ಅವರಿಗಿಂತ ಪೂರ್ವದವರೋ ಎಂಬೀ ಸಂಗತಿಯನ್ನು ಧೃಡಪಡಿಸುವದು ಅತಿ ದುಸ್ತರವಾಗಿದೆ.” ಎಂಬದೊಂದೇ ಒಂದು ವಿಧಾನವು ಕೆಲಜನರಿಗೆ ವಾದಕ್ಕೆ ಕಾರಣವಾಗಿ ಪರಿಣಮಿಸಿದೆ. ವಾದಕ್ಕೆ ಮೊದಲುಮಾಡಿದವರು ಹವ್ಮಿಗೆಯ ಗುರುಭಕ್ತ ಕೇಸರಿಗಳು. ವಾಸ್ತವವಾಗಿ ವಿಚಾರ ಮಾಡಿನೋಡಿದರೆ, ಚಂದ್ರಿಕೆಯಲ್ಲಿನ ಆ ಲೇಖಕ್ಕೆ ತಕ್ಕೊಂಡ ಆಧಾರಗಳನ್ನು ಲೇಖಕರು ಅದೇ ಲೇಖನದ ಕೊನೆಯ ಭಾಗದಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಿದ್ದಾರೆ. ನಿಖಿಲ ಕರ್ನಾಟಕದ ಪ್ರಸಿದ್ಧ ಸಾಹಿತಿಗಳಾದ ಶ್ರೀಮಾನ್ ಆರ್. ನರಸಿಂಹಾಚಾರ್ಯರಿದ ರಚಿತವಾದ ಕವಿಚರಿತೆ ತೆಗೆದು ನೋಡಿದ್ದರೆ ತೀರಿಯೇ ಹೋಗಿತ್ತು. ಹಾಗೆ ಮಾಡದೆ ವಿಧಾನವು ಶ್ರೀ. ರಾಮರಾಯರ ಸ್ವಕಪೋಲ ಕಲ್ಪಿತವಾದುದೆಂಬ ಕೇಸರಿಗಳ ತಪ್ಪು ಗೃಹಿಕೆಯೇ ವಾದಕ್ಕೆ ಕಾರಣವಾಗಿದೆ ಯೆಂ-ಬದು ಸೂರ್ಯಪ್ರಕಾಶದಷ್ಟು ಸತ್ಯವಾಗಿದೆ. ಈ ಮಾತನ್ನು ಬದಿಗಿಟ್ಟರೂ ‘ ಅತಿ ದುಸ್ತರವಾಗಿದೆ ’ ಎಂದು ಹೇಳುವವರಿಂದ ಯಾವದೊಂದು ಸಂಗತಿಯನ್ನು ಅಲ್ಲಗಳೆದಂತೆ ಆಗುವದೇ ಹೇಗೆ ? ಉತ್ತರವು ಇಲ್ಲವೆಂತಲೇ ಹೊರಡುವದು. ಈ ವಿಚಾರವು ಕೇಸರಿಗಳಿಗೇಕೆ ತತ್ ಕ್ಷಣವೇ ಹೊಳೆಯಲಿಲ್ಲವೋ ನಮಗೆ ತಿಳಿಯದಾಗಿದೆ. ಇರಲಿ. ವಾದವನ್ನು ಹೂಡಿದರೂ ತಮ್ಮ ಲೇಖನದಲ್ಲಿ ಶಂಕರಾಚಾರ್ಯರ ಕಾಲನಿರ್ಣಯದ ವಿಷಯಕ್ಕೆ ಹೆಚ್ಚಾಗಿ ಆಧಾರಗಳನ್ನು ಕೊಡದೆ, ಚಂದ್ರಮೌಳೀಶ್ವರ ಲಿಂಗವನ್ನು ಅನುಗ್ರಹಿಸಿದ ವಿಷಯವನ್ನೇ ಹೆಚ್ಚಾಗಿ ಚರ್ಚಿಸಿರುವರು. ಒಟ್ಟಿನಮೇಲೆ ಅವರೊಳ್ಳೇ ಧರ್ಮಾಭಿಮಾನಿಗಳಾಗಿದ್ದು ಪುರಾಣಮತವಾದಿಗಳಾಗಿರುವರೆಂದು ಹೇಳಲು ಅಡ್ಡಿಯಿಲ್ಲ.

ಇನ್ನು ಶ್ರೀ. ರಾಮರಾಯರ ವಿಷಯಕ್ಕೊಂದೆರಡು ಮಾತು. ಗುರುಭಕ್ತ ಕೇಸರಿಗಳು ತಮ್ಮ ಲೇಖನದಲ್ಲಿ ಆದ್ಯ ಶಂಕರಾಚಾರ್ಯರು ೨೦೦೦ ವರುಷಗಳ ಪೂರ್ವದವರು. ಎಂಬದಾಗಿ ತೀರ್ಮಾನಿಸಿರುವರು. ಅದುಕಾರಣವೇ ಕೇಸರಿಯವರ ನಿರ್ಣಯವು ಐತಿಹಾಸಿಕ ದೃಷ್ಟಿಯಿಂದ ತಪ್ಪಾದುದೆಂಬ ವಿಷಯದ ವಿವೇಚನೆಯನ್ನೇ ಲೇಖಕರು ಕೈಕೊಂಡಿರುವರು. ಈ ಮೊದಲು ಭಾರತದ ಇತಿಹಾಸ

ಸಂಶೋಧಕರು ಮಾಡಿದ ಕಾರ್ಯವನ್ನು ಹೇಳಿ, ಇಂದು ಶಂಕರಾಚಾರ್ಯರ ಕಾಲದ ಬಗ್ಗೆ ಪ್ರಸ್ಥಾಪಿತವಾಗಿರುವ ಪ್ರೊ. ಪಾಠಕರವರ ಮತವನ್ನೇ ಮುಂದಿಸಿ ಕೊನೆಗೆ ಆದ್ಯ ಶಂಕರಾಚಾರ್ಯರ ಕಾಲವು ಕ್ರಿಸ್ತಿ ಶಕದಂತೆ ೮ನೇ ಶತಮಾನದ್ದೆಂಬ ಸಂಗತಿಯನ್ನು ಸಿದ್ಧಮಾಡಿರುವರು. ಮತ್ತು ಅವರ ( ಶಂಕರಾಚಾರ್ಯರ ) ಕಾಲವು ೮ನೇ ಶತಮಾನದ್ದೆಂದು ನಿರ್ಣೀತವಾದಲ್ಲಿ ಶ್ರೀ ರೇವಣಸಿದ್ಧರಿಂದ ಚಂದ್ರ ಮೌಲೀಶ್ವರ ಲಿಂಗವನ್ನು ಅನುಗ್ರಹಿಸಿದ್ದು. ಆದ್ಯ ಶಂಕರಾಚಾರ್ಯರಿಗಿರದೆ ಬೇರೊಬ್ಬ ಶಂಕರಾಚಾರ್ಯರಿಗೆ ಅನುಗ್ರಹಿಸಿರಬೇಕೆಂಬ ಈ ಮೊದಲು ಇತಿಹಾಸ ಸಂಶೋಧಕರು ಹೇಳಿದ ಮಾತನ್ನೇ ಮತ್ತೆ ಹೇಳಿರುವರು. ಚಂದ್ರಮೌಲೀಶ್ವರ ಲಿಂಗದ ವಿಷಯದಬಗ್ಗೆ ಜಯಕರ್ನಾಟಕ ಸಂಪುಟ ೧೨, ಸಂಚಿಕೆ ೧೦, ಪುಟ ೪೯ ನೋಡಿರಿ. ಶ್ರೀ. ರಾಮರಾಯರು ಕೇವಲ ಸತ್ಯಾನ್ವೇಷಣೆಯ ಬುದ್ಧಿಯಿಂದಲೂ ಸಾಹಿತಿಗಳ ಸಮುದೃಷ್ಟಿಯಿಂದಲೂ ಇಂದಿನ ಲೋಕಜನವು ಒಪ್ಪುವಂತಹ ಸಮಂಜಸವಾದ ರೀತಿಯಿಂದಲೂ ಮಾಡಿದ ವಿಷಯ ವಿವೇಚನೆಯಿಂದ ಶ್ರೀ. ಗುರುಭಕ್ತ ಕೇಸರಿಗಳಿಗೆ ಸಮಾಧಾನವೆನಿಸಿರಲಿಕ್ಕೆ ಸಾಕು ಎಂಬುದೇ ನಮ್ಮ ಊಹೆ. ಇದೀಗ ಈ ಸಂಗತಿಯಿಂದ ಗುರುಭಕ್ತ ಕೇಸರಿಗಳ ಸಹಿಷ್ಣುತಾಭಾವವೂ, ಸೌಜನ್ಯವೂ ಚನ್ನಾಗಿ ವ್ಯಕ್ತವಾಗುತ್ತವೆ. ವಸ್ತುಸ್ಥಿತಿಯು ಹೀಗಿರಲು ಕೂಡ ಉಪ್ಪಿನಬೆಟಗೇರಿಯ ಶ್ರೀಮಾನ್ ಸಾಲೀಮಠರವರು ಮತ್ತೆ ಅದೇ ವಿಷಯವನ್ನು ಎತ್ತಿ ಗುರುಭಕ್ತ ಕೇಸರಿಗಳು ಬರೆದುದನ್ನು ಸತ್ಯಮಾಡಿ ತೋರಿಸಲು ಹೆಣಗಿದ್ದಾರೆ. ತಮ್ಮ ಲೇಖನಕ್ಕೆ "ಶಂಕರಾಚಾರ್ಯರ ಕಾಲ" ಎಂಬ ಬೇರೊಂದು ತಲೆಬರಹ ಮಾತ್ರ ಕೊಟ್ಟಿದ್ದಾರೆ. ತಮ್ಮ ಲೇಖನದ ಸಮರ್ಥನೆಗೆ ಸಮಂಜಸವಾದ, ಸರ್ವಸಮ್ಮತವಾದ ಐತಿಹಾಸಿಕ ಆಧಾರಗಳನ್ನು ಕೊಡದೆ, ಹೆಚ್ಚಾಗಿ ಪೌರಾಣಿಕ ಆಧಾರಗಳನ್ನು ಕೊಟ್ಟಿದ್ದಾರೆ. ನಿಜವಾಗಿ ವಿಚಾರಮಾಡಿ ನೋಡಿದರೆ, ಪಂಡಿತರಿಗೆ ಮಾನ್ಯವಾಗುವಂತಹದೂ, ಐತಿಹಾಸಿಕ ಸತ್ಯಾಂಶಗಳುಳ್ಳದ್ದೂ ಆದ ಶಂಕರಾಚಾರ್ಯರ ಕಾಲ ನಿರ್ಣಯದಬಗ್ಗೆ ಪ್ರೊ. ಪಾಠಕರವರ ಮತವು ಪ್ರಸ್ಥಾಪಿಸಲ್ಪಟ್ಟು ಬಹುದಿನಗಳಾದವು (೧೮೮೨). ಅದೇ ವಿಷಯವು ಇಂದು ಸಾಮಾನ್ಯ ಜನಗಳಿಗೆ ಗೊತ್ತಿರಲಿಕ್ಕಿಲ್ಲೆಂದು ಭಾವಿಸಿಯೋ ಶ್ರೀ. ಬಾಳೇಹೊಸೂರ ರಾಮರಾಯರು ತಾ.೩೦-೧೦-೩೫ನೇ ದಿವಸ ಸಂಚಿಕೆಯಲ್ಲಿ ಲೇಖನಮೂಲಕ ಪ್ರಸಿದ್ಧಪಡಿಸಿರುವರು. ಸಂದರ್ಭವು ಇಂತಹದಿದ್ದರೂ ಶ್ರೀ. ಸಾಲೀಮಠರವರು ತುಂಬಾ ಶ್ರಮವಹಿಸಿ ಕೊಟ್ಟ ಲೇಖನದ ಕಾರಣವು ನಮಗಂತೂ ಇರಲಿ ಅನ್ಯರಿಗಾದರೂ ತಿಳಿಯುವದೋ ಹೇಗೆ ನೋಡಬೇಕಾಗಿದೆ. ಹಾಗೆಯೇ ಸುಮ್ಮಸುಮ್ಮನೆ ತತ್ವದ ಬಡಿದಾಟದಲ್ಲಿ ವೈಯುಕ್ತಿಕ ಭಾವನೆಯನ್ನು ತಳೆದು, ಲೇಖಕರನ್ನು ಸಲ್ಲದ ವಚನಗಳಿಂದ ಟೀಕಿಸಿರುವದು ಅವರ ಶೀಲ ಸೌಜನ್ಯಗಳಿಗೆ ಉಚಿತವಾದುದಲ್ಲವೆಂದು ನಾವು ಧಾರಳವಾಗಿ ಹೇಳಬಲ್ಲೆವು.

ಇಂದಿನ ಚಿಕಿತ್ಸಕಯುಗದಲ್ಲಿ ಅಂಧಶ್ರದ್ಧೆಗೆ ಅವಕಾಶವಿಲ್ಲವೆಂಬದನ್ನು ಅರಿತಿವರಾಗಿದ್ದರೂ ಕೂಡ ಯುಗಮಾನಕ್ಕೆ ಸರಿಯಾಗುವ ವಿಚಾರಗಳನ್ನು ಲೋಕಜನಗಳ ಮುಂದಿರಿಸುವದು ಯೋಗ್ಯವಾಗಿದೆ. ಹೀಗಿದ್ದು ಶ್ರೀ ಸಾಲೀಮಠರವರು "ಲೇಖಕರು (ರಾಮರಾಯರು) ಕೆಲವು ಇತಿಹಾಸಕಾರರು ಬರೆದ ಅಭಿಪ್ರಾಯವನ್ನೇ ಸತ್ಯವಾದುದೆಂದು ನಂಬಿ, ಶಂಕರಾಚಾರ್ಯರಕಾಲವು ೮ ನೇ ಶತಮಾನವೆಂದು ಪ್ರಸಿದ್ಧಿಸಿರುವರು." "ಲೇಖಕರು ಕೇವಲ ಐತಿಹಾಸಿಕ ಗ್ರಂಥಗಳನ್ನು ನಂಬಿದಂತೆ ಕಂಡುಬರುತ್ತದೆ." ಇದು ಸಮಂಜಸವಾದುದಲ್ಲ. ಎಂಬದಾಗಿ ಸೂಚಿಸಿದ್ದಾರೆ. ಸದ್ಯದ ವಿಚಾರಕ್ರಾಂತಿಯ ಜಗದೊಳಗಿನ ಸಮಾಜಕ್ಕೆ ಅವರ ಈ ಹೇಳಿಕೆಯು ಒಪ್ಪಿತವಾಗಬಹುದೋ ಹೇಗೆ? ಎಂಬದರ ಅರಿವು ಅವರಿಗೆ ಕಾಣುವದಿಲ್ಲ. ತಮ್ಮ ಆವೇಶದಲ್ಲಿ 'ವೀರಶೈವ ಮತಾಚಾರ್ಯರ ಕಾಲನಿರ್ಣಯ' ಎಂಬಗ್ರಂಥವನ್ನು ಬರೆದ ಶ್ರೀ. ಕಲುರ್ಮಂಗಲ ಶ್ರೀಕಂಠಯ್ಯನವರನ್ನೂ ಹಳಿದಿದ್ದಾರೆ. ಇತಿಹಾಸ ಸಂಶೋಧಕರೂ, ಸಾಹಿತ್ಯದಲ್ಲಿನ ತಜ್ಞರೂ ಅವರಿಗೆ ಸದಭಿಪ್ರಾಯವನ್ನು ಕೊಟ್ಟ ವಿಷಯವು ಇವರ ಕಣ್ಣಿಗೆ ಬಿದ್ದಿರಲಿಕ್ಕಿಲ್ಲವೇ? ಮತವಿಚಾರಗಳನ್ನು ಐತಿಹಾಸಿಕ ಸತ್ಯಾಂಶಗಳಿಂದ ಸಮಾಜದ ಮುಂದಿರಿಸಿ, ವೀರಶೈವಮತದ ಕೀರ್ತಿಯ ಹೆಚ್ಚಳಿಕೆಗೆ ಸಾಹಸಮಾಡುವ ಶ್ರೀಕಂಠಯ್ಯನವರಂತಹ ಸಜ್ಜನರನ್ನು ಕಾರಣವಿಲ್ಲದೆ ಹೀಗೆ ಹಳಿಯುವ ಸಾಹಸವನ್ನು ಆರಾದರೂ ಮಾಡುವದುಚಿತವೋ?

ನಮ್ಮ ಮತದಿಂದ ಶ್ರೀ ಸಾಲಿಮಠರವರು ಉಳಿದುದೇನೂ ಮಾಡುವದು ಬೇಕಾಗಿದ್ದಿಲ್ಲ. ಶಂಕರಾಚಾರ್ಯರ ಕಾಲದಬಗ್ಗೆ ಬಹುಮಾನ್ಯವಾದ ಪ್ರೊ. ಪಾಠಕ ಅವರ ಮತವನ್ನು 'ಇಂತಹರು ಇಂಥಲ್ಲಿ ಖಂಡಿಸಿರುವರು.' ಎಂಬ ಉಲ್ಲೇಖವಿದ್ದ ಆಧಾರಗಳನ್ನು ಕೊಡಬೇಕಾಗಿತ್ತು. ಯಾಕಂದರೆ ವಾದದ ವಿಷಯವೇ ಶಂಕರಾಚಾರ್ಯರ ಕಾಲದಬಗ್ಗೆ ಬಹುಮಾನ್ಯವಾಗಿ ಒಪ್ಪಿದ ಮತವಾವುದು? ಎಂಬುದು! ಅವರ (ಸಾಲೀಮಠರವರ) ಜ್ಞಾಪಕಕ್ಕೆ ಬಂದಿರಲಿಕ್ಕಿಲ್ಲವೇ? ಅಥವಾ ಹೀಗೆ ಮಾಡಿದ್ದರೂ ನಡೆಯುವಹಾಗಿತ್ತು. ಶ್ರೀ. ಜೀರಿಗಿ ಬಸಲಿಂಗಪ್ಪನವರು ಬರೆದ "ವೀರಶೈವ ಮತಸ್ಥಾಪಕರು ಯಾರು" ಎಂಬ ಗ್ರಂಥವನ್ನು ಅವಲೋಕಿಸಬೇಕಾಗಿತ್ತು. ಈಗಲಾದರೂ ನಾವವರಿಗೆ ಆ ಗ್ರಂಥವನ್ನು ಅವಲೋಕಿಸಲು ಆಗ್ರಹಪೂರ್ವಕವಾಗಿ ಕೇಳದೆ ಇರಲಾರೆವು.

ಇನ್ನು ವೀರಶೈವ ಧರ್ಮವನ್ನು ಕುರಿತು ಐತಿಹಾಸಿಕ ದೃಷ್ಟಿಯಿಂದ ಅದೇಕೆ ಯೋಚಿಸಬೇಕು ಎಂಬ ವಿಷಯದಲ್ಲಿ ದಾವಣಗೇರಿಯ ಪ್ರೇಮದ ಬಳ್ಳಿಯ ಬಳಗದವರಾದ ಶ್ರೀ. ಮಲ್ಲಭದ್ರ, ಅವರು ಅಂದಿರುವದನ್ನು ನೋಡಿರಿ. (ಹಾವೇರಿ ಬಸವರಾಜ ತಾ. ೩—೧೨—೩೪)

ನಮ್ಮ ಪವಿತ್ರವಾದ ಧರ್ಮದ ಬೆಳವಣಿಗೆಯನ್ನು, ಧರ್ಮಪ್ರಚಾರವನ್ನು ದೇಶ ಕಾಲ ವರ್ತಮಾನದ ಮರ್ಯಾದೆಗಳಿಗನುಸಾರವಾಗಿ ವಿಜ್ಞಾನದೃಷ್ಟಿಯಿಂದ ತಿಳಿದುಕೊಳ್ಳುವಗಕ್ಕೆ 'ಇತಿಹಾಸವು' ಅತ್ಯಾವಶ್ಯಕವಾದ ಅಂಶವಾಗಿರುತ್ತದೆ. "ಇತಿಹಾಸವು ಸತ್ಯಾಂಶವನ್ನು ಬೋಧಿಸುತ್ತದೆ." ಅದುಕಾರಣ ನಮ್ಮ ಧರ್ಮ ತತ್ವಗಳ ಸತ್ಯತೆಯನ್ನು ಸಕ್ರಮವಾಗಿಯೂ ನಿಸ್ಪೃಹತೆಯಿಂದ ತಿಳಿದುಕೊಳ್ಳಬೇಕಾದರೆ, ನಾವು ನಿರ್ದಾಕ್ಷಣ್ಯವಾದ ಐತಿಹಾಸಿಕ ವೀರ ಕವಚಧಾರಿಗಳಾಗಬೇಕು. ವಾಚಕ ಬಂಧುಗಳೇ ನೋಡಿರಿ! ಇಂದಿನ ಜಗವು ಒಪ್ಪುಂತೆ ಅನ್ಯರನ್ನು ದೋಷಿಸದೆ ಸ್ವಾಭಿಮಾನದಿಂದ ಐತಿಹಾಸಿಕ ತಳಹದಿಯ ಮೇಲೆ ನಮ್ಮ ವೀರಶೈವ ಧರ್ಮ ಸಾಮ್ರಾಜ್ಯದ ಕಟ್ಟಡವನ್ನು ನಿಲಿಸಿ ಅದರ ಜ್ಯೋತಿಯನ್ನು ದಶದಿಕ್ಕುಗಳಲ್ಲಿ ಬೆಳಗಿಸಬೇಕೆಂಬ ದಾವಣಗೇರಿಯ ಶ್ರೀಮಾನ್ ಮಲ್ಲಭದ್ರ ಮಹಾಶಯರ ಉದಾತ್ತವಾದ ವಿಚಾರವೆತ್ತ! ಹಾಗೆಯೇ ದ್ವೇಷಾಸೂಯೆಗಳಮೂಲಕ ಅಂಧಶ್ರದ್ಧೆಯಿಂದ ಪ್ರಮಾಣಕ್ಕೆ ಮೀರಿದ ಸ್ವಮತಾಭಿಮಾನ ತಳೆದು, ಇಂದಿನ ಸಮಾಜಕ್ಕೆ ಇಷ್ಟವಾಗಿರುವ ಐತಿಹಾಸಿಕ ಆಧಾರಗಳಿಗೆಡೆಗೊಡದೆ, ಎತ್ತಲಾದರೂ ಮತ್ತಾಯದಿಂದ ತಮ್ಮ ತತ್ವವನ್ನೇ ಲೋಕಕ್ಕೊಡಂಬಡಿಸಬೇಕೆಂಬ ಶ್ರೀ. ಸಾಲೀಮಠರವರ ಸಂಕುಚಿತ ವಿಚಾರವೆತ್ತ! ಇವರೀರ್ವರ ವಿಚಾರಗಳಲ್ಲಿ ಅಜ-ಗಜಗಳ ಅಂತರವಿದೆಯೆಂಬದನ್ನು ವಾಚಕರು ಈ ಮೊದಲೇ ಊಹಿಸಿರಲಿಕ್ಕೆ ಸಾಕು.

ಒಟ್ಟಾರೆ ಈ ವಿಷಯದ ಬಗ್ಗೆ ಶ್ರೀ. ಸಾಲೀಮಠರವರಿಗೆ ನಮ್ಮವರ ಮಾತುಗಳೂ ಸೇರವು. ಅನ್ಯರವಂತೂ ಮೊದಲೇ ಬೇಡ. ಹೀಗಾಗಿ ಅವರ ಸ್ವಭಾವವೈಶಿಷ್ಟವೇ ನಮಗೆ ತಿಳಿಯದಾಗಿದೆ! ಇರಲಿ.

ಈಗಲೀಗ ವಿಷಯ ವಿಸ್ತಾರವು ಬಹಳವಾಯಿತು. ನಾವೇನೂ ಇಂತಹ ಕಠಿಣತರವಾದ ಪ್ರಸಂಗದಲ್ಲಿ ತೀರ್ಮಾನುಕೊಡುವಷ್ಟು ತಜ್ಞರಲ್ಲ. ಅದುಕಾರಣವೇ ನಾವು ಭಾರತದ ಸುಪ್ರಸಿದ್ಧ ಹಾಗೂ ಮಾನ್ಯವಾದ ಇತಿಹಾಸ ಸಂಶೋಧಕಸಂಸ್ಥೆಗಳಿಗೆ ಪತ್ರಬರೆದು ಅವರಿಂದ ಈ ವಿಷಯದ (ಆದ್ಯ ಶಂಕರಾಚಾರ್ಯರ ಕಾಲನಿರ್ಣಯ) ಬಗ್ಗೆ ಅಭಿಪ್ರಾಯ ತರಿಸಿಕೊಂಡಿರುವೆವು. ಸೂಜ್ಞರಾದ ನಮ್ಮ ವೀರಶೈವ ಬಂಧುಗಳಿಗೆ ಅವನ್ನವಲೋಕಿಸುವದರಿಂದ ಸಮಾಧಾನವೆನಿಸಿ, ಸಧ್ಯಕ್ಕೆ ಉಂಟಾದ ಶುಷ್ಕವಾದ ಗಲಭೆಯ ಸತ್ಯಾಂಶವನ್ನು ನಿಷ್ಕರ್ಷಿಸಿಕೊಳ್ಳುವರಾಗಿ ನಂಬಿದ್ದೇವೆ.



॥ श्री ॥

भारत
इतिहास संशोधक
मंडळ पुणे.
शके १८३२

जा. नं. 1078/1856 ता. १३—१२—३४,

# Bharat Itihasa Samshodhaka Mandal Poona.

*313 Sadashiva Peth No. 2*

DEAR SIR,

Sorry that I could not reply you, earlier.

The date of Adya-Shankaracharya, as given by late Dr. Pathaka is still unrefuted and held Conclusive.

I do not think that Revanasidha and adya Shankaracharya were Contemporaries.

Consequently there is no possibility of Revanash-idda's ever, bestowing Chandra Moulishwar Ling on adya Shankaracharya.

I shall let you know later, if I come across any striking fact in this Connection.

Yours Faithfully.

*(Sd.)* **G. H. Khare.**

|| श्री ||

जा. नं. ೧೦೭೮ / ೧೮೫೭



ಪುಣೆ,

ತಾ. ೧೩-೧೨-೩೪.

# ಭಾರತ ಇತಿಹಾಸ ಸಂಶೋಧಕ ಮಂಡಲ,

## ೩೧೩ ಸದಾಶಿವ ಪೇಠ ಪುಣೆ. (ಇಂಡಿಯಾ)

ಸಭ್ಯರೇ,

ಈ ಮೊದಲಲ್ಲಿಯೇ ತಮಗೆ ಉತ್ತರ ಬರೆಯೋಣವಾಗಲಿಲ್ಲದ್ದಕ್ಕೆ ಕ್ಷಮಿಸಿರಿ.

ಸ್ವೈ. ವಾ. ಡಾಕ್ಟರ. ಪಾತಕ ಅವರು ಆದ್ಯ ಶಂಕರಾಚಾರ್ಯರ ಕಾಲನಿರ್ಣಯದ ಬಗ್ಗೆ ಮಂಡಿಸಿದ ಮತವು ಈ ವರೆಗೆ ಆರಿಂದಲೂ ಖಂಡಿಸಲ್ಪಟ್ಟಿಲ್ಲ. ಆದ್ದರಿಂದ ಅದೇ ನಿರ್ಣಾಯಕವೆಂದು ತಿಳಿಯಲ್ಪಡುತ್ತದೆ.

ರೇವಣಸಿದ್ಧರು ಮತ್ತು ಶಂಕರಾಚಾರ್ಯರು ಸಮಕಾಲೀನರೇ ಅಲ್ಲ. ಆದ್ದರಿಂದ ಅವರು (ರೇವಣಸಿದ್ಧರು) ಆದ್ಯ ಶಂಕರಾಚಾರ್ಯರಿಗೆ ಚಂದ್ರಮೌಲೀಶ್ವರ ಲಿಂಗ ಅನುಗ್ರಹಿಸಿದುದು ಅಶಕ್ಯವೇ ಸರಿ!

ಈ ಬಗ್ಗೆ ಮಹತ್ವದ ವಿಷಯಗಳೇನಾದರೂ, ಮುಂದೆ ನನ್ನ ಕಣ್ಣಿಗೆ ಬಿದ್ದರೆ ತಿಳುಹಿಸುವೆನು.

ನಿಮ್ಮ ವಿಶ್ವಾಸಕ್ಕೆ ಪಾತ್ರನಾದವ,

(*Sd.*) ಜಿ. ಎಚ್. ಖರೆ.

Rajasevasakta Rao-bahadur,

Dr. S. Krishnaswami Aiyngar M. A. Ph. D.

University Professor. Mysore & Madras. (Rtd.)

Hony. Correspondent, Archaeological Survey of India.

Fellow of the Asiatic Society of Bengal.

Editor :— Journal of Indian History

Sripadam
143, Brodies Road,
Mylapore, Madras,
7th Dec. 1934.

DEAR SIR,

With reference to your letter No. 332 dated 3 rd, instant enquiring, if the date of the first Shankaracharya (A. D. 788-820 ) is the correct date and justifiable, I think that on the basis of the evidence so far available, that seems to be correct. So far as I know, I do not think there is any thing in the way of really good evidence, to enable us to make this give place to a better date. This period seems to fit the circumstances of the case well.

Yours Faithfully,

(*Sd.*) S. Krishnaswami Aiyangar.

ಶ್ರೀಪಾದವ್

೧೪೩. ಬ್ರಾಡೀಜ ರೋಡ,
ಮೈಲಾಪುರ, ಮದ್ರಾಸ
ತಾ. ೭-೧೨-೩೪.

ರಾಜಸೇವಾಸಕ್ತ ರಾವಬಾಹದ್ದೂರ

ಡಾ. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ, M. A. Ph. D.

ಯುನಿವ್ಹರಸಿಟಿ ಪ್ರೋಫೇಸರ, ಮೈಸೂರ ಮತ್ತು ಮದ್ರಾಸ. (ರಿಟಾಯರ್ಡ)

ಆನರರೀ ಕರಸ್ಪಾಂಡಂಟ ಆರ್ಕಿಯಾಲಾಜಿಕಲ್ ಸರ್ವ್ಹೆ ಆಫ ಇಂಡಿಯಾ.

ಫೆಲೋ ಆಫ ದಿ ಏಸಿಯಾಟಿಕ್ ಸೊಸಾಯಟಿ ಆಫ ಬೆಂಗಾಲ.

ಸಂಪಾದಕರು- ಜರ್ನಲ್ ಆಫ್ ಇಂಡಿಯನ್ ಹಿಸ್ಟರಿ.

ಸಭ್ಯರೆ,

ತಮ್ಮ ಜಾ. ನಂ $\frac{೩೩೨}{೩-೧೨-೩೪}$ ನೇ ವಿನಂತಿ ಪತ್ರದಲ್ಲಿ ಆದ್ಯ ಶಂಕರಾಚಾರ್ಯರ ಕಾಲವು ( ಕ್ರಿ. ಶ. ೭೮೮—೮೨೦ ) ಇದು ಸರಿಯಾದುದೂ, ನ್ಯಾಯವಾದುದೂ ಇದೆಯೇ ? ಎಂದು ಕೇಳುವದಾಗಿತ್ತು.

ಇದೂ ವರೆಗೆ ಉಪಲಬ್ಧವಾಗಿರುವ ಐತಿಹಾಸಿಕ ಆಧಾರಗಳವೇಲಿಂದ ಆ ಕಾಲವು ( ತಾವು ಬರೆದುದು ) ಸರಿಯಾದುದೆಂದು ಹೇಳಲಿಕ್ಕೆ ಪ್ರತ್ಯವಾಯವಿಲ್ಲ.

ನನಗೆ ಗೊತ್ತಿದ್ದವುಟ್ಟಿಗೆ ಮೇಲಿನ ( ಕಾಲಕ್ಕಿಂತ ) ದಕ್ಕಿಂತ ಹೆಚ್ಚು ಪ್ರಾಶಸ್ತಿಯುಳ್ಳ ಬೇರೊಂದು ಕಾಲವನ್ನು ಕೊಡಲು ಯೋಗ್ಯವಾದ ಐತಿಹಾಸಿಕ ಆಧಾರಗಳು ಸಿಕ್ಕುವದಿಲ್ಲ. ಅಲ್ಲದೆ ಈ ಕಾಲವು ಐತಿಹಾಸಿಕ ಸಂಗತಿಗಳಿಗೆ ಅನುಗುಣವಾಗಿರುವದೆಂದು ಕಂಡುಬರುವದು.

ತಮ್ಮ ವಿಶ್ವಾಸಕ್ಕೆ ಪಾತ್ರನಾದವ,

(*Sd.*) ಎಸ್. ಕೃಷ್ಣಸ್ವಾಮಿ ಅಯ್ಯಂಗಾರ

# ಸಂದೇಶಗಳು.

ಹಿಂದು ಮುಸಲ್ಮಾನ ಮತಗಳ ಐಕ್ಯತೆಯ ಅಂತರಂಗವನ್ನು ಕಂಡುಕೊಂಡು ತಮ್ಮ ಅತುಲ ಮಹಿಮಾತಿಶಯದಿಂದ ಲೋಕಜನಗಳಿಗೆ ಅದರ ನಿಜತ್ವವನ್ನು ತೋರಿದ ಶ್ರೀ ಫಕೀರೇಶ್ವರ ಸ್ವಾಮಿಗಳ ಕೃಪಾಛತ್ರದಲ್ಲಿ ನಡೆದ ವೀರಶೈವಚಂದ್ರಿಕೆಯನ್ನು ನೋಡಿದೆ. ವಿಷಯಗಳು ಚನ್ನಾಗಿವೆ. ಉತ್ತರೋತ್ತರ ಚಂದ್ರಿಕೆಗೆ ಅಭಿವೃದ್ಧಿಯಾಗಲೆಂದು ಹಾರೈಸುತ್ತೇನೆ

ಬೆಳ್ಳಟ್ಟಿ,
ತಾ. ೩—೧೧—೩೪ } ಮೆ|| ಯಾಕೂಬಸಾ|| ಹಮಸಾಗರ,
ಜಿನ್ ಫ್ಯಾಕ್ಟರಿ ಮಾಲಕ.

---

"ವೀರಶೈವ ಚಂದ್ರಿಕೆ" ಯು ನಮ್ಮ ವೀರಶೈವ ಸಮಾಜಕ್ಕಷ್ಟೇ ಅಲ್ಲ. ಸರ್ವರೂ ಸಂಗ್ರಹಿಸತಕ್ಕ ಮಾಸಪತ್ರಿಕೆಯಾಗಿದೆ. ಇಲ್ಲಿ ಕನ್ನಡಕ್ಕೆ ಪ್ರಾಶಸ್ತ್ಯವಿಲ್ಲದಿದ್ದರೂ ಪ್ರಯಾಸದಿಂದ ಯಾವತ್ತೂ ಮತದವರು!ಕೂಡಿ ಇಂಥ ಕಾರ್ಯಕ್ಕೆ ಎಡೆಗೊಟ್ಟು ನಿಂತಷ್ಟು ನೋಡಿ ಬಹಳೇ ಆನಂದವಾಯಿತು. ಇಂದು ಚಂದ್ರಿಕೆಯ ಆಫೀಸಿನಲ್ಲಿದ್ದ ಯಾವತ್ತೂ ಪತ್ರಿಕೆಗಳನ್ನೂ ಲೇಖಗಳನ್ನೂ ನೋಡಿ ತುಂಬಾ ಸಂತೋಷವೆನಿಸಿತು. !ಸುವ್ಯವಸ್ಥೆಯ ಬಗ್ಗೆ ಸಂಪಾದಕ ಮಹಾಶಯರನ್ನು ಎಷ್ಟು ವರ್ಣಿಸಿದರೂ ತೀರದು. ಉತ್ತರೋತ್ತರ ಚಂದ್ರಿಕೆಯು ಅಭಿವೃದ್ಧಿಯಾಗಲೆಂದು ಕೋರುತ್ತೇನೆ.

ಬಿದರಹಳ್ಳಿ,
ತಾ. ೨೭—೧೧—೩೪ } ಗುರುಬಸಪ್ಪ ಫಕ್ಕೀರಪ್ಪ ಯಳಮಲಿ

---

ಹಿರಿಯರೇ ಒಬ್ಬ ತಿಂಗಳ (ಚಂದ್ರ) ನ ಚಂದ್ರಿಕೆ (ಕದಿರು) ಯಿಂದ ನೆಲವೂ, ಬಾನೂ ನಲಿವಿನಿಂದ ತುಂಬಿ ತುಳಕಾಡುತ್ತಿರಲು ೩ ತಿಂಗಳ ಚಂದ್ರಿಕೆಗಳಿಂದ ನನ್ನೊರ್ವನ ನಲುವು ಉಕ್ಕೇರಿತೆಂದು ಬೇರೆ ಹೇಳಬೇಕಾಗಿಲ್ಲ. ಕನ್ನಡ ನುಡಿಯಲ್ಲಿ ತುಂಬಾ ಅಕ್ಕರೆಯುಳ್ಳವರಿಂದ ಆರಿಸಿದ ಬರಹಗಳುಳ್ಳ ಚಂದ್ರಿಕೆಯು ತನ್ನ ಕನ್ನಡಹೆಸರು (ತಂಗದಿರು ಇಂಗದಿರು) ಗಳಿಗೆ ಒಪ್ಪುವಂತೆ ಓದುಗರಲ್ಲಿ ಬಾಳುಕೆಯ ಬೇಸರದಿಂದ ಉಂಟಾದ ಒಡಲುರಿಗೆ ತಂಪನ್ನಿತ್ತು ಕನ್ನಡದ ಇಂಪನ್ನು ತೋರಿಸದೆ ಬಿಡದೆಂದು ನಂಬುತ್ತೇನೆ. ಮತ್ತು ನಾನು ಹೊತ್ತು ದೊರೆತಂತೆ ನನ್ನ ಬರಹಗಳನ್ನು ಕಳಿಸುವೆನು.

ತಿಲಾರಪೂರ,
ತಾ. ೧೬—೧೧-೩೪ } ತಮ್ಮ ಕನ್ನಡಿಗರ ಕಯ್ಯಾಳು,
ಹಣಮಂತಪ್ಪ ರಾಮಪ್ಪ ಕಾಲವಾಡ

ಸಾಮಾನ್ಯವಾಗಿ ಧಾರ್ಮಿಕ, ಐತಿಹಾಸಿಕ, ಸಾಮಾಜಿಕ ವಿಷಯುಗಳನ್ನೊಳಗೊಂಡ ಲೇಖಕನಗಳನ್ನು ಪ್ರಕಟಿಸುತ್ತ ಹೋಗುವದು ಈ ಪತ್ರಿಕೆಯ ಉದ್ದೇಶವೆಂದು ಸಂಪಾದಕರು ಆತ್ಮನಿವೇದನೆಯಲ್ಲಿ ತಿಳಿಸುತ್ತಾರೆ. ಮೊದಲನೆ ಸಂಪುಟದ ಮೂರು ಸಂಚಿಕೆಗಳಲ್ಲಿ ಶ್ರೀಮಾನ್ ಬಾಲೇಹೊಸೂರ ರಾಮರಾಯರ "ಕನ್ನಡ ಸಾಹಿತ್ಯದಲ್ಲಿ ವೀರಶೈವರ ಮಹತಿ" ಎಂಬ ಲೇಖನವು ಓದತಕ್ಕದ್ದಾಗಿದೆ. ೩ ನೇ ಸಂಚಿಕೆಯಲ್ಲಿ ಶ್ರೀಮಾನ್ ಕುಲಕರ್ಣಿ ತಿಮ್ಮಣ್ಣನವರು ಸಂಗ್ರಹಿಸಿದ ಹಳ್ಳಿಯ ಹಾಡುಗಳು ಇವೆ. ಈ ಹೊಸ ಪತ್ರಿಕೆಗೆ ನಾವು ಸ್ವಾಗತವನ್ನು ಬಯಸುತ್ತೇವೆ.

ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆ,
ಬೆಂಗಳೂರು ನಗರ
ಅಕ್ಟೋಬರ ೧೯೩೪.

ಎಂ. ವಿ. ಸೀ.
ವಿಮರ್ಶಕರು.

---

## ವಿದ್ಯಾರಣ್ಯ ಸುವರ್ಣಾಂಕು.

ನವಲಗುಂದದಲ್ಲಿ ಹೊರಡುವ ಕೈ ಬರಹದ ಮಾಸಪತ್ರಿಕೆ. ಆಕಾರ ¼ ಘು
ಸಂಪಾದಕರು:— ಶ್ರೀ. ಗ. ಜೋಶಿ.

ಸರಸ ಬರಹಗಾರರ ಸಾನಂದ ಪರಿಪೂರ್ಣತೆಯ ಸಿರಿಗನ್ನಡದ ಲೇಖನಗಳ ಸೀಗುರಿಯಿಂದ ಶೋಭಿಸುವ ವಿದ್ಯಾರಣ್ಯ ಮಾಸಿಕದ ಸುವರ್ಣಾಂಕು ತಲುಪಿತು. ಸೂಸುವ ಪರಿಮಳವನ್ನು ಸೆಳೆದೊಯ್ದು ಜನಗಳ ಸೇವೆಗೈವ ಮಂದ ಮಾರುತನು ಸೈಯೆಂದೆನಿಸಿಕೊಂಡು ಸೊಲ್ಲ ಗಸನ್ನು ಹೇಗೆ ನೀಡುವನೋ ಅದೇ ಸೋಗು ಇದರಲ್ಲಿದೆ. ಸೌಷ್ಟವವು ಎಲ್ಲ ಕವಿತೆಗಳಲ್ಲಿ ತುಂಬಿದೆ. ಸಂವಿಧಾನಕಗಳು ಚನ್ನಾಗಿವೆ.

ತಾವು ಗೈಯುವ ಕನ್ನಡ ನಾಡಿನ ಕಾರ್ಯವು ಬಹುಕಾಲ ಬಾಳತಕ್ಕದ್ದು. ಇತ್ತೀಚಿನ ಸಾಹಿತಿಗಳದು ಮಾತ್ರ ಪ ದ್ಮ ಪ ತ್ರ ನಿವಾಂಭ ಸಂ

ಭ್ರಾಂತೇಶ
ವಿಮರ್ಶಕಾರರು

# ಆನಂದತುಷಾರ.

ಕಾಲವಾಡ

ತಾ॥ ನವಲಗುಂದ

ಶ್ರೀಮಾಸ್ ಕುಲಕರ್ಣಿ ತಿರುಮಲರಾಯರ ಸಂಪಾದಕತ್ವದಲ್ಲಿ ಹೊರಡುವ "ಮನೋರಂಜನ ಗ್ರಂಥಮಾಲೆಯ ಪುಷ್ಪವು"

ಕನ್ನಡ ಸಾಹಿತ್ಯದಬಗ್ಗೆ ಸಂಪಾದಕರ "ಹೃದಯ ಸಂವೇದನೆ" ಯು ಲೋಕದ ಜನಗಳಲ್ಲಿ ಜಾಗೃತಿಗೊಳಿಸುವದಾಗಿದೆ. "ಆನಂದ ತುಷಾರ"ದಂತಹ ವಿನೋದಪರವಾದ ಚಿಕ್ಕ ಹೊತ್ತಿಗೆಗಳನ್ನು ಬರೆದು ತದ್ವಿಷಯಕ್ಕೆ ಕನ್ನಡ ಸಾಹಿತ್ಯದಲ್ಲಿಷ್ಟ ಕೊರತೆಯನ್ನು ಹಿಂಗಿಸುವದಕ್ಕೆ ಲೇಖಕರು ಹೆಣಗಿದ್ದಾರೆ. ಪಂಡಿತಪಾಮರರಿಗೀರ್ವರಿಗೂ ಉಚಿತವಾದ ಸಾಹಿತ್ಯವನ್ನು ಒದಗಿಸಿಕೊಡುವದೇ ಗ್ರಂಥಮಾಲೆಯ ಧ್ಯೇಯವಾಗಿದೆ. ಕನ್ನಡಿಗರೆಲ್ಲಾ ಪ್ರೋತ್ಸಾಹಿಸಬೇಕು.

ಬಾಲೇಹೊಸೂರ ರಾಮರಾಯರು,
ವಿಮರ್ಶಕಾರರು.

# ಬ ಸ ವ ರಾ ಜ .

ಶ್ರೀ ಬಸವಾದಿ ಪ್ರಮುಖರ ತತ್ವವನ್ನು ಮುಂಡಿಸಿ ದೇಶೋದ್ಧಾರ, ಭಾಷಾಭಿವೃದ್ಧಿ, ಸಮಾಜ ಸುಧಾರಣೆಯಾಗಬೇಕೆಂಬುವದೇ ಬಸವರಾಜ ಪತ್ರದ ಗುರಿ. ಪ್ರತಿಸೋಮವಾರ ಹಾವೇರಿಯಲ್ಲಿ ಪ್ರಕಟವಾಗುವದು. ವಾ. ಚ. ೨ ರೂ.

ಮ್ಯಾನೇಜರ— ಬಸವರಾಜ ಹಾವೇರಿ.

ಸಂಪಾದಕರು-ವೀರಶೈವ ಚಂದ್ರಿಕೆ
ವಿಮರ್ಶಕಾರರು.

# ಶ್ರೀ ದತ್ತಾತ್ರೇಯ ಗ್ರಂಥಮಾಲಾ.

ಶಿರ್ವ-ಉಡಿಪಿ. ವಾ. ಚ. ೨-೪-೦

ಈ ಮಾಲೆಯು ಪ್ರತಿ ತಿಂಗಳಲ್ಲಿ ಒಂದು ಪುಷ್ಪವನ್ನು ಅರಳಿಸುವದು. ಇದರ ಸತಿ ಸೀಹಲಾ, ವೀರಬಾದಳ ಈ ಎರಡೂ ಪುಷ್ಪಗಳು ಕೈಸೇರಿವೆ. ಓದಲು ಹಿಡಿದ ಮೇಲೆ ಬಿಡುವದೇ ಆಗುವದಿಲ್ಲ. ಕನ್ನಡ ಸೇವೆಗೈವ ಈ ಮಹನೀಯರ ಕಾರ್ಯವು ಸ್ತುತ್ಯವಾಗಿದೆ. ಕನ್ನಡಾಭಿಮಾನಿಗಳು ಸರ್ವರೂ ಅಗತ್ಯವಾಗಿ ಸಹಾಯವನ್ನೀಯಲು ಮೊದಲುಮಾಡಬೇಕು.

ಸಂಪಾದಕರು-ವೀರಶೈವ ಚಂದ್ರಿಕೆ
ವಿಮರ್ಶಕಾರರು.

# ಶಿರಹಟ್ಟಿ ತಾಲೂಕಿನ ಯಾವತ್ತೂ ಗ್ರಾಮಗಳ ಪಾಟೀಲ ಕುಲಕರ್ಣಿಯವರಲ್ಲಿ ವಿನಂತಿ—

ನಮ್ಮ ತಾಲೂಕು ಕನ್ನಡದ್ದು. ರಾಜಭಾಷೆಯು ಮಹಾರಾಷ್ಟ್ರದ್ದು. ಕನ್ನಡ ಭಾಷೆಗೆ ಹೆಚ್ಚು ಪ್ರಾಶಸ್ತ್ಯ ಇಲ್ಲದಾದುದರಿಂದ ಜನಗಳಲ್ಲಿ ಕನ್ನಡ ವಾಚನಾಭಿರುಚಿಯು ಹುಟ್ಟುವಂತೆ ನಾವು "ವೀರಶೈವ ಚಂದ್ರಿಕೆ" ಎಂಬ ಮಾಸಿಕ ಪತ್ರಿಕೆಯೊಂದನ್ನು ಪ್ರತಿ ಪೌರ್ಣಿಮೆಗೆ ಹೊರಡಿಸಿರುವೆವು. ಈ ಚಂದ್ರಿಕೆಯು ಹೊರಟು ೭—೮ ತಿಂಗಳುಗಳು ಗತಿಸಿದವು.

ಕನ್ನಡ ಸೇವೆ ಗೈಯುವ ನಾವು ಹೊರಡಿಸುವ ಚಂದ್ರಿಕೆಯ ವಿಷಯವು ತಮಗೆ ಈ ಮೊದಲೇ ವಿದಿತವಾಗಿರಬಹುದು. ಆ ಕಾರ್ಯಕ್ಕೆ ಅನೇಕಪ್ರಕಾರದ ಖರ್ಚು ನಮಗಿದೆ. ಅದೆಲ್ಲವನ್ನೂ ನೀಗಿಸುವ ಶಕ್ತಿಯು ಇನ್ನೂ ಚಂದ್ರಿಕೆಯ ಮಂಡಲಕ್ಕೆ ಬಂದಿಲ್ಲ. ಆದ್ದರಿಂದ ನಮ್ಮ ಈ ಕಾರ್ಯಕ್ಕೆ ತಮ್ಮಿಂದಾದಷ್ಟು ತಾವುಗಳು ಸಹಾಯಮಾಡಬೇಕಾಗಿ ವಿನಂತಿ. ಅಂದರೆ ಚಂದ್ರಿಕೆಯ ವರ್ಗಣೀದಾರರನ್ನು ದೊರೆಯಿಸಿ ಕೊಡುವದು. ತಮ್ಮ ಸಹಾಕಾರ್ಯದ ಪ್ರತಿಫಲವನ್ನು ಕೊಡುವದಕ್ಕೆ ನಮ್ಮಿಂಥ ಸಾಧ್ಯವಿಲ್ಲದಿದ್ದರೂ ಏನೋ ಕೃತಜ್ಞತೆಯನ್ನು ವ್ಯಕ್ತಪಡಿಸುವದಕ್ಕಾಗಿ, ತಮ್ಮುಗಳಿಗೆ ಚಂದ್ರಿಕೆಯನ್ನು ಪ್ರತಿ ತಿಂಗಳಿಗೆ ಮೋಫತ ಕಳಿಸುವೆವು. ನಮ್ಮ ಈ ಅಲ್ಪ ಸೇವೆಯನ್ನು ಸ್ವೀಕರಿಸಿ ಚಂದ್ರಿಕೆಯ ಅಭ್ಯುದಯಕ್ಕಾಗಿ ಸಹಾಯವನ್ನು ಮಾಡಬೇಕು.

ಶಿರಹಟ್ಟಿಯು ತಾಲೂಕಿನ ಸ್ಥಳವಾದ್ದರಿಂದ ಯಾವತ್ತೂ ಪಾಟೀಲ ಕುಲಕರ್ಣಿಯವರು ಸರಕಾರಿ ಕೆಲಸದ ಬಗ್ಗೆ ಮೇಲಿಂದ ಮೇಲೆ ಇಲ್ಲಿಗೆ ಬರಬೇಕಾಗುವದು. ಇಲ್ಲಿಗೆ ಬಂದರೆ ನಿಮಗೆ ಕೆಲವು ಅನಾನುಕೂಲತೆಗಳು ಇರುವವು. ಅವುಗಳನ್ನು ದೂರಮಾಡುವದಕ್ಕಾಗಿ ಯೋಚಿಸಿದ್ದೇವೆ.

ತಾವುಗಳು ಇಲ್ಲಿಗೆ ಬಂದಾಗ್ಗೆ ಚಂದ್ರಿಕೆಯ ಆಫೀಸಿನಲ್ಲಿ ಇಳಿದುಕೊಳ್ಳಲಿಕ್ಕೆ ಸ್ಥಳಮಾಡಿಯದೆ. ಹಾಗೂ ರಾತ್ರಿಯಲ್ಲಿ ತಮ್ಮ ದಫ್ತರ ಕೆಲಸಕ್ಕೆ ದೀಪದ ವ್ಯವಸ್ಥೆಯನ್ನು ಮಾಡಲಾಗಿದೆ. ಎಷ್ಟು ದಿವಸವಿದ್ದರೂ ಆಫೀಸಿನಲ್ಲಿಳಿದುಕೊಂಡು ಸರಕಾರೀ ಕೆಲಸಗಳನ್ನು ತೀರಿಸಿಕೊಂಡು ಹೋಗಬೇಕು. ಹಾಗೂ ಆಫೀಸಿನ ನಿಯಮದಂತೆ ನಡೆದುಕೊಳ್ಳಬೇಕು. ಆಫೀಸು ಮಧ್ಯಬಾಜಾರದಲ್ಲಿದ್ದ ಶ್ರೀ. ಶಿವಲಿಂಗಪ್ಪಾ ಸಂಕದಾಳ ಇವರ ಅಟ್ಟದಮೇಲೆ ಇರುವದು. ಹೋಗಲಿಕ್ಕೂ ಬರಲಿಕ್ಕೂ ಯಾವಪ್ರಕಾರದ ತೊಂದರೆ ಇರುವದಿಲ್ಲ. ಆದ್ದರಿಂದ ಯಾವತ್ತೂ ಪಾಟೀಲ-ಕುಲಕರ್ಣಿಯವರು ಇತ್ತಕಡೆಗೆ ಗಮನಿಸತಕ್ಕದ್ದು.

ಒಮ್ಮೆಯಾದರೂ ಬಂದು ಅನುಭವ ತೆಗೆದುಕೊಂಡು ನೋಡಿರಿ!

ಆಲೂರ ಮುರಿಗೇಂದ್ರ ಶೆಟ್ಟರು,
ವ್ಯವಸ್ಥಾಪಕರು.

# ಮಹಾಜನಗಳಲ್ಲಿ ವಿನಂತಿ.

ಕನ್ನಡ ತಾಯಿಯ ಸೇವೆಗಾಗಿ ಹೊರಡಿಸುವ ಚಂದ್ರಿಕೆಯಂತೂ ಸರಿಯೆ. ಈ ಚಂದ್ರಿಕೆಯ ಮಂಡಲಕ್ಕೆ ಜೋಡಿಸಿ ಜನರಿಗೆ ವಾಚನಾಭಿರುಚಿ ಹೆಚ್ಚುವಂತೆ ವಾಚನಾಲಯವೊಂದನ್ನು ಸ್ಥಾಪಿಸಲಾಗಿದೆ. ವಾಚನಾಲಯದಲ್ಲಿ ಶೇಖರಿಸಲು ಕೆಳಗಿನ ಸದ್ಗೃಹಸ್ಥರು ತಮ್ಮಲ್ಲಿನ ಪುಸ್ತಕಗಳನ್ನು ದಯಪಾಲಿಸಿರುವರು. ವಾಚನಾಲಯಕ್ಕೂ ನಮ್ಮ ಚಂದ್ರಿಕೆಯ ಕಾರ್ಯಕ್ಕೂ ಕೆಲವು ಉದಾರ ಮಹನೀಯರು ಹಣದ ಸಹಾಯ ಮಾಡುವದಕ್ಕಾಗಿ ಅಭಿವಚನವನ್ನಿತ್ತಿರುವರು. ಆಯಾ ಮಹನೀಯರಿಂದ ಸಹಾಯವಾದಾಗ ಅವರ ಹೆಸರುಗಳನ್ನು ಪ್ರಸಿದ್ಧ ಮಾಡುವೆವು. ಆದ್ದರಿಂದ ಸರ್ವ ಕನ್ನಡಾಭಿಮಾನಿಗಳು ತಮ್ಮಲ್ಲಿನ ಹಳೇ ಗ್ರಂಥಗಳನ್ನು ವಾಚನಾಲಯಕ್ಕೆ ಕೊಡುವದಲ್ಲದೆ ಹಣದ ಸಹಾಯವನ್ನೂ ಮಾಡಬೇಕಾಗಿ ವಿನಂತಿಸುವೆವು.

ಪುಸ್ತಕಗಳನ್ನು ದಯಪಾಲಿಸಿದ ಮಹನೀಯರು:—

ಶ್ರೀ. ಅಶ್ವಥರಾವ ಮಹಿಷಿ ವಕೀಲರು ಶಿರಹಟ್ಟಿ,
" ಕೃಷ್ಣರಾವ ಕುಲಕರ್ಣಿ "
" ರಾಮರಾವ ಬಾಲೇಹೊಸೂರ "
" ಶಿವಲಿಂಗಪ್ಪನವರು ಸಂಕದಾಳ "
" ವ್ಯಾಪಾರಿ ಮಂಡಳವು "

ಈ ಮಹನೀಯರುಗಳಿಗೆ ನಾವು ತುಂಬಾ ಉಪಕೃತರಾಗಿದ್ದೇವೆ. ವಾಚನಾಲಯವು ಮುಂಜಾನೆ ೯ ಘಂಟೆಯಿಂದ ಸಂಜೆ ೫ ಘಂಟೆಯ ವರೆಗೆ ತೆರೆದಿಡಲ್ಪಡುವದು. ಮೋಫತ ವಾಚನಾಲಯವಿರುವದರಿಂದ ಯಾವತ್ತರೂ ವಾಚನಾಲಯದ ಲಾಭ ಪಡಿಯಬೇಕು.

ಹು. ರಾ. ಅಗ್ನಿಹೋತ್ರಿ,
ಆಡಳಿತೆಗಾರರು.

ಆಲೂರ ಮುರಿಗೇಂದ್ರ ಶೆಟ್ಟರು,
ವ್ಯವಸ್ಥಾಪಕರು.

# ವಿಕಟಮಾವ



ವಿಕಟವಿನೋದಿನಿಯರ ಮಾವನು ಹೊಳೆನರಸೀಪೂರದಲ್ಲಿ (ಮೈಸೂರು) ಜನ್ಮವೆತ್ತಿ
ಕಳೆದ ಸಪ್ಟಂಬರ ೧೫ನೇ ತಾರೀಖಿಗೆ ಪ್ರಕಟವಾಗಿರುವನು. ಹಾಸ್ಯರಸಪರಿಪ್ಲುತವಾದ ಲೇಖನಪ್ರಕ
ಟಗೊಳಿಸಿ ಜನರ ಮನಸ್ಸನ್ನು ಅಲ್ಹಾದಗೊಳಿಸುವನು. ಅಲ್ಲದೆ ಅನೇಕ ವ್ಯಂಗಚಿತ್ರಗಳನ್ನು ಹಾಕಿ ಅದಕ್ಕೆ
ಮಾವನು ಸರಿಯಾಗಿ ಕತೆ-ಮಾತುಗಳನ್ನು ಜೋಡಿಸುವನು. ಅದರಿಂದ ಓದಲು ಹಿಡಿದಮೇಲೆ ಬಿಡದಿರು
ವ ಈ ಮಾವನನ್ನು ಸರ್ವರೂ ಒಮ್ಮೆಯಾದರೂ ಕಾಣಬೇಕೆಂದು ನಮ್ಮ ವಿನಂತಿಯು. ಈ ಮಾವ
ನಿಗೆ ಖರ್ಚು ಸಹ ಹೆಚ್ಚಿಲ್ಲ. ಒಂದೇ ಒಂದು ರೂಪಾಯಿ ಕೊಟ್ಟು ಬಿಟ್ಟರೆ ಸಾಕು. ತಾನಾಗಿ ನಮ್ಮ ಮನೆ
ಗೆ ಬರುವನು. ಒಮ್ಮೆ ಕಂಡರೆ ಸಾಕು. ಬಿಡುವದಾಗುವದೇ ಇಲ್ಲ. ಆದ್ದರಿಂದ ಸರ್ವ ಮಹನೀಯರು ಬೇಗ

**ಚಂದಾದಾರರಾಗಿ ಪ್ರೋತ್ಸಾಹಿಸಿರಿ.**

ಸಂಪಾದಕರು,
ವೀರಶೈವ ಚಂದ್ರಿಕೆ ಶಿರಹಟ್ಟಿ

---

## ೨೦ನೇ ಸಾಹಿತ್ಯ ಸಮ್ಮೇಲನ ರಾಯಚೂರ.

ಈಸಲದ ಸಾಹಿತ್ಯ ಸಮ್ಮೇಲನವು ರಾಯಚೂರಿನಲ್ಲಿ ನಡೆಯುತಕ್ಕದ್ದಿದೆ. ಹುಬ್ಬಳ್ಳಿಯಿಂದ ( ಗದಗ, ಬಳ್ಳಾರಿ, ಗುಂತಕಲ್ಲು ಮಾರ್ಗವಾಗಿ ) ರಾಯಚೂರಿಗೆ ರೇಲ್ವೆ ಖರ್ಚು ೪—೧೦—೦ ರೂ. ಅದೆ. ಈ ದರದಮೇಲೆ ರೇಲ್ವೆದವರಿಂದ ಖ್ರಿಸಮಸ್ ರಿಯಾಯಿತಿ ದೊರೆಯುತ್ತದೆಂಬದನ್ನು ಗಮನಿಸಬೇಕು. ಕನ್ನಡಾಭಿಮಾನಿಗಳು ಅವಶ್ಯವಾಗಿ ಈ ಸುಸಂಧಿಯ ಲಾಭ ಪಡೆಯಬೇಕು.

—ಸಂಪಾದಕರು.

# ವೀರಶೈವ ಚಂದ್ರಿಕೆ ಆಫೀಸ ಶಿರಹಟ್ಟಿ.

## ಚಂದ್ರಿಕೆಯ ವಾಚನಾಲಯಕ್ಕೆ ವಿನಿಮಯವಾಗಿ ಬರುವ ಮಾಸಿಕ ಪತ್ರಿಕೆಗಳು-ವಾರಪತ್ರಗಳು-

| | | | |
|---|---|---|---|
| ೧ | ಸದ್ಬೋಧ ಚಂದ್ರಿಕೆ | ಅಗಡಿ-ಆನಂದವನ | ೩—೦—೦ |
| ೨ | ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆ | ಹಾರ್ಡಿಂಜರೋಡ ಬೆಂಗಳೂರು | ೪—೦—೦ |
| ೩ | ಬಡವರ ಬಂಧು | ಹಂಪನಕಟ್ಟೆ ಮಂಗಳೂರು | ೧—೪—೦ |
| ೪ | ವಿಶ್ವಭಾರತಿ | ಬೆಂಗಳೂರು ಸಿಟಿ | ೩—೮—೦ |
| ೫ | ಕಥೆಗಾರ | ,, | ೧—೪—೦ |
| ೬ | ಭಾರತಿ | ಮೂಲ್ಕಿ ದ. ಕ. | ೨—೦—೦ |
| ೭ | ಕಥಾಕುಂಜ | ಮಾರುತಿ ಓಣಿ ಬೆಳಗಾವಿ | ೨—೪—೦ |
| ೮ | ಶಿಕ್ಷಕ ಬಂಧು | ಹುಬ್ಬಳ್ಳಿ | ೨—೦—೦ |
| ೯ | ಕಲಾಚಂದ್ರ | ಕಾರ್ಕಳ ದ. ಕ. | ೧—೪—೦ |
| ೧೦ | ಕರ್ನಾಟಕ ಬಂಧು | ಮುಂಬಯಿ ನಂ. ೪ | ೧—೮—೦ |
| ೧೧ | ವಿಕಟವಿನೋದಿನಿ | ಬೆಂಗಳೂರು ಸಿಟಿ | ೧—೫—೦ |
| ೧೨ | ಶ್ರೀ ದತ್ತಾತ್ರಯ ಗಂಥ-ಮಾಲಾ | ಶೀರ್ವ-ಉಡಪಿ ದ. ಕಾ. | ೨—೪—೦ |
| ೧೩ | ಸ್ವದೇಶೀ ಪ್ರಚಾರಕ | ಮಂಗಳೂರು ದ. ಕ. | ೧—೪—೦ |
| ೧೪ | ವಿಕಟಮಾವ | ಹೊಳೆನರಸೀಪುರ ಹಾಸನಡಿ | ೧—೦—೦ |

## ವಾರಪತ್ರಿಕೆಗಳು—

| | | | |
|---|---|---|---|
| ೧ | ಅರಣೋದಯ | ಬೆಳಗಾವಿ | ೧—೮—೦ |
| ೨ | ರಾಜಹಂಸ | ಧಾರವಾಡ | ೧—೮—೦ |
| ೩ | ಬಸವರಾಜ | ಹಾವೇರಿ | ೧—೮—೦ |



R. NO. B. 3350 VEERSHAIVA CHENDRIKE.

# ಸರಸ್ವತಿಯ ವಿಶೇಷಾಂಕವು.

ಬೆಲೆ ೮ ಆಣೆ ವ್ಹಿ-ಪಿ- ೧೨ ಆಣೆ

## ೧೯೩೫ನೆಯ ವರ್ಷದ ಪ್ರಾರಂಭದಲ್ಲಿ ಪ್ರಕಟವಾಗುವದು,

ಸಾಹಿತ್ಯ-ಲಲಿತ ಕಲೆ-ಸಮಾಜ ಸುಧಾರಣೆ-ಶಿಸು ಶಿಕ್ಷಣ-ಕೈಗಾರಿಕೆ ಮೊದಲಾದ ವಿಷಯಗಳಿಗೆ ಸಂಬಂಧಪಟ್ಟ ಲೇಖನಗಳೂ; ಕತೆಗಳೂ, ಪ್ರಬಂಧಗಳೂ, ಸಣ್ಣ ಕತೆಗಳೂ, ಏಕಾಂಕ ನಾಟಕಗಳೂ ಕರ್ನಾಟಕ ಸುಪ್ರಸಿದ್ಧ ಲೇಖಕ-ಲೇಖಕಿಯರಿಂದ ಬರೆಯಲ್ಪಟ್ಟು ಪ್ರಕಟಿಸಲ್ಪಡುವದಲ್ಲದೆ, ಭರತಖಂಡದಲ್ಲಿ ಪ್ರಖ್ಯಾತಿ ಹೊಂದಿದ ಭಾರತ ರಮಣಿಯರ ಚಿತ್ರಗಳಿಂದ ಕೂಡಿದ ವಿಶೇಷ ಸಂಚಿಕೆಯನ್ನು ಸರ್ವಾದರಣೀಯವಾಗಿ ಪ್ರಕಟಿಸಲಿರುವೆವು.

೧೯೩೫ ನೇ ವರ್ಷದಿಂದ ಸರಸ್ವತಿಯ ಚಂದಾದಾರರಾಗತಕ್ಕವರಿಗೆ ಉಚಿತ.

## ವ್ಯಾಪಾರಸ್ಥರಿಗೆ ಅಪೂರ್ವ ಸಂಧಿ.

ಅಖಿಲ ಕರ್ನಾಟಕದಲ್ಲಿ ಪ್ರಚಾರದಲ್ಲಿರುವ ಸರಸ್ವತಿಯ ವಿಶೇಷಾಂಕಿನಲ್ಲಿ ಪ್ರಕಟನೆಗಳನ್ನು ಕೊಡಿರಿ. ದರ ಅತಿ ಸುಲಭ! ಜಾಗ್ರತೆ ಬರೆಯಿರಿ !!

ಪ್ರಕಟನೆಯ ದರಗಳು—

ಒಂದು ಪುಟಕ್ಕೆ ೧೮ ರೂಪಾಯಿ. ಅರ್ಧ ಪುಟಕ್ಕೆ ೧೦ ರೂಪಾಯಿ.

ಕಾಲುಪುಟಕ್ಕೆ ೫ ರೂಪಾಯಿ.

ಜಾಹೀರಾತಿನೊಡನೆ ಹಣವನ್ನು ಮುಂಗಡವಾಗಿ ಕಳುಹಿಸಬೇಕು. ಹೆಚ್ಚಿನ ವಿವರಗಳಿಗೆ ಈ ಕೆಳಗಿನ ವಿಳಾಸಕ್ಕೆ ಬರೆಯಿರಿ.

ವ್ಯವಸ್ಥಾಪಕರು— ಸರಸ್ವತಿ
ಚಾಮರಾಜಪೇಟೆ-ಬೆಂಗಳೂರು ಸಿಟಿ.

ಇದನ್ನು ಗದಗ-ರಸಿಕರಂಜನಿ ಮುದ್ರಣಾಲಯದಲ್ಲಿ ಮುದ್ರಿಸಿ, ಗದಗ ತಾ|| ಸೊರಟೂರ (ಪೋ. ಶಿರಹಟ್ಟಿ) ಹಾಗು ಶಿರಹಟ್ಟಿ ವೀರಶೈವ ಚಂದ್ರಿಕೆಯ ಆಫೀಸಿನಲ್ಲಿ ಪ್ರಸಿದ್ಧಪಡಿಸಿತು.

ವಾರ್ಷಿಕ ಚಂದಾ ೧-೮-೦, ಅಂಚೇ ವೆಚ್ಚ ಸೇರಿ ೧-೧೧-೦.
ಬಿಡಿ ಸಂಚಿಕೆ ೦-೩-೦.

ಶಿರಹಟ್ಟಿ.

ಶ್ರೀ ಫಕ್ಕೀರೇಶ್ವರ ಸ್ವಾಮಿಗಳ ಕೃಪಾಛತ್ರದಲ್ಲಿ ನಡೆದ,

ಶ್ರೀ

# ವೀರಶೈವ ಚಂದ್ರಿಕೆ.

ನೈತಿಕ, ಸಾಮಾಜಿಕ, ಧಾರ್ಮಿಕ ವಿಷಯಗಳಿಂದೊಡಗೂಡಿದ
ತಿಳಿಗನ್ನಡ ಮಾಸಪತ್ರಿಕೆ.

ಹುಟ್ಟು : ಶಕೆ ೧೮೫೭. ಶ್ರೀ ಬಸವ ಜಯಂತಿ.

| ಸಂಪುಟ | ಬನದ ಹುಣ್ಣಿವೆ. | ಸಂಚಿಕೆ |
|---|---|---|
| ೧. | ೧೯ — ೧ — ೧೯೩೬. | ೯. |

**ಕಂದ**

ತನ್ನಯನಾಡ-ನುಡಿಗ ।
ಉನ್ನತಿಯಂ ಮಾಳ್ಪಕಜ್ಜ ಕಿನ್ನೆಣೆಯುಂಟೇ ॥
ಕನ್ನಡದೇಳ್ಗೆಯ ಬಗೆಯಂ ।
ಕನ್ನಡಿಗರ್ ತಿಳಿದುಕೊಡಲಿದಕ್ಕಾಶ್ರಯ
ಮುಂ ॥೧॥

**ಕಂದ**

ಬಂದವರಂಬರಿಸದಿಹಂ ।
ಸಂದವರಂಸಂತವಿಸದನಹ ತಾಯ್ನುಡಿಯಂ ॥
ವಂದಿಸದಿರುವಂ ಮನುಜನೊ! ।
ವಂಧ್ಯನೊ! ಕಾಣಿಳೆಗೆ ಪುಟ್ಟಿ ಫಲವೆನಿಸಿಹ
ನೋ! ॥೨॥

ಕವಿ– ವಾಜಪೇಯ ಶಿವಾನಂದಾರ್ಯರು.

ಮನುಷ್ಯನು ಸಂತತಿ ಜೀವಿಯು. ಮಿಕ್ಕ ಪ್ರಾಣಿಗಳು ತಮ್ಮ ಮತ್ತು ತಮ್ಮ ಮರಿಗಳ ಬಾಳೊಂದನ್ನೆ ಲಕ್ಷಿಸುವವು. ಮನುಷ್ಯನು ತನ್ನ ಹಿಂದು ಮುಂದಿನ ಹಿರಿಯರನ್ನೂ ಪೀಳಿಗೆಗಳನ್ನೂ ಲಕ್ಷಿಸುವನು. ಹಿಂದಿನ ಸಂತತಿಯ ಅನುಭವವು ಇಂದಿನ ಜನತೆಯ ದಾರಿ ದೀವಟಿಗೆಯು. ಇಂದಿನವರ ಕೃತಾಕೃತಗಳು ಮುಂದಿನವರ ಬಾಳುವೆಯ ಬೀಜಬುತ್ತಿಯು. ಮಾನವನ ಜ್ಞಾನಕೋಶವೆಂದರೆ ಭಾಷೆಯು. ಇದಿನಿತಲ್ಲ. ತನ್ನ ಭಾವದ ಹಂಬಲವನ್ನು ತನಗೆ ಬಿಚ್ಚಿಡುವುದು ಭಾಷೆಯು. ಭಾಷೆಯಿಲ್ಲದೆ ಮನವಿಲ್ಲ. ಮನಸವಿಲ್ಲದೆ ಕೃತಿಯಿಲ್ಲ. ಕೃತಿಯಿಲ್ಲದೆ ಸಂಸ್ಕೃತಿಯಿಲ್ಲ. ಭಾಷೆಯಿಂದಲೆ ಸಂಸ್ಕೃತಿ ವಿಚಾರಗಳು ತಲೆದೋರುವುದರಿಂದ ಭಾಷೆಯು ಸಂಸ್ಕೃತಿಯ ಕಾರಣವು.

ಶ್ರೀ. ಪಾವಟೆ ಸಿದ್ಧರಾಮಪ್ಪನವರು,
ಸ್ವಾಗತಿಕ ಪುರೋಗಮರು
೧೯ನೇ ಅಖಿಲ ಕ. ಸಾ. ಸ. ಹುಬ್ಬಳ್ಳಿ,

ಸಂಪಾದಕರು ಹಾಗು ಪ್ರಕಾಶಕರು,
ಆಲೂರ ಮುರಿಗೇಂದ್ರ ಶೆಟ್ಟರು.

ಬಾಲಸುಧಾ ೪ ಔನ್ಸಿನ ಬಾಟ್ಲಿಗೆ ೦-೭-೦, ೮ ಔನ್ಸಿನ ಬಾ. ೧-೧೨-೦.




ವಾಸಕ ೪ ಔನ್ಸಿನ ಬಾಟ್ಲಿ ಕಿಂಮತ್ತು ೦-೬-೦.

## — ಬಾಲಸುಧಾ —

ಚಿಕ್ಕ ಮಕ್ಕಳ ಹೊಟ್ಟೆ ದೊಡ್ಡದಾಗುವದು, ಅಜೀರ್ಣದಿಂದ ಹೊಟ್ಟೆ ಉಬ್ಬುವದು, ಝಾಡಿಸುವದು, ಹೊಟ್ಟೆನೋವು, ಮಲಬದ್ಧತೆ ಮುಂತಾದ ಅಪಚನದ ವಿಕಾರಗಳು, ಮುಟ್ಟ ದೋಷಗಳು. ರಿಕೆಟ್ಸ ಕೆಮ್ಮು, ನೆಗಡಿ ಮುಂತಾದ ಕಫವಿಕಾರಗಳು, ಯಕೃದಭಿವೃದ್ಧಿ ಪ್ಲೀಹಾಭಿವೃದ್ಧಿ ಮುಂತಾದ ಭಯಂಕರ ರೋಗಗಳು ತೀವ್ರ ಕಡಿಮೆಯಾಗಿ ಚಿಕ್ಕ ಬಾಲಕರು ಸಶಕ್ತರೂ, ಪುಷ್ಟರೂ, ಸುಂದರರೂ ಆಗುವರು.

## — ವಾಸಕ —

ಈ ಔಷಧದಿಂದ ಕಫಕ್ಷಯ, ದಮ್ಮು, ಕೆಮ್ಮು, ನೆಗಡಿ, ಇನ್‌ಫ್ಲುಯೆಂಝಾ, ನ್ಯೂಮೋನಿಯಾ, ಸಣ್ಣ ಹುಡುಗರ ಪಕ್ಕೆ ಬಡಕೊಳ್ಳುವ ಭಯಂಕರ ರೋಗ (ಬ್ರಾಂಕೋನ್ಯೂಮೋನಿಯಾ) ಕೊಡಗಕೆಮ್ಮು. ಕಫಜ್ವರ, ಕಫ ಗಟ್ಟಿಯಾಗುವದು, (ತ್ರಿದೋಷಜ್ವರದಲ್ಲಿ) ಮುಂತಾದ ತ್ರಾಸದಾಯಕ ಭಯಂಕರ ರೋಗಗಳು ಖಾತ್ರಿಯಿಂದ ಗುಣ. ಬಹುದಿವಸ ದಮ್ಮಿನಿಂದ ಬಳಲುವ ಎಷ್ಟೋ ಜನರು ಇದನ್ನು ಉಪಯೋಗಿಸಿ ಸುಖಹೊಂದಿದ್ದಾರೆ.

**ಕರ್ನಾಟಕ ಆಯುರ್ವೇದಿಕ ಫಾರ್ಮಸಿ,**

**ಶಿರಹಟ್ಟಿ. ಜಿಲ್ಹಾ ಧಾರವಾಡ.**

ಕವಿಯಾಗತಕ್ಕವನಿಗೆ ಪದಸಂಪತ್ತಿಯೂ ಅರ್ಥಜ್ಞಾನವೂ ಅಗತ್ಯವಿರುವದಷ್ಟೇ. ಹಿಂದೆ ಶಬ್ದಕೋಶಗಳ ಸಂಖ್ಯೆ ಕಡಿಮೆಯಿದ್ದಾಗ ಇದ್ದ ಒಂದೆರಡು ನಾನಾರ್ಥ ರತ್ನಾಕರ, ಕೈಪಿಡಿ, ನಿಘಂಟುಗಳು ನೀರಸವಾಗಿದ್ದು ಕಂಠಪಾಠಕ್ಕೆ ಕಷ್ಟತರವಾದಾಗ, ಇಂದಿನ ಮುದ್ರ-ಣಾಲಯುಗಳ ಸುಲಭಾನುಕೂಲತೆಯೂ, ಸಹಾಯುವೂ ಇಲ್ಲದಿದ್ದಾಗ, ಗ್ರಂಥಕಾರರು ತಮ್ಮ ಜ್ಞಾಪಕ ಶಕ್ತಿಗೆ ಕೈ ನೆರವಾಗುವಂತೆಯೂ ಕಾವ್ಯಾಭ್ಯಾಸಿಯ ಪಾಠಕ್ಕೆ ಸುಲಭವಾಗುವಂತೆಯೂ ವಿಚಿತ್ರಾರ್ಥ ಗಳುಳ್ಳ ಒಗಟು–ಪದ್ಯಗಳನ್ನು ತಮ್ಮ ಗ್ರಂಥಗಳಲ್ಲಿ ತುಂಬಿರಬೇಕು.

# ಪದ್ಯಸೀಮೆ.

ಇದು ಹೊಸ ದೃಷ್ಟಿಗೆ ಅಸ್ವಾಭಾವಿಕವಾಗಿ, ಅನಾವಶ್ಯಕವೆಂದು ತೋರಿದುದರಿಂದ ಸಂಗ್ರಹಕಾರರು ಎತ್ತಲೂ ಕಾವ್ಯಗಳನ್ನು ಆಯ್ದು ಕೊಂಡು ಅವುಗಳಲ್ಲಿಯ ಅಸಭ್ಯ ಮತ್ತು ಕೃತಕಭಾಗಗಳನ್ನು ಬಹಿಷ್ಕ ರಿಸಿ ಪ್ರಸಿದ್ಧಿಗೆ ತಂದರು. ಆ ಕಾರಣ ಕನ್ನಡದಲ್ಲಿ ಬಹುಕಾಲದ ಹಿಂದಿನಿಂದ ಮುದ್ದಣಕವಿಯ ವರೆಗೆ ಸಾಂಪ್ರದಾಯಾನುಸಾರವಾಗಿ ಬಂದಿದ್ದ ಕೃತಕ ರೀತಿಯೊಂದು ಮಾಯವಾಗಿ, ಹೊಸ ಲೇಖಕ ರಲ್ಲಿಯೂ ವಾಚಕರಲ್ಲಿಯೂ ಒಂದು ಸಂಸ್ಕಾರವು ಉಂಟಾಗುತ್ತದೆ.

ಶ್ರೀ. ಪಂಜೇ ಮಂಗೇಶರಾಯರು

೨೦ನೇ ಕ. ಸಾ. ಸ. ಅಧ್ಯಕ್ಷರು.

ಸಿರಿಗನ್ನಡಂ ಗೆಲ್ಗೆ

# ವೀರಶೈವ ಚಂದ್ರಿಕೆ.

ಬಯಲುಮೂರ್ತಿಯಾಗಿಸಿಂದನೊಬ್ಬ ಶರಣ. ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ. ಆತನ ಶಾಂತಿಸೈರಣೆಯಿಂದ ಹುಟ್ಟಿದಾತ ವಿಷ್ಣು. ಆತನ ಕೋಪ ಕ್ರೋಧದಿಂದ ಹುಟ್ಟಿದಾತ ರುದ್ರ. ಈ ಮೂರು ಸೀಶವಂತಿರಲಿ. ಆ ಶರಣನನ ರಿದು ಶರಣೆನುತಿರ್ದೆನು ಕೂಡಲ ಸಂಗಮದೇವಾ. —ಶ್ರೀ ಬಸವೇಶ್ವರ.


| ಸಂಪುಟ ೧ | ಶ್ರೀಮನ್ನೃಪಶಾಲಿವಾಹನ ಶಕೆ ೧೮೫೬<br>ಬನದ ಹುಣ್ಣಿವೆ. | ಸಂಚಿಕೆ ೯ |
| --- | --- | --- |


## ಪ್ರಾರ್ಥನಾ ಪದ್ಯವು.

ಸಂಪಾದಿಸಿ ಕೊಟ್ಟವರು— ಶ್ರೀ. ನಾರಾಯಣರಾವ ಬಿಜಾಪೂರ ಶಿರಹಟ್ಟಿ

ರಾಗ|| ಸಾರಂಗ ತಾಳ ದಾದರಾ.

ಪಶುಪತಿಪರಿ ಪಾಹಿಸದಾ |
ಶಶಿಶಂಕರ ಗೌರಿವರಾ ||ಪಲ್ಲ||
ಕಾಲಕಾಲ ನೀಲಕಂಠ |
ಅನಿಲಮಯಲಲಾಟ ನೇತ್ರ ||
ಲಾಲಫಾಲಧರ ವಿಶಾಲ |
ಕೈಲಾಸವಿಲೋಲಾ ||೧||

# ಪ್ರಾರ್ಥನಾಪದ್ಯದ ನೋಟೇಶನ್.

ರಾಗ|| ಸಾರಂಗ ತಾಳ ದಾದರಾ ಮಾತ್ರಾ ೬

ಆರೋಹ
ಅವರೋಹ } ಸಾ ರಿ ಮ ಪ ನಿ ಸಾ–ಸಾ ನಿ ಪ ಮ ರಿ ಸಾ { ರೆ.ವಾ.ದಿ. ಪ. ಸಂ ವಾದಿನಿ ಅಲ್ಪ

ಅಸ್ತಾಯಿ

ಟೇಕಾ— ಧಾ ಗಿ ನ್ನಾ ಧಾ ತು ನ್ನಾ | ಧಾ ಗಿ ನ್ನಾ ಧಾ ತು ನ್ನಾ
× ೨ ೦ × ೨ ೦

ಪ ಶು ಪ ತಿ ಪ ರಿ | ಪಾ ಽ ಹಿ ಸ ದಾ ಽ |
ಪ ಮ ನಿ ಪ ಮ ರಿ | ಪ ಮ ರಿ ರಿ ಸಾ ಽ

ಶ ಶಿ ಶಂ ಕ ರ | ಗೌ ಽ ರಿ ವ ರಾ ಽ |
ನಿ ಸಾ ರಿ ಮ ಪ ನಿ | ಸಾ ರಿ ಸಾ ನಿ ಪ ಮ ||ಪಲ್ಲ||

ಅಂತರಾ

ಕಾ ಽ ಲ ಕಾ ಽ ಲ | ನೀ ಽ ಲ ಕಂ ಠ |
ಮ ಽ ಮ ಪ ನಿ ಪ | ನಿ ಽ ನಿ ಸಾ ಽ ಸಾ

ಅ ನಿ ಲ ಮ ಯ ಲ | ಲಾ ಽ ಟ ನೇ ಽ ತ್ರ
ಪ ನಿ ಸಾ ರಿ ಮ ರಿ | ಸಾ ರಿ ಸಾ ನಿ ಽ ಪ ||

ಲಾ ಽ ಲ ಫಾ ಽ ಲ | ಧ ರ ವಿ ಶಾ ಽ ಲ
ನಿ ಽ ಸಾ ರಿ ಮ ರಿ | ಸಾ ರಿ ಸಾ ನಿ ಽ ಪ |

ಕೈ ಽ ಲಾ ಽ ಸ ವಿ | ಲೋ ಽ ಽ ಽ ಲಾ ಽ
ನಿ ಽ ನಿ ಸಾ ನಿ ಸಾ | ಸಾ ರಿ ಸಾ ನಿ ಪ ಮ ||ಗ||

ಹಾರ್ಮೋನಿಯಂ ಕಲಿಯುವವರಿಗೆ ಬಹು ಸರಸವಾಗಿರುವದು. ಸಂಗೀತ ಪ್ರೇಮಾಭಿಲಾಷಿಗಳು ಈ ಅಲ್ಪ ಕೃತಿಯನ್ನು ಪರಿಗ್ರಹಿಸುವಿರಾಗಿ ನಂಬಿದ,

ತಮ್ಮ,

**ನಾರಾಯಣರಾವ ಬಿಜಾಪೂರ,**
ಹಾರ್ಮೋನಿಯಂ ಮಾಸ್ತರ ಶಿರಹಟ್ಟಿ

# ಎಂತಹ ಕಾಲವಿದು !

ಲೇಖಕ— ತಿರುಮಲಸುತ.

ಭಾಮಿನಿ ಷಟ್ಪದಿಗಳು.

(೧) ಬಾಲರಿಂಪಯು ಹೋದಜನರೆಂ ।
ಬೆಲ್ಲರಲಿ ಸಟಿಸಕಲಜಾತಿಕ ।
ಕಲ್ಲಿ ಸಲೆನೆಲೆಗೊಂಡಿರುವದೈ ಸತ್ಯವನುದೂಡಿ ॥
ಒಲ್ಲವರುಶಾಸ್ತ್ರಂಗಳನು ಸಹ ।
ಕ್ಷುಲ್ಲಕದ ಭಾವದಲಿ ನಡೆವರು ।
ಸಲ್ಲು ಸಲ್ಲಿಗೆ ತಪ್ಪಿ ನಡೆವೀ ಕಾಲವೆಂತಹದು ॥

(೨) ಅನುದಿನದಲಿ ನ್ಯಾಯಮೋಸಂ ।
ಗನೆಯು ಮೋಹದ ಬಲೆಗೆಬೀಳುತ ।
ಹೀನಕೃತಿಗಳಗೈದು ಹಾಳಾಗುತ್ತಲಿರುತಿಹರು ॥
ಜ್ಞಾನಿಗಳಮೇಣ್ ಮಾನಿನಿಯರನು ।
ಮಾನವಿಲ್ಲದೆ ತಾಪಗೊಳಿಸುತ ।
ಶ್ವಾನಗಿಂ ಕಡೆಯಾಗಿ ಮೆರವೀ ಕಾಲವೆಂತಹದು ॥

(೩) ಕೊಟ್ಟಸಾಲವ ನಿಟ್ಟವಸ್ತ್ರವ ।
ಥಟ್ಟನೇ ಕೊಡುವವರಕಾಣೆನು ।
ಧಿಟ್ಟರೆನಿಪರು ಲಜ್ಜೆಯಿಲ್ಲದೆ ಜಾರಕರ್ಮದಲಿ ॥
ಅಟ್ಟಹಾಸದಿ ತಂದೆ ತಾಯ್ಗಳ ।
ಶಿಟ್ಟನಿಂದಲಿ ದೂಷಿಸುತಮನ ।
ಮುಟ್ಟಕೊಂಡಾಡದಲೆ ಮೆರವೀ ಕಾಲವೆಂತಹದು ॥

(೪) ಸಾರವಿರದಾಹಾರ ಸೇವಿಸಿ ।
ಸೂರೆಗೊಳ್ಳುತ ಗಳಿಸಿಸಾಧನ ।
ಮೀರಿ ಆರೋಗ್ಯದ ನಿಯಮಗಳ ದೂರಮಾಡಿಹರು ॥
ಅರರೆ ದೇಹವ ಹಾನಿಗೊಳಿಸುವ ।
ಸುರೆಯು ಪಾನವಗೈದು ಲೋಕದಿ ।
ಹಿರಿದು ಕರ್ಮವ ಮಾಡಿ ಮೆರವೀ ಕಾಲವೆಂತಹದು ॥

(೫) ಸತತಪರವಧು ಪರಧನವಬಯ ।
ಸುತಲೆ ನರರು ದುರಾಶೆಯಿಂಡಲಿ ।
ಜಾತಿಕಲಹಂಗಳನು ಗೈದೇಕತ್ವತೊರೆದಿಹರು ॥
ಕೃತಕದಿಂ ಜನಸೇವೆಯನುಗೈ ।
ಯುತಲೆ ಮತ್ಸರಭಾವದಿಂದಲೆ ।
ಹತವೀರ್ಯರಾಗುತಲೆ ನಡೆದೀ ಕಾಲವೇಂತಹದು ॥

# ಜನಪದ ಸಾಹಿತ್ಯ:



## ಹಳ್ಳಿಯ ಹಾಡುಗಳು.

ಸಂಗ್ರಾಹಕರು :— "ತಿಮ್ಮಣ್ಣ"

ಅತ್ತಿಮನಿ ಸೊಸಿ ಹೊತ್ತೇರಿ ಬರುವಾಗ | ಸುತ್ತಗಟ್ಯಾವ ಗಿಳಿಹಿಂಡು |
ಸುತ್ತುಗಟ್ಯಾವ ಗಿಳಿಹಿಂಡು ನನಕಂದವ್ವನ | ಕೊಪ್ಪಿನ ಮುತ್ತು ಎಣಿಸ್ಯಾವ ||೧||
ಕಾಣದ ಇರಲಾರೆ ಕನ್ನಡಿಮುಕದವರನ್ನ | ಕಾಮನಕಿಂತ ಚಲುವಾರ |
ಕಾಮನಕಿಂತ ಚಲುವ ನನಶಂಕ್ರಣ್ಣನ | ಕಾಣದ ಅರಗಳಿಗೆ ಇರಲಾರೆ ||೨||
ಮಾತುಗಂಟಿನಸೊಸಿ ಮನಿಯಾಗ ಇದ್ದರ | ರೀತುಳ್ಳಮಾವ ಕರದಾನ |
ರೀತುಳ್ಳಮಾವ ಕರದಾನ ನನಮುಗಳಶೀಖವ್ವ | ಮಾತಿಗುತ್ತರ ಕೊಡಬಾರ ||೩||
ಎಂದಬರತಾನ ನನ್ನ ಎಡಗೈ ಹವಳಾವ | ಸಂದಕದನ್ನ ಸರಮುತ್ತ |
ಸಂದಕದನ್ನ ಸರಮುತ್ತ ನನಶಂಕ್ರಣ್ಣ | ಎಂದಬರತಾನ ನಿಜಹೇಳ ||೪||
ನಾಲೀಗೆ ವಜ್ರಬೇಕು ಗಿಳಿಗೆ ಪಂಜರಬೇಕು | ಸದರೀಗೆ ಬೇಕು ಸುಳಿಗಾಳಿ |
ಸದರೀಗೆ ಬೇಕು ಸುಳಿಗಾಳಿ ನಮರಾಯರ | ನದರಿರಬೇಕು ನನಮ್ಯಾಲ ||೫||
ಹೋಗಬಿಟ್ಟರಾಯರ ಹೋಲಿಕಿ ನೋಡೇನ | ಕಾಲಹಿಂಬಡ ಕಮಲವ |
ಕಾಲಹಿಂಬಡಕಮಲ ಸಂಜೀಲಿ ಬರುವ ಚಂದ್ರಾಮರಕಿಂತ ಚಲುವರ ||೬||
ನಾರಿಗೆ ರಾಯರು ಊರಿಗೆ ಹೋವರೆ | ಹೊತ್ತನಾವ್ಹ್ಯಾಂಗ ಕಳೆಯೋಣ |
ಹೊತ್ತ ನಾವ್ಹ್ಯಾಂಗ ಕಳಿಯೋಣ ಸಮುದ್ರಮುತ್ತ | ನಿಮ್ಮಗಲಿ ಹ್ಯಾಂಗ ಇರೋಣ ||೭||
ಇದುರಿಗೆ ಕಾಣುವದು ಇದುಯಾರಅಂಗಿ | ಹದಿನಾರು ಕಳಿಗೆ ಹರಳಚ್ಚಿ |
ಹದಿನಾರುಕಳಿಗೆ ಹರಳಚ್ಚಿ ನಮರಾಯರು | ತೊಡುವ ಮುದಿಅಂಗಿ ||೮||
ಹಸಿಯಗೋಡಿಯಮ್ಯಾಲ ಮುಸಿಯುಬರೆದವರ್ಯಾರ | ಹಸುಮಗಳಮ್ಯಾಲಸವತೀಯ
ಹಸುಮಗಳಮ್ಯಾಲ ಸವತೀಯ ತರಪೂದು | ಕುಶಿಯೇನೋ ನಿನ್ನಮನದಾಗ ||೯||
ಅಣ್ಣಬರತಾನಂತ ಅನ್ನಕೆಸರಿಟ್ಟಿ | ರನ್ನದ ಬಚ್ಚಲಕ ಮಣಿಹಾಕಿ |
ರನ್ನದ ಬಚ್ಚಲಕಮಣಿಹಾಕಿ ಕೇಳಿನ | ಸಣ್ಣಾಕಿ ಮ್ಯಾಲ ಸವತ್ಯಾಕೊ ||೧೦||
ಆಕಳದಂಥ ಅತ್ತಿ ಗೋಕುಲದಂಥ ಮಾವ | ಮಹಾಕೃಷ್ಣನೆಂಬ ಮಗಹುಟ್ಟಿ |
ಮಹಾಕೃಷ್ಣನೆಂಬ ಮಗಹುಟ್ಟಿದರ ಹಡದವ್ವ ಗೋಕುಲ ತವರಮರತೇನ ||೧೧||

# ಹದಿನಾರುಸೋಮವಾರಗಳ ಪದ್ಯಕಥೆ.

## ಶ್ರೀ ಶಿವವ್ರತ.

( ಶಿವಾನಂದ ದೀಕ್ಷಿತವಾಜಪೇಯವಿರಚಿತಂ )

(ಮುಂದೆ ಸಾಗಿದ್ದು.)

ಭಾ. ಷಟ್ಪದಿ.

( ಸಾಧುವು ಅರಸಿಯನ್ನರಸನಿಗಾಶೀರ್ವದಿಸಿಯೊಪ್ಪಿಸಿದ್ದು-ಅರಸನು ಸುಖದಿಂದ ರಾಜ್ಯವಾಳಿದ್ದು-ಪ್ರಜೆಗಳ ಸಂತೋಷ )

೪೬ ದೊರೆಯೆ ! ಪೊರೆದೆನು ಮಗಳನಾನೀ |
ವರೆಗೆ–ಪೊರೆವುದು ಮುಂದೆ ನೀನೆನು |
ತರಸಿಯನ್ನರಸಂಗೆ ಸಾಧುವು ಪರಸಿಯೊಪ್ಪಿಸಲು ||
ದೊರೆಯುತಿಗೆರಗಿ ರಥದಿ ರಾಣಿಯು |
ನಿರಿಸಿ ನಿಜಪುರವಾಂತು ಧರ್ಮದೆ |
ಧರೆಯನಾಳ್ದನು ಪ್ರಜೆಯು ಸುಖಿಸಿತು ಶ್ರೀಶದಯದಿಂದ ||

( ವ್ರತಮಾಹಾತ್ಮ್ಯವು-ಪೂರಕಕೃತಿಗಳು )

ಕಂದಪದ್ಯಂ

೪೭ ಇಂತೆಲ್ಲರ್ ಸದ್ವ್ರತಮಿದ |
ಶಾಂ ತಳೆದೆಸಗಿ ಮನದಿಷ್ಟಮುಂ ಪಡೆದುದರಿಂ ||
ದಾಂತಿಹ ಪೆಸರಿಂದಧಿಕಮ |
ದಂತೇನೊರೆದಪುದೊ ! ಈಶ ಮಹಿಮೆ ವಿಚಿತ್ರಂ ||

ವಚನಂ-ಅದುಕಾರಣಂ

೪೮ ಈಶನೆ ! ದೇವಂ ! ಕಾಯುವ |
ನೀಶನ ಸಂಸೇವೆಯಿಂದೆ ಜಗಮಿಹುದು ಸುಖಂ ||
ಭಾಸುರಗತಿಯುಮುದಕ್ಕುಂ |
ಶ್ರೀಸುರತರುವೊಲಿಯೆ ದೊರೆಯಲಾವುದಸಾಧ್ಯಂ ||

೪೯ ಬೆದುರನೆ ! ಮನುಜನೆ ! ಅನಿಶಂ ।
ಸದಾಶಿವನ ಮುದದೆ ಭಜಿಸು-ಯಜಿಸೋಲ್ದೈಸ್ವೈ ॥
ಪದೆದುರೆ ಧರ್ಮದೆ ನಡೆಯೈ |
ತ್ವದಿಷ್ಟಮಹುದರಿತು ನೋಡು ! ಕೆಡದಿರು ! ಕಾಣ್ಬೈ ! ॥

೫೦ ಈ ಕಥೆವೇಳ್ವಂ ಕೇಳ್ವಂ |
ಸೌಕರ್ಯದೆ ವ್ರತವಮಾಳ್ಪನಿರ್ದರೆ ಧನ್ಯಂ ॥
ಬೇಕಾದುದಾಂಪಲರುಹುವ |
ಲೋಕೇಷ್ಟದ ವರಪುರಾಣಕಥೆ ಮುಗಿದುದು ತಾಂ ॥

೫೧ ಶ್ರೀನತಸುರಲಲನಾಕಮ |
ಲಾನರರುಚಿಭರಪದಾಬ್ಜಯುಗೆ ಪಾರ್ವತಿ ! ಸಂ ॥
ಮಾನಿತೆ ! ಶಿವಸುಖಕರಿ ! ಕರು |
ಣಾನಿಧಿ ! ರಕ್ಷಿಪ್ಪುದಂಬೆ ! ಜಯುಗದಂಬೇ ! ॥

೫೨ ಶ್ರೀಧರ್ಮರೂಪನೀಜಗ |
ದಾಧಾರಂ ಶ್ರೀ-ಶುಭಕರಲಸದವತಾರಂ ॥
ಮಾದೇವನ ಕಾಂತಿಗೃಹಂ ।
ಮೋದದೆ ವೃಷಭೇಂದ್ರನೆಯ್ದೆ ಕರುಣಿಸುಗೆಮ್ಮಂ ॥

ವಚನಂ— ಇಂತು ಪರಾರ್ಥಮಂ ಬಗೆದು ಭವಭಂಜನನ ಭವನ ಬಹು ಭಕ್ತನೆನಿಪ ಶ್ರೀ ಲಕ್ಷ್ಮೇಶ್ವರ (ಪುಲಿಗೇರಿ) ಪುರನಿವಾಸದ - ವಾಜಪೇಯೋಪನಾಮಾಲಂಕೃತನಾದ-ಯಜ್ಞಸುತನಹ ಶಿವಾನಂದದೀಕ್ಷಿತನಿಂ ಶ್ರೀ-ಶ್ರೀಶರೊಲವಿನಿದು ವಿರಚಿತಮಾದುದು.



ಪ್ರಕೃತಿಯ ಅಸಾಧಾರಣವಾದ ಸೌಂದರ್ಯದ ಸೊಬಗನ್ನು ಕಾವ್ಯವೆಂಬ ನಿರುಪಮ ಲಾವಣ್ಯಕೋಮಲತೆಗಳಿಂದ ರಾರಾಜಿಸುವ ಪಾರಿಜಾತ ಪುಷ್ಪದಲ್ಲಿ ಸರಸತ್ವವೆಂಬ ಮಧುರ ರಸದೊಡನೆ ಕವಿಯು ಐಕ್ಯಗೊಳಿಸುವನು. ಆತನ ಪ್ರತಿಭಾಜ್ಞಾನ ಶಕ್ತಿಯನ್ನು ಪೂರ್ಣ ಚಂದ್ರನ ಪ್ರತಿಭೆಯಂತೆ ಪ್ರಸರಗೊಳಿಸುವ ರಸಜ್ಞರೂ ಮತ್ತು ಭಾವಜ್ಞರೂ ಅಮೌಲ್ಯವಾದ ಗ್ರಾಹಕಶಕ್ತಿಯಿಂದುಂಟಾದ ಕುಶಲತೆಯಿಂದ ಆ ಶ್ರೇಷ್ಠ ಪುಷ್ಪದಲ್ಲಿನ ಮಧುವನ್ನು ಸವಿದು ಸಂತೋಷ ಪಡುವರು.

# ಕಾವ್ಯ ಕುಂಜ.

ಕವಿಯು ತನ್ನ ಅಸಾಧಾರಣ ಬುದ್ಧಿ ಕಲ್ಪನಾಶಕ್ತಿಗಳಿಂದ ನೈಜಭಾವವನ್ನು ಬಹು ಚಮತ್ಕಾರದಿಂದ ವಿಶದಪಡಿಸುವನು. ಆ ಕಲ್ಪಿತ ವಿಷಯವನ್ನು ಗ್ರಹಿಸುವ ರಸಜ್ಞನು ಪರಮೋತ್ಸಾಹದಿಂದ ಅನ್ಯರಿಗೆ ತಿಳಿಯಪಡಿಸುವನು. ಭ್ರಮರಗಳು ಪುಷ್ಪಗಳಲ್ಲಿನ ಮಕರಂದವನ್ನು ಹೀರಿ ಮಧುವನ್ನು ಶೇಖರಿಸುವವು. ಆ ಮಧುವನ್ನು ಪಾನಮಾಡಲಿಚ್ಛಿಸುವವರು ಪ್ರಜ್ಞಾಯುತರಾದ ಪ್ರತಿಭೆಯುಳ್ಳವರಾಗಿರಬೇಕು.

ಶ್ರೀ. ದಯಾನಂದ ಶರ್ಮಾ ಅವರು
ತುಮಕೂರು.

# ಮನಸ್ಸು.

ಲೇಖಕ:— ಶ್ರೀ. ಗ. ಜೋಶಿ, ಸಂಪಾದಕ– "ವಿದ್ಯಾರಣ್ಯ" ನವಲಗುಂದ.

( ನವಲಗುಂದ ವಿದ್ಯಾರಣ್ಯ ಮಾಸಪತ್ರಿಕೆಯಿಂದ. )

ಮಮತೆಯ ಮನವೇ ! ನೀನತಿ ಮಂಗನೆಂದು ತಿಳಿದವರು ಹೇಳುವದನ್ನು ಕೇಳಿ ತಿಳಿದೆ. ನಿನ್ನ ಹುಡುಗತನವನ್ನೇನು ಹೇಳಲಿ ! ಆಡಿ ಬಂದು ಹಸಿವೆಯೆಂದು ಕಾಲಹೊಸೆದು ಅಳುವದನ್ನು ಕೇಳಿ ಕರುಳು ಕರಗಿದ ತಾಯಿಯು ತಿನಿಸಲಕ್ಕೆ ಹೋದಡೆ ಎಲ್ಲವನ್ನೂ ತಿನ್ನದೆ ಅಲ್ಲಿ ಅಷ್ಟು, ಇಲ್ಲಿ ಅಷ್ಟು ಒಗೆದು ಎಷ್ಟ-ಗೆಳೆಯರೊಡನೆ ಗಾಳಿಪಟ ಹಾರಿಸಿದೆ. ಹಾರದಿದ್ದರೆ ಹರಿದು ಒಗೆದು ಬಂದೆ. ಕಂಡಲ್ಲಿ ಬೋದು ತೆಗೆದು ಗುಂಡುವಾಡಿದೆ. ಅದೂ ಸಾಕಾಗದೆ ಸರಿಕರೊಡನೆ ಪ್ರೀತಿಯಿಂದ ನಡಿದೆ. ಒಡನೆ ಜಗಳಾಡಿ ಮನೆಯ ಕಡೆಗೆ ನಡೆದೆ. ಚಂಚಲವುನವೇ ! ಹಡೆದವರ ಮಾತಿನಂತೆ ನಡದೆ. ನಡೆಯದೆ ಹೊಡಿಸಿಕೊಂಡೆ. ಹೊಡೆದವರೊಡನೆ ಮತ್ತೆ ಕಡುಪ್ರೀತಿ ಮಾಡಿದೆ. ಕಂಡ ವಸ್ತುಗಳನ್ನು ಬೇಡಿದೆ. ಕೊಡದಿದ್ದರೆ ಹೆಡೆಯುಪ್ಪಳಿಸಿದೆ. ತಿಳಿಯದ ಎಳೆಮನವಲ್ಲವೇ !

ಮಿಂಚಿನ ಮನಸ್ಸೇ ! ನಿನ್ನ ಬಾಲ ಲೀಲೆಗೆ ಬದಲಾಗಿ ಯೌವನದ ಸೊಬಗು ನಿನ್ನನ್ನೇ ಸೇರಿತು. ಕಣ್ಣು ಮುಚ್ಚಿ ಬಾಯಿ ತೆರೆದೆ. ಯಾರ ಹಂಗೇನೆಂದು ಮೆರೆದೆ. ಹರೆಯದ ಹುಡುಗೆಯರನ್ನು ನೋಡಿ ಹುರುದುಂಬಿದೆ. ಅವರ ನೇತ್ರ ಕಟಾಕ್ಷಕ್ಕೆ ಮರುಳಾದೆ. ಇವಳಾರು ! ಅವಳಾರು ! ಎಂದು ವಿಚಾರಿಸಿದೆ. ಮುರುಕು ಮಾಡುವ ಪ್ರಮದೆಯರನ್ನು ಮರೆಗೆ ನಿಂತು ಕರೆದೆ. ರಸಿಕರೊಡನೆ ನಗನಗುತ ನೀರೆಯರ ಸುದ್ದಿಯಾಡಿದೆ. ಇದು ಸಾಲದೆ ತರುಣಿಯರೊಡನೆ ರಮಿಸಿದೆ. ದೇವರನ್ನು ಮರೆತೆ. ತಿರುಗಿ ಪಶ್ಚಾತ್ತಾಪ ಪಟ್ಟೆ. ಸತಿಯಳ ಮಾತನ್ನು ಕೇಳಿದೆ. ಮಾತಾ ಪಿತೃಗಳನ್ನು ಹೊರಿಗೆ ಹಾಕಿದೆ. ನೀನೇನು ಮಾಡಿ ! ಹರೆಯದ ಮರುಳನಲ್ಲವೇ !

ತನುವಿನರಸಾ ! ನೀನೀಗ ಯೌವನನಿಳಿದ ವೃದ್ಧೆಯಾದೆಯಲ್ಲ ! ಹುಡುಗರಿಗೆ ಬುದ್ಧಿಹೇಳುವ ಸ್ವಭಾವವು ನಿನಗೆ ಗಂಟು ಬಿತ್ತು. ಹುಡುಗರಂತೆ ತಿನಿಸುಣಿಸಿಗೆ ಮನಸೋತ ಅದು ತಡೆಯದೆ ಗಡಬಡಿಸಿದೆ. ತೀರ್ಥ-ಯಾತ್ರೆಗೆ ಹೋಗಬೇಕೆಂದೆ.

ದೇವರೇ ನೀನೇ ಗತಿಯೆಂದು ಅನನ್ಯ ಭಾವದಿಂದ ನೆನೆದೆ. ಹೆರವರ ಬದುಕು ನನಗಾಗಲೆಂದೂ ನನ್ನ ಮಕ್ಕಳಿಗಾಗಲೆಂದೂ ಆಶೆ ಮಾಡಿದೆ. ನನ್ನದು–ನನ್ನದೆಂಬದನ್ನು ಇನ್ನಾದರೂ ಬಿಡಬಾರದೇ! ಬಡಿವಾರದ ಮನವೇ! ನನ್ನ ದೇಹವೆಂಬ ನಿನ್ನ ಮನೆಯು ಇನ್ನೆಷ್ಟು ದಿನಬಾಳುವದೆಂದು ತಿಳಿದುಕೊಂಡಿರುವೆ! ಹಳೆಯದಾಗಿ ಹೋಗಿದೆ. ಬೀಳಲು ಅವಕಾಶವಿಲ್ಲ. ಅಷ್ಟರಲ್ಲಿ ಎಲ್ಲ ಆಶೆಗಳೆಲ್ಲ ತೊರೆ. ಹೆಂಡರು ಮಕ್ಕಳೆಂದು ಇನ್ನೆಷ್ಟು ದಿನ ಅಲೆಯುವದು. ಭಂಡಿ ತುಂಬ ಹೊನ್ನು ಘಳಿಸಿಕೊಂಡೆ. ಸಂಗಡ ಬರುವದೇನೆಂದು ತಿಳಿದಿ! ತಿಳಿದೂ ತಿಳಿಗೇಡಿಯಾದೆ. ಅದನ್ನು ಯಾರಾದರೂ ಒಯ್ಯುವರೆಂದು ಸರಿಯದೆ ಅದರ ಮೇಲೆ ಕೂತಿರುವೆ. ಅದೇನು, ನಿನ್ನದೇ! ನಿನ್ನದೆಂದು ಆ ಹೊನ್ನು ನಿನ್ನ ಸಂಗಡ ಬರುವದೇನು! ಬಾರದು. ಏನೂ ಬಾರದು. ಯಾರೂ ಬಾರರು. ಬರುವವನು ಪರಮಾತ್ಮನು ಕರೆಯುವವನು ಪರಮಾತ್ಮನು. ತಿರುಕರಿಗೆ ದಾನ ಮಾಡಿದರೆ ಮಾತ್ರ ಕರವಿಡಿದು ಕರೆದೊಯ್ಯುವವ ಪರಮಾತ್ಮ. ಕೊಟ್ಟುಬಿಡು! ಕೊಟ್ಟೇಬಿಡು!! ಬಿಟ್ಟುಹೋದರೆ ನಿನ್ನ ಮಡದಿಮಕ್ಕಳೇನು ಕೊಡುವರು. ಅವರದೂ ಕಡೆಗೆ ಇದೇ ಹಾಡು. ತಡೆತಡೆ, ಎಂದು ತಲೆಹಾಕುವರು? ಕೊಡುವದಾದರೆ ಕೊಟ್ಟುಬಿಡು. ಇಲ್ಲದಿದ್ದರೆ ನಿನ್ನ ನಲ್ಲೆಯರು ಎಲ್ಲವನ್ನು ಮಾಯಮಾಡಿ ವಲ್ಲಭ ವಲ್ಲಭ ಎಂದು ಬರೆಯ ಮಾತಾಡುವರು. ಹೆಡಮುರಿಗೆ ಕಟ್ಟಲಿಕ್ಕೆ ಹೇಸರು. ಎಲ್ಲವನ್ನೂ ದಾನಮಾಡು ಅಕೋ ಅಲ್ಲಿ ಫುಲ್ಲನಾಭನು ಕರೆಯುವನು ಆದ್ದರಿಂದ ಅವನಲ್ಲಿ ಐಕ್ಯವಾಗಿ ಶಾಂತಿಯನ್ನು ಹೊಂದು.

---

### ಕವಿ :— ರಮಾಸುತ ಅಳಣಾವರ

ವೃ || ಸಿರಿಯಾಣ್ಮಂ ಖಗವಾಹನಾಗಿಬರವೀ ವೃತ್ತಾಂತಮುಂ ಕೇಳಲು |
ಗಿರಿಜೇಶಂ ಫಣಿಯಿಂದೆ ಕಟ್ಟಿಕವಿಯೋಳ್ ಕೌಪೀನದಿಂ ಬಂದಿರಲ್ ||
ಉರಗೇಂದ್ರಂ ಖಗವನ್ನು ನೋಡಿ ಭಯದಿಂ ಬೀಳಲ್ಕೆ ಕೌಪೀನವು |
ಭರದಿಂ ಪೋಗಲು ನನ್ನನಾದಶಿವನೀಗೆಮ್ಮಂ ಸದಾಕಾಯುವಂ ||೧||

---

### ಇಷ್ಟು ಮಾಡಬಾರದೇ !

ಭಾ.ಷ. ಕುಡಿಯುವ ನೀರೊಳು ಕಾಣಬಾರದೆ | ನಡೆವನೆಲದೊಳು ನಿಲ್ಲಬಾರದೆ |
ಬಿಡದೆಬೀಸುವ ಗಾಳಿಯಿಂದಲಿ ಬಡಿಯಬಾರದೆ ನೀ ||
ಕಡೆಯಿರದ ಗಗನದಲಿಯಡಗುತ | ನುಡಿಯಬಾರದೆ ಕಮಲಮಿತ್ರನ |
ಕಡುವೆಡಗಿನೊಳು ಹೊಳೆಯಬಾರದೆ ಮೃಡನೆ ನಮಗಾಗಿ ||೧||

( ನವಲಗುಂದ ವಿದ್ಯಾರಣ್ಯ ಮಾಸಪತ್ರಿಕೆಯಿಂದ. )

ಸಾಹಿತ್ಯದ ಉದ್ದೇಶ ಜೀವನವನ್ನು ಹೊಸದು ಮಾಡುವದು. ಜೀವನಕ್ಕೆ ಹೊಸತನವೀಯಬಲ್ಲ ಸಾಹಿತ್ಯ ತಾನು ನವೋನವ ರೂಪ ತಾಳುವ ಶಕ್ತಿಯುಳ್ಳದ್ದಾಗಿರಬೇಕು. ಸಾಹಿತ್ಯ ಹೊಸದಾಗಬೇಕಿದ್ದರೆ ಅದು ಎಲ್ಲಿದ್ದರೂ ಅಲ್ಲಿಂದ ಬೆಳಕಿನ ಎಳೆಗಳನ್ನು ಎಳೆದು ತನ್ನಲ್ಲಿ ಬೆರೆಯಿಸಿಕೊಂಡು ಹೊಸರೀತಿಯಲ್ಲಿ ಹೆಣೆಯುತ್ತಲಿರಬೇಕು. ಇಂಥ ಸಮನ್ವಯವೇ ಸಾಹಿತ್ಯ; ಇದುವೇ ಜೀವನ. ಆದುದರಿಂದ ಸಾಹಿತ್ಯ ತನ್ನ ಬೆಂಕಿ ಬೆಳಗುತ್ತಿರುವ ವರೆಗೂ ಹೊರಗಿನ ಕಿಡಿಗಳನ್ನೆಳೆದು ಕೊಳ್ಳಲು ಹಿಂಜರಿಯಲಾಗದು.

ಶ್ರೀ. ಕೃಷ್ಣಕುಮಾರ

# ವಿವಿಧ ಸಾಹಿತ್ಯ.

ಸಾಹಿತ್ಯವೂ ಜೀವನವೂ ಸಂಸ್ಕೃತಿಯ ಎರಡು ಕಾಲುಗಳು. ಒಂದು ಮತ್ತೊಂದನ್ನು ಯಾವಾಗಲೂ ಮುಂದೆಳೆಯುತ್ತಲೇ ಇದೆ. ಈ ವಿಶ್ವಜೀವನದ ಅನಂತ ಯಾತ್ರೆಯಲ್ಲಿ ಒಮ್ಮೆ ಸಾಹಿತ್ಯ ಜೀವನಕ್ಕೆ ಆದರ್ಶ ದಾರಿಯನ್ನು ತೋರುವದು. ಮತ್ತೊಮ್ಮೆ ಜೀವನ ಸಾಹಿತ್ಯಕ್ಕೆ ಮೂಲಬಿಂಬವಾಗುವದು. ಹೀಗೆ ಯಾವಾಗಲೂ ಸಾಹಿತ್ಯ ಜೀವನಗಳೆರಡೂ ಒಂದನ್ನೊಂದು ಉದ್ಧರಿಸುತ್ತಿರುವದೇ ಅವೆರಡರ ಸಾಮರಸ್ಯವೇ ನಿಜವಾದ ಪ್ರಗತಿ.

ಶ್ರೀ. ಕೃಷ್ಣಕುಮಾರ



# ಕನ್ನಡ ಸಾಹಿತ್ಯದಲ್ಲಿ ವೀರಶೈವರ ಮಹತಿ

ಲೇಖಾಂಕ ೬.

ಲೇಖಕರು :— ಶ್ರೀ. ಬಾಲೇಹೊಸೂರ ರಾಮರಾಯರು



ಸಾಮಾನ್ಯವಾಗಿ ನಮ್ಮ ಪೂರ್ವಿಕರು ಲೋಕಜನಗಳಿಗೆ ಬೋಧಿಸಿ ಅವರಿಗೆ ಜಗದಲ್ಲಿ ನಡೆಯುಲು ಒಳ್ಳೇ ಮಾರ್ಗಗಳನ್ನು ತೋರಿಸಿದುದು ತಮ್ಮ ಅತ್ಯಗಾಧವಾದ ಜ್ಞಾನದಿಂದ ಬರೆದ ಗ್ರಂಥಗಳಿಂದಲೇ! ಅದು ಕೂಡ ಧಾರ್ಮಿಕ ವಿಷಯಕ್ಕೆ ಸಂಬಂಧಪಟ್ಟ ಪುರಾಣ-ಪುಣ್ಯಕಥೆ ಇತ್ಯಾದಿ ಗ್ರಂಥಗಳಿಂದಲ್ಲದೆ ಅನ್ಯಮಾರ್ಗದಿಂದಲ್ಲ. ಎಂಬುದಾಗಿ ಹೇಳುವದಕ್ಕೆ ಸಾಕಷ್ಟು ಅವಕಾಶವಿದೆ. ಅವರು ತಮಗೆ ಹೇಳುವದೆಲ್ಲವನ್ನು ಅದರಲ್ಲಿಯೇ ಚರ್ಚಿಸುವ ಪಾಠವನ್ನಿಟ್ಟದ್ದರು. ಭಗವಂತನ ಸೇವೆಗೈಯುಲು ಸಾಧನವಾಗಲೆಂಬದು ಎಂದು ಉದ್ದೇಶ. ಹಾಗೆಯೇ ಅದರಲ್ಲಿನ ಒಳ್ಳೇ ನಡೆ-ನುಡಿಗಳನ್ನು ಕಲಿಯಲೆಂಬುದು ಎರಡನೇ ಉದ್ದೇಶ. ಮಾತ್ರ ಅವುಗಳಲ್ಲಿ ಕೆಲಮಟ್ಟಿಗೆ ಯಾವದೊಂದು ವಿಷಯುದ ವರ್ಣನೆಯಲ್ಲಿ ಅತಿಶಯೋಕ್ತಿಯೇ ಹೆಚ್ಚಾಗಿತ್ತೆಂದರೆ ಸಲ್ಲುವಂತಿದೆ. ಇದೇ ರೀತಿಯಾಗಿ ಬರೆಯುಲಾದವುಗಳೇ ಜೈನರ ಆದಿಪುರಾಣ, ಅಜಿತಪುರಾಣ ಮುಂತಾದವು. ಅಂತಹ ಪುರಾಣಗಳಲ್ಲಿ ಹೇಳುವ ವಿಷಯುಗಳಲ್ಲಿನ ಧರ್ಮವಿಚಾರವು ಒಳ್ಳೇ ಮೇಲ್ತರದ್ದಾಗಿದ್ದರೂ ಕೆಲ ದಿನಗಳಮೇಲೆ ಅವುಗಳು ಸಾಮಾನ್ಯ ಲೋಕಜನಕ್ಕೆ ರುಚಿಸದಾದವು. ಆದುಕಾರಣವೇ ವಿಷಯುವನ್ನು ಇದ್ದಕ್ಕಿದ್ದಹಾಗೆ ಹೇಳುವ ಪಂಗಡವು ಸಾಹಿತ್ಯಲೋಕದಲ್ಲಿ ಉದಯಿಸಿತು. ಅದುವೇ ವೀರಶೈವ ಶರಣರ ಬಹುಪ್ರಚಂಡವಾದ ಸಮುದಾಯವು.

ಸಾಧಾರಣವಾಗಿ ಈ ಶರಣರ ಕಾಲದವರೆಗೆ ಅಂದರೆ ೧೧ ನೇ ಶತಮಾನದ ಮೊದಲು ಭಾಗದಲ್ಲಿ ಕೂಡ ವೇದಾಂತದಲ್ಲಡಕವಾದ ಧರ್ಮದ ವಿಚಾರಗಳನ್ನು

ಲೋಕಜನಗಳೆದುರಿನಲ್ಲಿಡುವದಕ್ಕೆ. ಕನ್ನಡ ಭಾಷೆಯಲ್ಲಿ ಸಾಕಷ್ಟು ಶಬ್ದಗಳು ಇವೆಯೇ ಎಂಬುದೊಂದು ದೊಡ್ಡ ಸಂದೇಹಾತ್ಮಕ ಭಾವನೆಯೇ ಪೂರ್ಣವಾಗಿ ನಮ್ಮವರಲ್ಲಿ ನೆಲೆಗೊಂಡಿತ್ತೆನ್ನಲು ಅಡ್ಡಿ ಇಲ್ಲ. ಹಾಗೆಯೇ ಧರ್ಮಗ್ರಂಥಗಳಾದ ರಾಮಾಯಣ-ಮಹಾಭಾರತಾದಿ ಗ್ರಂಥಗಳನ್ನೇ ಮತ್ತೆ ಜನರು ತಮ್ಮ ಧರ್ಮಕ್ಕ ನುಗುಣವಾಗಿ ಬರೆದರು. ಅವುಗಳೆಲ್ಲ ಸ್ವತಂತ್ರ ವಿಚಾರಗಳು ಇರದೇ ಹೋದರೂ ಕಾವ್ಯ ಈ ದೃಷ್ಟಿಯಿಂದ ಮಾತ್ರ ಅವುಗಳಿಗೆ ಅತ್ಯುಚ್ಚಸ್ಥಾನವು ದೊರೆಯಿತು. ಜನಗಳಲ್ಲಿ ಮನೆಮಾಡಿಕೊಂಡ ಈ ತೆರನಾದ ಅಜ್ಞಾನವು ಬಹುಮಟ್ಟಿಗೆ ಶರಣರ ಸಾಹಿದಿಂದ ಹೇಳಹೆಸರಿಲ್ಲದೆ ಹೋಯಿತೆನ್ನಲು ಪ್ರತ್ಯವಾಯವಿಲ್ಲ. ಶರಣರು ತಮ್ಮೆಲ್ಲ ಸಾಹಿತ್ಯವನ್ನು ಜನಗಳ ಮನೆಮಾತಿನಲ್ಲಿಯೇ ಸಾಮಾನ್ಯರಿಗೂ ಕೂಡ ತಿಳಿಯುವಷ್ಟು ಸುಲಭವಾದ ತಿಳಿಗನ್ನಡ ಭಾಷೆಯಲ್ಲಿ ರಚಿಸಿದರು. ಕೇವಲ ಧಾರ್ಮಿಕ ವಿಷಯಗಳ ವಿವೇಚನೆಯೇ ಅವುಗಳಲ್ಲಿದ್ದಿತು. ಸಾಧಾರಣವಾಗಿ ಕನ್ನಡಭಾಷೆಯ ಇತಿಹಾಸದಲ್ಲಿಯೇ ಶರಣರ ಯುಗವು ಹೊಸಹುಟ್ಟೆಂತಲೇ ಹೇಳಬಹುದು. ಕೆಳಗಿನ ಸಂಗತಿಗಳೇ ಅದಕ್ಕೆ ಸಾಕ್ಷಿ.

## ಶರಣರ ಸಾಹಿತ್ಯದಲ್ಲಿ ಕಂಡುಬರುವ ವೈಶಿಷ್ಟ್ಯ

(೧) ಧರ್ಮ ಹಾಗೂ ವೇದಾಂತ ವಿಚಾರಗಳನ್ನು ತ್ರಿಪದಿ, ಷಟ್ಪದಿ, ಸಾಂಗತ್ಯ, ರಗಳೆ, ವಚನ ಮೊದಲಾಗಿ ಅತಿ ಸುಲಭವಾದ ಛಂದಸ್ಸಿನ ರೂಪಗಳಲ್ಲಿ ಬರೆದುದು.

(೨) ವಿಚಾರಗಳನ್ನು ಅತಿ ಸ್ವತಂತ್ರವಾಗಿಟ್ಟುಕೊಂಡು ಯಾವದೊಂದು ಸಂಗತಿಯ ಯಥಾಚಿತ್ರವನ್ನು ಮಾತ್ರ ದರ್ಶಿಸಿ ದಾಂಭಿಕವಿಚಾರಗಳಿಗೆ ಆಸ್ಪದವಿಲ್ಲದಂತೆ ನೋಡಿಕೊಂಡು ಹೋದುದು.

(೩) ಮನೆಮಾತಿನ ಭಾಷೆಯಲ್ಲಿ ಧರ್ಮ, ಸಾಹಿತ್ಯ, ಸಂಗೀತ, ಕತೆ, ಜ್ಯೋತಿಷ್ಯ, ಭೂಗೋಲ ಇತ್ಯಾದಿ ಸಕಲ ವಿಷಯಗಳಮೇಲೆ ಗ್ರಂಥಗಳನ್ನು ರಚಿಸಿದುದು.

(೪) ಲೋಕ ಜನಗಳಿಗಾಗಿ ಇಂತಹದೊಂದು ಮಹತ್ತಾದ ಸೇವೆಗೈದು ತನ್ಮೂಲಕ ಸಾಹಿತ್ಯಕ್ಕೆ ನೆರವಾಗಿ ಕನ್ನಡಕ್ಕೆ ಸಾಕಷ್ಟು ವ್ಯವಹಾರಿಕ ಶಬ್ದಗಳ ದೊಡ್ಡ ಸಂಗ್ರಹವೊಂದನ್ನು ನಿರ್ಮಿಸಿ ಕೊಟ್ಟುದು.

(೫) ಲೋಕಸೇವೆಯೇ ಈಶಸೇವೆಯೆಂಬ ಹೊಸದಾದ ತತ್ವವೊಂದನ್ನು ಅಂದಿನ ಜನಗಳಿಗೆ ಹಾಕಿ ಕೊಟ್ಟುದುದು.

ಈ ತೆರನಾಗಿ ವಿಚಾರಮಾಡಿದರೆ ವೀರಶೈವ ಶರಣರು ಕನ್ನಡ ಸಾಹಿತ್ಯಕ್ಕೆಂತಹ ಮಹದುಪಕಾರ ಮಾಡಿರುವರೆಂಬ ಸಂಗತಿಯು ಚನ್ನಾಗಿ ವ್ಯಕ್ತವಾಗುತ್ತದೆ. ಸಂಸ್ಕೃತಕ್ಕೆ ಮೋಹಿಸಿ ಎಲ್ಲ ಗ್ರಂಥಗಳಲ್ಲಿ ಹೆಚ್ಚಾಗಿ ಅದೇ ಭಾಷೆಯ ಪದಗಳನ್ನು ಉಪಯೋಗಿಸುತ್ತ ಬಂದು ಕೊನೆಗೆ ತಮ್ಮ ಮನೆಮಾತಾದ ಕನ್ನಡ ಭಾಷೆಯಲ್ಲಿ ನಿಜವಾಗಿಯೂ ಜೀವವಿದೆಯೇ ಎಂಬ ಸಂದೇಹವು ಉಂಟಾಗಿರುವ ಅತಿಶಯವಾದ ಬಿಕ್ಕಟ್ಟಿನ ಸ್ಥಿತಿಯಲ್ಲಿ ಭಾಷಾಗ್ಲಾನಿಯನ್ನು ಮಾಡಗೊಡದೆ ಮಹಾಜನಗಳಿಗೆ ಕನ್ನಡ ಭಾಷೆಯ ಬಗ್ಗೆ ಪ್ರೇಮಾದರಗಳು ಹೆಚ್ಚುವಂತೆ ಮಾಡಿದ್ದರ ಶ್ರೇಯವು ಕೇವಲ ಅಂದಿನ ಅನೇಕ ಜನ ಶರಣರಿಗಲ್ಲದೆ ಮತ್ತಿನ್ನಾರಿಗೂ ಸಲ್ಲುವಂತಿಲ್ಲ. ಅವರ ಭಾಷೆಯು ತೀರ ಸುಲಭವಾಗಿದ್ದರೂ ಅದರಲ್ಲಿನ ವಿಚಾರಗಳು ಆಳವಾದವುಗಳೆಂಬುದನ್ನು ವಚನಗಳಿಂದ ತಿಳಿಯಬಹುದಾಗಿದೆ. ಸ್ವಾತಂತ್ರತೆಯ ಅವರ ವಿಚಾರಗಳು ಒಳ್ಳೇ ತೀವ್ರವಾಗಿದ್ದವು. ತ್ರಿಪದಿ, ಷಟ್ಪದಿ, ವಚನ, ಸಾಂಗತ್ಯ, ರಗಳೆ, ಇತ್ಯಾದಿ ಹೊಸದಾದ ಛಂದಸ್ಸಿನ ರೂಪಗಳಲ್ಲಿಯೇ ಗ್ರಂಥಗಳನ್ನು ರಚಿಸಿ ಆ ಮೊದಲಿನ ಛಂದಸ್ಸಿನ ಕಟ್ಟುಪಾಟುಗಳನ್ನು ಕಿತ್ತಿ ಬಿಸುಟದುದೇ ಅದಕ್ಕೆ ಸಾಕ್ಷಿ. ಇದುವೇ ವೀರಶೈವ ಕವಿಗಳು ಅನ್ಯರಿಗಿಂತ ಪಿರಿದಾದವರೆನ್ನಲು ಉಂಟಾದ ಕಾರಣವು. ಕನ್ನಡ ಸಾಹಿತ್ಯದಲ್ಲಿ ಮಾಡಿದ ಕ್ರಾಂತಿಯು.

ಇನ್ನೊಂದು ಶರಣರ ಮಹತ್ವಾದ ಗುಣವೆಂದರೆ ಅನೇಕ ವಿಧವಾದ ಅವರಲ್ಲಿನ ಜ್ಞಾನ ಲಾಲಸೆ. ಇಂತಹ ಜಾಗೃತವಾದ ಲಾಲಸೆಯಿಂದಲೇ ಅವರು ಮೊದಲಲ್ಲಿ ಸಂಸ್ಕೃತ ಭಾಷೆಯನ್ನಭ್ಯಾಸಿಸಿ ಆ ಬಳಿಕ ಅವುಗಳಲ್ಲಿನ ವಿಚಾರವನ್ನು ಸಾಮಾನ್ಯರಿಗೆ ತಿಳಿಯುವಷ್ಟು ಸಹಜವಾದ ಕನ್ನಡ ಭಾಷೆಯಲ್ಲಿ ಗ್ರಂಥಗಳನ್ನು ಬರೆಯುವ ನಿಶ್ಚಯವನ್ನೇ ಇಟ್ಟುಕೊಂಡಿದ್ದರೆನ್ನುವದಕ್ಕೆ ಸಂದೇಹವಿಲ್ಲ. ಇದೇ ಕಾರಣದಿಂದ ಅವರು ಅತ್ಯುಗ್ರವಾದ ತಪಸ್ಸನ್ನೇ ಆಚರಿಸುತ್ತಿದ್ದುದರಲ್ಲಿ ಆಶ್ಚರ್ಯವಿಲ್ಲ. ತಮ್ಮ ಆಯುಷ್ಯದ ಬಹುಭಾಗವನ್ನು ಅವರು ಜ್ಞಾನಾರ್ಜನೆಯಲ್ಲಿ ಕಳೆಯುತ್ತಿದ್ದರೆಂಬುದನ್ನು ಅವರಿಂದ ರಚಿತವಾದ ಗ್ರಂಥಗಳೇ ಹೇಳುತ್ತವೆ. ಸಾಧಾರಣವಾಗಿ ಅವರಲ್ಲಿ ಸಂಸ್ಕೃತ ಹಾಗೂ ಕನ್ನಡ ಈ ಉಭಯ ಭಾಷಾಕೋವಿದರನೇಕರನ್ನು ಕಾಣಬಹುದಾಗಿದೆ. ಉದಾಹರಣೆಗಾಗಿ ನಿಜಗುಣಿ ಶಿವಯೋಗಿಗಳನ್ನಿಟ್ಟುಕೊಳ್ಳುವಾ! ಅವರು ರಚಿಸಿದ ಪರಮಾನುಭವಬೋಧೆ, ಪರಮಾರ್ಥಗೀತೆ, ಪರಮಾರ್ಥ ಪ್ರಕಾಶಿಕೆ ಇತ್ಯಾದಿ ಗ್ರಂಥಗಳಲ್ಲಿ ಮೂಲ ಸಂಸ್ಕೃತದಲ್ಲಿರುವ ಶೃತಿ, ಸ್ಮೃತಿ, ಪುರಾಣಾದಿ ಗ್ರಂಥಗಳ ವಿಚಾರವೇ ಅವರ ಕನ್ನಡದ ಈ ಕೃತಿಗಳು ಒಡಮೂಡಿವೆ.

ಇಂತಹದೇ ವಿಚಾರವನ್ನಿಟ್ಟುಕೊಂಡು ಉಭಯಭಾಷಾಕೋವಿದರಾಗಿ ಕನ್ನಡ ಸಾಹಿತ್ಯಸಾಮ್ರಾಜ್ಯದಲ್ಲಿ ಬದುಕಿ ಬಾಳಿ ಕೀರ್ತಿಶೇಷರಾದರು. ವೀರಶೈವ

ಶರಣರ ಮಹತಿಯರಿಗೆ ಲೋಕಜನಗಳಿಗೆ ತೋರಿಸಿ ಕೊಡುವದೇ ಈ ಮೊದಲಿನಿಂದ ನಮ್ಮ ಲೇಖನದ ಗುರಿಯಾಗಿದೆ. ಅದುಕಾರಣವೇ ನಾವಿಂದು ಕನ್ನಡದಲ್ಲಿ ಭಾವಚಿಂತಾರತ್ನವೆಂಬ ಅಪೂರ್ವ ಗ್ರಂಥವನ್ನು ಬರೆದು ಕನ್ನಡ ತಾಯಿಯ ಚಿರವಾದ ಸೇವೆಗೈದು, ಕನ್ನಡಿಗರಿಗೊಂದು ತರಹದ ಮಹದುಪಕಾರ ಮಾಡಿದ ಗುಬ್ಬಿಯ ಮಲ್ಲಣಾರ್ಯನ ಚರಿತೆಯನ್ನು ನಮ್ಮ ಯೋಗ್ಯತೆಗನುಗುಣವಾಗಿ ಬರೆದಿರುವೆವು. ಹಂಸಕ್ಷೀರನ್ಯಾಯವಾಗಿ ತಾವಿದನ್ನು ಗ್ರಹಿಸಬೇಕಾಗಿ ಆಶಿಸುತ್ತೇವೆ.

# ಗುಬ್ಬಿ ಮಲ್ಲಣಾರ್ಯ

**ಕವಿಯ ಸ್ಥಾನ :—** ಮೈಸೂರ ಇಲಾಖೆಯ ತುಮಕೂರು ಜಿಲ್ಹೆಯಲ್ಲಿರುವ ಗುಬ್ಬಿ ಎಂಬುದೇ ಕವಿಯ ಗ್ರಾಮವೆಂಬದು ಇತಿಹಾಸ ಸಂಗತಿಗಳಮೇಲಿಂದ ತಿಳಿದು ಬಂದಿದೆ.

**ಕವಿಯ ಪೂರ್ವಪರಂಪರೆ :—** ಮಲ್ಲಣಾರ್ಯ ಕವಿಯು ತಾನು ರಚಿಸಿದ ಭಾವಚಿಂತಾರತ್ನವೆಂಬ ಗ್ರಂಥದಲ್ಲಿ ತನ್ನ ವಂಶ ಪರಂಪರೆಯನ್ನು ಈ ರೀತಿಯಾಗಿ ಹೇಳಿರುವನು.

ಕರುಣಾಳುವಮರಗುಂಡದ ಮಲ್ಲಿಕಾರ್ಜುನಾ |
ರ್ಯರ ನಿರೂಪದಿ ನಿಶಿತ ಶೂಲವೇರಿದ ಮಹಾ ।
ಗುರುಭಕ್ತನನ್ವಯಾಂಬುರುಹ ದಿನನಾಥ ಗುಬ್ಬಿಯ ಮಲ್ಲಣಾಚಾರ್ಯರ ||

ತರುಣ ಗುರುಭಕ್ತಾಖ್ಯ ಗರ್ಭಾಬ್ಧಿ ಚಂದ್ರಮಂ |
ವರಬಸವಪೌರಾಣದುರು ಮಲ್ಲಣಾರ್ಯನಘ |
ಹರ ಸಿದ್ಧ ಮಲ್ಲೇಶ ಗುರು ಚರಣ ಸುರಕುಜಂ ಹೃದ್ಭೂಮಿಯೋಳ್ ಮೆರೆಯುಲು ||೧||

**ಕವಿಯ ಕಾಲವಿಚಾರ :—** ಮಲ್ಲಣಾರ್ಯನು ವೀರಶೈವ ಕವಿಯು. ಹದಿನಾರನೇ ಶತಮಾನಕ್ಕೆ ಸೇರಿದವನು. ಸಿದ್ಧನಂಜೇಶ, ಷಡಕ್ಷರದೇವ, ಮುಂತಾಗಿ ಕವಿಗಳು ಇವನ ಗ್ರಂಥದಲ್ಲಿನ ಅನೇಕ ವಿಷಯುಗಳನ್ನು ತಕ್ಕೊಂಡಿರುವರು. ಇವರೀರ್ವರು ಮಲ್ಲಣಾರ್ಯನಿಗಿಂತ ಈಚೆಗೆನವರೆಂದು ಕವಿಚರಿತೆಕಾರರುಕೊಡುವ ಅಂಶುಗಳಿಂದ ಸಿದ್ಧನಂಜೇಶನು ಸುಮಾರು ೧೬೫೦ರಲ್ಲಿ ಇದ್ದಿರಬೇಕೆಂಬುದಾಗಿ ಹೇಳಲಾಗಿದೆ. ಅದುಕಾರಣ ಮಲ್ಲಣಾರ್ಯನು ಇದಕ್ಕೂ ಕೆಲವು ಕಾಲ ಮೊದಲಿನವನು ಎಂದು ಹೇಳಲು ಅಡ್ಡಿ ಇಲ್ಲ. ಭಾವಚಿಂತಾರತ್ನವೆಂಬ ಗ್ರಂಥವನ್ನು ತನ್ನ ಪ್ರಿಯಶಿಷ್ಯನಾದ ಚೇರಮಾಂಕನ ಅಭಿಲಾಷೆಪೂರ್ತಿಗಾಗಿ ಬರೆಯಲಾಗಿದೆ ಎಂದು

ಅದೇ ಗ್ರಂಥದಲ್ಲಿ ಹೇಳಲಾಗಿದೆ. ಅದುಕಾರಣ ಚೇರಮಾಂಕನು (೧೫೩೭ ರಲ್ಲಿ) ಮಲ್ಲಣಾರ್ಯನ ಸಮಕಾಲೀನನಾಗಿರಬೇಕು. ಅದುಕಾರಣ ಸಾಧಾರಣವಾಗಿ ನಮ್ಮ ಚರಿತ್ರನಾಯಕನಾದ ಮಲ್ಲಣಾರ್ಯನಾದರೂ ಇದೇ ಕಾಲಕ್ಕೆ ಜೀವಿಸಿರಬೇಕೆಂಬುದು ಐತಿಹಾಸಿಕ ರೀತಿಯಾಗಿ ಸಿದ್ಧವಾಗುತ್ತದೆ.

**ಗುರುಪರಂಪರೆ :—** ಸಿದ್ಧಮಲ್ಲೇಶನು ಇವನಿಗೆ ಗುರುವಾಗಿದ್ದಂತೆ ಕೆಲವು ಕಡೆಯಲ್ಲಿ ಉಕ್ತವಾಗಿದೆ. ಹಾಗೇ ಶಿವಗಂಗೆಯ ಮೇಲಣಗವಿಯ ಸಿಂಹಾಸನಾಧೀಶ್ವರನಾದ ಶಾಂತನಂಜೇಶನೂ ಇವನಿಗೆ ಕೆಲವು ಕಾಲ ಗುರುವಾಗಿದ್ದಂತೆ ತಿಳಿದು ಬಂದಿದೆ.

**ವಿದ್ಯಾಭ್ಯಾಸ :-** ಸಪ್ಪಿಯ ಲಿಂಗಣಾಚಾರ್ಯನು ತನಗೆ ವಿದ್ಯೆಯನ್ನಿತ್ತು ಪೊರೆದನೆಂದು ಕವಿಯು ತನ್ನದೇ ಒಂದು ಗ್ರಂಥದಲ್ಲಿ ಹೇಳಿರುವನು. ಇವನು ಸಂಸ್ಕೃತ ಹಾಗು ಕನ್ನಡ ಉಭಯ ಭಾಷೆಗಳಲ್ಲಿ ಒಳ್ಳೇ ತರಗತಿಯನ್ನು ಪಡೆದಿದ್ದನೆಂಬುದು ಅವನು ರಚಿಸಿದ ಗ್ರಂಥಗಳಿಂದಲೇ ತಿಳಿದುಬರುವಂತಿದೆ. ಬಸವಪುರಾಣವನ್ನು ಹೇಳುವದರಲ್ಲಿ ಈತನೊಳ್ಳೇ ನಿಷ್ಣಾತನಾಗಿದ್ದನೆಂದು ವೀರಶೈವ ಕವಿಗಳು ಇವನನ್ನು ಸ್ತುತಿಸಿದ್ದಾರೆ. ಇದೇ ಕಾರಣದಿಂದ ಈ ಕವಿಗೆ ಬಸವಪುರಾಣದ ಮಲ್ಲಣಾರ್ಯ ಎಂಬ ಹೆಸರಿನಿಂದಲೇ ಕರೆಯುವದುಂಟು. ಚೇರಮಾಂಕನು ತನ್ನ ಚೇರಮ ಕಾವ್ಯದಲ್ಲಿ ಮಲ್ಲಣಾರ್ಯನ ವಿದ್ವತ್ತೆ ಹಾಗು ಯೋಗ್ಯತೆಯ ವಿಷಯದಲ್ಲಿ—

"ವೇದಾಂತಲಕ್ಷಣ ವೈದ್ಯ ಭರತ ಸಾಮುದ್ರಿಕ ಜ್ಯೋ
ತಿಷಾಲಂಕಾರ ಸರಸಗೀತಂ ವಾದ್ಯಶಕುನ ಸದ್ವ್ಯಾ
ಕರಣ ಸೂಪ ರತಿಶಾಸ್ತ್ರದೋಳ್ ಪರಿಣತಂ ‖"

ಎಂಬುದಾಗಿ ಸ್ತುತಿಗೈದಿರುವನು. ಒಟ್ಟಾರೆ ಮಲ್ಲಣಾರ್ಯನು ಉಭಯ ಭಾಷಾಕೋವಿದನಾಗಿದ್ದನೆಂಬುದನ್ನು ಇತಿಹಾಸದ ಉಪಲಬ್ಧವಾದ ಅನೇಕ ಸಾಧನಗಳಿಂದ ನಿಸ್ಸಂದೇಹವಾಗಿ ಹೇಳಬಹುದು.

## ಮಲ್ಲಣಾರ್ಯನ ಸಾಹಿತ್ಯ ಸೇವೆ—

ಸಾಮಾನ್ಯವಾಗಿ ವೀರಶೈವ ಶರಣರು ತಮ್ಮ ಧಾರ್ಮಿಕ ಜೀವನಕ್ಕೆ ಅವಶ್ಯಕವಾದ ಧರ್ಮಗ್ರಂಥಗಳನ್ನು ಒರೆದಿರುವರಲ್ಲದೆ, ವಿವಿಧವಿಷಯಗಳ ಜ್ಞಾನವನ್ನೀಯುವ ಮಿಕ್ಕ ವ್ಯವಹಾರಿಕ ಗ್ರಂಥಗಳನ್ನಾದರೂ ಬರೆದು ಕನ್ನಡ ಸಾಹಿತ್ಯದ ಹೊಸ ಹುಟ್ಟಿಗೂ ಅಭಿವೃದ್ಧಿಗೂ ಆಸ್ತಿಭಾರವನ್ನು ಹಾಕಿ ನಮ್ಮುಗಳಮೇಲೆ ಮಹದುಪಕಾರ ಮಾಡಿರುವರು.

## ಮಲ್ಲಣಾರ್ಯನ ಗ್ರಂಥಗಳು-

ನಮ್ಮ ಚರಿತ್ರನಾಯಕನಾದ ಮಲ್ಲಣಾರ್ಯನು ಶಕೆ ೧೪೩೫ ( ಕ್ರಿ. ಶ ೧೫೧೩ ) ರಲ್ಲಿ ಭಾವಚಿಂತಾರತ್ನವೆಂಬ ಗ್ರಂಥವನ್ನು ಬರೆದನು. ಆಮುಂದೆ ೧೫೩೦ ರಲ್ಲಿ ವೀರಶೈವಾಮೃತ ಪುರಾಣವನ್ನು ಬರೆದನು. ಪುರಾತನ ರಗಳೆ ಎಂಬ ದೊಂದು ಗ್ರಂಥವನ್ನು ಇವನು ಬರೆದನೆಂದು ತಿಳಿದುಬಂದಿದೆ. ಆದರೆ ಆ ಗ್ರಂ-ಥವು ಮಾತ್ರ ಉಪಲಬ್ಧವಿಲ್ಲವೆಂಬುದಾಗಿ ಕವಿಚರಿತೆಕಾರರು ಲೇಖಿಸಿರುವರು.

ಮೊದಲಿನದು ( ಭಾವಚಿಂತಾರತ್ನ ) ಪದ್ಯಕಾವ್ಯವಾಗಿದ್ದು ಕನ್ನಡ ಭಾಷೆಯ ಪ್ರೌಢಿಮೆಯನ್ನೂ ಅಲಂಕಾರವರ್ನೂ ಚನ್ನಾಗಿ ದಿಗ್ದರ್ಶನ ಮಾಡುವಂತಹದಿದೆ.

ಎರಡನೇಯದು ( ವಿರಶೈವಾಮೃತ ಪುರಾಣ ) ಕೇವಲ ಧಾರ್ಮಿಕ ಗ್ರಂಥವಾಗಿದ್ದು ಅದರಲ್ಲಿ ವೀರಶೈವ ಧರ್ಮ ಸಿದ್ಧಾಂತಗಳೂ, ಪುರಾತನ ಹಾಗು ನೂತನ ಶರಣರ ಕಾರ್ಯಕಲಾಪದ ವರ್ಣನೆಯೂ ಇದೆ.

ಮೂರನೇಯದು ( ಪುರಾತನ ರಗಳೆ ) ಧಾರ್ಮಿಕ ವಿಷಯದಿಂದ ಕೂಡಿದ್ದಿರಬೇಕೆಂಬುದು ಹೆಸರಿನಮೇಲಿಂದಲೇ ಕಂಡುಬರುವಂತಿದೆ. ಆದರೆ ಗ್ರಂಥವು ಮಾತ್ರ ಉಪಲಬ್ಧವಿಲ್ಲವೆಂದು ಕನ್ನಡ ಸಾಹಿತಿಗಳ ಇತಿಹಾಸ ಸಂಶೋಧನೆಗಾಗಿ ತನ್ನ ಆಯುಷ್ಯವನ್ನು ವೆಚ್ಚಮಾಡಿರುವ ಹಾಗು ಮಾಡುತ್ತಲಿರುವ ಮೈಸೂರಿನ ಮಹಾಮಹೋಪಾಧ್ಯಾಯ ಶ್ರೀಮಾನ್ ಆರ್. ನರಸಿಂಹಾಚಾರ್ಯರು ಹೇಳಿರುವಲ್ಲಿ ಉಳಿದವರ ಪಾಡೇನು ? ಇರಲಿ.

# ಮಲ್ಲಣಾರ್ಯನ ಸಾಹಿತ್ಯಕಾರ್ಯ.

## ಭಾವಚಿಂತಾರತ್ನಕಾವ್ಯವು.

### ಭಾವಚಿಂತಾರತ್ನವನ್ನು ಕವಿಯು ಅದೇಕೆ ಬರೆದನು ?

ಹಿಂದೊಮ್ಮೆ ಶಿವಭಕ್ತಾಗ್ರೇಸರನಾದ ತಿರುಜ್ಞಾನಿ ಸಾಂಬಧೀಶನು ಪಂಚಾಕ್ಷರೀ ಮಂತ್ರದ ಮಹಿಮೆಯನ್ನು ಲೋಕಜನಗಳಿಗೆ ತೋರಿಸುವದಕ್ಕೋಸುಗ ಗ್ರಂಥವೊಂದನ್ನು ತಮಿಳು ಭಾಷೆಯಲ್ಲಿ ಬರೆದನು. ಚೋಳಭೂಪಾಲನ ಚರಿತೆಯೇ ಅದರಲ್ಲಡಕವಾಗಿದ್ದಿತು. ಅದೇ ಗ್ರಂಥದಲ್ಲಿನ ವಿಷಯುವನ್ನಿಟ್ಟುಕೊಂಡು ಶಿವಭಕ್ತ ಶಿಖಾಮಣಿಯೂ ಯತಿವರನೂ ಆದ ಶಿವಪೂಜಾರ್ಯನ ಆಜ್ಞೆಯುಮೇರೆಗೆ ಆ ಮೊದಲು ಬರೆಯಲಾದ ತಮಿಳು ಗ್ರಂಥವನ್ನೇ ಕನ್ನಡಿಸಿರುವನೆಂದು ಭಾವಚಿಂತಾರತ್ನದ ಮೊದಲಲ್ಲಿಯೇ ಕವಿಯು ಹೇಳಿರುವನು. ಹಾಗೆಯೇ ತನ್ನ ಪ್ರಿಯ ಶಿಷ್ಯನಾದ ಚೇರಮಾಂಕನಿಗೆ ಸತ್ಯೇಂದ್ರ ಚೋಳ ಭೂಪಾಲನ ಕಥೆ ಕೇಳುವ ಮನೀ

ಸೆಯನ್ನು ಪೂರ್ತಿಗೊಳಿಸುವದಕ್ಕಾಗಿ ತಾನು ಈ ಗ್ರಂಥವನ್ನು ಬರೆದೆನೆಂದೂ ಕೆಲ ವೆಡೆಯಲ್ಲಿ ಹೇಳಿರುವನು.

**ಗ್ರಂಥ ಪ್ರಸಂಶೆ :—** ಕವಿಯು ತನ್ನ ಗ್ರಂಥದ ವಿಷಯವಾಗಿ ಹೀಗೆ ಹೇಳಿರುವನು—

ಕೃತಿಯು ಪಲ್ಲವಿತೊಡಗಿ ಪೂರ್ಣಮುಪ್ಪನ್ನವಿೂ |
ಕೃತಿಯೊಳುತ್ಪ್ರೇಕ್ಷೆ ಇಲ್ಲದುದೊಂದು ಪದವಿಲ್ಲ ||

ಹಾಗೆಯೇ ತನ್ನ ಕವಿತೆಯನ್ನು ಈ ರೀತಿಯಾಗಿ ಹೇಳಿಕೊಂಡಿದ್ದಾನೆ—

ಅಮುಮಚಂದ್ರನ ಕಂಡು ವಾರ್ಧಿ ವೈವರ್ಧಗುಂ |
ಹಿಮಕಾಂತ ಕರಗುಗುಮದೇಕೆ ಗಾಂಭೀರ್ಯ ಹೃ |
ದ್ವಿಮಲಂಗಳಪ್ಪುದರಿನಂತೆನ್ನ ಕಬ್ಬದಿಂದರ್ತಿ ಸಜ್ಜನರಿಗಕ್ಕುಂ ||
ಕುಮತಿ ದುರ್ಜನರು ಪರಿಣಮಿಸದಿರಲೇನಾಯ್ತು |
ಕಮಲಾರಿ ಪೂರ್ಣತೆಯೊಳೊಗೆಯು ಕಾಣುತವೆ ಶ |
ರ್ದಮ ಜಲದ ಬೆಂಚೆ ಕಗ್ಗಲ್ಲುಗಳು ಪಿಚ್ಚಿಕರಗದೊಡೆ ಸಸಿಗದು
ಹಾನಿಯೇ ||೧||

ಗ್ರಂಥಾವತಾರದಲ್ಲಿ ಭೋಗನುಲ್ಲೇಶನ ಸ್ತುತಿಯೇ ಇದೆ. ಆ ಬಳಿಕ ಕವಿ ಅಮರಗುಂಡದ ಶರ್ವ ಸಿದ್ಧಮಲ್ಲಿಕಾರ್ಜುನಗುರು, ಭೃಂಗಿ, ನಂದಿ, ವೀರಭದ್ರ, ಅಲ್ಲಮ, ಬಸವ, ಶಿವಪೂಜಾರ್ಯ ಮುಂತಾದವರನ್ನು ಸ್ತುತಿಗೈದಿದ್ದಾನೆ.

**ಗ್ರಂಥರಚನೆಯ ಕಾಲವು :—** ಮಲ್ಲಣಾರ್ಯನು ಈ ಅಪೌಲ್ಯವಾದ ಗ್ರಂಥವನ್ನು ಕ್ರಿ. ಶ. ೧೫೧೩ ರಲ್ಲಿ ರಚಿಸಿದನೆಂಬುದಾಗಿ ಅವನ ಪ್ರಿಯಶಿಷ್ಯನಾದ ಚೇರಮಾಂಕನು ಹೇಳಿರುವನು.

**ಗ್ರಂಥದ ಸಾರವು :—** ಹಿಂದೊಮ್ಮೆ ಅತಿವೈಭವದಿಂದ ಮೆರೆದ ಭಾರತ ದೇಶದ ದಕ್ಷಿಣಭಾಗದಲ್ಲಿದ್ದ ಚೋಳ ಭೂಪಾಲನೋರ್ವನು ಪರಮ ಶಿವಭಕ್ತನೆಂದೆ ನಿಸಿ ಚಿದ್ಘನ ಶಿವಾಚಾರ್ಯರಿಂದ ಕೃಪಾಪ್ರಸಾದವನ್ನು ಪಡೆದು ಅನೇಕ ಸಿರಿಸೌಖ್ಯ ಭೋಗಗಳನ್ನು ಸವಿದು ಕೊನೆಗೆ ತನ್ನಲ್ಲಿನ ಅಚಲವಾದ ಶಿವಭಕ್ತಿಯಿಂದ ಕೈವಲ್ಯ ಪದವಿಯನ್ನು ಪಡೆದುದೇ ಮುಖ್ಯವಾದ ಕಥಾಭಾಗವು. ಸತ್ಯೇಂದ್ರಚೋಳನೆಂಬ ವನೇ ಆ ಭೂಪಾಲನು. ಅವನಿಗೆ ಪರಮಸಾಧ್ವಿಯಾದ ಪತ್ನಿಯೋರ್ವಳಿದ್ದಳು. ಅವಳು ತನ್ನ ಮೃದುಮಧುರವಾದ ನಡೆ-ನುಡಿಗಳಿಂದಲೂ, ಪತಿಪರಾಯಣತೆ ಯಿಂದಲೂ ಅಮೃತವತಿಯೆಂಬ ತನ್ನ ಹೆಸರನ್ನು ಸಾರ್ಥಕಗೊಳಿಸಿಕೊಂಡಿದ್ದಳು. ಸಕಲವೈಭವಗಳಿಂದ ಪರಿಪೂರ್ಣಳಾದ ಅವಳ ಅಂದಿನ ಸ್ಥಿತಿರೀತಿಗನುಗುಣವಾಗಿ ಮನಾನಂದಗೊಳಿಸುವ ಪುತ್ರನೋರ್ವನು ಇಲ್ಲದುದಕ್ಕಾಗಿ ಮಾತ್ರ ವ್ಯಥೆ ಬಡುತ್ತಿ

ಪ್ಪಳು. ಅದುಕಾರಣವೇ ಮಿತವಚನನೆಂಬ ಒಂದು ಮಗುವನ್ನು ಹೊಟ್ಟೆಯ ಮಗನಂತೆ ಸಾಕಿ ಸಲುಹಿಪ್ಪಳು. ಹೀಗಿರಲು ಮುಂದೆ ಚಿದ್ಘನ ಶಿವಾಚಾರ್ಯರ ಆಶೀರ್ವಚನದಿಂದ ಅಮೃತವತಿಗೆ ಪುತ್ರೋತ್ಸವವಾಯಿತು. ಅವನೇ ಮಂತ್ರಲಕ್ಷ ನೆಂಬ ರಾಜಕುಮಾರ. ಚೋಳ ಕುಲತಿಲಕ. ಅಮೃತವತಿಯ ಭಾಗ್ಯದ ಒಬ್ಬನೇ ಒಬ್ಬ ಪುತ್ರ. ಮಂತ್ರಲಕ್ಷನು ವಯಸ್ಕನಾಗಲು ಸತ್ಯೇಂದ್ರಚೋಳ ಭೂಪಾಲನು ಸಿಂಹಳ ನೃಪನ ಕನ್ಯೆಯೊಡನೆ ಅವನ ವಿವಾಹ ಸಮಾರಂಭವನ್ನು ನೆರವೇರಿಸಿದನು. ಅದೇ ಕಾಲಕ್ಕೆ ಸಾಕು ಮಗನಾದ ಮಿತವಚನನ ವಿವಾಹವಾದರೂ ನಡೆದು ಹೋ ಯಿತು. ಇಂತು ಸತ್ಯೇಂದ್ರಚೋಳನು ತನ್ನ ಪುತ್ರ ಮಿತ್ರ ಕಳತ್ರಾದಿ ಸಕಳ ಜನ ಗಳಿಂದ ಕೂಡಿಕೊಂಡು ಬಹು ಸೌಖ್ಯದಿಂದ ರಾಜ್ಯವಾಳುತ್ತಿದ್ದನು.

ಹೀಗಿರಲು ಒಂದು ಸಮಯ ಮಂತ್ರಲಕ್ಷ ಮಿತವಚನ ಇವರೀರ್ವರೂ ಕೂಡಿ ಸುಂದರವಾದ ಅಶ್ವಗಳನ್ನೇರಿ ವಿಹಾರಾರ್ಥವಾಗಿ ಹೋದರು. ತಿರುಗಿ ಬರುವಾಗ ನಗರವಲ್ಲಿನ ಓರ್ವ ಅನಾಥ ಸ್ತ್ರೀಯಳ ಶಂಕರನೆಂಬ ಮಗು, ಒಂದು ಮನೆಯ ಮುಂದಿನ ಅಂಗಳದಲ್ಲಿ ಆಡುತ್ತಿರುವಾಗ ಎಡವಿ ಬಿದ್ದುದನ್ನು ನೋಡಿ ಮಂತ್ರಲಕ್ಷನು ತನ್ನ ಕುದುರೆಯನ್ನು ಧಾವಿಸುತ್ತ ಅಲ್ಲಿಗೆ ಬಂದು ಮಗುವನ್ನೆಬ್ಬಿಸಿ ಸಂತೈಸಿದನು. ಅಷ್ಟರಲ್ಲಿ ಮಿತವಚನನಾದರೂ ತನ್ನ ಅಶ್ವವನ್ನು ಶೀಘ್ರಗತಿಯಿಂದ ಅಲ್ಲಿಗೆ ಐತರಲು ಕಡಿವಾಣಕ್ಕೆ ಅಸುಗೊಳ್ಳದೆ ಅವನ ಅಶ್ವವು ತನ್ನ ಖುರಪುಟದಿಂದ ಮಗುವನ್ನು ಬಲವಾಗಿ ಘಾಯಗೊಳಿಸಿತು. ಕೂಡಲೇ ಆ ಅಘಘಾತದಿಂದ ಮಗುವು ಮೃತಪಟ್ಟಿತು. ಆ ಮುಂದೆ ಈ ಸಂಗತಿಯನ್ನರಿತು ಅನಾಥೆಯಾದ ಆ ಮಗುವಿನ ತಾಯಿಯು ಅತಿಶಯವಾದ ದುಃಖಕ್ಕೀಡಾದಳು. ಹಾಗೆಯೇ ಪರಮ ಕುಪಿತಳಾಗಿ ಧೊರೆಯ ಬಳಿಗೆ ಹೋಗಿ ದೂರು ಮಾಡಿದಳು. ಧೊರೆಯು ರಾಜ ಪುತ್ರರೀರ್ವರನ್ನು ಕರೆಯಿಸಿ ಮಗುವಿನ ಕೊಲೆಗೆ ಕಾರಣರಾರೆಂದು ವಿಚಾರಿಸಲಾಗಿ ಮಿತವಚನನು ನಾನೇ! ನಾನು ಈ ಮಗುವಿನ ಕೊಲೆಗೆ ಕಾರಣನಾದವನು. ಎಂ ಬುದಾಗಿ ಹೇಳಿದನು. ಆಮುಂದೆ ಮಂತ್ರಲಕ್ಷಣನಾದರೂ ಅದೇರೀತಿಯಾಗಿ ತಾನು ಕೊಲೆಗೆ ಕಾರಣನಾದೆನೆಂದು ಹೇಳಿದನು. ರಾಜನು ಕೋಪ ದಿಂದ ಅತಿಶಯವಾಗಿ ಉದ್ವೇಗವನ್ನು ಹೊಂದಿ ಮಂತ್ರಿಯನ್ನು ಕರೆಯಿಸಿದನು. ಕೂಡಲೇ ಮಂತ್ರಿಯನ್ನು ಕುರಿತು ‘‘ಇದೀಗ ಶಿವಭಕ್ತನಾದ ಶಂಕರನ ಕೊಲೆಗೆ ಕಾರಣನಾದ ನನ್ನೀ ಪುತ್ರನ ತಲೆ ಹಾರಿಸು ” ಎಂಬುದಾಗಿ ಆಜ್ಞೆ ಮಾಡಿದನು. ರಾಜನಪ್ಪಣೆಯಂತೆ ಮಂತ್ರಿಯು ಮಹಾದಾಜ್ಞೆಯೆಂದು ಮನೆಗೆ ಹೋಗಿ ಇಂತಹ ದುಷ್ಕೃತ್ಯವನ್ನು ಮಾಡುವದುಚಿತವಲ್ಲವೆಂದೆಣಿಸಿ ತಾನೇ ತನ್ನ ತಲೆಯನ್ನು ಕತ್ತರಿ ಸಿಕೊಂಡು ಆಸುತೊರೆದನು. ಈ ವಾರ್ತೆಯನ್ನು ತಿಳಿದವನಾದ ರಾಜನು ಕೂಡಲೇ ಬೇರೊಬ್ಬ ಭಟನಿಂದ ಮಂತ್ರಲಕ್ಷನ ತಲೆಯನ್ನು ಹೊಡೆಸಿದನು. ಆಮುಂದೆ ಮಿತ

ವಚನನು ಬಂಧುವಿಯೋಗಕ್ಕಾಗಿ ತನ್ನ ತಲೆಯನ್ನು—ಹಾಗೆಯೇ ಸತ್ಯೇಂದ್ರ ಚೋಳ ಭೂಪಾಲನು ತನ್ನ ತಲೆಯನ್ನು, ಇವರುಗಳ ಕೊಲೆಗೆ ಕಾರಣಳಾದ ಅನಾಥ ಸ್ತ್ರೀಯಳು ( ಮಗುವಿನ ತಾಯಿ ) ತನ್ನ ತಲೆಯನ್ನು ಕತ್ತರಿಸಿಕೊಂಡಳು. ಕೊನೆಗೆ ಚೋಳ ಭೂಪಾಲನ ಪಟ್ಟರಾಣಿಯೂ, ಪರಮಸಾಧ್ವಿಯೂ, ಶಿವಭಕ್ತಳೂ ಆದ ಅಮೃತವತಿಯು ಈ ಅನಾಹುತದಿಂದ ಬಹುವಾಗಿ ನೊಂದು, ತಾನಾದರೂ ಜೀವಿಸಿರುವದು ಉಚಿತವಲ್ಲವೆಂದೆಣಿಸಿ ತನ್ನ ತಲೆಯನ್ನು ಕತ್ತರಿಸಿಕೊಳ್ಳುವ ಸಂದರ್ಭದಲ್ಲಿ ಕರುಣಾಕರನಾದ ಶಿವನು ಪ್ರತ್ಯಕ್ಷವಾಗಿ ಕಾಣಿಸಿಕೊಂಡು "ಎಲೈ ಸಾಧ್ವಿಯೇ, ಪಂಚಾಕ್ಷರೀಮಂತ್ರಮಹಿಮೆಯನ್ನು ಅರಿತವರಾದ ಇವರುಗಳ ಕೊಲೆಯು ನನ್ನ ಸಂಕಲ್ಪಕ್ಕನುಸಾರವಾಗಿಯೇ ನಡೆದು ಹೋಗಿದೆ. ಅದುಕಾರಣ ಆ ವಿಷಯವಂತಿರಲಿ, ಇವರುಗಳಲ್ಲಿ ನಿನಗಾರನ್ನು ಬದುಕಿಸಬೇಕು ಹೇಳು" ಎಂಬುದಾಗಿ ಕೇಳಿದನು. ಅಮೃತವತಿಯು "ಅಗೋ, ಅಲ್ಲಿ ಬಿದ್ದಿರುವ ಆ ಅನಾಥ ಸ್ತ್ರೀಯಳ ಮಗುವನ್ನು." ಎಂದು ಬೇಡಿಕೊಂಡಳು. ಪರಮ ಕರುಣಾಳುವಾಗ ಶಿವನು ಅಮೃತವತಿಯ ಹೃದಯವಿಶಾಲತೆಗೆ ಮೆಚ್ಚಿ, ಇಂದೊಂದೇ ಒಂದು ಮಗುವಿನ ಕೊಲೆಯಿಂದಲ್ಲವೇ ಇವರೆಲ್ಲರ ತಲೆಗಳು ಹೋದುದು. ಅದುಕಾರಣ ಇದೋ ನಿನ್ನಿಚ್ಛೆಯು ಪೂರ್ತಿಯಾಗಲಿ ಎಂದುಸುರಿದನು. ಮರುಕ್ಷಣದಲ್ಲಿಯೇ ಶಂಕರನು ಪುನಃ ಪ್ರಾಣವನ್ನು ಹೊಂದಿ ಎದ್ದು ಕುಳಿತನು. ಅದೇ ಕ್ಷಣಕ್ಕೆ ಉಳಿದವರು ಕೂಡ ಜೀವಿಸಿದರು. ಆಮುಂದೆ ಶಿವನ ಆಜ್ಞೆಯಂತೆ ಆ ಜನಗಳಿಗಾಗಿ ಆಕಾಶದಿಂದ ವಿಮಾನುಗಳು ಬಂದಿಳಿದವು. ಅವರು ಆ ವಿಮಾನಗಳಲ್ಲಿ ಸುಖವಾಗಿ ಕುಳಿತು, ಶಿವನೊಡನೆ ಕೈಲಾಸಕ್ಕೆ ತೆರಳಿದರು.

## ಸಾಹಿತ್ಯದ ಸೊಬಗು

ಈ ಮುಂದೆ ಕವಿ ಮಲ್ಲಣಾರ್ಯನ ಅಮೌಲ್ಯವಾದ ಗ್ರಂಥಗಳಲ್ಲಿನ ಸಾಹಿತ್ಯದ ಸವಿಯೂಟವನ್ನು ವಾಚಕರ ಮುಂದಿರುಸುವದೇ ನಮ್ಮ ಗುರಿ, ಆದ್ದರಿಂದ ಮೊದಲು ಪ್ರಸ್ತಾಪಿಸಿದ ಭಾವಚಿಂತಾರತ್ನದಲ್ಲಿನ ಕೆಲವು ಪದ್ಯಗಳನ್ನು ಮಾದರಿಗಾಗಿ ಕೊಡುವೆವು.

ಚೆಲ್ವೆಗಂಗಳ ಮಿನುಗುವರಳೆಲೆಯ ಮಾಂಗಾಯ್ದು ।
ಉಲ್ಲಾಸದಿಂ ಮಿರುಗುವೆಳನಗೆಯ ಮೊಳವಲ್ಲಿ ।
ಗಲ್ಲದೆಡೆಯೊಳಗೊಸರ್ವ ತಾರಾಜಲಾಮೃತದೊಳಚ್ಚಿಂಬ ಸುತನ
ತೋಳಲ ॥

ಸೊಲ್ಲಾನಿಸಿ ನೋಡಿ ತೆಗೆದು ಮೂರ್ಧ್ನಿಘ್ರಾಣ ।
ದಲ್ಲಿ ತಕ್ಕೈಸಿ ಬಾಯೊಳ್ ಬಾಯನಿಟ್ಟಿಕ್ಕಿ ।

ಠಲ್ಲಿ ಮುಂಡಾಡುವೆಂ ಪಾಡುವೆಂ ಮುದ್ದುಗಳ ಬೇಡುವೆನೆನುತ್ತ
ನಲಿದಳ್ ||೧||

ಮೇಲಿನ ಪದ್ಯದಲ್ಲಿ ಚೋಳಭೂಪಾಲನ ಪತ್ನಿಯಾದ ಅಮೃತವತಿಯು ತನಗೆ ಲಭಿಸುವ ಪುತ್ರಸಂತಾನದ ಸವಿಗನಸನ್ನು ನೆನೆದು ನೆನೆದು ಅನೇಕ ಪರಿ ಮಗುವಿನೊಡನೆ ತಾನು ಆ ಮುಂದೆ ಆನಂದವನ್ನು ಅದಾವರೀತಿಯಾಗಿ ಪೊಂದುವ ಳೆಂಬುದಾಗಿ ಯೋಚಿಸಿದ ವಿಷಯವು ಎಷ್ಟು ರಮ್ಯವಾಗಿದೆ ನೋಡಿ !

ಮೂಡಗಟ್ಟಂ ಕಟ್ಟಿ ಹುಡುಕು ನೀರೆವಳ್ ಮೆಟ್ಟಿ ।
ಕಾಡುತಿಹ ಪಾಮರರ ಕೈವಿಡಿತೆಗೊಳಗಾಗಿ ।
ನಾಡೆ ಪಂಕಂಬೋಗುತ್ತಿರ್ದೆಯೊಡೆದು ಮಲ್ಲರ್ಚಿಕಂಟಂ
ಕಂಬಡದೆವಿನ್ನು ||

ರೂಢಿಸಿದ ಕಾವೇರಿಯಿಕ್ಕೆಲನೊಳಿರ್ದು ಶಶಿ ।
ಚೂಡಂಗೆ ಸಲ್ವ ಪೇರೊಲ್ಮೆಯಿಂ ಪಡೆದವರ ।
ಕೂಡೆ ಬಾಯ್ವಿಡಿಸದಿರೆವೆಂದು ರಾಗಿಸುವ ಕಳಮೆಯ ಮರಿಯ
ಸಾಲ್ ಮೆರೆದವು ||೧||

ಹಚ್ಚಗೆ ಮುರಿದು, ಅಲ್ಲಲ್ಲಿ ಒಪ್ಪುವ ನೆಲ್ಲುಗದ್ದೆಗಳ ಸಹಜವಾದ ರಮಣೀಯತೆಯನ್ನು ಕವಿಯು ಬಹು ಅಂದವಾಗಿ ಚಿತ್ರಿಸಿರುವನು. ನಿಸರ್ಗದೇವತೆಯನ್ನು ನಲಿಸಿಬಿಟ್ಟರುವನು. ಇದೇ ಕಾರಣದಿಂದಲ್ಲವೆ ನಿಸರ್ಗದೇವಿಯ ಸಾನ್ನಿಧ್ಯದಲ್ಲಿ ಸದಾವಕಾಲ ಹೊಲಗೆಲಸದವರು ತಮ್ಮ ಜೀವನವನ್ನು ಸುಖಮಯವಾಗಿ ಮಾಡಿಕೊಳ್ಳುವರು.

ಲಾಳನಂ ಬರ್ಬರನ ಗೆಳನಂ ವೈರಿ ಪಾಂ ।
ಚಾಳನಂ ಗೆಲ್ವ ಕರವಾಳನಂ ಭಸ್ಮಮಯ ।
ಭಾಳನಂ ತತ್ಸದೋದ್ಧೂಳನಂ ರಂಜಿಸುವ ಕಾಳನಂ ಗೆಲ್ವ ವಿಧೃತ ||

ವಾಳನಂ ನಮಿತ ನೆಲ ರಜಾಳನಂ ಹಸ್ತಕಂ ।
ಕಾಳನಂ ಕೊಬ್ಬಿರ್ದ ಕೋಳನಂ ಕೊಂದ ಸೊ ।
ಡ್ಡಾಳನಂ ಭಜಿಪ ಭೂಪಾಳನಂ ಸತ್ಯೇಂದ್ರಚೋಳನಂ
ಪೊಗಳಲಳವೆ ||೧||

ಮೇಲಿನ ಪದ್ಯದಲ್ಲಿ ಚೋಳಭೂಪಾಲನ ಪರಾಕ್ರಮದ ಚಿತ್ರವನ್ನು ಅದೆಷ್ಟು ಬಗೆಯಿಂದ ರೇಖಿಸಿರುವನೆಂಬದನ್ನಷ್ಟು ನೋಡಿ ! ಅನೇಕವಿಧವಾದ ಆಯುಧಗಳನ್ನುಪಯೋಗಿಸುವದರಲ್ಲಿ ನಿಷ್ಣಾತರಾದ ಭಟರುಗಳಿಗೆ ಕಾಲಸ್ವರೂಪನಾದ ಚೋಳ ಭೂಪಾಲನ ಶೌರ್ಯವನ್ನು ಹೊಗಳುವದಕ್ಕೆ ಅದಿನ್ನೂ ಸಾಧ್ಯವಿಲ್ಲವೆಂದೇ ಕವಿಯು ಹೇಳುತ್ತಾನೆ.

ಪದ್ಯದಲ್ಲಿನ ಪದಲಾಲಿತ್ಯ, ಶಬ್ದಯೋಜನೆ, ಪ್ರಾಸಪದ್ಧತಿ ಇವೆಲ್ಲವುಗಳನ್ನು ನೋಡಿದರೆ ಮಲ್ಲಣಾರ್ಯನು ಅದೆಂತಹ ಪ್ರಾಸಾದಿಕ ಕವಿಯಾಗಿದ್ದನೆಂಬ ಕಲ್ಪನೆಯು ವಾಚಕರಿಗೆ ಹೊಳೆಯದಿರಲಾರದು.

**ವೀರಶೈವಾಮೃತ ಪುರಾಣ :—** ಧರ್ಮದ ಸಿದ್ಧಾಂತಗಳನ್ನು ವಿಶದಪಡಿಸುವ ಇದೊಂದು ಷಟ್ಪದಿ ಗ್ರಂಥ. ಇದರಲ್ಲಿ ಸಂಧಿಗಳೆಂಟು ಇವೆ. ಈ ಗ್ರಂಥವು ತಿಳಿಗನ್ನಡದ ವಾರ್ಧಿಕ ಷಟ್ಪದಿ ರೂಪದಲ್ಲಿದೆ. ಶಿವನ ಅನೇಕ ಲೀಲೆಗಳೂ ಶರಣರ ಕಥೆಗಳೂ ಇದರಲ್ಲಿ ಹೇಳಲಾಗಿವೆ. ಕವಿಯು ತಾನು ಈ ಗ್ರಂಥವನು ಶೀಲವಂತರಾರ್ಯನ ಆಜ್ಞಾನುಸಾರವಾಗಿ ಪದ್ಯರೂಪದಲ್ಲಿ ರಚಿಸಿರುವೆನೆಂಬದಾಗಿ ಹೇಳಿರುವನು. ಇದೇ ಗ್ರಂಥದಲ್ಲಿನ "ಭೂಲೋಕ ಪಾವನಕ ಕುದ್ಗಿರಿ ಸುದಾಕ್ಷಿಣ್ಯ ಕೈಲಾಸವರಮೇಲಣ ಗವಿಯು ಸಿಂಹಾಸನಾಲಂಕೃತ ಶಾಂತ ನಂಜೇಶ್ವನಾಂಘ್ರಿ ಪಂಕಜ ಭೃಂಗ" ಈ ಪದ್ಯದಿಂದ ಮೇಲಣಗವಿಯ ಶಾಂತನಂಜೇಶನು ಈತನ ಗುರುವಾಗಿದ್ದನೆಂಬುದಾಗಿ ತಿಳಿಯುತ್ತಿದೆ.

ಗ್ರಂಥದಲ್ಲಿ ಪ್ರಾರಂಭಕ್ಕೆ ಮಲ್ಲಣಾರ್ಯನು ತನ್ನ ಇಷ್ಟದೈವತವಾದ ಶಾಂತ ಮಲ್ಲಿಕಾರ್ಜುನ ದೇವರನ್ನೂ ಬಿಟ್ಟನುಂಡೆ, ಪ್ರಭು ಎಂಬ ತನ್ನ ಕುಲದ ರಾಜನನ್ನೂ ಆಮುಂದೆ ಗುರುವಾದ ಶಾಂತನಂಜೇಶನನ್ನೂ ಕ್ರಮದಿಂದ ಸ್ತುತಿಗೈದಿದ್ದಾನೆ. ಮಾದರಿಗಾಗಿ ವಾಚಕರಿಗೆ ಗ್ರಂಥದ ಸೊಬಗನ್ನು ತೋರಿಸುವದಕ್ಕಾಗಿ ಅದರಲ್ಲಿನ ಒಂದೆರಡು ಪದ್ಯಗಳನ್ನು ಇಲ್ಲಿ ಕೊಡಲಾಗಿದೆ.

ಪಡೆಗಣ್ಣು ಕತ್ತುರಿಯ ಬೊಟ್ಟು ಶಶಿರವಿ ನಯನ |
ವಣುಯರೆದ ಚಲ್ಲೆಗಂಗಗು ಗೇಯರಸವಾಂತ |
ಫಣಿಕುಲದ ರತ್ನಕಿರಣದಾ ಪೊನ್ನೋಲೆ ಸುಲಿಪಲ್ಲು ಕೆಂಬಲ್ಗಳು ||
ಅಣಿಯರದ ಕರಿಗೊರಲು ರನ್ನದಾಳಿಯ ಬೆಳ್ಪು |
ಪೆಣನಾಂತ ಶೂಲಾದಿಗಳು ಬಳುಕ ಲೀಲಾಬ್ಜ |
ಗಣನಾತಿ ಶಯನವ್ಯ ಗುಣಗಣನೆಯುಳ ವಟ್ಟಮೂರ್ತಿ ರಾಜಿಸುತಿರ್ದುದು ||೧||

ಮೇಲಿನ ಪದ್ಯದಲ್ಲಿ ಕವಿಯು ಅರ್ಧನಾರಿನಟೇಶ್ವರ ವೇಷದಲ್ಲಿನ ಶ್ರೀ ಮಹಾಶಂಭುವನ್ನು ವರ್ಣಿಸಿರುವನು. ಪದ್ಯದಲ್ಲಿನ ಭಾಷೆಯು ಅಚ್ಚಗನ್ನಡವಿದ್ದು ಶಬ್ದಯೋಜನೆಯು ಮೇಲ್ತರದ್ದಾಗಿದೆ. ಸಾಮಾನ್ಯವಾಗಿ ವರ್ಣನಾತ್ಮಕ ವಿಷಯದಲ್ಲಿ ಬಹುತರ ಚಿಕ್ಕ ಪುಟ್ಟ ಸಂಗತಿಗಳು ಅಡಕವಾಗಿವೆ. ಸುಲಿಪಲ್ಲು, ಪೊನ್ನೋಲೆ, ಬೆಳ್ಪು, ಬಳುಕ ಮುಂತಾಗಿ ಯಥಾರ್ಥವನ್ನು ಕೊಡುವ ಶಬ್ದಗಳು ಎಷ್ಟು ಕರ್ಣಮನೋಹರವಾಗಿವೆ! ಇದೀಗ ಕನ್ನಡ ನುಡಿಯಲ್ಲಿರುವ ಇನಿದಾದ ಸೊಂಪು!

ಸ್ತ್ರೀವರ್ಣನೆಯಿಂದ ಕೂಡಿದ ಇನ್ನೊಂದು ಪದ್ಯವನ್ನು ನೋಡಿ !—

ಇವರನುಡಿ ಯತಿವರರ ಬಾಯಹುಡಿ ಭಾವಿಸ ।
ಲ್ಕವರ ಬಾಹುಗಳು ಸಜ್ಜನರ ಬೇಹುಗಳು ಬಿಳುಕಿ ।
ಕಿವರ ಚಲ್ವಿನ ತುರುಬು ಸುಜ್ಞಾನಿಗಳ ಸದಾಚಾರಿಗಳ ಪುನದ
ಬಿರುಬು ॥

ಇವರ ನಲ್ವಿನ ದೇಹಮತ್ತ್ರಮುರ ದಾಹವಿಂ ।
ತಿವರ ನಡೆಯನ ಘರಸುಗಳಿಗಸೇ ಕಡೆಯೆಂಬ ।
ಯುವತಿಯರು ಬಂದರಾ ದೇವ ದೇವ ದೇವೇಶನಂ ನೋಡೆ
ತಮುತಮಗೆ ಕುಂಡೆ ॥೧॥

ಸ್ತ್ರೀಯರಲ್ಲಿರುವ ಸಹಜ ಸೌಂದರ್ಯವನ್ನು ನಿರಾಯಾಸವಾದ ಅತಿ ಸುಲಭ ಶೈಲಿಯಲ್ಲಿ ಹೇಳುವ ಮಲ್ಲಣಾರ್ಯನ ರೀತಿಯು ನಿಜವಾಗಿಯೂ ಹೊಗಳತಕ್ಕುದಾಗಿದೆ.

ಇಂತು ಕನ್ನಡದಲ್ಲಿ ಅಮೌಲ್ಯವಾದ ಕೃತಿಗಳನ್ನು ಬರೆದು ಕನ್ನಡಿಗರಾದ ನಮ್ಮುಗಳಿಗಾಗಿ ಸಾಹಿತ್ಯರೂಪವಾದ ಮೂಲ ಧನವನ್ನು ಸಂಗ್ರಹಿಸಿ, ಕವಿ ಮಲ್ಲಣಾರ್ಯನು ಗುರು-ಲಿಂಗ-ಜಂಗಮ ಸೇವೆನಿರತನಾಗಿ ಉಚಿತಕಾಲದಲ್ಲಿ ಶಿವಸಾಯುಜ್ಯವನ್ನು ಹೊಂದಿದನು ಆದರೆ ಅವನ ಕೀರ್ತಿ ರೂಪವಾದ ದೇಹವು ಮಾತ್ರ ನಮ್ಮ ಕಣ್ಮನಗಳಲ್ಲಿ ಮನದಟ್ಟಾಗಿ ನಿಲ್ಲುವಂತೆ ಮಾಡುವದಕ್ಕೆ ಅವನ "ಭಾವಚಿಂತಾರತ್ನ"ವೆಂಬ ಗ್ರಂಥವೊಂದರ ಅಸ್ತಿತ್ವವೇ ಸಾಕು !

---

**ವಿಶೇಷ ಸೂಚನೆ :—** ಸಾಧಾರಣವಾಗಿ ಇಂದಿನ ಆವುದೇ ಒಂದು ಸಮಾಜವನ್ನು ತಕ್ಕೊಂಡರೂ ಅದರ ಧರ್ಮಸಾಮ್ರಾಜ್ಯದಲ್ಲಿ ಮಿನುಗಿದ ವಿಭೂತಿಗಳ ಚರಿತ್ರೆಗಳು ಐತಿಹಾಸಿಕ ಪರಿಗಲ್ಲಿಗೆ ಅರೆದು ನೋಡಿದಲ್ಲಿ ಬೆಲೆಯುಳ್ಳವೆಂಬಂತೆ ತೋರುವಂತಹಗಳಿರಬೇಕೆಂದೇ ಆಯಾ ಸಮಾಜದಲ್ಲಿನ ಜನರುಗಳ ಮತ. ಈ ಸೊಲ್ಲನ್ನು ವಾಚಕರು ಅಲ್ಲಲ್ಲಿ ಬೇರೆ ಬೇರೆ ವೃತ್ತಪತ್ರಗಳಲ್ಲಿ ಕಾಣಬಹುದು. ಹಾಗೆಯೇ ನಾವಾದರೂ ಇಂದಿನ ನಮ್ಮ ಲೇಖನವು ಕರ್ನಾಟಕ ಕವಿಚರಿತೆ, ಈ ಹಿಂದೆ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ "ಭಾವಚಿಂತಾರತ್ನ" ಗ್ರಂಥ ವಿಮರ್ಶೆಯಲ್ಲಿ ಕೊಡಲಾಗಿರುವ ಅಂಶಗಳು, ಹಾಗೂ ರಾಜಶೇಖರ ವಿಳಾಸ ಮುಂತಾಗಿ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು ಬರೆಯಲಾಗಿದೆ.

# ಸ್ವಾಮಿಭಕ್ತ

ಲೇಖಕರು :— ಎಮ್. ಪಿ. ಮಹಿಷಿ ( ಹೊನ್ನಾವರ ಹಾಯಸ್ಕೂಲ
ದಲ್ಲಿ ಅಭ್ಯಾಸಿಸುವ ವಿದ್ಯಾರ್ಥಿ ).

೧.

ಇಂದು ಅದೇಕೋ ಜನರು ಅರಮನೆಯ ಕಡೆಗೆ ತಂಡ ತಂಡವಾಗಿ ನುಗ್ಗುತ್ತಲಿದ್ದಾರೆ. ಐದು ವರ್ಷದ ಮಗುವಿನಿಂದ ಐವತ್ತು ವರ್ಷದ ಮುದುಕರ ವರೆಗೆ ಎಲ್ಲರೂ ಅರಮನೆಗೆ ಹೋಗುವವರೇ!

ಆದರೆ ಒಬ್ಬರ ಮುಖದ ಮೇಲೆಯೂ ಸಂತೋಷದ ಚಿನ್ಹಗಳೇ ತೋರುವ ದಿಲ್ಲ. ಅತಿಶಯ ಕುತೂಹಲ ಮಾತ್ರ ಇದೆ. ಆವುದೋ ಒಂದು ಘೋರ ದೃಶ್ಯ ವನ್ನು ನೋಡುವದಕ್ಕೆ ಹೋಗುವಂತೆ ತೋರುತ್ತದೆ.

ಅರಸನ ಅಪ್ಪಣೆಯನ್ನು ಪಡೆಯದೆ ತನ್ನ "ಕುಲಸ್ವಾಮಿ"ಯಾದ ನೃಸಿಂಹನ ದೇವಾಲಯಕ್ಕೆ ದರುಶನಾರ್ಥಿಯಾಗಿ ಹೋದ ಒಬ್ಬ ಗರುಡನನ್ನು ಅವನ ತಪ್ಪಿಗೆ ಶಿಕ್ಷೆಯಾಗಿ ಇಂದು ಅವನನ್ನು ಮೃತ್ಯುವಿನ ದವಡೆಯಲ್ಲಿ ಕೊಡಬೇಕೆಂದು ರಾಜ ಸಭೆಯ ನಿರ್ಣಯವಾಗಿತ್ತು. ಈ ದೃಶ್ಯವನ್ನು ನೋಡಲಿಕ್ಕೆಂದೇ ಈ ಜನರು ಅರ ಮನೆಯ ಕಡೆಗೆ ಧಾವಿಸುತ್ತಿದ್ದರು. ವಿಸ್ತಾರವಾದ ರಾಜಾಂಗಣಮಧ್ಯದಲ್ಲಿ ಒಂದು ಎತ್ತರವಾದ ಕಂಬವು. ಕರಾಳ ಸ್ವರೂಪವನ್ನು ತಾಳಿ ನಿಂತಿದೆ. ಅದರ ಸುತ್ತಲೂ ಜನಜಾತ್ರೆಯು. ಎಲ್ಲರೂ ಮೇಲೆ ನೋಡುತ್ತ ಕಂಬದ ಸ್ವರೂಪವನ್ನೇ ತಾಳಿದ್ದಾರೆ.

ದೊರೆಯು ಬಂದು ಸಿಂಹಾಸನದ ಮೇಲೆ ಕುಳಿತನು. ಜನರ ಮುಖವು ಮತ್ತಿಷ್ಟು ಕುತೂಹಲಭಾವವನ್ನು ತಾಳಿತು. ಅಷ್ಟರಲ್ಲಿ ಆ ಅಪರಾಧಿ ಗರುಡ ನನ್ನು ಎದುರು ತಂದು ನಿಲ್ಲಿಸಿದರು. ಅರಸನ ಅಪ್ಪಣೆಯೂ ದೊರೆಯಿತು. ಅಪ ರಾಧಿಯು ಯಮನ ಮನೆಗೆ ಕೈಮಾಡಿ ಕರೆಯುತ್ತಿರುವ ಆ ಕಂಬವನ್ನು ಸರಸರನೆ ಏರಿದನು. ಜನರ ದೃಷ್ಟಿಯೂ ಅವನೊಡನೆ ಮೇಲಕ್ಕೇರಿತು.

ಆ ಗರುಡನು ಕರುಣೆಯಿಂದ ಕೂಡಿದ ಜನರ ಮುಖವನ್ನೂ ಅರಸನ ಬಾಡಿದ ಮುಖವನ್ನೂ ಒಮ್ಮೆ ದಿಟ್ಟಿಸಿ ನೋಡಿದನು. ಕಡೆಗೆ ಕೆಳಗೆ ನೋಡಿದನು. ಅಲ್ಲಿ ಅವನು ಕೆಳಗೆ ನೋಡಲು ಅಲ್ಲಿ ನೆಟ್ಟಿದ್ದ ಖಡ್ಗಗಳು ಅವನ ದೃಷ್ಟಿಗೆ ಬಿದ್ದವು.

ದೇವುಡು ಅವರ ಕತೆಯಾದ "ಮುಯ್ಯಿಗೆ ಮುಯ್ಯಿ" ಎಂಬದರ ರೂಪಾಂತರ.

ಕರುಣೆಯ ಕುರುಹನ್ನು ಕಾಣದೆ; ತನ್ನ ಕರುಳನ್ನು ಬಗೆಯಲು ಕರಗಳನ್ನು ಮೃತ್ಯು ದೇವತೆಯು ಮುಂದೆ ಚಾಚಿದಂತೆ ಕಂಡಿತು. ಆದರೆ ಅನನು ಭಯಗ್ರಸ್ತನಾಗದೆ ಗಂಭೀರವಾಗಿ ನಿಂತಿದ್ದ.

ಅಷ್ಟರಲ್ಲಿ ದೊರೆಯ ಅಧಿಕಾರಿಯೊಬ್ಬನು ಬಂದು, "ಕೊನೆಯ ಆಸೆಯೇನಾದರೂ ಇದ್ದರೆ ದೊರೆಗಳ ಪಾದದಲ್ಲಿ ಈಗಲೇ ಅರಿಕೆ ಮಾಡಿಕೋ" ಎಂದು ಒದರಿ ಯುವಕನಿಗೆ ಹೇಳಿದನು. ಕೂಡಲೇ ಯುವಕನು "ದೊರೆಗಳನ್ನು ಸ್ವಲ್ಪ ಕರೆಯಿರಿ" ಎಂದು ನಿಂತು ನಿಂತು ಬರುತ್ತಿರುವ ಮಾತನ್ನು ಒಮ್ಮೆ ಉಸುರಿದನು. ದೊರೆಯು ಮರುಕ್ಷಣದಲ್ಲಿಯೇ ಬಂದು ಕಂಬದ ಬದಿ ಮೇಲು ಮುಖಮಾಡಿ ನಿಂತುಕೊಂಡನು. ಆಮೇಲೆ ಯುವಕನು ಒಂದು ಕ್ಷಣ ತಡೆದು "ಒಡೆಯಾ! ನಿನ್ನ ಅನ್ನವನ್ನುಂಡು ಕೊಬ್ಬಿದ ಈ ದೇಹವನ್ನು ನಿನ್ನ ಸೇವೆಯಲ್ಲಿಯೇ ಸವೆಯಿಸಬೇಕೆಂದು ಎಣಿಸಿದ್ದೆ. ಆದರೆ ಲೋಕಸ್ವಾಮಿಯ ಮನಸ್ಸಿಗೆ ಬರಲಿಲ್ಲಾ. ನಾನು ಹೀಗೆಯೇ ಎಲ್ಲರ ಎದುರಿಗೆ ಅಪರಾಧಿಯಾಗಿ ಸಾಯಬೇಕೆಂದು ಆತನ ಇಚ್ಛೆ! ಇಚ್ಛೆಯಿದ್ದಂತೆ ಆಗಲಿ!! ಆದರೆ ಮುಂದಿನ ಜನ್ಮದಲ್ಲಿಯಾದರೂ ನಿನ್ನ ಸೇವೆಯೇ ದೊರೆಯಲೆಂದು ನನ್ನ ಆಸೆ. ಹಾಗೆಯೇ ನೀನು ಹರಸಬೇಕು. ಸುಖವಾಗಿ ಪ್ರಾಣ ಬಿಡುವೆನು. ಇಷ್ಟೇ ನನ್ನ ಬೇಡಿಕೆ." ಎಂದುಸುರಿದನು. ಅರಸನ ಕಣ್ಣುಗಳಲ್ಲಿ ನೀರು ಧಾರೆಯಾಗಿ ಸುರಿಯಿತು.

## ೨.

ಇಂದೂ ಅದೇ ಜನರು ಅರಮನೆಯ ಕಡೆಗೆ ಅತಿ ಅವಸರದಿಂದ ನಡೆದಿದ್ದಾರೆ. ಆದರೆ ಅವರ ಮುಖವು ಹಿಂದಿನಂತೆ ಭಯಕುತೂಹಲ ಭಾವವನ್ನು ತಳೆದಿಲ್ಲ. ಅದರ ಬದಲು ಆನಂದವು ಹೆಚ್ಚಾಗಿ ಹೊರಚಿಮ್ಮ ತೊಡಗಿದೆ. ಎಲ್ಲರೂ ಉತ್ಸಾಹಭರಿತವಾದ ಸಂತೋಷದಿಂದ ನಡೆದಿದ್ದಾರೆ.

ಹಿಂದೊಮ್ಮೆ ಮೃತ್ಯುಮುಖದ ದವಡೆಯಲ್ಲಿ ಬಿದ್ದು ಹೋಗಿದ್ದ ಆ ಗರುಡನು ರಾಜ-ಪ್ರಜರ ಕರುಣೆಯಿಂದ ಸಂರಕ್ಷಿಸಲ್ಪಟ್ಟು ಈಗ ಚೋಳಹೊಯಿಸಲರ ನಡುವೆ ನಡೆದ ಕಾಳಗದಲ್ಲಿ "ಚೋಳರೇ ವಿಜಯಿಗಳಾಗುತ್ತಿರುವರೆಂಬ ವಾರ್ತೆಯು ನಿಜವಾಗಿದ್ದರೂ" ಅರಿರಾಜನ ರುಂಡವನ್ನು ತಂದು ತನ್ನ ಸ್ವಾಮಿಯ ಪಾದದಲ್ಲಿ ಅರ್ಪಿಸಿ ರಾಜ-ಪ್ರಜರುಗಳನ್ನು ಸಂರಕ್ಷಿಸಿದನು.

ಅವನ ಈ ಉಪಕಾರ ಸ್ಮರಣಾರ್ಥ ರಾಜಾಂಗಣದಲ್ಲಿ ದೊಡ್ಡ ಸಭೆಯು ಇಂದು ನೆರೆಯುವದಾಗಿ ಗೊತ್ತಾಗಿದೆ. ಆದ್ದರಿಂದಲೇ ಈಗ ಪುರಜನರೆಲ್ಲ ಆ ಕಡೆಗೆ ಇಷು, ಅವಸರದಿಂದ ನಡೆದಿರುವರು.

ಈ ಸಭೆಯು ಹಿಂದಿನ ಅದೇ ರಾಜಾಂಗಣದಲ್ಲಿ ನೆರೆದಿದೆ. ಹಿಂದಿನ ಆ ಕರಾಳ ಸ್ವರೂಪದ ಕಂಬವು ಇಂದು ವಿಜಯಧ್ವಜವನ್ನು ಸಿಕ್ಕಿಸಿಕೊಂಡು ವಿಜಯದ ಹೆಮ್ಮೆಯಿಂದ ಮೆರೆಯತೊಡಗಿದೆ.

ಅರಸನು ಬಂದು ಅವನಿಗಾಗಿ ಶೃಂಗರಿಸಿದ ಸಿಂಹಾಸನದಲ್ಲಿ ಕುಳಿತನು. ಹಿಂದೆ ಇದೇ ಸಂದರ್ಭದಲ್ಲಿ ಜನರ ಮುಖವು ಭಯಕುತೂಹಲಭಾವವನ್ನು ತಳೆದಿದ್ದಿತು. ಇಂದು ಅದರ ಬದಲು ಸಂತೋಷದಿಂದ ನಲಿಯತೊಡಗಿತು. ಅರಸನು ಕೆಲನಿಮಿಷ ತಡೆದು ಕಡೆಗೆ ಎದ್ದುನಿಂತು ಅಭಿಮಾನಯುಕ್ತವಾದ ವಾಣಿಯಿಂದ "ಮಹಾನುಭಾವನಾದ ಗರುಡನೇ, ಅಂದು ನಾವು ನಿನ್ನನ್ನು ಒಂದು ಕ್ಷುಲ್ಲಕ ಕಾರಣದ ದೆಸೆಯಿಂಂದ ಮೃತ್ಯುವಿನ ದವಡೆಗೆ ಕೊಡಲೆಣಿಸಿದ್ದೆವು. ಆದರೆ ಸುದೈವದಿಂದಲೂ, ಲೋಕಸ್ವಾಮಿಯ ಅನುಗ್ರಹದಿಂದಲೂ ಬದುಕಿ ಇಂದು ನಮ್ಮೆಲ್ಲರನ್ನು ಬದುಕಿಸಿದೆ. ಅದರ ಸ್ಮರಣಾರ್ಥ ನಾವು ಈಗ ಕೊಡುತ್ತಿರುವ ಈ ಅಲ್ಪ ಕಾಣಿಕೆಯನ್ನು ಸ್ವೀಕರಿಸು. ನಾವು ನಿನಗೆ ಚಿರಋಣಿಗಳು. ನಿನ್ನದೇ ನಿಜವಾದ ಸ್ವಾಮಿ-ಭಕ್ತಿ. ನೀನೇ ನಿಜವಾದ "ಸ್ವಾಮಿಭಕ್ತ" ಎಂದನು.



## ಕೋಗಿಲೆಗೆ

( ಶ್ರೀ ಅಂಬಿಕಾತನಯದತ್ತರ 'ಕೋಗಿಲೆ' ಎಂಬ ಅಜರಾಮರ ಪದದೊಳಗಿನ ಎರಡು ನುಡಿಗಳಿವು : )

ಹರಣದ ಮುಡುಪಿಡುವ ಗರುಡರ ಕರುನಾಡ
ಚರಣ ಚಿಗಿತಿರುವಂತೆ ಕೋಗಿಲೇ
ಶರಣರ ದಾಸರ ಕರುಣೆ ಕಿರಣಿಸುವಂತೆ
ಕೂಗುವಿಯಾ ಹೇಳು ಕೋಗಿಲೇ !

ಇನ್ನು ನಿದ್ದೆಯ ತೊರೆದು ತನ್ನತನವನರಿದು
ಭಿನ್ನ ಭಾವವ ಬಿಟ್ಟು ಕೋಗಿಲೇ !
ನನ್ನ ಕನ್ನಡ ನಾಡ ಚೆನ್ನರೇಳುವಂತೆ
ಕೂಗುವಿಯಾ ಹೇಳು ಕೋಗಿಲೇ ?

# ಬಸವಣ್ಣನವರ ಈಶ್ವರ ಪೂಜೆ.

( ಹರಿಹರ ಕವಿಯ ' ಬಸವರಾಜ ದೇವರ ರಗಳೆ ' ಯಿಂದ )

" ಎನ್ನ ಸುಖನಿಧಿಯೆ ಗುಣನಿಧಿಯೆ ಕೂಡಲಸಂಗ
ಎನ್ನ ಭುಜಬಲವೆ ಮನದೊಲವೆ ಕೂಡಲಸಂಗ
ನಿತ್ಯ ನಿರ್ಮಳನೆ ನಿಃಕಳನೆ ಕೂಡಲಸಂಗ
ದಿತ್ಯ ನಿರ್ಭಯನೆ ನಿರುಪಮನೆ ಕೂಡಲಸಂಗ
ಎನ್ನನತಿ ಕರುಣದಿಂ ನೋಡು ಕೂಡಲಸಂಗ
ಎನ್ನ ಮನದಕ್ಕರೊಳು ಕೂಡು ಕೂಡಲಸಂಗ
ಎನ್ನ ಮನದೊಳಗೆ ಕುಣಿದಾಡು ಕೂಡಲಸಂಗ"
ಎಂದು ಸ್ತುತಿಗೆಯ್ವುತಂ ಸ್ನೇಹರಸದೊಳ್ ಕೂಡಿ
ಇಂದುಧರನೊಳ್ ಸಲುಗೆಯಿಂ ಭಕ್ತಿಯುಂ ಬೇಡಿ
ಸಂದ ಗದುಗದಿಕೆಯಿಂದಾನಂದವೇರುತಂ
ನಟ್ಟಪರ್ಪ ನೋಟದಿಂದೋಜೆಯುಂ ಮೀರುತಂ
ಭವದಿಂದ ಹಿಂಗುತಂ ನೆನಹಿಂದ ಹಿಗ್ಗುತಂ
ಬೆವರುತಂ ಬಿಕ್ಕುತಂ ತೇಗುತಂ ತೂಗುತಂ
ಕ್ರಮವಳಿದು ಸುಳಿದು ಸುಖಿಯಾಗುತಂ ಬೀಗುತಂ
ನಮಿಸುತಂ ಕಂಪಿಸುತೆ ಮನವೊಲಿದು ಹೊಗಳುತಂ
ಪುಳಕಂಗಳಿದಿರೇರೆ ಸುಖಜಲಂ ಕಣ್ತೀವೆ
ಬೆಳೆವ ಗದುಗದವಲರೆ ಭಕ್ತಿ ಚಿತ್ತಮನೋವೆ
ಕಂಪಿಸುತೆ ನಡೆಯುಡುಗೆ ಮನವಕ್ಕರಿಂ ಕರಗೆ
ಜೊಂಪಿಸುತೆ ತನು ಜೋಲೆ ಸಾತ್ತ್ವಿಕರಸಂ ಮಸಗೆ
ಮಣಿಮಣಿದು ಕುಣಿಕುಣಿದು ಕೆಲೆಕೆಲೆದು ನಲಿದಾಡಿ
ತಣಿತಣಿದು ತಕ್ಕೈಸಿ ಮಿಕ್ಕು ಮಲೆಮಲೆದಾಡಿ
ಆಡುತಾಡುತ್ತಲ್ಲಿ ಪೊಗಳ್ವುದಂ ನೆರೆ ಮರೆದು
ನೋಡನೋಡುತ್ತಲ್ಲಿ ನೋಟಮುಂ ಮಿಗೆ ಮರೆದು
ಕಣ್ಮುಚ್ಚಿ ಗದುಗದಿಸಿ ಜೋಲ್ದು ಜೊಂಪಿಸಿ ಬಿದ್ದು
ಉಣ್ಮುವ ಶಿವಾನಂದರಸದ ಹೊನಲೊಳಗದ್ದು
ಈಸಾಡಿ ಗಂಗಾಧರನ ಚರಣಮುಂ ಪಿಡಿದು
ಮನದೊಳಚ್ಚೊತ್ತಿ ಸುಖಮೂರ್ಛೆಯೊಳ್ ?ಂದಿದು
ಬಸವಣ್ಣನಪ್ರತಿಮನೊಲಿದು ಪೂಜಿಸುತಮಿರೆ
ಬಸವರಾಜಂ ಮಚ್ಚಿ ಪೂಜಿಸುತ್ತಿರೆಯಿರೆ........

# ದೈವಘಟನೆ

ಲೇಖಕರು :— ಶ್ರೀ. ಮಹಿಷಿ ಕೃಷ್ಣಶರ್ಮಾ

೨ನೇ ಪ್ರಕರಣ

## ದೇವಿಯ ಮೇಲೆ ಹೊರೆ

( ಹಿಂದಿನಿಂದ ಸಾಗಿದ್ದು )

ಪ್ರಿಯ ವಾಚಕರೆ, ಈ ಪ್ರಕಾರವಾಗಿ ತಾರಾಕುಮಾರಿಯು ವಿಪ್ರಾವಸು ವಿನೊಡನೆ ಪಾಟಲೀಪುತ್ರಕ್ಕೆ ನಡೆದಳಷ್ಟೆ ? ನೋಡಿದಿರಾ ! ಹೆಂಗಸಿನ ನಿರ್ದಯ ತನವನ್ನು ! ತನ್ನ ಭಗಿನಿಯೆಂದರೆ ಪಂಚಪ್ರಾಣಗಳೆಂದು ತಿಳಿದಿರುವ ತನ್ನ ಬಂಧು ವಾಗ ಶೂರಸೇನನನ್ನೂ, ಕೇವಲ ತನ್ನ ಉದರದಿಂದ ಹೊರಬಿದ್ದ ಕುವರಿ ಎಂದು ಜೋಕೆ ಮಾಡುತ್ತಿದ್ದ ತನ್ನ ಅತ್ತಿಗೆಯನ್ನೂ ಹಾಗೂ ನೀರಿಗೆಂದು ಹೋದ ತನ್ನ ಅತ್ತೆಯು ವೇಳೆಗೆ ಬಾರದಿದ್ದರೆ ಹಂಬಲಿಸುತ್ತ ಬಾಯಿ ಬಿಡುವ ಚಿಕ್ಕಳಿಯ ಪ್ರದಸ್ಯುವನ್ನೂ ತೊಲಗಿ, ತನಗೆ ಏನೊಂದೂ ಸಂಬಂಧವಿಲ್ಲದ ವಿಪ್ರಾವಸುವಿನೊ ಡನೆ ನಮ್ಮ ಕುಮಾರಿಯು ವಿಚಾರಶೂನ್ಯಳಾಗಿ ಹೋದದ್ದನ್ನು ನೋಡಿ ನಿಮ್ಮಗಳಿಗೆ ಆಶ್ಚರ್ಯವಾಗಿರಬಹುದಲ್ಲವೆ ? ಕೇಳಿರಿ. ಇಂದ್ರಿಯ ಬಲಾತ್ಕಾರವೇ ಅಂತಹದು. ಮನುಷ್ಯಪ್ರಾಣಿಯು ಸ್ತ್ರೀ ಇರಲಿ ಅಥವಾ ಪುರುಷನಿರಲಿ. ಬ್ರಹ್ಮಚಾರಿ ಇರಲಿ ಅಥವಾ ತಾಪಸಿ ಇರಲಿ, ಪಂಡಿತನಿರಲಿ ಅಥವಾ ಮೂರ್ಖನಿರಲಿ ಎಂಥವನೇ ಇರಲಿ ' ಬಲವಾನ್ ಇಂದ್ರಿಯ ಗ್ರಾಮೋ ವಿದ್ವಾಂಸಮಪಿ ಕರ್ಷತಿ ' ಎಂಬತೆ ಒಮ್ಮೆ ಇಂದ್ರಿಯ ಬಲಾತ್ಕಾರಕ್ಕೆ ಸಿಲುಕಿದನೆಂದರೆ, ಇವರು ತನ್ನ ತಾಯಿ-ತಂದೆ ಗಳು, ಅಕ್ಕ-ತಂಗಿಯರು, ಅಣ್ಣತಮ್ಮಂದಿರು, ಆಪ್ತರು, ಇಷ್ಟರು ಮುಂತಾದ ಯಾವ ವಿಚಾರವೂ ಅವರ ತಲೆಯಲ್ಲಿ ಸೇರದೆ ' ತಾನು ತುಳಿದುದೇ ಸ್ವರ್ಗಮಾರ್ಗ' ವೆಂದು ಭಾಸವಾಗಿ ಹೋಗುವದು. ಅಷ್ಟು ದೂರವೇಕೆ ಪ್ರಸ್ತುತ ಜಗತ್ತಿನಲ್ಲಿ ಈ ವಿಷಯಸುಖಕ್ಕಾಗಿ ತಮ್ಮ ತಾಯಿ-ತಂದೆಗಳನ್ನೂ, ಬಂಧು-ಭಗಿನಿಯರನ್ನೂ, ಪ್ರತ್ಯಕ್ಷ ತಮ್ಮ ಉದರದಿಂದ ಹೊರಬಿದ್ದ ಹಸುಮಕ್ಕಳನ್ನೂ ಸಹ ತೊಲಗಿದಂತಹ ಎಷ್ಟೋ ಹೆಣ್ಣುಮಕ್ಕಳು ನಿಮ್ಮ ದೃಷ್ಟಿಗೆ ಬೀಳುವದಿಲ್ಲವೇ ? ಹಾಗು ಸುರನದಿ ಎನಿಸಿದ ಪವಿತ್ರ ಗಂಗೆಯು ಕುರುಕುಲಾಧಿಪನಾದ ಶಂತನುವಿನ ಪ್ರೇಮಪಾಶಕ್ಕೆ

ಒಳಪಟ್ಟು ದೇವಲೋಕವನ್ನು ತೊಲಗಿ ಮೃತ್ಯುಲೋಕವಾಸವನ್ನು ಕೈಕೊಳ್ಳ ಲಿಲ್ಲವೇ ಹೇಗೆ? ಇವೆಲ್ಲವುಗಳಿಂದ ಕಂಡುಬರುವದೇನಂದರೆ ಯಾವದೇ ವಿಷಯ ಕ್ಕಾದರೂ ಮಾಯಾರೂಪಿಯಾಗಿದ್ದ ಹೆಣ್ಣು ಲಜ್ಜಾರೂಪ ಆವರಣದಿಂದ ಆಚ್ಛಾದಿತ ಳಾಗಿರುವ ವರೆಗೆ ಗಂಡಸಿನ ಬಾಳ್ವೆಯು. ಅಂತೆಯೇ 'ನಡೆದರೆ ನಾರಿ ಇಲ್ಲವಾದರೆ ಮಾರಿ' ಎಂಬ ನಾಣ್ಣುಡಿಯಾಗಿರುವದು. ಇದರಂತೆಯೇ ನಮ್ಮ ತಾರಾಕುಮಾರಿ ಯಾದರೂ ಅಪರಿಚಿತನಾದೋರ್ವ ರಾಜಕುಮಾರನೊಡನೆ ಹೋಗಿದ್ದರೂ ಅವಳ ಹೇತುವು ನಿಮ್ಮಗಳಿಗೆ ಸ್ವಲ್ಪದರಲ್ಲಿಯೇ ತಿಳಿಯುವದು. ಇತರ ಸ್ತ್ರೀಯರ ಸಾದೃಶ್ಯವು ನಮ್ಮ ಕುಮಾರಿಯನ್ನು ಎಳ್ಳಷ್ಟಾದರೂ ಹೋಲುವದಿಲ್ಲ. ಅಂತೇ ಮೂರ್ಛಿತಳಾಗುವ ಕಾಲಕ್ಕೆ ಅವಳು, ಎಂದಿನಿಂದಲೂ ದುರ್ದೈವದಿಂದ ತಾನು ಹಾಗು ತನ್ನ ಬಂಧುವು ಅನುಭವಿಸುತ್ತಿರುವ ವಿಪತ್ತು ತನ್ನ ರೂಪಾತಿಶಯವೆಂಬ ದೊಂದೇ ಮಾರ್ಗದಿಂದ ಈ ಪ್ರಕಾರವಾಗಿ ಯಾವನಾದರೊಬ್ಬ ನರಪುಂಗವನೊಡನೆ ಆಕಸ್ಮಾತ್ತಾಗಿ ಸಂಭವಿಸುವ ತನ್ನ ಲಗ್ನ ಬಂಧನದಿಂದಲೇ ದೂರಾಗುವದೆಂದು ತಿಳಿದಿದ್ದ ನಮ್ಮ ತಾರಾಕುಮಾರಿಯು, 'ನನ್ನ ಮನೋಬಯಕೆಯು ಪೂರ್ಣ ವಾಯಿತೇ' ಎಂದು ಉದ್ಗಾರವನ್ನು ತೆಗೆದು ಮೂರ್ಛೆಹೋದಳು. ತನಗೆ ಸುಖ ವಾದರೆ ತನ್ನ ಬಂಧುವಿಗೂ ಸುಖವೇ ಎಂದವಳ ಹೇತುವು. ಇರಲಿ.

ತಾರಾಕುಮಾರಿಯು ನೀರಿಗೆಂದು ಹೊರಟು ಹೋದ ತರುವಾಯ ಅರಣ್ಯ ವಾಸಿಗಳಾಗಿದ್ದ ಅವಳ ಬಂಧು ಮುಂತಾದವರ ವಿಷಯವನ್ನು ತಿಳಿದುಕೊಳ್ಳಲು ನಮ್ಮ ವಾಚಕರು ಆತುರಪಡುತ್ತಿರಬಹುದು. ಹಾಗಾದರೆ ನಡೆಯಿರಿನ್ನು, ಅವರ ಸಮಾಚಾರವನ್ನಿಷ್ಟು ತೆಗೆದುಕೊಳ್ಳುವಾ. ಇತ್ತ ನೀರಿಗೆ ಹೋದ ಸಾದಿನಿಯೂ ಬರಲಿಲ್ಲಾ, ಅತ್ತ ಕಂದಮೂಲಾದಿಗಳನ್ನು ತರಲೆಂದು ಹೋದ ಪತಿಯೂ ಬರ ಲಿಲ್ಲಾ. ಇದೆಲ್ಲ ಪರಿಸ್ಥಿತಿಯನ್ನು ಕಂಡು ವಸುಂಧರಾ ರಾಣಿಯು ಹಾಹಾರಿದವಳಾಗಿ ಗುಡಿಸಲಿನಿಂದ ಸಮೀಪದಲ್ಲಿಯೇ ಇದ್ದ ಒಂದು ದಿನ್ನೆಯನ್ನೇರಿ ಸುತ್ತಲೆಲ್ಲವು ನೋಡಬೇಕೆಂದು ಹೊರಟಳು. ಮಗು ಪ್ರದಸ್ಯುವಾದರೂ, 'ಅಮ್ಮಾ, ನಿಲ್ಲು, ನಿಲ್ಲು, ನಾನೂ ಬರುವೆನು. ನನ್ನೊಬ್ಬ-ನನ್ನೇ ಬಿಟ್ಟು ನೀನೆಲ್ಲಿ ಹೊರಟೆ? ಅತ್ತೆಯೂ ತಾತನೂ ಅಪ್ಪಾ, ಇನ್ನೂ ಬರಲಿಲ್ಲವಲ್ಲ? ನನಗಂತೂ ಹಸಿವೆಯು. ನೀರಡಿಕೆಯಾದರೋ? ಗಂಟಲಾರಿದೆ. ನನಗೆ ನೀರು ಬೇಕು. ಅಪ್ಪಾ, ನೀರು ನೀರು." ಎಂದು ಅಳಲಾರಂಭಿಸಿದನು. ಅವನ ಅಳುವನ್ನು ನೋಡಿ ಸಹಿಸಲಾ ರದೆ ವಸುಂಧರೆಯು "ಅಪ್ಪಾ ಪ್ರದಸ್ಯು, ಸ್ವಲ್ಪ ತಡೆ. ಅವರು ಈಗ ಬರಬಹುದು. ಬಂದೊಡನೆಯೇ ಒಂದು ಗೆಣಸನ್ನಾದರೂ ಸುಟ್ಟು ಕೊಡುವೆನು. ಅದನ್ನು ತಿಂದು ಮೇಲೆ ನೀರು ಕುಡಿಯಬೇಕಪ್ಪಾ ಮಗು. ಒಣ ಹೊಟ್ಟೆಯಲ್ಲಿ ನೀರು ಹಾಕಬಾ ರದು!" ಎಂದವಳೇ ಹುಡುಗನನ್ನು ಬಗಲಲ್ಲೆತ್ತಿಕೊಂಡು ದಿನ್ನೆಯನ್ನು ಹತ್ತಿ

ನಾಲ್ಕೂ ದಿಕ್ಕುಗಳಲ್ಲಿ ನೋಡಲಾರಂಭಿಸಿದಳು. ಬಹುದೂರದಲ್ಲಿ ಕಣ್ಣಿಟ್ಟು ನೋಡಿದರೂ ಮನುಷ್ಯನ ಸುಳುವೇ ಕಾಣದಂತಾಗಿ, ಸೂರ್ಯನಂತೂ ಅತಿವೇಗವಾಗಿ ತನ್ನ ರಥವನ್ನು ನೂಕುತ್ತ ಅಸ್ತಾಚಲವನ್ನು ಹೆಚ್ಚು ಹೆಚ್ಚು ಸಮೀಪವಾಗಿ ಮಾಡಿಕೊಳ್ಳಹತ್ತಿದ್ದರಿಂದ ನಮ್ಮ ರಾಣಿಯು ಕೈಕಾಲುಗಳೇ ಹೋದಂತಾಗಿದ್ದರೂ, ನಿಜವಾದ ಕ್ಷತ್ರಿಯ ವಂಶದಲ್ಲಿ ಜನ್ಮ ತಳೆದ ಅವಳು, ತನ್ನ ಹಾಗು ತನ್ನ ಕುಮಾರನ ಪ್ರೇಮಕ್ಕಾಗಿ ಮುಂದಿನ ವ್ಯವಸ್ಥೆಯನ್ನು ಮಾಡಲೋಸುಗ ಏನೊಂದೂ ಮಾತಾಡದಲೆ ಹಾಗೆಯೇ ಗುಡಿಸಲಿನ ಮಾರ್ಗವಾಗಿ ಕೆಳಗಿಳಿಯುತ್ತ ಬರುತ್ತಿರುವಷ್ಟರಲ್ಲಿ ಅವಳ ಎದುರಿನ ದಾರಿಯಿಂದಲೇ ಶೂರಸಿಂಹನು ತಲೆಯ ಮೇಲೊಂದು ಗಂಟು ಹೊತ್ತುಕೊಂಡು ಕುಟೀರದ ಕಡೆಗೇ ಬರುತ್ತಿದ್ದನು. ಅವನನ್ನು ನೋಡಿದಾಕ್ಷಣವೇ ನಮ್ಮ ವಸುಂಧರೆಗೆ ಜೀವದಲ್ಲಿ ಜೀವ ಬಂದಂತಾಗಿ, " ಮಗುವೇ ಅಲ್ಲಿ ನೋಡು. ಅದಾರು ಬರುತ್ತಿರುವರು ? ನಿನ್ನನ್ನು ಹಡೆದವರಲ್ಲವೇ ? " ಎಂದು ಹರ್ಷಭರಿತಳಾಗಿ ತನ್ನ ಮಗುವನ್ನು ಕೇಳಿದಳು. ಪ್ರದಸ್ಯುವಂತೂ ಶೂರಸಿಂಹನನ್ನು ನೋಡಿದಕೂಡಲೇ ತಾಯಿಯ ಬಗಲಿನಿಂದ ಕೆಳಗೆ ಜಿಗಿದು, " ತಾತನು. ಅಹುದು ತಾತನು ಬಂದೇ ಬಿಟ್ಟನು, ತಾತಾ, ತಾತಾ ! " ಎಂದು ಒದರುತ್ತ ಅವನು ಬರುವ ಕಡೆಗೇ ಓಡುತ್ತ ಹೋಗಿ ಅವನಿಗೆ ತೆಕ್ಕೆ ಬಿದ್ದು, " ಅಪ್ಪಾ, ನೀನು ಇಷ್ಟು ಹೊತ್ತು ಎಲ್ಲಿಗೆ ಹೋಗಿದ್ದೆ ? ನೀನು ಬರುವದು ತಡವಾದದ್ದರಿಂದ ಅವ್ವನು ಹೆದರಿ ಕಣ್ಣಲ್ಲಿ ನೀರು ತಂದು ಅಳಲಾರಂಭಿಸಿದಳು. ನನಗಂತೂ ಬಹಳೇ ಹಸಿವೆಯಾಗಿತ್ತು. ತಾತಾ ಆ ಗಂಟಿನಲ್ಲಿದ್ದು ದೇನು ? ಹಣ್ಣುಗಳೇನು ? " ಎಂದು ತನ್ನ ತಂದೆಯ ನಿಲುವಂಗಿಯನ್ನು ಹಿಡಿದು ಮೇಲಕ್ಕೇರಲಾರಂಭಿಸಿದನು. ಕೂಡಲೇ ಶೂರಸಿಂಹನು ಅವನನ್ನೆತ್ತಿ ತೋಳುಗಳಲ್ಲಿ ತೆಗೆದುಕೊಂಡು ಮುದ್ದಾಡಿ, " ಮಗು, ಈ ಹೊತ್ತು ಗಡ್ಡೆಗೆಣಸುಗಳಿಗಾಗಿ ಬಹುದೂರ ಪ್ರಯಾಣ ಬೆಳೆಸಿದ್ದಾಯಿತು. ಹಣ್ಣುಗಳೆಲ್ಲಿಯವು ? ಮುಂಜಾವಿನಿಂದ ತಿರುಗಿ ತಿರುಗಿ ಬೇಸತ್ತ ನನಗೆ ಇವಿಷ್ಟು ಕಂದಮೂಲಗಳು ಸಿಕ್ಕುವದೆಂದರೆ ಸಾಕುಬೇಕಾಯಿತು. " ಎಂದನ್ನುತ್ತ ಗುಡಿಸಲಿನ ಮುಂಭಾಗದಲ್ಲಿದ್ದ ಕಟ್ಟೆಯಮೇಲೆ ಮಗನನ್ನಿಳಿಸಿ ಗಂಟು ಬಿಚ್ಚಿ " ಮಗೂ, ಇದೊಂದು ಪೇರಲ ಹಣ್ಣು ಮಾತ್ರ ಸಿಕ್ಕಿದೆ. ತೆಗೆದುಕೋ. ಇವು ಗೋಡಂಬೆಗಳು. ಇವನ್ನು ಸುಟ್ಟು ತಿನ್ನಬೇಕು. ಆಮೇಲೆ ಸುಟ್ಟು ಕೊಡುವಳು. ಬೇಕಾದರೆ ತಿನ್ನುವಿಯಂತೆ. " ಎದು ಮತ್ತೊಂದು ಸಾರೆ ಹುಡುಗನನ್ನು ಮುದ್ದಿಟ್ಟು ಅಲ್ಲಿಯೇ ಹಾಸಿದ್ದೊಂದು ಚಾಪಿಯ ಮೇಲೆ ಅಡ್ಡಾದನು.

ಕುಮಾರ ಪ್ರದಸ್ಯುವು ಹಣ್ಣು ಸಿಕ್ಕಿದ್ದರಿಂದ ಅತ್ತಿಂದಿತ್ತ ಇತ್ತಿಂದತ್ತ ಜಿಗಿದಾಡುತ್ತ " ಹಣ್ಣು. ಅವ್ವಾ ಹಣ್ಣು ಹಣ್ಣೆ"ಂದು ಜಿಗಿದಾಡುತ್ತಿರುವಲ್ಲಿ ಅವನಿಗಾದ ಆನಂದಕ್ಕೆ ಪಾರವಿಲ್ಲದಾಯಿತು. " ಜಗದೀಶಾ ! ಯಾವ ಮಾಳವಾದೇಶವು !

ಯಾವ ರಾಜಧಾನಿಯಾದ ಉಜ್ಜಯನಿಯು? ಅಂತಹ ಬಲಾಢ್ಯರಾಷ್ಟ್ರಕ್ಕೆ ಒಡೆಯನೆನಿಸಿ ಏಕಛತ್ರವನ್ನು ಹಿಡಿಸಿಕೊಂಡ ಅದಾವ ಬಲಸಿಂಹನು? ಅಂಥವನ ಮಕ್ಕಳು ಮೊಮ್ಮಕ್ಕಳು ಇವರಿಗೆ ಪೇರಲಕಾಯಿಯು ಸಹ ಅಪರೂಪವಾಯಿತೇ?" ಎಂದು ದುಃಖಪಡುತ್ತ ರಾಜ್ಞಿಯು ತನ್ನ ಪತಿಯು ತಂದಿಪ್ಪ ಗಂಟನ್ನು ಗುಡಿಸಲೊಳಕ್ಕೆ ತೆಗೆದುಕೊಂಡು ಹೋದಳು. ಅಷ್ಟರಲ್ಲಿ ಒಮ್ಮೆಲೇ ತಂಗಿಯು ನೆನಪಾಗಿ ಶೂರಸಿಂಹನು ಮೆಟ್ಟಿ ಬಿದ್ದು ಮೇಲಕ್ಕೆದ್ದು ಕುಳಿತು ಅಲ್ಲಿಯೇ ಜಿಗಿದಾಡುತ್ತಿರುವ ತನ್ನ ಮಗನನ್ನು ಕುರಿತು, "ಮಗು, ಅತ್ತೆ ಎಲ್ಲಿ? ಅತ್ತೆಯು ಎಲ್ಲಿಯೂ ಕಾಣುವದಿಲ್ಲವಲ್ಲ? ನಮ್ಮ ಸಲುವಾಗಿ ಮುಂಜಾವಿನಿಂದಲೂ ದುಡಿದು ದಣಿದಿದ್ದ ಆಕೆಯು ಗುಡಿಸಲಲ್ಲಿ ಮಲಗಿರುವಳೇ?" ಎಂದು ಪ್ರಶ್ನೆಯನ್ನು ಕೇಳಲು, ರಾಜಕುಮಾರನು:— "ತಾತಾ, ಯಾರು? ಅತ್ತೆಯೋ! ಅವಳು ಇಲ್ಲವೇ ಇಲ್ಲ. ಅವಳು ಎಲ್ಲಿಯೋ ದೂರ ಹೋಗಿಬಿಟ್ಟಳು. ನೀನೇಕೆ ಅವಳನ್ನು ಕರತರಲಿಲ್ಲ? ಹೀಗೆನ್ನುತ್ತ ಹುಡುಗನು ತನ್ನ ಕೈಯಲ್ಲಿದ್ದ ಹಣ್ಣನ್ನು ತಿನ್ನುವ ಭರದಲ್ಲಿ ಅರ್ಧ ಮರ್ಧ ಮಾತಾಡಹತ್ತಿದನು. "ಅತ್ತೆಯು ಇಲ್ಲ." ಎಂಬ ಶಬ್ದವು ಕುಮಾರನ ಬಾಯಿಂದ ಹೊರಟ ಕ್ಷಣವೇ ಮಹಾರಾಜನು ಘಾಬರಿಯಾಗಿ ಚಟ್ಟನೇ ಮೇಲಕ್ಕೆದ್ದು ಗುಡಿಸಲೊಳಕ್ಕೆ ಬಂದು ತನ್ನ ಪತ್ನಿಯನ್ನು ಕುರಿತು— "ಏನು? ತಾರಾಮತಿಯೆಲ್ಲಿ? ಇನ್ನೂ ಬಂದಿಲ್ಲವೇ?" ಎಂದು ಭಯಚಕಿತನಾಗಿ ಕೇಳಿದನು. ಅದಕ್ಕೆ ರಾಣಿಯು "ಪ್ರಾಣನಾಥ, ಇಲ್ಲ. ನಾದಿನಿಯವರು ಮುಂಜಾವಿನಲ್ಲಿ ನೀರು ತರಲಿಕ್ಕೆಂದು ಹೋದವರು ಇನ್ನೂ ಬರಲಿಲ್ಲ. ನಾನಾದರೂ ಈ ವಿಷಯದಲ್ಲಿ ತಮ್ಮನ್ನೇ ವಿಚಾರಿಸುವವಳಿದ್ದೆನು. ಅಷ್ಟರಲ್ಲಿ ತಾವೇ ಕುಮಾರನನ್ನು ಕೇಳಿದಿರಿ." ಎಂದು ಬಹು ವ್ಯಾಕುಲಳಾಗಿ ಉತ್ತರವನ್ನಿತ್ತಳು.

ಆಗಲೇ ಶೂರಸೇನನು ಸ್ವೇಚ್ಛೆಯಾಗಿ ಮೆರೆಯುತ್ತಿದ್ದ ವೃಕ್ಷವು ಸಿಡಿಲಿನ ಹೊಡತದಿಂದ ನೆಲಕ್ಕುರುಳುವಂತೆ ಭೂಮಿಯ ಮೇಲೆ ಬಿದ್ದು "ಹಾಯ್ ಸಹೋದರಿ, ಆಯಿತು. ಈ ಶೂರಸೇನನ ಪಾಪದ ಫಲವು ಪ್ರಾಪ್ತವಾಯಿತು. ಆಕಾಶವೇ ಹರಿದು ಬಿದ್ದಂತಾಗಿ ನಾನಂತೂ ದಿಶಾಮೂಢನಾದೆನು. ತಂಗಿ, ನೀರಿಗೆಂದು ಹೋದ ನೀನೇನು ಹಿಂಸ ಪಶುಗಳ ಬಾಯಿಗೆ ತುತ್ತಾದೆಯೋ? ಅಥವಾ ಯಾರಾದರೂ ನೀಚರು ನಿನ್ನನ್ನು ಕಣ್ಣು ತಪ್ಪಿಸಿ ಹರಣ ಮಾಡಿದರೊ? ಅಥವಾ ಇಹಲೋಕಕ್ಕೆ ಬೇಸತ್ತು ನೀನೇ ನನ್ನಂತಹ ಅಧಮನಿಂದ ಮುಕ್ತಳಾಗಬೇಕೆಂದು ಪ್ರಾಣ ಕೊಟ್ಟೆಯೊ? ಏನಾಯಿತು? ಸಹೋದರಿ, ಪ್ರಿಯ ಸಹೋದರಿ!" ಎಂದೆನ್ನುತ್ತ ಎದೆ ಎದೆ ಬಡಿದುಕೊಂಡು ಉರುಳಾಡಹತ್ತಿದನು. ಇದೆಲ್ಲವನ್ನು ನೋಡುತ್ತಿದ್ದ ತಾಯಿಮಕ್ಕಳಾದರೂ ಗಾಬರಿಯಾಗಿ ಅಳಲಾರಂಭಿಸಿದರು. ಮಹಾರಾಜನ ದುಃಖಕ್ಕಂತೂ ಪಾರವಿಲ್ಲದಾಯಿತು. ನಂತರ ರಾಣಿಯೇ ಸ್ವಲ್ಪ ದುಃಖ

ವನ್ನು ಆವರಿಸಿಕೊಂಡು ಧೈರ್ಯದಿಂದ, " ಮಹಾರಾಜ, ಸ್ವಲ್ಪ ಶಾಂತರಾಗಿರಿ ಪುರುಷರಾದ ತಾವೇ ಈ ಪ್ರಕಾರ ಪ್ರಲಾಪಿಸತೊಡಗಿದರೆ ನನ್ನಂತಹ ಅಬಲೆಯ ಹಾಗೂ ಕುಮಾರನ ಗತಿಯೇನು? ಮಗುವು ಘಾಬರಿಯಾಗಿ ಚೀರಹತ್ತಿದೆ. ಶಾಂತರಾಗಿರಿ. ಸ್ವಲ್ಪ ಶಾಂತರಾಗಿರಿ !! " ಎಂದು ಇನ್ನೂ ಅನೇಕ ವಿಧವಾಗಿ ದೈನ್ಯದಿಂದ ಬೇಡಿಕೊಳ್ಳಲಾರಂಭಿಸಿದಳು. ಆನಂತರ ಶೂರಸಿಂಹನು ದುಃಖವನ್ನು ಬಹು ಕಷ್ಟದಿಂದ ನುಂಗಿ ಎದ್ದು ಕುಳಿತಿದ್ದರೂ ಮತಿಮೂಢನಾಗಿದ್ದ ಅವನು ಅರ ಹುಚ್ಚನಂತೆ ತನ್ನಲ್ಲಿ ತಾನೆ, " ಪ್ರಿಯ ಭಗಿನಿ, ತಾರಾಮತಿ, ಅಂತೂ ನೀನು ಈ ನಿನ್ನ ಅಧಮ ಬಂಧುವನ್ನು ತೊಲಗಿದಿಯಲ್ಲವೇ? ನಿನ್ನ ಅಂತರಾತ್ಮವು ಈ ಭೂಮಿಯ ಮೇಲಿರುವದೋ ಅಥವಾ ಜನ್ಮ ನೀಗಿದೆಯೋ? ನಾನು ಸತ್ತನಂತರ ಪರಲೋಕದಲ್ಲಿರುವ ತಾತನಿಗೆ ಏನೆಂದು ಹೇಳಲಿ? ಕರ್ತವ್ಯಮೂಢನಾಗಿ, ಕ್ಷಾತ್ರ ಧರ್ಮಕ್ಕೆ ಅಸಹ್ಯವಾದ ಕೃತ್ಯದಿಂದ ರಾಜ್ಯವನ್ನು ನೀಗಿದ ನಾನು ನಿನ್ನ ಲಗ್ನ ವಿಷಯವಾಗಿ ಈ ಮೊದಲೇ ವಚನ ತೆಗೆದುಕೊಂಡಿದ್ದ ಅವನಿಗೆ ಏನೆಂದು ಉತ್ತರ ಕೊಡಲಿ? ವಚನಭ್ರಷ್ಟನಾಗಿ ಬೆನ್ನಿಲೆ ಬಂದ ಭಗಿನಿಯನ್ನು ಕಾಡಿನಂತಹ ಕಷ್ಟಕ್ಕೆ ಗುರಿಮಾಡಿ ಆತ್ಮಹತ್ಯೆಯಂತಹ ಅಸಹ್ಯ ಕೃತ್ಯಕ್ಕೆ ಈಡು ಮಾಡಿದೆನೆಂದು ಹೇಳಲ್ಯೋ? ಈ ನನ್ನ ಕೃತ್ಯಕ್ಕೆ ಆದಾರು ಒಪ್ಪುವರು? ನರನೋ ನಾರಾಯಣನೋ? ಯಾರೂ ಇಲ್ಲವು !! " ಎಂದು ಏನೇನೋ ಒಟಗುಡುತ್ತ ಸುಮ್ಮನೇ ಕುಳಿತುಕೊಂಡನು. ಒಂದರಕ್ಷಣಮುಟ್ಟಿಗೆ ಕಾಲವು ಕ್ರಮಿಸಿದ ತರುವಾಯ ಸ್ತಬ್ಧನಾಗಿದ್ದ ಅವನು ಕೂಡಲೇ ಮನದಲ್ಲಿ ಏನೋ ತಾಳಿ ಹಾಕಿದಂತೆ ಮಾಡಿ ಧೃಡಮನಸ್ಸಿನಿಂದ ತನ್ನ ಸತಿಯನ್ನು ಕುರಿತು, " ಮನೋಹರೆ, ನಾನಂತೂ ಸಹೋದರಿಯನ್ನು ಕಾಣದ ವಿನಃ ಬಾಯಲ್ಲಿ ನೀರನ್ನು ಸಹ ಹಾಕಲಾರೆನು. ಅವಳನ್ನು ಇದ್ದಲ್ಲಿಂದ ಶೋಧ ಹಚ್ಚಿ ತದನಂತರವೇ ನನ್ನ ಫಲಹಾರದ ಉದ್ಯೋಗವು." ಎಂದು ತಂಗಿಯ ಶೋಧಕ್ಕಾಗಿ ಗಡಿಬಿಡಿಯಿಂದ ಹೊರಡಲುದ್ಯುಕ್ತನಾದನು.

ಆಗಲಾ ಪಟ್ಟಮಹಿಷಿಯು , " ಮಹಾರಾಜ, ಸ್ವಲ್ಪ ತಾಳಿರಿ. ಇದೀಗ ಸೂರ್ಯನು ಅಸ್ತಾಚಲವನ್ನೇರುವನು. ನಾದಿನಿಯರು ಬಂದರೆ ಇನ್ನೂ ಸ್ವಲ್ಪ ಬರುವ ಹೊತ್ತಿದೆ. ಅಥವಾ ಕತ್ತಲೆಯಲ್ಲಿ ನೀವಾದರೂ ಅವರನ್ನು ಹುಡುಕುವ ಬಗೆಯಾದರೂ ಹೇಗೆ? ಭುವನೇಶ್ವರಿಯೇ ಆವರ ಬೆಂಬಲವಾಗಿದ್ದು ಅವರ ಜನ್ಮಕ್ಕೆ ತಿಲಮಾತ್ರವೂ ಧಕ್ಕೆ ಇಲ್ಲ. ಬೇಕಾದರೆ ನೀವು ನಸುಕಿನಲ್ಲೆದ್ದು ಹೋಗಿ ಅವರ ಶೋಧ ಹಚ್ಚಿರಿ. ಇಂತಹ ಅವೇಳೆಯಲ್ಲಿ ನೀವು ಹೋಗಿಬಿಟ್ಟರೆ. ಅರಣ್ಯವಾಸಿಗಳಾಗಿದ್ದ ನನ್ನ ಹಾಗೂ ಈ ಚಿಕ್ಕ ಮಗುವಿನ ಗತಿಯೇನು? ಸ್ವಲ್ಪ ವಿಚಾರಿಸಿ ಶಾಂತರಾಗಿರಿ !! " ಎಂದು ಅನೇಕ ವಿಧವಾಗಿ ದೈನ್ಯದಿಂದ ಹೇಳಿಕೊಳ್ಳಲಾರಂಭಿಸಿದಳು. ಆದರೂ ಶೂರಸೇನನು ಪಿಟ್ಟೆಂದು ಮಾತಾಡದೆ ತನ್ನ ಹೆಂಡತಿಯು ಸುಮ್ಮನಾದೊ

ಡನೆಯೇ ಭ್ರಾಂತನಂತೆ ಮೇಲಕ್ಕೆದ್ದು, "ಮನೋಹರೆ, ನೀನು ಏನೇ ಸಮಾಧಾನ ಹೇಳಿದರೂ ಆ ನನ್ನ ಪ್ರಿಯಭಗಿನಿಯನ್ನು ಕಾಣದ ವಿನಃ ನನ್ನ ಮನವು ಶಾಂತವಾ ಗುವದಿಲ್ಲ. ನೀವಂತೂ ಭದ್ರವಾದ ಕುಟೀರದಲ್ಲಿರುವಿರಿ. ನಿರಾಧಾರಿಯಾಗಿ ಕಾಡುಪಾಲಾಗಿದ್ದ ಅವಳ ಗತಿಯ ಬಗ್ಗೆ ಸ್ವಲ್ಪ ವಿಚಾರಿಸು. ಪ್ರಿಯೆ, ನೀನೇನೂ ಸಾಮಾನ್ಯ ಸ್ತ್ರೀಯಲ್ಲ. ವೀರ ಶಿರೋಮಣಿಯ ಉದರದಲ್ಲಿ ಜನ್ಮ ತಳೆದ ನೀನು ವೀರ ಕುವರಿಯೂ, ವೀರಪುತ್ರನಿಗೆ ಜನ್ಮ ಕೊಟ್ಟ ನೀನು ವೀರ ಮಾತೆಯೂ, ವೀರ ಪುರುಷನ ಕೈ ಹಿಡಿದ ನೀನು ವೀರಸತಿಯೂ ಇದ್ದು ಏನೂ ಅರಿಯದವಳಂತೆ ಮಾತಾಡುತ್ತಿರುವೆಯಲ್ಲ! ಕ್ಷತ್ರಿಯ ವಂಶದಲ್ಲಿ ಜನ್ಮ ಹೊಂದಿದ ನೀನು ಅಕ-ಸ್ಮಾತ್ ಬರತಕ್ಕ ಪ್ರಸಂಗಗಳಲ್ಲಿ ನಿನ್ನ ಹಾಗು ಕುಮಾರನ ಸಂರಕ್ಷಣವನ್ನು ನಾನು ತಿರುಗಿ ಬರುವ ವರೆಗೆ ನೀನೇ ಮಾಡುತ್ತಿರಬೇಕು. ಭುವನೇಶ್ವರಿಯ ಕೃಪಾಛತ್ರ ವಂತೂ ಇದ್ದೇ ಇದೆ. ತಿಲಮಾತ್ರವೂ ಚಿಂತಿಸದಿರು. ಭಕ್ತರಾದ ನಮ್ಮನ್ನು ಆ ಜಗದಂಬೆಯು ನಮ್ಮ ಕೂದಲು ಕೂಡ ಕೊಂಕದಂತೆ ಸಂರಕ್ಷಿಸಲು ಸಮರ್ಥಳಿರು ವಳು." ಎಂದೆನ್ನುತ್ತ ಅವನು ತನ್ನ ಶಿರಸ್ತ್ರಾಣವನ್ನೂ ಖಡ್ಗವನೂ ತೆಗೆದು ಕೊಂಡು ತನ್ನ ಮಗುವಾದ ಪ್ರದಸ್ಯುವನ್ನು ಕುರಿತು— "ಬಾಳಾ, ನಿಮ್ಮ ಸಂರ-ಕ್ಷಣ ಕರ್ತಳು ಜಗನ್ಮಾತೆಯಿದ್ದಾಳೆ. ನಾನು ನಿನ್ನ ಅತ್ತೆಯನ್ನು ಶೋಧಿಸಿ ಕೊಂಡು ತೀವ್ರವಾಗಿ ಬರುವೆನು. ನೀನು ನಿನ್ನ ಹಡೆದವಳನ್ನು ಬಿಟ್ಟು ಎಲ್ಲಿಗೂ ಹೋಗಬೇಡ, ಆಂ" ಎಂದನು.

ಇಷ್ಟೆಲ್ಲ ಭಾಷಣವನ್ನು ಕೇಳುತ್ತಿದ್ದ ವಸುಂಧರೆಯ ಕಣ್ಣುಗಳಲ್ಲಿ ನೀರು ತುಂಬಿದ್ದನ್ನು ನೋಡಿ ಪ್ರದಸ್ಯುವು, "ಅವ್ವಾ ಪ್ರಲಾಪಿಸುವದೇಕೆ? ತಾತನು ಎಲ್ಲಿಗೆ ಹೋಗುವನು? ಅತ್ತೆಯನ್ನು ಕರಕೊಂಡು ತೀವ್ರವಾಗಿ ಬರುವನು. ಅಳಬೇಡ ಬಿಡು. ನಾನು ನನ್ನ ಧನುರ್ಭಾಣ ಸಹಾಯದಿಂದ ನಿನ್ನ ಸಂರಕ್ಷಣೆಯನ್ನು ಮಾಡುವೆನು. ನೀನು ತಿಲಮಾತ್ರವೂ ಚಿಂತಿಸಬೇಡ. ತಾತನು ಹೋಗಿ ಬರಲಿ. ನಮ್ಮ ಮೇಲೆ ಸರ್ವಮಂಗಲೆ ಇದ್ದಾಳೆ. (ತಂದೆಯನ್ನು ಕುರಿತು) ತಾತಾ, ಹೋಗು. ತೀವ್ರವಾಗಿ ಅತ್ತೆಯ ಶೋಧವನ್ನರಿತು ಅವಳನ್ನು ಕರೆದುಕೊಂಡು ಬಾ." ಹೀಗೆಂದ ಪ್ರದಸ್ಯುವನ್ನು ಶೂರಸಿಂಹನು ಒಮ್ಮೆಲೇ ಮೇಲಕ್ಕೆತ್ತಿ ಎದೆಗವಚಿ ಕೊಂಡು "ಮಗುವೇ, ನಿನ್ನಂತಹ ವೀರನು ನನಗೆ ಜನಿಸಿದ್ದರಿಂದಲೇ ನಾನು ನನ್ನ ಮಾಳವ ರಾಷ್ಟ್ರದ ಆಶೆಯನ್ನು ಇನ್ನೂ ಇಟ್ಟಿರುವೆನು. ಭಾಪು. ಭಾಪು. ನೀನು ಅದರಂತೆ ನಿಜವಾಗಿಯೂ ನನ್ನ ಸತಿಯನ್ನು ಅರ್ಥಾತ್ ನಿನ್ನ ಹಡೆದವಳನ್ನು ಸಂರಕ್ಷಿಸುವಿ. ಹೋಗಿರಿನ್ನು. ಕುಟೀರದ ಬಾಗಿಲನ್ನು ಭದ್ರವಾಗಿಟ್ಟು ತಿಂದುಂಡು ಸ್ವಸ್ಥವಾಗಿ ಮಲಗಿಕೊಳ್ಳಿರಿ. ನಾನು ಇದೇ ಈಗ ತಿರುಗಿ ಬರುವೆನು." ಎಂದು ಹುಡುಗನನ್ನು ಕೆಳಗಿಳಿಸಿ ತಾನು ಕುಟೀರದ ಹೊರಕ್ಕೆ ಬಂದು ಹೊರಮುಗ್ಗಲಿನ

ಒಂದು ಬದಿಯಲ್ಲಿ ತಾನೇ ಸ್ಥಾಪನೆ ಮಾಡಿದ್ದ ಅಂಬೆಯ ಪಾದಗಳಲ್ಲಿ ಮಸ್ತಕವನ್ನಿಟ್ಟು, "ಈಶ್ವರಿ, ಅನಾಥರಾದ ನನ್ನ ಸತಿ-ಸುತರ ಕ್ಷೇಮಚಿಂತನೆಯು ನಿನ್ನದಾಗಿದೆ. ನಾನಂತೂ ಭಗಿನಿಯ ಶೋಧಕ್ಕಾಗಿ ಹೊರಟೆನು." ಎಂದು ದೇವಿಯ ಮೇಲೆ ಹೊರೆ ಹಾಕಿ ಅವಳನ್ನು ಧ್ಯಾನಿಸುತ್ತ ಗಡಿಬಿಡಿಯಿಂದ ಹೊರಟು ಹೋದನು.

ನಂತರ ವಸುಂಧರಾ ರಾಣಿಯು ತಾನು ಮನದಲ್ಲಿ ಎಷ್ಟೇ ಹೆದರಿದ್ದರೂ ಹೊರಗೆ ಪ್ರಕಟ ಮಾಡದೆ ಜಗಜ್ಜನನಿಯನ್ನು ಧ್ಯಾನಿಸುತ್ತ ಮಗನೊಂದಿಗೆ ಕುಟೀರದ ಒಳಕ್ಕೆ ಹೋಗಿ ಬಾಗಲನ್ನಿಟ್ಟು ತನಗೆ ತಿನ್ನುವ ಮನಸ್ಸಿಲ್ಲದಿದ್ದರೂ ಮಗುವಿಗಾಗಿ ಫಲಹಾರದ ಉದ್ಯೋಗವನ್ನು ನಡೆಸಿದಳು. ಮುಂದೆ ಒಂದೇ ಪ್ರಹರ ರಾತ್ರಿಯೊಳಗಾಗಿ ರಾತ್ರಿಯ ಆನ್ಹೀಕವನ್ನು ತೀರಿಸಿ ಮಗನನ್ನು ಮಗ್ಗಲಲ್ಲಿಟ್ಟುಕೊಂಡು ಸಚಿಂತೆಯಿಂದ ನಿದ್ರಾವಶಳಾದಳು.

---

## ೩ನೇ ಪ್ರಕರಣ

---

# ಮನೋಹರ

ರಾತ್ರಿಯು ಸುಮಾರು ಎರಡು ಪ್ರಹರಗಳನ್ನು ಮಿಕ್ಕಿರಬಹುದು. ಆ ದಿವಸ ಶುದ್ಧ ದಶಮಿ ತಿಥಿಯಾದ್ದರಿಂದ ರಜನೀನಾಥನು ತನ್ನ ಪ್ರತಿದಿವಸದ ಜಗತ್ತಿನ ಪಹರೆಗಾಗಿ ಬೇಸತ್ತು ಕೂಡಲೇ ಅಸ್ತಾಚಲವನ್ನು ಸೇರಬೇಕೆಂದು ತನ್ನ ರಥವನ್ನು ಬಹು ತೀವ್ರವಾಗಿ ಸಾಗಿಸುತ್ತಿದ್ದರೂ ಸಹಸ್ರಾರು ಮೈಲು ದೂರವಾಗಿದ್ದ ಅವನ ಮಾರ್ಗಕ್ರಮಣವು ಸಾಗದಾಗಿತ್ತು. ಅವನ ಈ ದೀನ ವೃತ್ತಿಯನ್ನು ನೋಡಿ ಕನಿಕರದಿಂದಲೋ ಏನೋ ಅನ್ನುವಂತೆ ಸುತ್ತಲಿಂದಲೂ ಮೇಘಗಳು ಏರಹತ್ತಿ, 'ಬೇಸತ್ತವನು ಬೇಕಾದ್ದು ಮಾಡಲೆನ್ನುವಂತೆ' ಆ ಚಂದ್ರಮನನ್ನು ಮುಸುಕಿದ ಕಾರ್ಮುಗಿಲು, ಅವನ ಸ್ವಲ್ಪ ಕಾಂತಿಯಾದರೂ ಭೂಮಿಗೆ ತಗಲದಂತೆ ಎಲ್ಲಿ ನೋಡಿದಲ್ಲಿ ಗಾಢಾಂಧಃಕಾರವನ್ನು ಮಾಡಲಾರಂಭಿಸಿತು. ಹೀಗೆ ಒಮ್ಮೆಲೇ ಒತ್ತಿ ಬರುತ್ತಿರುವ ಮೇಘಗಳಿಗೆ ಅನಿಲಸಂಯೋಗವು ಜೋರಿನಿಂದ ಕೂಡಿದ ಮೇಲಂತೂ ಕೇಳುವದೇನು? ದಶದಿಕ್ಕುಗಳಲ್ಲಿಯೂ ಗರ್ಜನೆಯು ಸುರುವಾಗಿ, "ಖಟ್ ಖಡಲ್" ಎಂಬ ಸಿಡಲಿನ ಸಪ್ಪಳಗಳಿಂದಲೂ, ಅರಣ್ಯದಲ್ಲಿಯ ಪರ್ವತಾವಳಿಗಳಿಂದ ಪ್ರತಿಯಾಗಿ ಬರುವ ಅವೇ ಪ್ರತಿಧ್ವನಿಗಳಿಂದಲೂ, ಭೂವ್ಯಾ

ಕಾಶಗಳು ಒಂದಾದಂತಾಗಿ, ಆ ಮೇಘಗಳ ತಾಕಲಾಟದಿಂದ ಹೊರಡುವ ವಿದ್ಯು ಜ್ವಾಲೆಯಿಂದ ಭೂಗರ್ಭವೇ ಒಡೆದು ಧ್ವಂಸವಾಗುವದೋ ಏನೋ ಎಂದು ಭೀಕರ ವಾಗಿದ್ದಿತು. ಚೈತ್ರ ಮಾಸವು. ಅದರಲ್ಲಿಯೂ ಅಡ್ಡ ಮಳೆಯು. ಅಂದಮೇಲೆ ಕೇಳುವದೇನು? 'ಖಡಲ್-ಖಡಲ್' ಎಂಬ ಪ್ರತಿಕ್ಷಣದ ಸಿಡಿಲಿನ ಹೊಡತಕ್ಕೆ ಅರಣ್ಯದಲ್ಲಿಯ ಸಾವಿರಾರು ಮರಗಳು ನೆಲಕ್ಕುರುಳಿದವು. ಆಕಾಶದಿಂದ ಕೊಡ ಸುರುವಿದಂತೆ ಒಂದೇ ಸವನೆ ಬೀಳುವ ನೀರಿನ ದೊಡ್ಡ ದೊಡ್ಡ ಹನಿಗಳ ಹೊಡತ ದಿಂದಲೂ ಹಾಗೂ ನಾರೀರೂಪವಾಗಿ ಕಲ್ಲು ಸುರಿದಂತೆ ಬೀಳುವ ಆಣೇಕಲ್ಲುಗಳ ಹೊಡತದಿಂದಲೂ ಅರಣ್ಯದಲ್ಲಿಯ ಹಿಂಸ್ರ ಪಶ್ವಾದಿಗಳು ಕಂಗೆಟ್ಟು ಅಲ್ಲಿಯ ಯಾವತ್ತೂ ಗುಹೆಗಳಲ್ಲಿ ನೀರು ಹೊಕ್ಕಿದ್ದರಿಂದ ತಮಗೆ ಆಶ್ರಯುವಿಲ್ಲದಾಗಿ ಎಷ್ಟೋ ಮೃಗಗಳು ಮಳೆಯಲ್ಲಿಯೇ ಬಿದ್ದು ಪಟ ಪಟ ಸಾಯಹತ್ತಿವೆ. ಬೇರೆ ಎಷ್ಟೋ ಮೃಗಗಳು. ತಾವು ಪ್ರಾಣ ನೀಗಿದರೂ ಚಿಂತೆಯಿಲ್ಲ; ತಮ್ಮ ಮರಿಗಳಾದರೂ ಉಳಿದರೆ ಸಾಕೆಂದು ಅವುಗಳನ್ನು ತಮ್ಮ ಹೊಟ್ಟೆಯಲ್ಲಿ ತೆಗೆದುಕೊಂಡು ಅವುಗಳ ಸಂರಕ್ಷಣೆ ಮಾಡತೊಡಗಿವೆ. ಮತ್ತು ಪರ್ವತಗಳ ಮೇಲಿನ ದೊಡ್ಡ ದೊಡ್ಡ ಬಂಡೆ ಗಳಂತೂ ನೀರಿನ ಹೊಡತದಿಂದ ಒಂದರ ಹಿಂದೆ ಒಂದು ಸಾಲು ಹಚ್ಚಿದಂತೆ 'ಧಡ ಧಡ' ವೆಂದು ನೆಲಕ್ಕುರುಳತೊಡಗಿವೆ. ಈ ಪ್ರಕಾರವಾಗಿ ಜಲಪ್ರಳಯ ವಾದಂತಾಗಿ ಅರಣ್ಯವೇ ಸಕಲ ಪರಿವಾರದೊಂದಿಗೆ ತೇಲಿ ಹೋಗುವದೋ ಏನೋ ಅನ್ನುವಂತೆ ಭಾಸವಾಗುತ್ತಿತ್ತು. ಇಷ್ಟಾದರೂ ಮಳೆಯೇನೂ ಕಡಿಮೆಯಾಗ ಲೊಲ್ಲದು.

ಇಂತಹ ಮಳೆಯ ಹೊಡತಕ್ಕೂ, ಮೇಘಾನಿಲ ಸಂಯೋಗದಿಂದ ಆ ಮೇಘಗಳ ತಾಕಲಾಟವು ಮೇಲಿಂದ ಮೇಲೆ ಜೋರಿನಿಂದ ನಡೆದುದರಿಂದ ಹೊರ ಡುವ ಭಯಂಕರವಾದ ಗರ್ಜನೆಗೂ, ಹಾಗೂ ಅವುಗಳ ಆಘಾತಕ್ಕೊಳಪಟ್ಟು ಹೊರಬೀಳುವ ಸಿಡಿಲಿನ ಭಯಂಕರ ಸಪ್ಪಳಕ್ಕೂ ಅರಣ್ಯವಾಸಿಗಳಾಗಿ ಕುಟೀರ ದೊಳಗಿದ್ದ ಮನುಷ್ಯಪ್ರಾಣಿಗಳ ಸ್ಥಿತಿಯನ್ನು ವರ್ಣಿಸಲಳವಲ್ಲ. ಒಳಗೆಲ್ಲವೂ ಮೊಣಕಾಲಮಟ ನೀರಾಗಿದೆ. ಸಿಡಿಲಿನ 'ಖಡಲ್' ಎಂಬ ಶಬ್ದವಾದಕೂಡಲೇ ಮಗುವಾದ ಪ್ರದಸ್ಯುವಂತೂ ಚಿಟ್ಟನೇ ಚೀರುವನು. ಗುಡಿಸಲಿನಲ್ಲಿಯ ದೀಪವೂ ನಂದಿ ಹೋದುದರಿಂದ ಸುತ್ತಲೆಲ್ಲವೂ ಗಾಢಾಂಧಃಕಾರವು ಮುಸುಕಿ, ಮಿಂಚಿದರೆ ಕಾಣುವಂತೆಯೂ ಇಲ್ಲವಾದರೆ ಕಾಣದಂತೆಯೂ ಆಗುತ್ತಿದ್ದ ಇಂತಹ ಹೃದಯ ದ್ರಾವಕ ಸ್ಥಿತಿಯಲ್ಲಿ ನಮ್ಮ ವೀರಮಾತೆಯೇನೂ ಧೈರ್ಯಗೆಡದೆ ಶ್ರೀ ದೇವಿಯು ಮಾಡಿದ್ದಾಗಲೆಂದು ತನ್ನ ಮಗುವನ್ನು ಮಾತ್ರ ಎದೆಗವಚಿಕೊಂಡು ಒಳಭಾಗದಲ್ಲಿ ಟೊಂಕಮಟ ಎತ್ತರವಿದ್ದ ಒಂದು ಕಟ್ಟೆಯಮೇಲೆ ಏನೋ ವಿಚಾರಿಸುತ್ತ ಕುಳಿತಿದ್ದಳು.

(ಮುಂದೆ ಸಾಗುವದು)

ಮನುಷ್ಯನು ಯಾವಾಗಲೂ ಸಮಾಜದಲ್ಲಿ ವಿಹರಿಸುವ ಪ್ರಾಣಿಯಾದುದರಿಂದ ಅವನ ವಾಙ್ಮಯವು ಜನಜೀವನವನ್ನು ಪ್ರತಿಬಿಂಬಿಸುತ್ತದೆ. ಆದುದರಿಂದ ನಿರ್ಜೀವವಾದ ಜನಾಂಗದಲ್ಲಿ ಸಜೀವವಾದ ವಾಙ್ಮಯವು ಹುಟ್ಟಲಾರದು. ಕರ್ನಾಟಕ ವಾಙ್ಮಯವೆಂದರೆ ಭರತ ಭೂಮಿಯ ಜನಜೀವನವನ್ನು ಒಂದು ವಿಶಿಷ್ಟವಾದ ಎರಕದಲ್ಲಿ ಹಾಕಿ ಮಾಡಿದ ಮೂರ್ತಿ. ನಾವು ವಿಶ್ವ ಸಂಸ್ಕೃತಿಯನ್ನೊಳಗೊಂಡ ರಾಷ್ಟ್ರೀಯತ್ವವನ್ನೂ ಕರ್ನಾಟಕತ್ವವನ್ನೂ ಯಾವಾಗಲೂ ಅನುಸಂಧಾನ ಮಾಡಿಕೊಂಡೇ ವಾಙ್ಮಯವನ್ನು ಹುಟ್ಟಿಸಲು ಪ್ರವರ್ತರಾಗಬೇಕು.

ಶ್ರೀ. ಆಲೂರ ವೆಂಕಟರಾಯರು

# ನಮ್ಮ ಮಾತು.

# ಸಂದೇಶಗಳು

॥ ಶ್ರೀಗುರು ಫಕ್ಕೀರೇಶ್ವರ ॥

ತಾವು ಇಲ್ಲಿಯ ವರೆಗೆ ನನಗೆ ಕಳಿಸಿದ ಚಂದ್ರಿಕೆಗಳೊಳಗಿನ ವಿಷಯುಗಳನ್ನು ಮನಮುಟ್ಟಿ ಓದಿ ಮನಗಂಡೆನು. ಅದರಲ್ಲಿ ಬರೆದ ವಿಷಯುಗಳು ಅತ್ಯುತ್ತಮವಿದ್ದ ಕಾರಣ ಮನಸ್ಸಿಗೆ ಒಳ್ಳೇ ಸಂತೋಷವಾಯಿತು. ಚಂದ್ರಿಕೆಯ ವಿಷಯುಗಳು ವೀರಶೈವರಂಗಲ್ಲದೆ ಯಾವತ್ತೂ ಮತದವರಿಗೂ ಕೂಡಾ ಯೋಗ್ಯವಾದವುಗಳಿವೆ. ತಜ್ಞರ ಲೇಖನಗಳನ್ನು ನೋಡಿ ಮನಸಿಗೆ ಅತ್ಯಾನಂದವಾಯಿತು. ಈ ಚಂದ್ರಿಕೆಯು ಚಿರಕಾಲ ಯಶಸ್ವಿಯಾಗಿ ಬಾಳಲೆಂದು ಶ್ರೀ ಸ್ವಾಮಿಗಳವರನ್ನು ಕುರಿತು ಅನನ್ಯಭಾವದಿಂದ ಬೇಡಿಕೊಳ್ಳುತ್ತೇವೆ.

ತಾ. ೨೭—೧೨—೩೪. ತೋಟಪ್ಪ ಮಲ್ಲಪ್ಪ ಹಾವೇರಿ ಹೆಬ್ಬಾಳ

---

ನಾನು ತಾ. ೩—೧—೩೫ನೇ ದಿವಸ ನಿಮ್ಮ ಆಫೀಸಿಗೆ ಬಂದು ಒಂದು ತಾಸು ವಿಶ್ರಮಿಸಿದ್ದೆನು. ಆಫೀಸಿನಲ್ಲಿದ್ದ ವ್ಯವಸ್ಥೆ ಮತ್ತು ಯಾವತ್ತೂ ಕಾಗದ ಪತ್ರಗಳ ವ್ಯವಸ್ಥೆಯನ್ನು ನೋಡಿ ಮನಸ್ಸಿಗೆ ಬಹಳೇ ಆನಂದವಾಯಿತು. ಈ ಮಂಡಳದಲ್ಲಿ ಬ್ರಾಹ್ಮಣ ಬಂಧುಗಳು ವ ವೀರಶೈವ ಮತದವರು ಯಾವತ್ತರೂ ಕಳಕಳಿಯಿಂದಲೂ ದಕ್ಷತೆಯಿಂದಲೂ ಕಾರ್ಯ ಗೈಯ್ಯುವದನ್ನು ನೋಡಿ ಪರಮಾನಂದವಾಗುತ್ತದೆ. ಇವಕ್ಕೆ ಪ್ರತಿಯೊಬ್ಬರು ಆದಷ್ಟು ಸಹಾಯ ಮಾಡಬೇಕು. ನಾವಾದರೂ ನಮ್ಮ ಮನಃಪೂರ್ವಕ ಸಹಾಯ ಮಾಡುತ್ತೇವೆ. ಈ ಸಂಘಕ್ಕೆ ಶ್ರೀ ಸ್ವಾಮಿಗಳು ಉತ್ತರೋತ್ತರ ಕಲ್ಯಾಣ ಗೈಯಲೆಂದು ಹಾರೈಸುವೆನು.

ಬಸನಗೌಡಾ ಫಕ್ಕೀರಗೌಡಾ ಪಾಟೀಲ
ಟಿ. ಎಲ್. ಬಿ. ಮೆಂಬರ, ಹರ್ಶಿ.

---

**ಸೂಚನೆ:—** ವೀರಶೈವರ ಮಹತಿಯಲ್ಲಿ ಬಂದಿರುವ ಸಿದ್ಧನಂಜೇಶನ ಕಾಲವು ೧೬೫೦ ಎಂದು ಓದಬೇಕು. ಅದು ತಪ್ಪಿ ೮೬೫೦ ಬಿದ್ದು ಅಚ್ಚಿನ ದೋಷವಾಗಿದೆ.

—ಸಂಪಾದಕ

# ವಿಮರ್ಶೆ.

## ಅಧ್ಯಾತ್ಮ ಪ್ರಕಾಶ ಮಾಸಪತ್ರ

**ಬೆಂಗಳೂರು ನಗರ.** ವಾ. ಚ. ೨-೦-೦

ಸಂಪಾದಕರು— ವೈ. ಸುಬ್ಬರಾವ

ಸಾಮಾನ್ಯವಾಗಿ ಪೌರ್ವಾತ್ಯ ಪಾಶ್ಚಾತ್ಯ ರಾಷ್ಟ್ರದ ಜನಗಳು ಆದಾವ ಬಗೆಯಿಂದ "ಅಧ್ಯಾತ್ಮಿಕ" ವಿಷಯಗಳ ವಿಚಾರ ಮಾಡುವರೆಂಬದನ್ನೂ ವಿಶಿಷ್ಟ ಧರ್ಮ, ಜಾತಿ, ಪಂಥವನ್ನು ಲೆಕ್ಕಿಸದೆ, ವಿವಿಧ ಜನರ ಸದ್ವಿಚಾರಗಳನ್ನೂ ಜಗದ ಮುಂದಿರಿಸುವ ಈ ಮಾಸಪತ್ರದ ಗುರಿಯು ಒಳ್ಳೇ ಉದಾತ್ತವಾಗಿದೆ. ಸಾಧಾರಣ ವಾಗಿ ಇಂತಹ ಮಾಸಪತ್ರದ ಹುಟ್ಟು ಕನ್ನಡದಲ್ಲಿ ಇದೇ ಮೊದಲು ಎಂದು ಹೇಳಿ ದರೇನೂ ತಪ್ಪಾಗಲಿಕ್ಕಿಲ್ಲ. ಪತ್ರಿಕೆಯ ಧ್ಯೇಯದಂತೆ ಒಳಗಿನ ವಿಷಯಗಳಾದರೂ ಮನನೀಯವಾಗಿವೆ. ಆದ್ದರಿಂದ ಈ ಪತ್ರಿಕೆಗೆ ಸಕಲರೂ ಉದಾರ ಹಸ್ತದಿಂದ ಸಹಾಯಮಾಡಿ ಪ್ರೋತ್ಸಾಹಿಸಬೇಕು.

—ಸಂಪಾದಕ

ಶಿರಹಟ್ಟಿ,
ವೀರಶೈವ ಚಂದ್ರಿಕೆಯ ಕಾರ್ಯಾಲಯ.

---

# ಪ್ರಕಟನೆ.

**ಬಳ್ಳಾರಿ ಟಿ. ಎಚ್. ಎಂ. ಆ್ಯಂಡ್ ಕೋ. ಇವರ**

## ಶ್ರೀಯುವ ಸಂ||ರದ ಕಲ್ಪವೃಕ್ಷ ಸಿದ್ಧಾಂತ ಪಂಚಾಂಗರತ್ನ

**ಬೆಲೆ ೦-೪-೦**

ಮೇಲ್ಕಂಡ ಪಂಚಾಂಗವು ಪ್ರಸಿದ್ಧ ಜ್ಯೋತಿಷಿಗಳಾದ ಹರಪನಹಳ್ಳಿ ಬ್ರಹ್ಮ ಶ್ರೀ. ಸಿದ್ಧಾಂತಿ ಹೊಳಿಬಸವ ಶಾಸ್ತ್ರಿಗಳವರಿಂದ ತಯಾರಿಸಲ್ಪಟ್ಟಿರುವದು. ಇಂಥ ಅಪೂರ್ವ ಪಂಚಾಂಗರತ್ನವನ್ನು ಇದುವರೆಗೂ ಯಾರೂ ತಯಾರ ಮಾಡಲಿಲ್ಲ ಅವಶ್ಯವಾಗಿ ಎಲ್ಲರೂ ಸಂಗ್ರಹಿಸತಕ್ಕದ್ದು. ಪಂಚಾಂಗಗಳು ಬಳ್ಳಾರಿಯಲ್ಲೂ ಚಂದ್ರಿಕೆಯ ಆಫೀಸಿನಲ್ಲೂ ದೊರೆಯುವವು. ಬೇಕಾದವರು ಬರೆದು ತರಿಸಿಕೊಳ್ಳ ಬಹುದು.

ಟಿ. ಎಚ್. ಎಂ. ಆ್ಯಂಡ್ ಕೋ
ಬಳ್ಳಾರಿ

ವೀರಶೈವ ಚಂದ್ರಿಕೆ ಆಫೀಸ
ಶಿರಹಟ್ಟಿ

# ಕೃತಜ್ಞತೆ

ಈ ವರೆಗೆ ಚಂದ್ರಿಕೆಯು ಅಭಿವೃದ್ಧಿಗಾಗಿ ಸಂದೇಶಗಳನ್ನು ಹಾಗು ಸದಭಿಪ್ರಾಯಗಳನ್ನು ಕೊಟ್ಟು ನಮ್ಮನ್ನು ಋಣಿಯನ್ನಾಗಿ ಮಾಡಿದ ಮಹಾಜನಗಳಲ್ಲಿ ನಾವು ತುಂಬಾ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತೇವೆ.

—ಸಂಪಾದಕರು.

ಮ|| ರಾ|| ಗಳಾದ

| | | |
|---|---|---|
| ೧ | ಜೀರಿಗೆ ಬಸಲಿಂಗಪ್ಪನವರು | ಬೆಂಗಳೂರು. |
| ೨ | ನೀಲಕಂಠ ದೇಶಿಕರು ಚಿಕ್ಕೋಡಿ | ಹುಬ್ಬಳ್ಳಿ |
| ೩ | ಪ್ರೋಫೇಸರ ಗೋಕಾಕ ವಿನಾಯಕರಾಯರು | ಪುಣೆ. |
| ೪ | ಕವಿವರ್ಯ ಬೇಂದ್ರೆ ದತ್ತರಾಯರು | ,, |
| ೫ | ಪ್ರೋಫೇಸರ ಮುಗುಳಿ ರಂಗರಾಯರು | ಸಾಂಗಲಿ |
| ೬ | ಬಿ. ಶಿವಮೂರ್ತಿಶಾಸ್ತ್ರಿಗಳು ಕೀರ್ತನ ಕೇಸರಿ | ತುಮಕೂರು |
| ೭ | ವಿದ್ವಾನ್ ಬಿ. ಶಂಕರಭಟ್ಟರು | ಮಂಗಳೂರು |
| ೮ | ಕೀರ್ತನ ಕೇಸರಿ ರಾಮಾಶಾಸ್ತ್ರಿಗಳು | ಮುಳಗುಂದ |
| ೯ | ಕೀರ್ತನ ಕೇಸರಿ ಕೇಶವದಾಸರು | ಬೇಲೂರು |
| ೧೦ | ಎನ್ ಶಿವರಾಮಶಾಸ್ತ್ರಿಗಳು | ಬೆಂಗಳೂರು |
| ೧೧ | ಆರ್. ವ್ಹಿ. ಜಠಾರ | ಧಾರವಾಡ |
| ೧೨ | ಪಂಡಿತ ವೆಂಕಟರಾಯರು | ಬೆಳಗಾವಿ |
| ೧೩ | ಚನಬಸಪ್ಪನವರು ಹಾಲಪ್ಪನವರ | ಹಾವೇರಿ |
| ೧೪ | ಎಮ್ಮ. ವ್ಹಿ. ಸಿ. (ಸಾಹಿತ್ಯ ಪರಿಷತ ಆಫೀಸು) | ಬೆಂಗಳೂರು |
| ೧೫ | ಶ್ರೀಮತಿ ಆರ್. ಕಲ್ಯಾಣಮ್ಮಾ | ,, |
| ೧೬ | ನಾರಾಯಣ ಬಿ. ಎಮ್ಮ. ಕಲ್ಯ | ಶಿರ್ವ |
| ೧೭ | ಬಿ. ನರಸಪ್ಪಾ | ಮಂಗಳೂರು |
| ೧೮ | ಯು. ವ್ಹಿ. ಶೆಣೈ | ಮೂಲ್ಕಿ |

# ವೀರಶೈವ ಚಂದ್ರಿಕೆ ಆಫೀಸ ಶಿರಹಟ್ಟಿ

## ಚಂದ್ರಿಕೆಯ ವಾಚನಾಲಯಕ್ಕೆ ವಿನಿಮಯವಾಗಿ ಬರುವ ಮಾಸಿಕ ಪತ್ರಗಳು-ವಾರಪತ್ರಗಳು—

| | | | |
|---|---|---|---|
| ೧ | ಸದ್ಬೋಧ ಚಂದ್ರಿಕೆ | ಅಗಡಿ-ಆನಂದವನ | ೩—೦—೦ |
| ೨ | ಕರ್ನಾಟಕ ಸಾಹಿತ್ಯ ಪರಿ-ಷತ್ ಪತ್ರಿಕೆ | ಹಾರ್ಡಿಂಜ ರೋಡ ಬೆಂಗಳೂರು | ೪—೦—೦ |
| ೩ | ಬಡವರ ಬಂಧು | ಪಂಪನಕಟ್ಟೆ ಮಂಗಳೂರು | ೧—೪—೦ |
| ೪ | ವಿಶ್ವಭಾರತಿ | ಬೆಂಗಳೂರು ಸಿಟಿ | ೩—೮—೦ |
| ೫ | ಕಥೆಗಾರ | ,, | ೧—೪—೦ |
| ೬ | ಭಾರತಿ | ಮುಲ್ಕಿ ದ. ಕ. | ೨—೦—೦ |
| ೭ | ಕಥಾಕುಂಜ | ಮಾರುತಿ ಓಣಿ ಬೆಳಗಾವಿ | ೨—೪—೦ |
| ೮ | ಶಿಕ್ಷಕ ಬಂಧು | ಹುಬ್ಬಳ್ಳಿ | ೨—೦—೦ |
| ೯ | ಕಲಾಚಂದ್ರ | ಕಾರ್ಕಳ ದ. ಕ. | ೧—೪—೦ |
| ೧೦ | ಕರ್ನಾಟಕ ಬಂಧು | ಮುಂಬಯಿ ನಂ. ೪ | ೧—೮—೦ |
| ೧೧ | ವಿಕಟವಿನೋದಿನಿ | ಬೆಂಗಳೂರು ಸಿಟಿ | ೧—೫—೦ |
| ೧೨ | ಶ್ರೀ ದತ್ತಾತ್ರಯ ಗ್ರಂಥ-ಮಾಲಾ | ಶಿರ್ವ ಉಡಪಿ ದ. ಕಾ. | ೨—೪—೦ |
| ೧೩ | ಸ್ವದೇಶೀ ಪ್ರಚಾರಕ | ಮಂಗಳೂರು ದ. ಕ. | ೧—೪—೦ |
| ೧೪ | ವಿಕಟಮಾವ | ಹೊಳೆನರಸೀಪುರ ಹಾಸನಡಿ | ೧—೦—೦ |
| ೧೫ | ಸರಸ್ವತಿ | ಬೆಂಗಳೂರು | ೩—೦—೦ |
| ೧೬ | ಅಧ್ಯಾತ್ಮ ಪ್ರಕಾಶ | ,, | ೩—೦—೦ |

## ವಾರಪತ್ರಿಕೆಗಳು—

| | | | |
|---|---|---|---|
| ೧ | ಅರುಣೋದಯ | ಬೆಳಗಾವಿ | ೧-೮—೦ |
| ೨ | ರಾಜಹಂಸ | ಧಾರವಾಡ | ೧—೮—೦ |
| ೩ | ಬಸವರಾಜ | ಹಾವೇರಿ | ೧—೮—೦ |



# ಅತ್ಯುತ್ತಮವಾದ ಕೆಲವು ಅನುಭವಸಿದ್ಧ — ಔಷಧಗಳು. —

ಕೇವಲ ಮೋಹಕವಾದ ಲೇಬಲುಗಳಿಂದ ಕೂಡಿದ್ದ ಹಾಗು ಆಡಂಬರದ ಜಾಹೀರಾತುಗಳಿಗೆ ಮೋಸಹೋಗಿ ಸಲ್ಲದ ಔಷಧಗಳನ್ನು ತರಿಸಿ ನಿಮ್ಮ ದೇಹಾರೋಗ್ಯದ ಹಾನಿಯನ್ನು ಮಾಡಿಕೊಳ್ಳಬೇಡಿ! ಕಸ್ತೂರಿಯ ವಾಸನೆಯನ್ನು ಬಾಯಿಂದ ಹೇಳಬೇಕಾದವಶ್ಯವಿಲ್ಲ. ಹಾಗೆ ನಮ್ಮ ಔಷಧಗಳಲ್ಲಿರುವ ಗುಣದಬಗ್ಗೆ ಖಾತ್ರಿ ಮಾಡಿಕೊಳ್ಳಬೇಕು.

## ಔಷಧಗಳ ವಿವರ:

(೧) ಕಾಲರಾಪಿಲ್ಸ ೧೦೦ಕ್ಕೆ ೫ ರೂ. (೨) ವ್ಯಾಧಿಗಜಕೇಸರಿ ೧ ರೂ ೨ ತೊಲಿ (೩) ಹುರಕಿನ ಚೀಟು ೧೦೦ಕ್ಕೆ ೫ ರೂ. (೪) ವ್ಯಾಧಿಹರಗುಟಿಕಾ ೧ ರೂ. ೨ ತೊಲಿ (೫) ಥಂಡಿಜ್ವರಕ್ಕೆ ೨೪ ಮಾತ್ರೆಗೆ ೧ ರೂ. (೬) ಬಚನಾಗಾದಿಗುಟಿಕಾ ೧ ರೂ. ೨ ತೊಲಿ (೭) ಅಶ್ವಗಂಧಿಚೂರ್ಣ ೧ರೂ. ೪ ತೊಲಿ (೮) ಸಂಜೀವಿನಿ ಗುಟಿಕಾ ೧ ರೂ. ೨ ತೊಲಿ. (೯) ನಾಗಾರ್ಜುನಚೂರ್ಣ ೧ ರೂ. ೪ ತೊಲಿ (೧೦) ಹಿಂಗ್ವಾದಿಚೂರ್ಣ ೧ ರೂ. ೨ ತೊಲಿ (೧೧) ಪುಷ್ಯಾನುಗಚೂರ್ಣ ೧ ರೂ. ೪ ತೊಲಿ (೧೨) ಗುಲ್ಮಜಲೋದರಮಹೋದರ ಚೂರ್ಣ ೧ ರೂ. ೨ ತೊಲಿ (೧೩) ಭಾಸ್ಕರಲವಣ ೧ ರೂ. ೪ ತೊಲಿ (೧೪) ಅಗ್ನಿಕುಮಾರ ರಸ ೧ ರೂ. ೧ ತೊಲಿ (೧೫) ಮಹಾಜರಾಂಕುಶ ೨ ರೂ. ೧ ತೊಲಿ (೧೬) ವಾತುವಿಧ್ವಂಸ ರಸ ೧ ರೂ. ೪ ತೊಲಿ (೧೭) ಮೃತ್ಯುಂಜಯ ರಸ ೨ ರೂ. ೧ ತೊಲಿ (೧೮) ಮಹಾಯೋಗರಾಜ ಗುಗ್ಗಳ ೪ ರೂ. ೧ ತೊಲಿ (೧೯) ಪ್ರದವಾದಿ ರಸ ೨ ರೂ. ೧ ತೊಲಿ (೨೦) ಕಾಮೇಶ್ವರ ೪ ರೂ. ೧ ತೊಲಿ (೨೧) ಗರ್ಭಿಣಿಗೆ ೧೪ ಮಾತ್ರೆಗೆ ೫ ರೂ. (೨೨) ಮೂಲವ್ಯಾಧಿಗೆ ೧೪ ಮಾತ್ರೆಗೆ ೧ ರೂ. (೨೩) ಶೂಲವಜ್ರಿಣಿ ೫ ರೂ. ತೊಲಿ ೧ (೨೪) ಯಾವತ್ತೂ ವ್ರಣಗಳಿಗೆ ಮಲಮು ಡಬ್ಬಿ ೨ ಆಣೆ (೨೫) ಸರ್ವವಾತಕ್ಕೆ ೫ ರೂ ೧ ತೊಲಿ (೨೬) ಪರಿಣಾಮಶೂಲಿಗೆ ೨ ರೂ. ೧ ತೊಲಿ (೨೭) ಸುದರ್ಶನ ಚೂರ್ಣ ೧ ರೂ. ೪ ತೊಲಿ (೨೮) ಕ್ಲೀಷ್ಮಿಗೆ ೧ ರೂ. ೨ ತೊಲಿ.

ಅನುಪಾನ— ಪಥ್ಯ ಔಷಧಗಳಕೂಡ ವಿವರಿಸುವದು. ಹೆಚ್ಚಿನ ಮಾಹಿತಿ ಬೇಕಾದಲ್ಲಿ ಕೆಳಗಿನ ವಿಳಾಸಕ್ಕೆ ಬರೆದು ತಿಳಕೊಳ್ಳಬಹುದು.

ನಮ್ಮ ವಿಳಾಸ:— **ಬಿ. ಕೆ. ಪಾಟೀಲ ಶಿರಹಟ್ಟಿ**

ಪೋ. ಶಿರಹಟ್ಟಿ

ಇದನ್ನು ಗದಗ-ರಸಿಕರಂಜನಿ ಮುದ್ರಣಾಲಯದಲ್ಲಿ ಮುದ್ರಿಸಿ,
ಗದಗ ತಾ॥ ಸೊರಟೂರ (ಪೋ. ಶಿರಹಟ್ಟಿ) ಹಾಗು ಶಿರಹಟ್ಟಿ ವೀರಶೈವ ಚಂದ್ರಿಕೆಯ
ಕಾರ್ಯಾಲಯದಲ್ಲಿ ಪ್ರಸಿದ್ಧ ಪಡಿಸಿತು.

ವಾರ್ಷಿಕ ಚಂದಾ ೧-೮-೦, ಅಂಚೇ ವೆಚ್ಚ ಸೇರಿ ೧-೧೧-೦.
ಬಿಡಿ ಸಂಚಿಕೆ ೦-೩-೦.

ಶಿರಹಟ್ಟಿ.

ಶ್ರೀ ಫಕ್ಕೀರೇಶ್ವರ ಸ್ವಾಮಿಗಳ ಕೃಪಾಛತ್ರದಲ್ಲಿ ನಡೆದ

ಶ್ರೀ

# ವೀರಶೈವ ಚಂದ್ರಿಕೆ.

ನೈತಿಕ, ಸಾಮಾಜಿಕ, ಧಾರ್ಮಿಕ ವಿಷಯಗಳಿಂದೊಡಗೂಡಿದ
ತಿಳಿಗನ್ನಡ ಮಾಸಪತ್ರಿಕೆ.

ಹುಟ್ಟು : ಶಕೆ ೧೮೫೫. ಶ್ರೀ ಬಸವ ಜಯಂತಿ.

| ಸಂಪುಟ | ಭಾರತ ಹುಣ್ಣಿವೆ. | ಸಂಚಿಕೆ |
|---|---|---|
| ೧. | ೧೮ — ೨ — ೧೯೩೩. | ೧೦. |

ಕಂದ

ತನ್ನಯನಾಡ-ನಡೆನುಡಿಗ ।
ಉನ್ನತಿಯಂ ಮಾಳ್ಪ ಕಜ್ಜಕಿನ್ನೆಣೆಯುಂಟೇ॥
ಕನ್ನಡದೇಳ್ಗೆಯ ಬಗೆಯಂ ।
ಕನ್ನಡಿಗರ್ ತಿಳಿದುಕೊಡಲಿದಕ್ಕಾಸ್ತ್ರಯ
ಮಾ ॥೧॥

ಕಂದ

ಬಂದವರಂ ಬರಿಸದಿಹಂ ।
ಸಂದವರಂ ಸಂತವಿಸದನಹ ತಾಯ್ನುಡಿಯಂ॥
ವಂದಿಸದಿರುವಂ ಮನುಜನೊ! ।
ವಂಧ್ಯನೊ! ಕಾಣೆಳಿಗೆ ಪುಟ್ಟಿ ಫಲವೆನಿಸಿಹ
ನೋ! ॥೨॥

ಕವಿ- ವಾಜಪೇಯ ಶಿವಾನಂದಾರ್ಯರು.

ಕನ್ನಡಿಗರ ಜಡತ್ವವನ್ನು ಕಂಡು ಇತರ ಭಾಷೆಗಳು ಕರ್ನಾಟಕಕ್ಕೆ ದಾಳಿ ಇಟ್ಟವು. ಕನ್ನಡವು ನಾಡಿನಿಂದಲೇ ಮರೆಯಾಗುವಂತಹ ಸ್ಥಿತಿಯೂ ಒದಗಿತು. ಆವರೆ ನಮ್ಮ ಭಾಗ್ಯೋದಯ. ತಾಯ್ನುಡಿಯಲ್ಲಿ ಕನ್ನಡಿಗರಿಗೆ ಅಭಿಮಾನ ಜನಿಸಿ, ಅಲ್ಲಲ್ಲಿ ಸಂಘಗಳನ್ನೇರ್ಪಡಿಸಿಕೊಂಡು ಭಾಷಾ ಪುನರುಜ್ಜೀವನಕ್ಕಾಗಿ ಹೋರಾಡುತ್ತಿರುವದು ಶುಭೋದಯದ ಚಿಹ್ನವೆಂದು ತೋರುತ್ತದೆ.

ಶ್ರೀಮಾನ್. ಬಿ. ಎಮ್. ಶ್ರೀಕಂಠಯ್ಯನವರು,
ಬೆಂಗಳೂರು.

ಸಂಪಾದಕರು ಹಾಗು ಪ್ರಕಾಶಕರು :
ಆಲೂರ ಮುರಿಗೇಂದ್ರ ಶೆಟ್ಟರು.

ಬಾಲಸುಧಾ ೪ ಔಂಸಿನ ಬಾಟ್ಲಿಗೆ ೦-೬-೦, ೮ಔಂಸಿನ ಬಾ. ೦-೧೨-೦.




ವಾಸಕ ೪ ಔಂಸಿನ ಬಾಟ್ಲಿ ಕಿಮ್ಮತ್ತು ೦--೬—೦.

## — ಬಾಲ ಸುಧಾ —

ಚಿಕ್ಕ ಮಕ್ಕಳ ಹೊಟ್ಟೆ ದೊಡ್ಡದಾಗುವದು, ಅಜೀರ್ಣದಿಂದ ಹೊಟ್ಟೆ ಉಬ್ಬುವದು, ಝಾಡಿಸುವದು, ಹೊಟ್ಟೆನೋವು, ಮಲಬದ್ಧತೆ ಮುಂತಾದ ಅಪಚನದ ವಿಕಾರಗಳು, ಮುಟ್ಟ ದೋಷಗಳು. ಠಿಕೆಟ್ಸ ಕೆಮ್ಮು, ನೆಗಡಿ ಮುಂತಾದ ಕಫವಿಕಾರಗಳು, ಯಕೃದಭಿವೃದ್ಧಿ ಪ್ಲೀಹಾಭಿವೃದ್ಧಿ ಮುಂತಾದ ಭಯಂಕರ ರೋಗಗಳು ತೀವ್ರ ಕಡಿಮೆಯಾಗಿ ಚಿಕ್ಕ ಬಾಲಕರು ಸಶಕ್ತರೂ, ಪುಷ್ಟರೂ, ಸುಂದರರೂ ಆಗುವರು.

## — ವಾಸಕ —

ಈ ಔಷಧದಿಂದ ಕಫಕ್ಷಯ, ದಮ್ಮು, ಕೆಮ್ಮು, ನೆಗಡಿ, ಇನ್ಫ್ಲುಯಂಝಾ, ನ್ಯೂಮೋನಿಯಾ ಸಣ್ಣ ಹುಡುಗರ ಪಕ್ಕೆ ಬಡಕೊಳ್ಳುವ ಭಯಂಕರ ರೋಗ ( ಬ್ರಾಂಕೋನ್ಯೂಮೊನಿಯಾ ) ಕೊಡಗಕೆಮ್ಮು, ಕಫಜ್ವರ, ಕಫ ಗಟ್ಟಿಯಾಗುವದು, (ತ್ರಿದೋಷಜ್ವರದಲ್ಲಿ) ಮುಂತಾದ ತ್ರಾಸದಾಯಕ ಭಯಂಕರ ರೋಗಗಳು ಖಾತ್ರಿಯಿಂದ ಗುಣ. ಬಹುದಿವಸ ದಮ್ಮಿನಿಂದ ಬಳಲುವ ಎಷ್ಟೋ ಜನರು ಇದನ್ನು ಉಪಯೋಗಿಸಿ ಸುಖಹೊಂದಿದ್ದಾರೆ.

**ಕರ್ನಾಟಕ ಆಯುರ್ವೇದಿಕ ಫಾರ್ಮಸಿ,**

**ಶಿರಹಟ್ಟಿ. ಜಿಲ್ಲಾ ಧಾರವಾಡ.**

ಪದ್ಯದಲ್ಲಿ ಮೂರು ತೆರನಾದ ಲಾಲಿತ್ಯವಿದೆ. ಶಬ್ದಲಾಲಿತ್ಯ, ತಾಳಲಾಲಿತ್ಯ, ಪ್ಲುತದ ರೀತಿಯ ಲಾಲಿತ್ಯ. ಮೊದಲಿನ ಎರಡು ವಿಧಾನಗಳು ಪದ್ಯಮಯ ಗದ್ಯದಲ್ಲಿ ಬಂದೇ ಬರುತ್ತವೆ. ಪ್ಲುತದ ಲಾಲಿತ್ಯ ಸ್ಪಷ್ಟವಾಗಿಸಲೆಂದೇ ಪದ್ಯವನ್ನು ಸಾಲು ಸಾಲಾಗಿ ವಿಭಾಗಿಸಿ ಬರೆಯುವ ರೂಢಿಯಿದೆ.

# ಪದ್ಯಸೀಮೆ.

ಸಾಮಾನ್ಯ ವಿಷಯಗಳನ್ನು ಪದ್ಯದಲ್ಲಿ ಹೇಳುವದು ಕಷ್ಟ. ಅದು ಯಾವಾಗಲೂ 'ಮಂಗಳ ಲೋಕದ ಅಂಗಳ'ವನ್ನು ಮೀರಿ ಹಾರುವದು. ಗದ್ಯದ ಪ್ರಾಂತವು ಮುಗಿದು ಪದ್ಯದ ನಿಜವಾದ ರಾಜ್ಯವು ಕಾಣಿಸಿಕೊಳ್ಳುವದು. ಆತ್ಮನ ಅಂತರಾಳದಲ್ಲಿಯೇ ಛಂದಸ್ಸು ಬೇರುಬಿಟ್ಟು ನಿಂತಿದೆ. ಒಂದು ವಿಶೇಷವಾದ ರಸಾನುಭವದ ಆತ್ಮಾನುಭವದ ನಿರೂಪಣೆಗಾಗಿ ಪದ್ಯವಿಲ್ಲದೆ ಗತಿಯಿಲ್ಲ.

ಶ್ರೀ. ಪ್ರೊ. ಗೋಕಾಕ,
೨೦ ನೇ ರಾಯಚೂರ ಕವಿಸಮ್ಮೇಲನದ
ಅಧ್ಯಕ್ಷರು.

ಸಿರಿಗನ್ನಡಂ ಗೆಲ್ಗೆ

# ವೀರಶೈವ ಚಂದ್ರಿಕೆ.

ಬಯಲುಮೂರ್ತಿಯಾಗಿನಿಂದನೊಬ್ಬ ಶರಣ. ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ. ಆತನ ಶಾಂತಿಸ್ಥೈರಣೆಯಿಂದ ಹುಟ್ಟಿದಾತ ವಿಷ್ಣು. ಆತನ ಕೋಪಕ್ರೋಧದಿಂದ ಹುಟ್ಟಿದಾತ ರುದ್ರ. ಈ ಮೂರು ಸೀಠವಂತಿರಲಿ. ಆ ಶರಣನ ನರಿದು ಶರಣೆನುತಿರ್ದೆನು ಕೂಡಲ ಸಂಗಮದೇವಾ. —ಶ್ರೀ ಬಸವೇಶ್ವರ.


| ಸಂಪುಟ ೧ | ಶ್ರೀಮನ್ನೃಪಶಾಲಿವಾಹನ ಶಕೆ ೧೮೫೩<br>ಭಾರತ ಹುಣ್ಣಿವೆ. | ಸಂಚಿಕೆ ೧೦ |
|---|---|---|


## ಪ್ರಾರ್ಥನಾ ಪದ್ಯ.

ರಾಗ ಭೈರವ. ತಾಳ ದಾದರಾ.

ನೀಲಕಂಠ ಗಿರಿಜಾಪತೆ । ಶಂಕರ ಶಶಿಶೇಖರ ಹರ
ಘನಕರುಣಾ ॥ಪಲ್ಲ॥

ಚಂದ್ರಮೌಳಿ । ಘನತ್ರಿಶೂಲಿ ।
ರುಂಡಮಾಲ ಭಕುತಪಾಲ । ಕರುಣಿಸುಭೋ ॥೧॥

ಅಂಗಜಾರಿ । ತ್ರಿಪುರಾಂತಕ ।
ಗಂಗಾಧರ ಜಟಾಧಾರಿ । ಪ್ರಮಥಾಧಿಪ ॥೨॥

ಫಾಲನೇತ್ರ । ಸುಭಗಗಾತ್ರ ।
ವ್ಯಾಲಮಾಲಧರಕಪಾಲ । ಪಾಲಿಸೋಭವ ॥೩॥

# ಪ್ರಾರ್ಥನಾ ಪದ್ಯದ ನೋಟೇಶನ್



ರಾಗ ॥ ಭೈರವ ತಾಳ ದಾದರಾ ಮಾತ್ರಾ ೬

ಸಂಪೂರ್ಣ ಸ್ವರಗಳು ೭ ರಿ, ಮ, ಧ, ಕೋಮಲ ೬ ಧ ವಾದಿ, ರಿ ಸಂವಾದಿ

ನಿ ಕ್ವಚಿತ್

ಟೀಕಾ

ಧಾ ಗಿ ನ್ನಾ ಧಾ ತು ನ್ನಾ ಧಾ ಗಿ ನ್ನಾ ಧಾ ತು ನ್ನಾ

\+ ೨ ೦ (ಅಸ್ಥಾಯಿ) + ೨ ೦

ನೀ ಲ ಕಂ ಠ ಗಿ ರಿ ಜಾ ಽ ಪ ತೆ

ಮನಿ ಧ ಪ ಮ ಪ ಗ ಮ ರೇ ಸ ಸಾ

ಶಂ ಕ ರ ಶ ಶಿ ಶೇ ಖ ರ ಹ ರ

ನಿ ಸಾ ಗ ಮ ಮ ಪ ಧ ಽ ಮ ಪ ಗ ಮ

ಜ ನ ಕ ರು ಣಾ ಽ ॥ಪಲ್ಲ॥

ಧ ಪ ಸಾ ನಿ ಧ ಪ

ಅಂತರಾ

ಚಂ ದ್ರ ಮೌ ಽ ಳಿ ಘ ನ ತ್ರಿ ಶೂ ಽ ಲಿ

ಗ ಮ ಪ ಧ ಽ ಧ ಧ ಧ ಸಾ ಸಾ ಽ ಸಾ

ರುಂ ಡ ಮಾ ಽ ಲ ಭ ಕು ತ ಪಾ ಽ ಲ

ಸಾ ರೆ ಸಾ ಽ ಧ ಪ ನಿ ಧ ಪ ಧ ಗ ಮ

ಕ ರು ಣಿ ಸು ಭೋ ॥೧॥

ನಿ ಸಾ ಮ ನಿ ಧ ಪ

॥ ತಾನುಗಳು ॥

ನೀ ಲ ಕಂ ಠ ಇಷ್ಟು ಬಾರಿಸಿ ತಾನು ತಕ್ಕೊಳ್ಳಬೇಕು.

೧ ಸಾರೆ ಗಮ ಪಧ ನಿಸಾ ನಿಧ ಪಮ

೨ ಸಾರೆ ಗಮ ರೆಗ ಮಪ ಗಮ ಪಧ

೩ ಪಧ ನಿಸಾ ನಿಧ ಪಮ ಗಮ ಪಧ

೪ ಸಾರೆ ನಿಸಾ ಧನಿ ಪಧ ಮಪ ಗಮ

೫ ಸಾಗ ರೆಮ ಗಪ ಮಧ ಪನಿ ಧಸಾ

ನಾರಾಯಣರಾವ ವಿಜಾಪೂರ
ಹಾರ್ಮೋನಿಯಮ್ ಮಾಸ್ತರ, ಶಿರಹಟ್ಟಿ.

# ಹದಿನಾರುಸೋಮವಾರಗಳ ಪದ್ಯಕಥೆ.

## ಶ್ರೀ ಶಿವವ್ರತ.

( ಶಿವಾನಂದದೀಕ್ಷಿತವಾಜಪೇಯವಿರಚಿತಂ )

( ಮುಂದೆ ಸಾಗಿಸ್ತು )

**ಶ್ರೀ ಪಾರ್ವತೀ ಪರಮೇಶ್ವರಾರ್ಪಣಮಸ್ತು.**

**ಸಂತತಂ ಶ್ರೀ-ಶುಭ-ಸುಖ-ವಿಜಯಂಗಳಕ್ಕೆ.**

[ ಆರತಿಯ ಪದ ]

ಮಂಗಳಾರತಿಯೆತ್ತಿರೈ | ತುಂಗಸಂಭ್ರಮದೆ ಶ್ರೀಪಾರ್ವತೀಶನಿಗೆ ||ಪಲ್ಲ||

ಗಿರಿವರನಳಿಯಂಗೆ | ಗಿರಿಧರಸಖನಿಗೆ |
ಗಿರಿಶಂಗೆ ಪಾರ್ಥಂಗೆ ಪಾಶುಪತಾಸ್ತ್ರವಿತ್ತನಿಗೆ ||೧|| ಮಂಗಳಾರತಿ ||

ಸಿಂಧುವಾಳಿಗೆ ಲಸ | ದಿಂದುತೇಜನಿಗೆ |
ವಂದಿತಗುಹ-ಲಂಬೋದರರ ಪ್ರೀತಿತಾತನಿಗೆ ||೨|| ಮಂಗಳಾರತಿ ||

ನೀಲಕಂಧರನಿಗೆ | ಕಾಲಕಾಲನಿಗೆ |
ಫಾಲಾಂಬಕನಿಗೆ ವಿಳಸಿತಶೂಲಹಸ್ತನಿಗೆ ||೩|| ಪಲ್ಲವಿ ||

ನಾಗಾಂಬರನಿಗೆ । ನಾಗಭೂಷನಿಗೆ |
ಯೋಗೀಶಂಗೆ ಭಸಿತವಿಭೂತಿವಿತ್ತನಿಗೆ ||೪|| ಪಲ್ಲವಿ ||

ಭವಹರ ಹರನಿಗೆ | ಶಿವ-ಸುಖಕರನಿಗೆ ।
ಶಿವನಿಗೆ ಲಕ್ಷ್ಮೀಲಿಂಗನಿಗೆ - ಸೋಮನಾಥನಿಗೆ ||೫|| ಪಲ್ಲವಿ ||

ಪ್ರೇಮಸಾಗರನಿಗೆ | ವಾಮದೇವನಿಗೆ ।
ಭೀಮಾಹ್ವಯನಿಗೆ ಭವನಿಗೆ ಭಕ್ತಬೃಂದನಿಗೆ ||೬|| ಪಲ್ಲವಿ ||

ಮಂದಾರನಿಭನಿಗೆ | ಬೃಂದಾರವರನಿಗೆ |
ನಂದಿಕೇಶನಿಗೆ ಶಿವಾನಂದನ ಶ್ರೀಶನಿಗೆ ||೭|| ಮಂಗಳಾರತಿ ||

ಇಂತು ಶ್ರೀಮಂಗಳಂ—ಶುಭಮಂಗಳಂ—ಜಯಮಂಗಳಂ

ಶ್ರೀ— ಶ್ರೀ— ಶ್ರೀ.

 # ನೀತಿಪದ್ಯಾವಳಿ 



ಶಿವಾನಂದದೀಕ್ಷಿತವಾಜಪೇಯವಿರಚಿತಂ

ಮಂಗಳಾಚರಣಂ

||ಕಂದ|| ಶ್ರೀಶಿವ—ಗಿರಿಜಾಸುತನಂ |
ಪಾಶಾಂಕುಶಧರನನಾ ಸುರಾರ್ಚಿತನಂ ವಿ ||
ಘ್ನೇಶನ ನಿಭಮುಖನಂಭಯ |
ನಾಶನನೀಮುಂಚೆಪಾಡಿಶುಭಪರಮಾಂಪೆಂ ||೧||

ಆವಳದಯವೇ ನಮ್ಮಾ |
ಜೀವನಕೆಸುಸಾಧನಂಗಳಾವಳ ಬಲದಿಂ ||
ದಾವೆಸಪ ಕೃತಿಯು ಸಫಲತೆ |
ಯಾವಾಗ್ದೇವೀಕರಣದೊಳೀಕೃತಿಗೆಯ್ವೆಂ ||೨||

ಆವಳದಾವಂ ಗಡ ! ಜಗ |
ತೀವಲಯಕ್ಕೊಡೆಯರೆನಿಸುವರ್ ನತರಂ ಸಂ ||
ಭಾವಿಸಿನಲಿಸುವರಾ ಶ್ರೀ |
ಶ್ರೀವರರಂ ಮಣಿದಭೀಷ್ಟಮಂ ಚಿಂತಿಸುವೆಂ ||೩||

ಭಾ. ಷ.

ಪರಮಮಂಗಳಮೂರ್ತಿ ! ಪಾವನ | ಚರಿತ ! ನಿಗಮಂಗಳಿಗಗೋಚರ ! |
ವರದಯಾನಿಧಿ ! ಭಕ್ತವತ್ಸಲ ! ಶ್ರೀಶ ! ಗುಣಕೋಶಾ ||
ಧರೆಯನಿಖಿಳಾನಂದದಿರುವಿಕೆ | ಗಿರುವುದೈ ! ನಿಜನಿರ್ಮಲಾಂತಃ |
ಕರಣವೇಕಾರಣವು ನಿನ್ನಾಕರುಣವೆನಗಿರಲೈ ! ||೪||

ವಿಷಯಾರಂಭವು

ನೀತಿಯ ಮಹತ್ವವು

||ಕಂದ|| ಮನುಜಂ ಸುಖದಿಂಬಾಳಲ್ |
ತನುವಿಂ ಮನದಿಂ ಬಲಿಷ್ಠನಾಗಲ್ ಜಯಮಂ |
ಧನ-ಮಾನಂಗಳನೆಯ್ದಲ್ |
ನೆನೆದೊಡೆ ನೀತಿಯೆ ! ಸುಮುಖ್ಯಸಾಧನಮಿರ್ಕ್ಕುಂ ||೫||

(ಮುಂದೆ ಸಾಗುವದು

ಕವಿಗಳ ಮನಸ್ಸಿನಲ್ಲಿದ್ದುದನ್ನು ಚಿತ್ರಿಸಿಕೊಳ್ಳುವದು ಬಹಳ ಕಷ್ಟ. ಕವನವನ್ನು ರಚಿಸುವಾಗ ಅನೇಕ ವೇಳೆ ಛಂದಸ್ಸಿಗಾಗಿ, ಉಚಿತವಲ್ಲದ ರೂಪವನ್ನೂ ಶಬ್ದವನ್ನೂ ಉಪಯೋಗಿಸಿ ತೊಂದರೆಯನ್ನು ಪರಿಹರಿಸಿ ಕೊಳ್ಳಬೇಕೆಂದೆನಿಸುತ್ತದೆ. ಆದರೆ ಈ ಸುಲಭಮಾರ್ಗವನ್ನನುಸರಿಸಿದರೆ ಕಾವ್ಯವು ಕೆಡುತ್ತದೆ.

# ಕಾವ್ಯ ಕುಂಜ.

ಗಾಳಿಯನ್ನು ಒತ್ತಿ ಅದುಮಿ ಬಿಗಿಯಲ್ಲಿಟ್ಟರೆ, ಅದು ಬಂಡೆಗಳನ್ನಾಗಲಿ ಸೀಳಬಲ್ಲದು. ಆದರೆ ಬಿಗಿತಪ್ಪಿಸಿ ಅಲೆದಹಾಗೆ ಅಲೆಯಲೆಂದು ಬಿಟ್ಟುಬಿಟ್ಟರೆ ಅದರ ಸುಳಿವೇ ನಮಗೆ ಗೊತ್ತಾಗುವದಿಲ್ಲ. ಭಾವಗಳ ವಿಷಯದಲ್ಲೂ ಇದು ನಿಜ. ಅವು ಕಾವುಹತ್ತಿ ಬಿಳಿಗೆಂಡವಾಗಿ ವಿದ್ಯುಲ್ಲತೆಯಂತೆ ಹೊರ ಹೊರಡಬೇಕು. ಇಂಥ ಒಂದು ಲತೆ ಬಂದರೂ ಸಾಕು. ಲಕ್ಷ ಕಿಡಿಗಳಿ ಗಿಂತಲೂ ಅದೊಂದರಲ್ಲಿ ಶಕ್ತಿಯಿರುತ್ತದೆ. ಕೆಲವು ಕವನಗಳಲ್ಲಿ ಭಾವಗಳು ಹಿಡಿತವಿಲ್ಲದೆ ಇರುವದರಿಂದ ಶಿಥಿಲವಾಗಿ ಕಾಣುತ್ತವೆ.

ಶ್ರೀ ಎಮ್. ಎಸ್. ಮೂರ್ತಿರಾವ.

# ಭಾಗ್ಯದಧಿದೇವತೆ



ಕಲ್ಪನಾ-ಸುಸ್ಫಟಿಕ-ಸುವಿಶಾಲ-ವ್ಯೋಮದಲಿ | ಸ್ವರ್ಣಪ್ರಭಾತಖಚಿತಸುಸ್ವಪ್ನ
ಧಾಮದಲಿ |
ನೀಲಚ್ಛವಿ-ವಿಲಸಿತ-ಸೂಕ್ಷ್ಮವಸ್ತ್ರವಧರಿಸಿ | ಅನವರತಪೂರ್ಣ ಹರಿಣಾಂಕ
ಹಾಸವಹರಿಸಿ ||
ವಿಶ್ವಾನುರಾಗಸಿಂಧುರಲಲಿತ ತಿಲಕವನು | ಪಣೆಗಿಟ್ಟುಬೀರಿ ನಿತ್ಯಾನಂದ
ಪುಲಕವನು ||
ಇಂದ್ರಚಾಪದಿ ಚಂದ್ರತಾರೆಗಳನೆರೆಕೋದು | ವಿರಚಿಸಿದ ಹಾರವನು ಕೊರಳಿನಲಿ
ನೀ ತಳೆದು ||
ಕಮನೀಯ ದೇಹದಿ ಹೊಂಬೊಗರು ಬಿತ್ತರಿಸೆ | ನಯಕೋಮಲತ್ವಗಳು
ಮೈವೆತ್ತು ಪುದ್ಧರಿಸೆ ॥
ಪದ್ಮಪೀಠದಿ ಕುಳಿತು ಸರಸವೀಣೆಯ ಪಿಡಿದು | ಪರ್ವತ ಗಭೀರಮೌನದ
ಶಾಂತಿಯನೆ ಮಿಡಿದು ॥
ವಿಶ್ವವನೆ ಸೆರೆಗೊಳ್ವ ಭಾಗ್ಯದಧಿದೇವತೆಯೆ। ಬಾಯಾರಿ ಬಂದಿಹೆನು ಪ್ರೇಮ
ಸಂಪೂರ್ಣತೆಯೆ ||
ಸುರಿಸು ! ದೇವಿಯೆ, ನಿನಗೆ ಮನಸೋತು ನಿಂತಿಹೆನು | ಜಗದದ್ವಂದದಿ ಬಳಲಿ
ಗತಿಗಾಣದಿರತಿಹೆನು ||
ಧನಿಕ ನಿರ್ಧನನೆಂಬ ಜಗದ ಭೇದಗಳಿಲ್ಲ | ಜಗದಪೆಣ್ಗಳಪಡೆಯುಬರುವ
ತೊಂದರೆ ಇಲ್ಲ ॥
ಓರೋರ್ವರನು ಕಾಣತಾವಬಂಧನವಿಲ್ಲ | ಓರೋರ್ವರನು ಶೇರತಾವಕಟ್ಟಳೆಇಲ್ಲ ||
ಬಗೆಯು ಬಗೆಯೊಲವಿನಲಿ ಬೆರೆಯಲದುವೆಲಗ್ನ | ಇದುನುಳಿದಲಗ್ನವಗು
ಎಂತಿರ್ದಡೂ ಭಗ್ನ !
ನಾನಾ ಪರೀಕ್ಷೆಗಳಡಂಬಡವರಿಲ್ಲಿಲ್ಲ ! ದಾರಿದ್ರ್ಯವೊಡ್ಡುತಿಹಬೆಸನತಳಮಳವಿಲ್ಲ ||
ನಿನ್ನಪಾದಗಳಬಳಿಕುಳಿತುಮರೆವೆನುಜಗವ | ನನ್ನಶಿರದೊಳಗಿರಿಸು ಪ್ರೇಮಹಸ್ತದ
ನೊಗವ ||
ನಿನ್ನಕಣ್ಣಿನಹೃದಯವೆನ್ನಪರಿಕಿಸುತಿರಲಿ | ನನ್ನಹೃದಯಕಣ್ಣುನಿನ್ನನಿರುಕಿಸುತಿರಲಿ।
ನೋಟನೋಟದಿಕಲೆತು, ಬಗೆಯುಬಗೆಯಲಿಬೆರೆತು | ಮರೆಯುವಪ್ರೇಮಸರದಿ
ತನುವನೇಮರೆತು ||

ಇಲ್ಲಿಯೇ ಇರುದೇವಿ | ಇಲ್ಲಿಯೇ ಇರುದೇವಿ ! ಈ ಕಲ್ಪನಾಸ್ವಪ್ನಶೀಮಯಲಿ
ಯಧಿದೇವಿ ||
ಭುವಿಗೆಅವತರಿಸದಿರು ! ಭುವಿಗೆಅವತರಿಸದಿರು | ಅವತರಿಸಿನನ್ನಂತೆದೇವಿ
ತರಹರಿಸದಿರು |
ಸಾಂಪ್ರದಾಯದಕೊಳಚಿಸಿನ್ನತಗಲಿತು | ಲೋಕರೂಢಿಗೆಕೂರ್ಮುಜೆಸುಗೆ
ಯಗಲಿತು ||
ಅದಕಾಗಿ ಓ ದೇವಿ ನನಗಾಗಿ ಇರುಇಲ್ಲಿ | ನಿನಗಾಗಿ ಮರೆಯುವೆನು
ಜಗದಪೆಣ್ಗಳನೆಲ್ಲ
ಆಗಜಗವೆನ್ನನ್ನು ಹುಚ್ಚನೆಂದೆಂದರೇಂ | ತಿಳಿದಂತೆ ಹೊಳೆದಂತೆ ಹಳಿದರೇಂ
ಮುನಿದರೇಂ ||
ನಿನ್ನನಾಪಡೆದಿರುವದೀಜಗಕೆ ಗೊತ್ತೇ | ನಿನ್ನ ಸುಖವನು ಕಾಂಬುದೆಂತು
ಇದುಮತ್ತೆ ?

— ಈಶ್ವರ ಸಣಕಲ್ಲ ರಬಕವಿ.

---

## ಚಿಕ್ಕ ಅಗಿ.*

೧

ಬೀಜದೊಳಹೃದಯದಲಿ | ಹೃದಯದತಿಯಾಳದಲಿ |
ಸಲೆ ಎಳೆಯನಲವಿನಗಿ | ನೆರೆನಿಟ್ಟಿಪುದು ಮಲಗಿ ||

೨

" ಏಳು ಬೆಳಕಿಗೆ ಬಾರ " | ಇನವೆಳಕುನುಡಿದಿತ್ತು |
" ಏಳು ಮೊಗವನು ತೋರ " | ಮೊಳೆವನಿಗಳುಲುಹಿತ್ತು ||

೩

ಕೇಳುತಿದನಾ ಅಗಿಯು | ನಿರುಕಿಸಲು ಮೇಲ್ಬಗಿಯೆ |
ಎಂಥ ಹೊರಗಣ ಜಗವು | ಅದಕೆಂಥ ನಗುಮಾದವು ||

— ಈಶ್ವರ ಸಣಕಲ್ಲ ರಬಕವಿ.

* ಒಂದು ಇಂಗ್ಲೀಷ ಕವಿತೆಯ ಅನುವಾದ

# ಸಂತೆ

ಸಂತೆಯುದ್ದೋಯಿತು | ಸಂತೆಯುಬಂದಿತು | ಸಂತೆಯುದೊಂದೆ ತರಪಿಹುದು ||
ಇಂತದರಿರುವದು | ಇದ್ದರುಮನುಜಗೆ | ಸಂತೆಯುಮೋಹವದೆಂತಹದು ||೧||
ಹೊಸತೊಂದಿಲ್ಲವು | ಹಳೆಯುದೆಯೆಲ್ಲವು | ದುಸುಮುಸಿಯೊಂದೇಯೊಂದಿಹುದು ||
ಆಶನಕಾಗಿಯದು | ವ್ಯಸನವಹೆಚ್ಚಿಸಿ | ಮಸಣದಮನೆಗೆಳೆದೊಯ್ಯುವದು ||೨||
ಧ್ಯನವು ಒಂದೇ | ದವಸವು ಒಂದೆ | ದೀನಸು ಒಂದೇ | ಮಾರುವದು ||
ಜನವದೆ ನೆರೆವುದು | ದನವದೆ ಬರುವದು | ಘನವವರೊಳ್‌ತಾ ಏನಿಹುದು ||೩||
ಇಂದಿನ ಸಂತೆಗೆ | ನೊಂದರು ಮಾನವ | ಮುಂದಿನದಕೆ | ಸಂತೋಷಿಸುವ ||
ಎಂದಿನಮಾನವ | ಕುನ್ನಿಗಳಂದದಿ | ಅಂಧನದಾರಿಯ | ತುಳಿವನವ ||೪||
ಸಾಯುದಸಂತೆಯ | ಮಾಳ್ಪದುಕೆಮ್ಮನು | ಮಾಯುದಮಾಟವು ಎಳೆವುದುದು||
ಧೇಯುವುತಿಳಿಯದು | ಹಾಯದು ಎನಿಸದು | ಕಾಯುವನುರೆಜರ್ಜರಿಸುವದು ||೫||
ಅಂತವಕಡಲಿನ | ತಿಳಿಯುದಲವರು | ಅನಂತವಾಗಿಹುದು ಎಂಬುವರು |
ಸಂತೆಯ ಗೂಢವು | ಇಂತೆಯೆ ಇಹುದಕೆ | ಜನರದು ಮೋಹಿಸಿ ಬಳಲುವರು||೬||
ಸಂತೆಯು ಇರುವದು | ಜೀವನ ಇರುವದು | ಅಂತೆಯೇ ಒಂದೇ ಒಂದಿಹುದು ||
ಅಂತರಾತ್ಮನ ಕೃಪೆಯದು ಒಂದೇ | ಬಿಡುಗಡೆ ಅಡಿಗಲ್ಲಾಗಿಹುದು ||೭||

—ಬಾಳೇಹೊಸೂರ ರಾಮರಾಯರು,

---

## ಪಿಲ್ಲು !

( ಮಕ್ಕಳಿಗಾಗಿ ಒಂದು ಚಿಕ್ಕ ಕಾವ್ಯ )

ಚರಚರ ಬಂದಿತು ನನ್ನಯ ಪಿಲ್ಲು |
ನಾನಿದ್ದೆಡೆಗದು ಮಾಡದೆ ಸೊಲ್ಲು |
ಬಂದಿತು ! ಬಂದಿತು ! ಹಾ ! ಹಾ ! ಬಂದಿತು |
ಬಂದುದೆ ಕಾಲಿನ ಬುಡವನು ನೆಕ್ಕಿತು ! ||೧||

ಬಾರೆಲೆ, ಮುದ್ದೇ ಬಂಡೆಯು ಈಗ !
ಇಷ್ಟು ಹೊತ್ತು ನೀ ಹೋಗಿದುದೆಲ್ಲಿಗ |
ಎನ್ನುತ ಸವರಿದೆ ಬೆನ್ನನ್ನು |
ಕೊಟ್ಟೆನು ಬಟ್ಟಲ ಹಾಲನ್ನು ||೨||

ಕಟ್ಟೀಮನಿ ಬಸವೇಶ
ಸಂ. ವಿದ್ಯಾರ್ಥಿ, ಬೆಳಗಾವಿ.

# ಜೀವನದ ಜೋಕಾಲಿ

ಭಾರಹಾಕಿ ಕಸವಿಲೆ ಜೀಕಲು ಜೋಕಾಲಿ
ಏರ್ತ್ತದ ಏರ್ತ್ತದ ಏರ್ತ್ತದ
ಏರುತ ಹಿಂದ ಮುಂದ ತೂಗ್ತ್ತದ ||ಪಲ್ಲ||

ಬೈಲಾಗಿನ ದೊಡ್ಡಗಿಡದ ದೂರಿನ ಟೊಂಗೆಗೆ
ಘಟ್ಟಿಮುಟ್ಟಿ ಮುಪ್ಪುರಿ ಹಗ್ಗದಿಂದ
ಜೋಕಾಲಿಯನು ಕಟ್ಟಿ ಆಡುವದು ||೧||

ಜಗತ್ತಿನ ಗಿಡದ ಸಂಸಾರದ ಟೊಂಗೆಗೆ
ಜೀವಿತ ಜೋಕಾಲಿ ಕಟ್ಟೇದ
ಸುಖ ದುಃಖ ಭಾರದ ತೂಗ್ತ್ತದ ||೨||

ಬಾಲ್ಯ-ಯೌವ್ವನ-ಪ್ರೌಢತ್ವ-ವೃದ್ಧಾಪ್ಯಗ
ಳೆಂಬವು ಜೀವಿತ ಜೋಕಾಲಿಯು
ನಾಲ್ಕಾವಸ್ಥೆಗಳಾಗಿಹವು ||೩||

ಆರೋಗ್ಯ ಸುಬುದ್ಧಿ ಶಿಸ್ತಿನ ಮುಪ್ಪುರಿ
ಹಗ್ಗದಿ ಘಟ್ಟಿಯಾಗಿ ಕಟ್ಟುವದು
ಬಾಲ್ಯದ ಜೋಕಾಲಿಯು ಬಿಗಿದು ||೪||

ಶಕ್ತಿಶೀಲ ಸ್ಥೈರ್ಯ ಈ ಮುಪ್ಪುರಿ ಹಗ್ಗದಿ
ಕಟ್ಟುವದು ಕಟ್ಟುವದು ಕಟ್ಟುವದು
ತಾರುಣ್ಯದ ಜೋಕಾಲಿಯನು ||೫||

ವಿವೇಕ ವ್ಯವಹಾರಸಿರಿ ಈ ಮುಪ್ಪುರಿ
ಹಗ್ಗದಿ ಬಿಗಿಯಾಗಿ ಕಟ್ಟುವದು
ಪ್ರೌಢತನದ ಜೋಕಾಲಿಯನು ||೬||

ಭಕ್ತಿ ಜ್ಞಾನ ವೈರಾಗ್ಯ ಮುಪ್ಪುರಿ ಹಗ್ಗದಿ
ಮುಪ್ಪಿನ ಜೋಕಾಲಿ ಸ್ಥಿರಕಟ್ಟಿ
ಬ್ರಹ್ಮಾನಂದದಲಾಡುವದು ||೭||

—ಶಂಕರ ರಾಮಚಂದ್ರ ಕುಲಕರ್ಣಿ
ತೇರದಾಳ.

ಸಮಾಜದ ಉನ್ನತಿಗೆ ಬೇಕಾದುದು ಸತ್ಸಾಹಿತ್ಯದ ಪ್ರಚಾರ. ಅದನ್ನೇ ಕೆಲವರು ಜೀವಿತಸಾಹಿತ್ಯವೆಂದೂ ಕರೆಯುವರು. ಅದು ಅನುವಾದವಾಗಿರಬಹುದು. ಮೂಲವಾಗಿರಬಹುದು. ಆದರೆ ಇಂತಹ ಸಾಹಿತ್ಯವು ನಿರ್ಮಾಣವಾಗಬೇಕಾದರೆ ಧನಾರ್ಜನೆ ಮಾಡುವ ಉದ್ದೇಶವು ಲೇಖಕನಲ್ಲಿರಕೂಡದು. ಕೀರ್ತಿಯ ಲಾಲಸೆಯು ಅವನಲ್ಲಿರಕೂಡದು. ಲೇಖನವು ಬರೆದವನ ಜ್ಞಾನಾನುಭವಾನಂದಗಳ ಪರಿಣಾಮಸ್ವರೂಪವಾಗಿರಬೇಕಲ್ಲದೆ ಅನ್ಯಥಾ ಇರಕೂಡದು.

ಶ್ರೀ. ಕಡಸಾಡಿ ಶ್ರೀನಿವಾಸ ಶಣೈ,
ಕಾರ್ಕಳ.

# ವಿವಿಧ ಸಾಹಿತ್ಯ.

ಸಾಹಿತ್ಯ ವಿಚಾರವಾಗಿ ನನಗೆ, ಪ್ರಾಚೀನ ಮತ್ತು ಆಧುನಿಕ ಸಾಹಿತ್ಯ ಎಂಬ ಭೇದವಿಲ್ಲ. ಪ್ರಾಚೀನ ಸಾಹಿತ್ಯಕ್ಕೂ ನಿಜವಾದ ಯೋಗ್ಯತೆಯಿದೆ. ಅಂದಿನ ಜನರ ರುಚಿಗಾನುಸಾರವಾಗಿ, ಸೃಷ್ಟಿಯಾದ ಸಾಹಿತ್ಯವದು. ಮತ್ತು ಅಂದಿನ ಜೀವನಕ್ಕೆ ತಕ್ಕಂತೆ ಅದು ರೂಪಗೊಂಡಿತು. ಇಂದು ನಮ್ಮ ರುಚಿಯು ಬದಲಾವಣೆಗೆ ಸಾಹಿತ್ಯವೂ ಬದಲಾವಣೆಹೊಂದಬೇಕು. ಹಾಗೆಮಾಡದೆ ಹೋದರೆ ಭಾಷೆಗೆ ಬೆಳವಣಿಗೆಯಿಲ್ಲ. ಆಗಾಗ ಭಾಷೆಯಲ್ಲಿ ತೋರಿಬರುವ ಬದಲಾವಣೆಯಿಂದ ಸಾಹಿತ್ಯವು ನಶಿಸಬಹುದೆಂದು ಕೆಲವರು ಅನ್ನುತ್ತಾರೆ. ಅದು ಪ್ರಾಚೀನತಾ ಪ್ರೇಮಿಗಳ ಅಂಧಶ್ರದ್ಧೆ. ಅದರಿಂದ ಸಾಹಿತ್ಯಕ್ಕೇ? ಕೇಡು. ಕನ್ನಡವು ಎಲ್ಲಿಯ ವರೆಗೆ ಸಾಧ್ಯವೋ ಅಲ್ಲಿಯ ವರೆಗೂ ಇರಲಿ; ಅವಶ್ಯಕವಿಲ್ಲದಿರುವಾಗ ಅದರ ಸುದ್ದಿಯೇ ಬೇಡ. ಈಗ ಎಲ್ಲರಿಗೂ ಬೇಕಾದುದು ಬರವಣಿಗೆ ಸುಲಭವಾಗಿರಬೇಕು.

ಶ್ರೀ. ಕಡೆಂಗೋಡ್ಲು ಶಂಕರಭಟ್ಟರು,
ಮಂಗಳೂರು.



# ಪಂಚದಶೀ ಸಾರವು

ಲೇಖಕ:— ಶ್ರೀ. ನೀಲಕಂಠಸ್ವಾಮಿ ಚಿಕ್ಕೋಡಿ.
ಶ್ರೀ ಜಿ. ಗಂಗಾಧರ ಸಂ. ಕಾ. ಹುಬ್ಬಳ್ಳಿ.

## ೧ ತತ್ವ ವಿವೇಕವು:

ಜ್ಞಾನವು ಸ್ಥೂಲ ಸೂಕ್ಷ್ಮಕಾರಣ ಶರೀರಗಳಲ್ಲಿ ಒಂದೇ ವಿಧವಾಗಿದ್ದು ಸಚ್ಚಿದಾನಂದ ಸ್ವರೂಪವಾಗಿರುವದು. ಆತ್ಮಸ್ವರೂಪವಾದ ಜ್ಞಾನವು ವ್ಯಕ್ತಸ್ಥಿತಿಯಲ್ಲಿದ್ದರೂ ಅವಿದ್ಯೆಯಿಂದ ಉಪಹಿತವಾದುದಕ್ಕಾಗಿ ನಮಗೆ ಪ್ರತ್ಯಕ್ಷವಾಗುವದಿಲ್ಲ. ಮತ್ತು ಅವಿದ್ಯೆಗೆ ಮೂಲವಾದ ಸತ್ವ-ರಜ-ತಮೋಗುಣ ವಿಶಿಷ್ಟವಾದ ಪ್ರಕೃತಿಯು ಮಾಯೆಯಂತಲೂ ಅವಿದ್ಯೆಯಂತಲೂ ಎರಡು ವಿಧವಾಗಿರುವವು. ಮಾಯೆಯಲ್ಲಿ ಪ್ರತಿಫಲಿತವಾದ ಚೈತನ್ಯವು ಈಶ್ವರನೆಂತಲೂ ಅವಿದ್ಯೆಯಲ್ಲಿ ಪ್ರತಿಫಲಿತವಾದ ಚೈತನ್ಯವು ಜೀವನೆಂತಲೂ ಭೇದ್ಯವಾಗುವದು. ಮತ್ತು ಆ ಅವಿದ್ಯೆಯು ನಾನಾ ರೀತಿಯಲ್ಲಿರುವದರಿಂದ ತದುಪಹಿತಜೀವನದ ನಾನಾವಿಧವಾಗಿ ತೋರಿ ಕಾರಣ ಶರೀರದಲ್ಲಿ ಪ್ರಾಜ್ಞನೆಂಬ ಹೆಸರನ್ನು ಪಡೆಯುವನು. ಆ ಪ್ರಾಜ್ಞರ ಭೋಗಕ್ಕಾಗಿ ಈಶ್ವರನು ತನಗಧೀನವಾಗಿರ್ದ ಮಾಯೆಯಿಂದ ಪಂಚಭೂತಗಳನ್ನು ಹುಟ್ಟಿಸಿದನು. ಮತ್ತೆ ಆ ಭೂತಗಳ ಸತ್ವಗುಣಗಳಿಂದ ಜ್ಞಾನೇಂದ್ರಿಯ ಪಂಚಕವೂ ಬುದ್ಧಿ-ಮನುಸ್ಸುಗಳೂ ಹುಟ್ಟಿದವು. ಅವುಗಳ (ಭೂತಗಳ) ರಜೋಂಶುಗಳಿಂದ ಕರ್ಮೇಂದ್ರಿಯ ಪಂಚಕವೂ ಹುಟ್ಟಿತು. ಜ್ಞಾನ-ಕರ್ಮ-ಪ್ರಾಣ ಪಂಚಕವು ಬುದ್ಧಿ-ಮನಸ್ಸು ಇವು ಕೂಡಿದಲ್ಲಿ ಸೂಕ್ಷ್ಮ ಶರೀರವಾಗುತ್ತದೆ. ಇಲ್ಲಿ ಪೂರ್ವೋಕ್ತಪ್ರಾಜ್ಞನಿಗೆ ತೈಜಸವೆಂದು ನಾಮ ಬರುವದು. ಮುಂದೆ ಪಂಚೀಕೃತ ಭೂತದಿಂದುತ್ಪನ್ನವಾದ ಸ್ಥೂಲಶರೀರದಲ್ಲಿ ಆ ತೈಜಸನೇ ವಿಶ್ವವೆಂಬ ನಾಮವನ್ನು

ತಾಳುತ್ತಾನೆ. ಹೀಗೆ ಮೂರು ಶರೀರಗಳಲ್ಲಿ ಸಮಷ್ಟಿಯಿಂದ ಕ್ರಮವಾಗಿ ಈಶ್ವರ ಹಿರಣ್ಯಗರ್ಭ ವೈಶ್ವಾನರು ( ಆತ್ಮತ್ರಯರು ) ವ್ಯಷ್ಟಿಯಿಂದ ಪ್ರಾಜ್ಞ ತೈಜಸ ವಿಶ್ವ ( ಜೀವತ್ರಯರು ) ರೆಂಬ ಅಭಿಧಾನವನ್ನು ಹೊಂದಿ ಆ ಆ ದೇಹಗಳ ಅಭಿಮಾನವುಳ್ಳವರಾಗುತ್ತಾರೆ. ಮುಂದೆ ಆ ಜೀವಾದಿಗಳು ನಾನಾ ಜನ್ಮಗಳನ್ನೆತ್ತಿ ಸಂಸಾರ ಕಿಚ್ಚಿನಲ್ಲಿ ಬೆಂದು ಬೆಂಡಾಗಿ ಗುರುವಿನುಪದೇಶಮಂ ಪಡೆದು ಪಂಚಕೋಶಗಳ ಮರ್ಮವನರಿತು " ಸೋಽಹಂ ದೇವದತ್ತ. ಎಂಬ ವಾಕ್ಯಾರ್ಥದಂತೆ ಭಾಗತ್ಯಾಗ ಲಕ್ಷಣ ಘಟಿತವಾದ ತತ್ವಮಸ್ಯಾದಿ " ವಾಕ್ಯಗಳನ್ನರಿಯುವರಲ್ಲದೆ ಶ್ರವಣ-ಮನನ-ನಿದಿಧ್ಯಾಸಗಳಿಂದ ಸಮಾಧಿಯಲ್ಲಿ ನಿಶ್ಚಲಚಿತ್ತರಾಗಿ ವೃತ್ತಿಗಳ ಸೆಳವಿಗೆ ಬೀಳದೆ ವಾಸನಾ ಬಲೆಯನ್ನು ಹರಿದೊಗೆದು ಪಾಪ ಪುಣ್ಯಗಳನ್ನು ಕತ್ತರಿಸಿ ಅಂಗೈಯೊಳಗಿನ ನೆಲ್ಲೀಕಾಯಿಯಂತೆ ಆ ಪರಬ್ರಹ್ಮನನ್ನು ಕಾಣುವರು.

ವಹ್ನಿಯ ಯೋಗದಿಂದ ಸರ್ವವೂ ಭಸ್ಮವಾಗುವಂತೆ ಬ್ರಹ್ಮಜ್ಞಾನದಿಂದ ಅವಿದ್ಯಾಕಾರ್ಯವಾದ ಅಜ್ಞಾನವು ದಗ್ಧವಾದಮೇಲೆ ಆ ಜೀವೇಶ್ವರರು ನಿತ್ಯ ಅಂದರೆ ಎಂದೂ ಅಗಲದ ಸುಖಸಾಮ್ರಾಜ್ಯದಲ್ಲಿ ತಾವೇ ತಾವಾಗಿರುವರು.

## ೨ ಪಂಚಭೂತವಿವೇಕವು :

ಪಂಚಭೂತಗಳು ಶಬ್ದ, ಸ್ಪರ್ಶ, ರೂಪ, ರಸ, ಗಂಧ ಹೀಗೆ ಕ್ರಮವಾಗಿ ಒಂದೊಂದರಲ್ಲಿ ೧-೨-೩-೪-೫ ಗುಣಗಳುಳ್ಳವುಗಳಾಗಿರುವವು. ಆ ಗುಣಗಳನ್ನು ಆ ಆ ಭೂತಗಳಿಂದ ಹುಟ್ಟಿದ ಇಂದ್ರಿಯಗಳೇ ಅರಿಯುತ್ತವೆ. ಆ ಎಲ್ಲ ಇಂದ್ರಿಯಗಳಿಗೆ ಮನಸ್ಸೇ ಮುಖ್ಯವಾದುದು. ಮತ್ತು ಆ ಮನಸ್ಸು ಸತ್ವಗುಣದಿಂದ ಕೂಡಿದಲ್ಲಿ ವೈರಾಗ್ಯಾದಿಗುಣಗಳುಂಟಾಗುವವು- ರಜೋಗುಣದಿಂದ ಕೂಡಿದಲ್ಲಿ ಲೋಭಾದಿಗುಣಂಗಳು ತೋರುವವು. ತಮೋಗುಣದಿಂದ ಕೂಡಿದಲ್ಲಿ ಆಲಸ್ಯಾದಿ ಗುಣಗಳು ಉದ್ಭವಿಸುವವು. ಒಟ್ಟಾರೆ ಸತ್ವಗುಣದಿಂದ ಪುಣ್ಯವೂ ರಜಸ್ತಮೋಗುಣಗಳಿಂದ ಪಾಪವೂ ಉಂಟಾಗುವದು. ವೃಕ್ಷಗಳಲ್ಲಿ ಹೇಗೆ ಸ್ವಗತಿ, ಸ್ವಜಾತಿ, ವಿಜಾತಿ ಭೇದಂಗಳುಂಟೋ ಹಾಗೆ ತತ್ವಂಪದಗಳಿಗೆ ಲಕ್ಷ್ಯಾರ್ಥವಾದ ಬ್ರಹ್ಮನಲ್ಲಿ ಆ ಭೇದಗಳಾವೂ ಇಲ್ಲವೆಂಬುವದನ್ನು ಮೇಲೆ ಉದಹರಿಸಿದ ಪ್ರತ್ಯಕ್ಷಪ್ರಮಾಣ-ದಿಂದಲೂ ಆಗಮಪ್ರಮಾಣದಿಂದಲೂ ಕಂಡು ಹಿಡಿಯಲು ಅನುವಾಗಿದೆ. ಕೆಲವು ಬೌದ್ಧಮತಾವಲಂಬಿಗಳು ( ಅಸದೇವ ಅನೇಲ್ ) ಎಂಬ ಶ್ರುತಿಯನ್ನು ಪ್ರಮಾಣಿಸಿ ಶೂನ್ಯವೇ ಇತ್ತು ಎಂದು ಹೇಳುವರು. ಅಹಹ ! ಇದೆಂತಹ ಸಿದ್ಧಾಂತವು. ಇಲ್ಲವ್ವೇ ಇತ್ತು ಎನ್ನುವದರಲ್ಲಿ ವ್ಯಾಘಾತದೋಷವು ಸಿದ್ಧವಾಗುವದರಿಂದ ಅಸಂಬದ್ಧ

( ಮುಂದೆ ಸಾಗುವದು )

(ಮುಂದೆ ಸಾಗಿದುದು.)

ಪ್ರಲಾಪವೇ ಸರಿ! ಇದರಮೇಲಿಂದ ಸದ್ವಸ್ತುವೇ ಇತ್ತೆಂದು ಸಿದ್ಧವಾಯಿತು ಹಾಗಾದರೆ ಜಗತ್ತು ಹೇಗಾಯಿತೆಂದು ಕೇಳಿದರೆ—ಪರಬ್ರಹ್ಮನಲ್ಲಿ ವಾದಿಲ್ಲದಂತೆ ಶಕ್ತಿಯ ರೂಪ ಮಾಯೆಯುಂಟು. ಆ ಮಾಯಾ ಶಕ್ತಿಯಿಂದಲೇ ಬ್ರಹ್ಮನು ಜಗತ್ತನ್ನು ನಿರ್ಮಿಸಿದನು. ಆದ್ದರಿಂದ ಸತ್ತಿಗೆ ಭಿನ್ನವಾದ ವಸ್ತುವನ್ನು ಕಲ್ಪಿಸುವದು ಅಯುಕ್ತವು. (ಶಂಕೆ) ಆ ಶಕ್ತಿಯು ಏಕದೇಸಿಯವೋ? ವ್ಯಾಪಕವೋ? (ಸಮಾಧಾನ) ಕೇಳು ಆ ಶಕ್ತಿಯು ಬ್ರಹ್ಮನ ಏಕದೇಶದಲ್ಲಿರುವುದು. ಅವನು ಮಾತ್ರ "ಅತ್ಯತ್ತಿಷ್ಠದ್ದಶಾಂಗುಲಂ" ಎಂಬ ಕೃತಿಗನುಸರಿಸಿ ಎಲ್ಲವನ್ನು ಮೀರಿ ಹತ್ತು ಅಂಗುಲಮೇಲೆ ಇರುವನು. (ಶಂಕಾ) ಬ್ರಹ್ಮನು ಏಕಸ್ವಭಾವ (ಸತ್ತಾ) ವುಳ್ಳವನು. ಆಕಾಶವು ಸತ್ತಾ, ಅವಕಾಶ ಹೀಗೆ ಎರಡು ಸ್ವಭಾವವುಳ್ಳದ್ದು. ಅಂದಮೇಲೆ ಬ್ರಹ್ಮನಿಂದ ಹೇಗೆ ಹೆಚ್ಚಿತು. "ಕಾರಣ ಗುಣಾಃ ಕಾರ್ಯಮಾಶ್ರಯಂತೆ" ಎಂಬ ನಿಯಮವಾದರೂ ಇರುವದು. ಆದ್ದರಿಂಪ ಜಗತ್ತಿಗೆ ಕೇವಲ ಮಾಯೆಯೇ ಕಾರಣವು. ಬ್ರಹ್ಮವಲ್ಲ. (ಸಮಾಧಾನ) ಕಾರಣ ಗುಣಗಳು ಕಾರ್ಯವನ್ನು ಆಶ್ರಯಿಸುವ ನಿಯಮವಿಲ್ಲ. ಮತ್ತು "ತಸ್ಮಾದ್ದಾಕಾಶಃ ಆಕಾಶಾದ್ವಾಯಿಃ ವಾಯೋರಗ್ನಿಃ ಅಗ್ನೇರಾಪಃ ಅದ್ಭ್ಯಃಪ್ರಥಿವೀ" ಎಂಬ ಶ್ರುತಿಯಿಂದ ಆಕಾಶಾದಿಗಳಿಗಿಂತ ಪೂರ್ವದಲ್ಲಿ ಸದ್ವಸ್ತುವಿನ ಸದ್ಭಾವವು ಇರಬೇಕಾಯಿತು. ಇಲ್ಲದಿದ್ದರೆ ಜಗತ್ತು ಹುಟ್ಟುವ ಬಗೆಯೆಂತು? ಆದ್ದರಿಂದ ಕ್ರಮವಾಗಿ ಬಹ್ಮನಿಂದಲೇ ಒಂದಕ್ಕೊಂದು ನ್ಯೂನಾಧಿಕ ದೇಶವರ್ತಿಗಳಾಗಿ ಪಂಚಮಹಾಭೂತಗಳು ಹುಟ್ಟಿರುವವು.

## ೩ ಪಂಚಕೋಶಗಳ ವಿವೇಕವು:

ಕೆಲವರು ಅನ್ನಮಯಕೋಶವೇ ಆತ್ಮವೆಂದೂ ಕೆಲವರು ಪ್ರಾಣಮಯ ಕೋಶವೇ ಆತ್ಮವೆಂದೂ ಕೆಲವರು ಮನೋಮಯ ಕೋಶವೇ ಆತ್ಮವೆಂದೂ ಇನ್ನು ಕೆಲವರು ಆನಂದಮಯ ಕೋಶವೇ ಆತ್ಮವೆಂದೂ ಹೇಳುತ್ತಾರೆ. ಇದು ನೈಜವಲ್ಲ ಯಾಕಂದರೆ ಇವೆಲ್ಲವು ಜಡವಾಗಿರುವವು, ಇವುಗಳಲ್ಲಿ ಅರಿಯುವ ಸ್ವಭಾವವಿಲ್ಲ. ಇವುಗಳನ್ನು ಅರಿಯತಕ್ಕ ಆತ್ಮನು ಬೇರೆ ಇರುವನು. "ತಮೇವಭಾಂತಮನು ಭಾತಿಸರ್ವಂತಸ್ಯ ಭಾಸಾ ಸರ್ವಮಿದಂ ವಿಜಾತಿ ಇತ್ಯಾದಿ ಶೃತಿವಚನವು ಕೂಡಾ ಇರುವದು. ಕೆಲವರು ಅನ್ನುವದೇನಂದರೆ" ಮೊದಲು ಅಸತ್ತು ಅಂದರೆ ಶೂನ್ಯವೇ ಇತ್ತು. ಬ್ರಹ್ಮವು ಇದ್ದಿಲ್ಲ ಎಂದು ನುಡಿಯುವರು. ಅಯ್ಯೋ! ಎಂಥ ಬಾಲಕತನವು? ಯಾಕಂದರೆ ಶೂನ್ಯವೇ ಇತ್ತೆಂದು ಹೇಳುವವರು ತಾವಾದರೂ ಇರಬೇಕಲ್ಲವೇ? ಆದ್ದರಿಂದ ಹಾಗೆ ಹೇಳಕೂಡದು. "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂಬ ಶೃತಿಯಿಂದ ತಿಳಿಯುವದೇನಂದರೆ ಬಾಧೆರಹಿತವಾದ ಬ್ರಹ್ಮವಸ್ತುವು ಒಂದು ಉಂಟು. ಅದು ಬಂಧಮುಳ್ಳ ಜಗತ್ತಿಗೆ ಸಾಕ್ಷಿಯಾಗಿರುವದು. ನೇತ್ಯಾತ್ಮಿಕ

ಶ್ರುತಿಯೂ ಕೂಡ ಜಗತ್ತಿಗೆ ಬಾಧೆಯನ್ನು ಹೇಳಿ ಬ್ರಹ್ಮನಿಗೆ ನಿರ್ಬಾಧತ್ವವನ್ನು ಬೋಧಿಸುತ್ತದೆ. ಬ್ರಹ್ಮನಲ್ಲಿ ದೇಶ ಕಾಲ ವಸ್ತುಗಳ ಭೇದಗಳಾವವೂ ಸಂಘಟಿಸ ಲಾರವು. ಯಾಕಂದರೆ ಆ ಭೇದವು ಮಾಯಾ ಕಾರ್ಯವು. ಮತ್ತು ಜೀವೇಶ್ವ-ರರೆಂಬ ಭೇದವಾದರೂ ಮಾಯಾ ಕಲ್ಪಿತವು. ಒಟ್ಟಿನಮೇಲೆ ಇದೆಲ್ಲವೂ ಈಶ್ವರೀ ಶಕ್ತಿಯ ಪ್ರಭಾವವು. ಒಬ್ಬನಲ್ಲಿಯೇ ತಂದೆಯೆಂದೂ, ಅಜ್ಜನೆಂದೂ, ಮಗ ನೆಂದೂ, ಮೊಮ್ಮಗನೆಂದೂ ಇನ್ನೂ ಅನೇಕ ವ್ಯವಹಾರಗಳಾಗುವಂತೆ ಉಪಾದಿ ಭೂತ ಪಂಚಕೋಶಗಳಿಂದ ಭೇದ್ಯವಾದ ಬ್ರಹ್ಮನು ಒಂದೇ ಇರುವದು. ಒಟ್ಟಿನ ಮೇಲೆ ಪಂಚಕೋಶಗಳ ವಿವೇಕದಿಂದ ಬ್ರಹ್ಮಾತ್ಮ ಭಾವವು ಸಿದ್ಧಿಸಿ ದ್ವೈತಭಾವವು ಅಡಿಗಿ ಜೀವಾತ್ಮನು ತಾನೇ ಬ್ರಹ್ಮನಾಗುವನು.

## ೬ ದ್ವೈತ ವಿವೇಕವು :

ಈಶ ಸೃಷ್ಟಿಯೆಂತಲೂ, ಜೀವ ಸೃಷ್ಟಿಯೆಂತಲೂ ಸೃಷ್ಟಿಯಲ್ಲಿ ಎರಡು ವಿಧ-ವಿರುವದು. ಮಾಯಾವಿಯಾದ ಈಶನೇ ಈ ಸೃಷ್ಟಿಯನ್ನು ಸೃಷ್ಟಿಸಿದನೆಂಬುದಕ್ಕೆ ಅನೇಕ ಪ್ರಮಾಣಗಳುಂಟು. "ಆತ್ಮವಾ ಇದಮೇಕ" ಇಮಾನ್ ಲೋಕಾನ್-ಸೃಜತ್ ( ಐತರ ) 'ತಸ್ಮಾದೇಸಾ ತಸ್ಮಾತ್' ( ತಿತ್ತಿರೀಯ ) 'ಬಹು ಸ್ಯಾಂಪ್ರ-ಜಾಯೇಯ' ( ತಿತ್ತಿರೀಯ ) 'ಸದೇವ ಸೌಮ್ಯ' ( ಛಾಂದೋಗ್ಯ ) 'ತದೇತತ್ ಸತ್ಯಂ' ಭಾನಾ-ಪ್ರಜಾಯಂತೆ, ( ಮುಂಡಕ ) ಇತ್ಯಾದಿ ಶ್ರುತಿಗಳುಂಟು. ಹೀಗೆ ಈಶನು ಸೃಷ್ಟಿಯನ್ನು ಮಾಡಿ ತಾನೇ ಅದರಲ್ಲಿ ಪ್ರವೇಶಿಸಿ ಜೀವನೆಂದು ಅಭಿದಾನವಂ ಪಡೆದನು. "ತತ್‌ಸೃಷ್ಟ್ವಾತದೇವಾನು ಪ್ರಲಿಶತ್" ಎಂಬ ಶೃತಿ ಪ್ರಮಾಣವಿರುವದು. ಈ ಶಕ್ತಿಯಲ್ಲಿ ಹೇಗೆ ನಿರ್ಮಾಣ ಶಕ್ತಿಯುಂಟೋ ಹಾಗೆ ಜೀವನಿಗೆ ಮೋಹ ಶಕ್ತಿಯುಂಟು. ಅದು ಅವನನ್ನು ಮೋಹಿಸುತ್ತದೆ. ಜೀವನು ಮೋಹಶಕ್ತಿಗೊಳಗಾಗಿ ಶರೀರಾದಿ ಮಿಥ್ಯ ಪ್ರಪಂಚದಲ್ಲಿ ಮಮತಾ ಭಾವವನ್ನಿಟ್ಟು ಸುಮ್ಮನೇ ದುಃಖಿಸುತ್ತಾನೆ. ಅಂದರೆ ಅಜ್ಞಾನದಿಂದ ಸುಖದುಃಖಗಳಿಗೆ ಎಡೆ-ಯಾಗುತ್ತಾನೆ. ಮತ್ತರ್ನ್ನದೇವಾನ್ನ ಪಶ್ವಾನ್ನಾದಿಗಳೆಂಬ ವ್ರಿಹ್ಯಾದಿ ಸಪ್ತಾನ್ನ-ಗಳು ಈಶನಿಂದ ಸೃಷ್ಟಿಸಲ್ಪಟ್ಟವೆ. ಅವುಗಳನ್ನು ಜೀವಾತ್ಮನು ಭೋಗಿಸುವನು. ತಂದೆಗೆ ಮಗಳಾಗಿಯೂ ಪತಿಗೆ ಸತಿಯಾಗಿಯೂ ಹೇಗೆ ಒಬ್ಬ ಸ್ತ್ರೀಯಳಲ್ಲಿ ವ್ಯವಹ ರಿಸುವದೋ ಅದರಂತೆ ಈಶ ಸೃಷ್ಟಿಯು ಒಂದೇ ವಿಧವಿದ್ದರೂ ಭೋಕ್ತೃಗಳ ಭೇದದಿಂದ ನಾನಾ ಪ್ರಕಾರವಾಗಿರುವದು. ಒಂದೇ ಮಣಿ ಲಾಭದಿಂದ ಒಬ್ಬನಿಗೆ ಸಂತೋಷವೂ ಇನ್ನೊಬ್ಬನಿಗೆ ಅಸಂತೋಷವೂ ಮಗದೊಬ್ಬ ವಿರಕ್ತನಿಗೆ ( ಸಂತೋ ಷವೂ ಅಸಂತೊ ಷವೂ ಎರಡೂ ಆಗುವದಿಲ್ಲ ) ಇವೆರಡರ ಅಭಾವವೂ ಆಗುತ್ತದೆ. ಈ ತರಹದ ಭೇದವು ಜೀವ ಸೃಷ್ಟಿಯಲ್ಲಿ ಮಾತ್ರ ಕಂಡುಬರುವದೇ ಹೊರತು

ಈಶ್ವರ ಸೃಷ್ಟಿಯಲ್ಲಿ ಅಲ್ಲ. ಮತ್ತು ಒಬ್ಬ ಸ್ತ್ರೀಯಳಲ್ಲಿ ಹೆಂಡತಿ, ನೆಗೆವೆಣ್ಣು, ನಾದಿನಿ, ತಾಯಿ ಮೊದಲಾದ ಭಾವಗಳು ಉಂಟಾಗಬೇಕಾದರೆ ಸ್ವರೂಪದಲ್ಲಿ ಭೇದವಿಲ್ಲದಿದ್ದರೂ ಮಾಂಸಮಯಿಯೊ ಮತ್ತು ಮನೋಮಯಿಯೊ ಎಂದು ಎರಡು ವಿಧವಾಗಿ ಭೇದ ಮಾಡಲೇಬೇಕಾಗುವದು. ಒಟ್ಟಿನಮೇಲೆ ಬಾಹ್ಯ ಅಂತರ ಸೃಷ್ಟಿಗಳಿರುವವೆಂದು ಸಿದ್ಧವಾಯಿತು. ಜೀವನ ಬಂಧಕ್ಕೆ ಅಂತಃ ಸೃಷ್ಟಿಯೇ ಕಾರಣವಹುದು. ಬಾಹ್ಯ ಸೃಷ್ಟಿಯಲ್ಲ. ಯಾಕಂದರೆ ದೂರ ದೇಶದಲ್ಲಿ ಮಗನು ಮೃತಪಟ್ಟನೆಂದು ಕಲ್ಪಿಸುವ ಅದು ಅವನ ತಂದೆಗೆ ತಿಳಿದಿರುವದಿಲ್ಲ. ಆಗ ಅವನು ಮಗನು ಬದುಕಿರುವನೆಂದೇ ತಿಳಿದಿರುವನು ಯಾವಾಗ್ಗೆ ಮಗನ ಮರಣವು ತಿಳಿಯುವದೋ ಆವಾಗ್ಗೆ ಅಳಲಿಕ್ಕೆ ಸುರುವುಮಾಡುವನು. ಇದಕ್ಕೆ ಮಾನಸ ಸೃಷ್ಟಿಯೇ ಕಾರಣವಹುದು. ಅಂಥ ಸೃಷ್ಟಿಯು ನಾಶವಾದರೆ ಅರ್ಥಾಪತ್ತಿಯಿಂದ ಬಹಿಃಸೃಷ್ಟಿಯು ತಾನೇ ನಾಶವಾಗುವದು. ಇದು ನಾಶವಾಗಬೇಕಾದರೆ ಬ್ರಹ್ಮಜ್ಞಾನವುಬೇಕು. ಆದರೆ ಕೇವಲ ಶಾಬ್ದಿಕ ಬ್ರಹ್ಮಜ್ಞಾನದಿಂದಲ್ಲ. ಸವಿ-ಕಲ್ಪಕ ನಿರ್ವಿಕಲ್ಪಿತ ಸಮಾಧಿಯಿಂದ ಮನೋರಾಜ್ಯವನ್ನು ಜಯಿಸಿದರೆ ದ್ವೈತ ಭಾವವಡಗಿ ಜೀವಾತ್ಮನು ಕೇವಲ ತಾನೇ ಬ್ರಹ್ಮನಾಗುವನು

## ೫. ಮಹಾ ವಾಕ್ಯವಿವೇಕವು :

" ಪ್ರಜ್ಞಾನಂಬ್ರಹ್ಮ " ಯಾವನು ಕೇಳುತ್ತಾನೆಯೋ ಯಾವನು ಮೂಸಿ ನೋಡುತ್ತಾನೆಯೋ ಯಾವನು ಮಾತಾಡುತ್ತಾನೆಯೋ ಯಾವನು ರುಚಿನೋಡುತ್ತಾನೆಯೋ ಮತ್ತು ತಿಳಿಯುತ್ತಾನೆಯೋ ಅವನೇ ಪ್ರಜ್ಞಾನ ಸ್ವರೂಪನು.

" ಅಹಂಬ್ರಹ್ಮಾಸ್ಮಿ " ಚತುರ್ಮುಖ ಬ್ರಹ್ಮನನ್ನು ಮೊದಲ್ಗೊಂಡು ಮನುಷ್ಯ ಪಶ್ವಾದಿಗಳಲ್ಲಿರುವ ಒಂದೇ ಚೈತನ್ಯಕ್ಕೆ ಬ್ರಹ್ಮಪದದ ಅರ್ಥವು ಸಿದ್ಧಿಸುವದು. ಮತ್ತು ಶಮ-ದಮಾದಿ ವಿದ್ಯೆಯನ್ನು ಸಂಪಾದಿಸಲಿಕ್ಕೆ ತಕ್ಕದಾದ ದೇಹದಲ್ಲಿ ಮಾತ್ರ ಪರಿಪೂರ್ಣವಿರುವ ಚೈತನ್ಯವು ಅಹಂ ಶಬ್ದಕ್ಕೆ ವಾಚ್ಯವಹುದು. ' ಅಸ್ಮಿ ' ಅಂದರೆ ಬ್ರಹ್ಮನೇ ನಾನಿದ್ದೇನೆಂದು ಅಭೇದ ದರ್ಶಕವಿರುವದು.

---

# ಕಿರು ಹೊಟ್ಟೆಗಾಗಿ !

ಲೇಖಕ :— ಕಟ್ಟಿಮನಿ ಬಸವೇಶ. ಸಂ. ವಿಧ್ಯಾರ್ಥಿ. ಬೆಳಗಾವಿ.

ಅದೊಂದು ಪಾಳು ಗುಡಿಸಲು. ಸುತ್ತಲೂ ಅಂಧಃಕಾರ. ಹೊರಗೆಲ್ಲ ಎತ್ತ ನೋಡಿದರೂ, ನಿಬಿಡವಾದ ಭೀಕರವಾದ, ಅಂಜಿಕೆ ಹುಟ್ಟಿಸುವಂತಹ

ನಿಶ್ಯಬ್ದತೆ. ಆ ನಿಶ್ಯಬ್ದತೆಯಲ್ಲಿ ಘನ ಘಂಭೀರವಾದ ಅಂಧಃಕಾರದಲ್ಲಿ ಒಂದೇ ಸ್ವರ. ರೋದನ. ಆ ರೋದನವು ಕೇಳಿದವರಿಗೆ ಭಯಾನಕವಾಗಿದ್ದಿತು. ಅದರಲ್ಲಿ ಕರುಣಾಮಿಶ್ರಿತ ಕಠೋರತೆಯು ತುಂಬಿದ್ದಿತು.

ಒಳಗೆ ಅಲ್ಲಿ ಒಂದು ಮೂಲೆಯಲ್ಲಿ ಮಿಣು ಮಿಣುಕಾದ ದೀಪವೊಂದುರಿಯುತ್ತಿದೆ. ಅದು ಎಂದು ಎಣ್ಣೆ ತಿಂದಿದ್ದಿತೋ ದೇವರೆ ಬಲ್ಲ. ಅಲ್ಲಿ ಒಬ್ಬ ನಡುಪ್ರಾಯದ ಹೆಂಗಸು. ಆಕೆಯು ಕೆಳಭಾಗದಲ್ಲಿ ಒಂದು ಮಗು ಬಿದ್ದಿದೆ. ಅತಿ ಜೀರ್ಣವಾದ ಮಗು. ಮಗು ಎಂಬ ಹೆಸರಿಗೆ ಅದರ ಶರೀರದಲ್ಲಿ ಎಲವುಗಳಷ್ಟೆ ಆ ಶರೀರವನ್ನು ಸೂಕ್ಷ್ಮದರ್ಶಕ ಯಂತ್ರದಿಂದ ನೋಡಿದರೂ, ಒಂದು ಹನಿ ರಕ್ತವಾದರೂ ಕಾಣಿಸುತಿದ್ದಿತೋ, ಇಲ್ಲವೋ ಯಾರಿಗೆ ಗೊತ್ತು? ಮಗುವಿನ ಉಸಿರು ಒಳ್ಳೇ ಭರಕ್ಕೆ ಬರುವುದು ಒಮ್ಮೆ, ಮಗುದೊಮ್ಮೆ ತೀರ ಸ್ತಬ್ಧವಾಗುವದು. ಮಗುವಿನ ಕಣ್ಣುಗಳೆರಡು ಗುಡ್ಡಿಯಲ್ಲಿ ಸಿಲುಕಿ ಬಿದ್ದಿವೆ.

ಮಗು, ತಾಯಿಯನ್ನು ಒಮ್ಮೆ ಕರುಣಾಪೂರ್ಣ ದೃಷ್ಟಿಯಿಂದ ನೋಡಿತು. ಅದಕ್ಕೆ ಮೂರು ದಿವಸಗಳಿಂದ ಒಂದು ಬಾಳೆಹಣ್ಣಿಗು, ಗತಿಯೆ? ಇಲ್ಲ. ಅದುವೂ ಇಲ್ಲ. ತಾಯಿಯ ಹಾಲೊ? ಅದಕಾದರೂ ಸೊನ್ನೆ. ತಾಯಿಗೆ ತಿನ್ನಲಿಕ್ಕಿದ್ದರಲ್ಲವೇ? ಹಾಲು ಬರುವುದು? ತಾಯಿಯ ಕಣ್ಣುಗಳಿಂದ ನೀರು ಗಂಗಾಪ್ರವಾಹದೊಲು ಹರಿಯುತಿದ್ದಿತು. ಆ ನೀರೆಲ್ಲ ಮಗುವಿನಮೇಲೆ ಬಿದ್ದು ಅದಕ್ಕೆ ಸ್ನಾನ ಮಾಡಿಸದಂತಾಗಿದ್ದಿತು. ತಾಯಿಗೆಅರಿವೆ ಇರಲಿಲ್ಲ. ಸುಮ್ಮನೆ ದೆವ್ವ ಬಡಿದವರ ಹಾಗೆ (?) ಕುಳಿತುಬಿಟ್ಟಿದ್ದಳು.

÷ + + +

ಆಗ........, ಮುಂಜಾವಿನ ನಾಲ್ಕು ಗಂಟೆಯ ಸಮಯ. ಅರಿವು ಇಲ್ಲದ ಆ ಬಡಪ್ರಾಣಿಗೆ ಈಗ ಎಚ್ಚರವಾಯಿತು. ಆಗಳೆ, "ಆ ಮಗು" ವಿನ ಜೀವಜ್ಯೋತಿಯು ಹಾರಿಹೋಗಿ ಎರಡು ತಾಸಾಗಿದ್ದಿತು. "ಆಕೆ" ತನ್ನ ಮಗುವಿನ ಆ ಸ್ಥಿತಿ ನೋಡಿದೊಡನೆ "ಹೋದೆಯಾ?........ನನ್ನ ಕೂಸೇ?........ಅಯ್ಯೋ ನನ್ನ ಮಗುವೇ" ಎಂದು ಒಮ್ಮೆ ಕಿರಿಚಿಕೊಂಡು "ನಡೆ. ಮಗು. ಚನ್ನಾಯಿತು. ನನ್ನ ಕಂದ........ಮೂರು ದಿನಗಳಿಂದ ಅನ್ನವಿಲ್ಲದೆ ಬಳಲುತಿದ್ದೆಯಲ್ಲ....ಈಗ.... ಗೆದ್ದೆ....ನಡೆ....ಆ ಸ್ಥಿತಿಗಿಂತ........ಈ ಸ್ಥಿತಿ ಒಳಿತಲ್ಲವೆ? ನಡೆ ನಾನೂ ಬರುವೆ" ಎಂದು ಬಡಬಡಿಸಹತ್ತಿದಳು.

+ + + +

ಜಮೀನ್ದಾರರ ಆಳು ಮುಂಜಾನೆ ಐದು ಗಂಟೆಗೆ ಸಹಜವಾಗಿ ಅಲ್ಲಿ ಹಾಯ್ದು ಹೋಗುತ್ತಿದ್ದ. ಒಡನೆ ಅವನಿಗೆ "ಘುಂ! ಡುಘುಂ" ಎಂಬ ಸಪ್ಪಳ ಕೇಳಿಸಿತು. ಅವನು ಬೆಚ್ಚಿ ಬಿದ್ದು ಓಡಲಾರಂಭಿಸಿದ. ಮುಂಜಾನೆ, ಬೆಳಗಾದ ಬಳಿಕ ಬಂದು ನೋಡುತ್ತಾರೆ ತಾಯಿ ಮಕ್ಕಳ ಶವಗಳು ತೇಲಾಡುತಿಹವು! ನೀರಮೇಲೆ.

# ಪವಿತ್ರ ಪ್ರಸಾದ

प्रसाद चिन्हानि पुरः फलानि.

ಲೇಖಕ:— ಶ್ರೀ. ಕಾಶೀನಾಥ ಯಜ್ಞೇಶ್ವರ ಜೋಶಿ

ಹೆಡ್ ಮಾಸ್ತರ ಕನ್ನಡ ಶಾಲೆ ಬನ್ನಿ ಕೊಪ್ಪ.

ವಿದ್ವನ್ಮಾನ್ಯ ಸಂಪಾದಕ ಮಹಾಶಯರು ನನ್ನ ಪರಮ ಮಿತ್ರರು. ಮಿತ್ರರೆಂದು ಹೇಳಿದ ಮಾತ್ರಕ್ಕೆ ಸಂಪಾದಕರನ್ನು ಸರಿಗಟ್ಟಿಕೊಳ್ಳುವ ವೃಥಾ ಪೌರುಷ—ಪ್ರದರ್ಶನವೆಂದು ಎಲ್ಲರೂ ಕಲ್ಪಿಸಬಹುದಾಗಿದೆ. ಆದರೆ ಹಾಗೆ ಹೇಳುವದು ಲೇಖಕನ ಉದ್ದೇಶವಾಗಿಲ್ಲ. ವಿದ್ಯೆ, ಗುಣ ಮೊದಲಾದವುಗಳಲ್ಲಿ ನನಗೂ ಸಂಪಾದಕರಿಗೂ ಅಜ-ಗಜ ನ್ಯಾಯವು ಸಮನ್ವಯಿಸುವದು. ಆದರೆ न खलु बहिरुपाधीन् प्रीतयः संश्रयन्ते ಎಂಬ ಕವ್ಯುಕ್ತಿಯಂತೆ ನಮ್ಮ ಮೈತ್ರಿಯು ಸಹಜವಾಗಿ ಪರಿಣಮಿಸಿದ ಸಂಗತಿಯೆಂಬುದು ಮಾತ್ರ ಸತ್ಯವಾದದ್ದು. ಚಂದ್ರಿಕೆಯ ಸೇವೆಗಾಗಿ ಟೊಂಕ ಕಟ್ಟಿ ಸನ್ನದ್ಧರಾದ ಸಂಪಾದಕರು, ಮಸುತೆಯ ಮೂಲಕ ಸೇವೆಗಾಗಿ ನನ್ನನ್ನು ಆಗ್ರಹದಿಂದ ಕರೆಯತೊಡಗಿದರು. ಆದರೆ ಏನು ಮಾಡಲಿ? ಪವಿತ್ರವಾದ ಸಾಹಿತ್ಯಕ್ಷೇತ್ರದಲ್ಲಿ ಪದವಿನ್ಯಾಸವನ್ನು ಕೂಡ ಮಾಡದ ಪಾಪಿಯು, ದೂರಿನಿಂದಲೇ ದರ್ಶನ ಪಡೆದ ಪುಣ್ಯಭಾಗಿಯು ನಾನು ಚಂದ್ರಿಕೆಯ ಸೇವೆಯನ್ನು ಮಾಡುವದೆಂತು? ಆಗ್ರಹದ ಆಪ್ತವಾಕ್ಯವನ್ನು ಅಲ್ಲಗಳೆಯುವದೂ ಅನುಚಿತವೆನಿಸಿತು. ಹೀಗಾಗಿ ನಾನು ಒಳ್ಳೇ ಯೋಚನೆಗೊಳಗಾದೆನು. ದ್ವಂದ್ವದಲ್ಲಿ ಜೆರೆತು ಅಸ್ಥಿರವಾದ ಮನಸ್ಸನ್ನು ಬಲವಾಗಿ ಸ್ಥಿರಗೊಳಿಸಿ, ಚಂದ್ರಿಕೆಯ ಪೂಜೆಗಂತೂ ಸಿದ್ಧನಾದೆನು. ಆದರೇನು! ಪೂಜಾದ್ರವ್ಯಗಳ ಅಭಾವವು ಆ ಎಂದು ಬಾಯಿ ತೆರೆದು ನನ್ನನ್ನು ಅಂಜಿಸತೊಡಗಿತು. ಕಡೆಗೆ ಸಕಲರಿಗೂ ಸುಲಭಸಾಧ್ಯವೂ ಅತ್ಯಗತ್ಯವೂ ಆದ ನೈವೇದ್ಯವನ್ನೇ ಮೊದಲು ಸಮರ್ಪಿಸುವದನ್ನು ನಿಶ್ಚೈಸಿದೆನು. ಇಷ್ಟದೈವತಕ್ಕೆ ನೈವೇದ್ಯವೆಂದು ಸಮರ್ಪಿಸುವ ಪದಾರ್ಥವು ನಿರ್ದುಷ್ಟವೂ ಪವಿತ್ರವೂ ಆಗಿರಬೇಕಲ್ಲದೆ ಭಕ್ತಿಯಿಂದ ಸೇವಿಸುವ ಪ್ರಸಾದ ಭಕ್ತರಿಗೆ ಎಲ್ಲ ಬಗೆಯಿಂದಲೂ ಉಪಯುಕ್ತವಾದದ್ದಾಗಿರಬೇಕೆಂದು ಸಾಧಾರಣ ನಿಯಮವುಂಟು. ಆ ನಿಯಮಕ್ಕನುಗುಣವಾದ ಪದಾರ್ಥವೊಂದನ್ನು ಆಯ್ದುಕೊಂಡು, ಪಾವನವಾದ ಪವಿತ್ರ ಪ್ರಸಾದದ ಪೇಲೆಯನ್ನು ಸಾಹಿತ್ಯದೈವತವಾದ ಚಂದ್ರಿಕೆಗೆ ಸದಮಲಭಕ್ತಿಯಿಂದ ಸಮರ್ಪಿಸಲಿಚ್ಛಿಸುತ್ತೇನೆ. ವಾಚಕರೇ,

ನಾನು ಭಕ್ತಿಯಿಂದ ಸಮರ್ಪಿಸುವ ಪವಿತ್ರ ಪ್ರಸಾದವು ಗೋರಸವು-ಆಕಳ ಹಾಲು. ಆಕಳ ಹಾಲೇ ಪವಿತ್ರ ಪ್ರಸಾದವಾಗಿರಲು ಪಾವನವಾದ ಪವಿತ್ರ ಪ್ರಸಾದವೆಂದು ದ್ವಿರುಕ್ತಿಯಿಂದ ಹೇಳುವದರ ಅರ್ಥವೇನೆಂದು ನೀವು ಶಂಕಿತರಾಗಬಹುದು. ಅದಕ್ಕೆ ಸಮಾಧಾನವೆಂದರೆ— ಈ ಕೆಳಗೆ ಹೇಳಲ್ಪಡುವ ವಿಶಿಷ್ಟ ಸಂಸ್ಕರಣೆಯಿಂದ ಪಾವನಗೊಳಿಸಿದ ಗೋರಸವೇ **ಪಾವನವಾದ ಪವಿತ್ರ-ಪ್ರಸಾದವು.**

ಮನುಷ್ಯನಿಗೆ ತಕ್ಕವಾದ ಆಹಾರ ಪದಾರ್ಥಗಳಲ್ಲೆಲ್ಲ **ಹಾಲು** ಮೇಲಾದದ್ದು. ಅದಕ್ಕೆ ಸರಿಯಾದ ಬೇರೆ ಯಾವ ಪದಾರ್ಥವೂ ಇಲ್ಲ. ಚಿಕ್ಕಮಕ್ಕಳ ನೊದಲ್ಗೊಂಡು ಎಲ್ಲ ಅವಸ್ಥೆಯವರಿಗೂ ಎಲ್ಲ ಕಾಲ ಎಲ್ಲ ಪರಿಸ್ಥಿತಿಗಳಲ್ಲಿಯೂ ಅನುಕೂಲಿಸತಕ್ಕ ಏಕಮೇವಾದ್ವಿತೀಯವಾದ ಅನ್ನವೆಂದರೆ ಇದೊಂದೇ! ನಮ್ಮ ಆರ್ಯ ವೈದ್ಯವು ಮುಕ್ತಕಂಠದಿಂದ ಹಾಲಿನ ಮಹಿಮೆಯನ್ನು ಕೊಂಡಾಡಿದೆ. "सद्यः शुक्रकरं पयः" ಎಂಬಂತೆ ಆಕಳು ಇಲ್ಲವೆ ಎಮ್ಮೆಯ ಹಾಲು ತೀರ ಪೌಷ್ಟಿಕವಾದದ್ದು. ದಮ್ಮು ಕೆಮ್ಮು ಮೊದಲಾದ ಶ್ವಾಸ್ಯವಿಕಾರಗಳಿಗೆ ಕತ್ತೆಯ ಹಾಲು ಉಪಯುಕ್ತವಾಗಿದೆ. ಆಡಿನ ಹಾಲು ಸರ್ವೌಷಧವೆನಿಸಿದೆ. ಈ ಎಲ್ಲ ಬಗೆಯ ಹಾಲಿನಲ್ಲಿ ಎಲ್ಲ ಗುಣಗಳಿಂದ ಮಿಗಿಲಾದದ್ದು ತ್ರಿದೋಷಗಳನ್ನು ಶಮನಗೊಳಿಸತಕ್ಕದ್ದು ಆದ ಆಕಳ ಹಾಲು ಸರ್ವೋತ್ಕೃಷ್ಟವಾದದ್ದು. ಅದರಲ್ಲಿಯೂ ಒಂದೇ ಬಣ್ಣದ ಕಪ್ಪು ಆವಿನ ಹಾಲು ತೀರ ಮಿಗಿಲಾದದ್ದು. ಪಾಶ್ಚಾತ್ಯಪದ್ಧತಿಯಂತೆ ಆಡು, ಆಕಳು, ಎಮ್ಮೆ, ಕತ್ತೆ ಮೊದಲಾದವುಗಳ ಹಾಲನ್ನು ಪೃಥಕ್ಕರಿಸಿ ಅದರಲ್ಲಿ ಬೆರೆತುಕೊಂಡ ದ್ರವ್ಯಗಳ ಪ್ರಮಾಣವನ್ನು ಸಂಶೋಧಕರು ಗೊತ್ತುಪಡಿಸಿರುವರು. ಆಕಳಹಾಲಿನಲ್ಲಿ ಪ್ರೋಟೀನ (Protein ) 4-9, ಕೊಬ್ಬು (Fat) 3-7, ಕಾರ್ಬೋಹೈಡ್ರೇಟ (Corbohydrate) 4-8, ಲವಣ (Salts) 0-7, ಮತ್ತು ನೀರು (Water) 86-8 ಈ ಪ್ರಮಾಣದಲ್ಲಿರುವವೆಂದು ಗೊತ್ತಾಗಿದೆ. ಅಂದರೆ ಆರ್ಯ ವೈದ್ಯದ ಅಭಿಪ್ರಾಯದಂತೆ ಹಾಲು ಜೀವನಾಂಶಕ್ಕೆ ಮೇಲಾದ ಆಹಾರವೆಂತಲೂ ಅದರಲ್ಲಿಯೂ ಆಕಳ ಹಾಲು ಮೇಲಾದದ್ದೆಂತಲೂ ಸಿದ್ಧವಾಗಿದೆ. ಅಂತೇ ಪ್ರಾಚೀನಕಾಲದಿಂದ ಮೊನ್ನೆ ಮೊನ್ನಿನವರೆಗೆ ನಮ್ಮ ಜನರು ತಮ್ಮ ಖಾದ್ಯಪೇಯಗಳಲ್ಲಿ ಹಾಲನ್ನು ಧಾರಾಳವಾಗಿ ಉಪಯೋಗಿಸುತ್ತಿದ್ದರು. ಕೃಷಿಪ್ರಧಾನವಾದ ನಮ್ಮ ದೇಶದಲ್ಲಿ ಹಾಲಿಗೆ ಕೊರತೆಯಿರಲಿಲ್ಲ. ಆಕಳು ಪರಮದೈವತವಾಗಿತ್ತು. ಉಷಃಕಾಲಕ್ಕೆ ಆಕಳ ದರ್ಶನವು ಪವಿತ್ರವೆಂದು ಭಾವಿಸಲ್ಪಡುತ್ತಿತ್ತು.

ಈ ಭಾವನೆಯು ನಮ್ಮ ಮನದಲ್ಲಿ ಇನ್ನೂ ಜೀವಂತವಾಗಿ ಉಳಿದಾಗ್ಯೂ ಬೇರೆ ಬೇರೆ ಕಾರಣಗಳಿಂದ ಶುದ್ಧಹಾಲಿನ ಧಾರಾಳವಾದ ಉಪಯೋಗಕ್ಕೆ ಮಾತ್ರ ನಾವು ಎರವಾಗಿರುವೆವೆಂಬ ಸಂಗತಿಯು ಶೋಚನೀಯವಾಗಿದೆ. ಕಾಲಕ್ಕನುಸರಿಸಿ

ಜನರು ಉದರ ನಿರ್ವಾಹಕ್ಕಾಗಿ ಬೇರೆ ಬೇರೆ ಹೋರೆಗಳನ್ನು ಕೈಕೊಳ್ಳಹತ್ತಿದ್ದರಿಂದ ಕೃಷಿಯು ಕಳೆಗುಂದಿತು. ದನಗಳನ್ನು ರಕ್ಷಿಸುವದು ಕಠಿಣವಾಯಿತು. ಹಳ್ಳಿ ವಾಡಿಗಳಲ್ಲಿ ಹೈನದ ದನಗಳು ರಕ್ಷಿಸಲ್ಪಡುತ್ತಿದ್ದಾಗ್ಯೂ ಬಡತನದ ಮೂಲಕ ಜನರು ತಮ್ಮೊಡನೆ ಮಕ್ಕಳು ಮರಿಗಳ ಬಾಯಿ ಕಟ್ಟಿ ಹೈನವನ್ನು ಮಾರಹತ್ತಿದರು. ಕೊಂಡುತಿನ್ನುವ ಪಟ್ಟಣಿಗರಿಗಾದರೂ ಗಂಗೆಯಿಂದ ಬೆರೆತ ಪವಿತ್ರ ಹಾಲು(!) ದೊರೆಯಹತ್ತಿತು. ಶುದ್ಧವಾದ ಹಾಲನ್ನು ಹೆಚ್ಚಾಗಿ ಕೊಂಡುಕೊಂಡು ಉಪಯೋಗಿಸುವ ಅನುಕೂಲತೆಯು ಇಲ್ಲದಾಯಿತು. ಅಲ್ಲದೆ ದುಷ್ಪರಿಣಾಮವನ್ನುಂಟು ಮಾಡುವ ವಿದೇಶದ ಮಾದಕ ಪೇಯಗಳಿಗೆ ಬಹುತರವಾಗಿ ಎಲ್ಲರೂ ಮನಸೋತಿದ್ದರಿಂದ ಅನುಕೂಲತೆಯುಳ್ಳವರು ಸಹ ಅದನ್ನು ಉಪೇಕ್ಷಿಸಹತ್ತಿದರು. ಹೀಗಾಗಿ ಇಹಲೋಕದ ಅಮೃತವಾದ ಹಾಲಿಗೆ ಎಲ್ಲರೂ ಎರವಾಗಿ, ಸತ್ವ ಹೀನತೆಯಿಂದ ಹಲವು ಬಗೆಯ ಬೇನೆಗಳಿಗೆ ಬೀಡಾಗಿ, ಅಕಾಲದಲ್ಲಿಯೇ ಜೀವನಯಾತ್ರೆಯನ್ನು ಮುಗಿಸಿ, ಪರಲೋಕದ ಮಾರ್ಗವನ್ನನುಸರಿಸಹತ್ತಿದರು.

ವಸ್ತುಸ್ಥಿತಿಯು ಹೀಗಿದ್ದಾಗ್ಯೂ ಆಹಾರದಲ್ಲಿ ಬಹುತರವಾಗಿ ಎಲ್ಲರೂ ಹಾಲನ್ನು ಉಪಯೋಗಿಸುವರು. ಅನುಕೂಲತೆಯುಳ್ಳ ದೈವಶಾಲಿಗಳೂ ಕುಸ್ತಿಯನ್ನಾಡುವ ಮಲ್ಲರೂ ಶರೀರ-ಬಲ ಸಂವರ್ಧನೆಗೆ ಮೆಚ್ಚಿದ ಯುವಕರೂ ಶುದ್ಧ-ವಾದ ಹಾಲನ್ನು ಹೆಚ್ಚಾಗಿ ಸೇವಿಸುವರು. ಚಿಕ್ಕ ಮಕ್ಕಳಂತೂ ಬಹುಶಃ ಹೊಯ್ ಹಾಲಿನಿಂದಲೇ ಬೆಳೆಯುವವು- ವ್ಯಾಧಿ ವಿಡ್ಡೂರಗಳಿಗೆ ಬಲಿಯಾದವರಿಗಂತೂ ಹಾಲಿಲ್ಲದೆ ಗತಿಯಿಲ್ಲ. ಅದಕ್ಕಾಗಿ ಹಾಲಿನ ಪವಿತ್ರತೆಯ ಬಗ್ಗೆ ವಿಚಾರಿಸುವದು ತಕ್ಕದ್ದಾಗಿದೆ. ಮೇಲಾದ ಆಹಾರವೆಂದು ತಿಳಿದು, ಸಿಕ್ಕ ಸ್ಥಿತಿಯೊಳಗಿನ ಹಾಲನ್ನೇ ಸಿಕ್ಕ ಹಾಗೆ ಉಪಯೋಗಿಸುವದರಿಂದ ಅದು ವಿಷರೂಪವಾಗಿ ಪರಿಣಮಿಸುವದು. ಮೇಲಾದ ಆಹಾರವಾಗಲಿಕ್ಕೂ ಅಮೃತೋಪಮವಾಗಿ ಪರಿಣಮಿಸಲಿಕ್ಕೂ ಹಾಲು ಒಳ್ಳೇ ಶುದ್ಧವಾಗಿರಬೇಕಾದುದು ಅವಶ್ಯವು. ಆದ್ದರಿಂದ ಹಾಲು ಕೆಡುವ ಬಗೆಯನ್ನೂ ಅದನ್ನು ಶುದ್ಧವಾಗಿರಿಸುವ ವಿಧಿಯನ್ನೂ ಕುರಿತು ವಿವರಿಸುವದು ಪ್ರಸ್ತುತ ಲೇಖನದ ಹೆಗ್ಗುರಿಯಾಗಿದೆ.

ರೋಗಕ್ಕೆ ಬಲಿಯಾದ ದನಗಳ ಹಾಲು ಕೆಟ್ಟದು. ಆಕಳ ಹಾಲು ಪರಮ ಪವಿತ್ರವೂ-ಆರೋಗ್ಯಕರವೂ ಪೌಷ್ಟಿಕವೂ ಆದದ್ದೆಂದು ನಮ್ಮ ವೈದ್ಯವೂ ಧರ್ಮವೂ ಹೇಳುವವು. ಆದರೆ ಶುದ್ಧವಾದ ಗೋರಸವು ದೊರೆಯುವದು ದುರ್ಲಭವೆಂಬ ಸಂಗತಿಯಾದರೂ ಅಷ್ಟೇ ಕಿಂಬಹುನಾ ಹೆಚ್ಚು ನಿಜವಾಗಿದೆ. ಯಾಕಂದರೆ ಆಕಳುಗಳಿಗೆ ಟ್ಯುಬರ್ಕಲ್ಸ್ ( Tubercles ) ಎಂಬ ಕ್ಷಯರೋಗವು ಸೋಂಕುವ ಸಂಭವವು ಹೆಚ್ಚು. ಈ ಬೇನೆಯಿಂದ ದೂರಿರುವ ದನಗಳು ತೀರ ಕಡಿಮೆ.

ಇಂಥ ಆಕಳ ಹಾಲು ಕ್ಷಯರೋಗದ ಪ್ರಸಾರಕ್ಕೆ ದೊಡ್ಡಸಾಧನವಾಗಿದೆ. ಧಾರೋಷ್ಣವಾದ ಹಾಲು ಎಲ್ಲ ಬಗೆಯಿಂದ ಮೇಲಾದದ್ದೆಂದು ತಿಳಿದು ಪ್ರಾಶಿಸುವವರು ಈ ಸಂಗತಿಯನ್ನು ಮುಖ್ಯವಾಗಿ ಗಮನಿಸಬೇಕು. ಇದು ಕೆಟ್ಟ ಹಾಲಿನ ಒಂದು ಪ್ರಕಾರವು.

ಕೆಟ್ಟ ಹಾಲಿನ ಇನ್ನೊಂದು ಪ್ರಕಾರವೆಂದರೆ— ಹಾಲಿನಲ್ಲಿ ಶರೀರ ಪೋಷಣೆಗೆ ತಕ್ಕ ದ್ರವ್ಯಗಳೆಲ್ಲವೂ ಸೇರಿರುವದರಿಂದಲೇ ಅದು ಬಹುಬೇಗನೆ ಕೆಟ್ಟುಹೋಗಲು ಕಾರಣವಾಗಿದೆ. ಹಸಿ ಹಾಲನ್ನು ಬಹಳ ಹೊತ್ತು ಹಾಗೇ ಇಡುವದರಿಂದ ಅದರಲ್ಲಿ ಬೆಕ್ಟೀರಿಯಾ ( Bectcria ) ಜಂತುಗಳು ಹೆಚ್ಚಾಗಿ, ನೈಟ್ರಿಫಿಕೇಶನ್ ( Nitrification ) ಕಾರ್ಯವು ಭರದಿಂದ ನಡೆಯುವದು. ಆಗ ಆ ಹಾಲು ವಿರುದ್ಧ ವಾಸನೆಯುಳ್ಳದ್ದೂ ಹುಳಿಯೂ ಆಗುವದು. ಅಂಥ ಕೆಟ್ಟ ಹಾಲನ್ನು ನಮ್ಮ ಹೆಣ್ಣು ಮಕ್ಕಳು ಮಸರಿನಲ್ಲಿ ಕೂಡಿಸಿಯಾಗಲಿ ಹಾಗೇ ಆಗಲಿ ಊಟದಲ್ಲಿ ಉಪಯೋಗಿಸುವದುಂಟು. ಇದು ತೀರ ತಪ್ಪು ರೋಗವುಳ್ಳ ದನಗಳ ಹಾಲೂ ನೈಟ್ರಿಫಿಕೇಶನ್ ಕಾರ್ಯದಿಂದ ಕೆಟ್ಟ ಹಾಲೂ ತೀರ ನಿಷಿದ್ಧವಾದವುಗಳು. ಅಂಥ ಹಾಲನ್ನೂ ಯಾರೂ ಎಂದೂ, ಯಾವ ಬಗೆಯಿಂದಲೂ ಉಪಯೋಗಿಸಲಾಗದು.

ವಿರುದ್ಧ ವಾಸನೆಯೂ ಹುಳಿಯೂ ಇಲ್ಲದ ಹಸಿ ಹಾಲನ್ನು ಉಪಯೋಗಿಸಲಿಕ್ಕೆ ಅಡ್ಡಿಯಿಲ್ಲವೆಂದು ಎಷ್ಟೋ ಜನರು ನಂಬ ಬಹುದು. ಅದಾದರೂ ತಪ್ಪು. ಶುದ್ಧವಾದ ಹಾಲನ್ನಿಟ್ಟು ಕೆಲವೊಂದು ಅವಧಿಯಲ್ಲಿಯೇ ಅದರಲ್ಲಿ ಕೋಟ್ಯವಧಿ ಕ್ರಿಮಿಗಳನ್ನು ಕಾಣಬಹುದು. ಇವುಗಳಿಂದ ಸಂಕರರೋಗಗಳು ಬಹು ಸುಲಭವಾಗಿ ಹಬ್ಬಿಕೊಳ್ಳುವವು. ಈ ವಿಷ ಕ್ರಿಮಿಗಳು ಎರಡು ವಿಧವಾಗಿವೆ. ಒಂದಕ್ಕೆ ಪ್ಯಾಥೋಜನಿಕ್ ( Pathogenic ) ಎಂತಲೂ ಇನ್ನೊಂದಕ್ಕೆ ಅನ್‌ಪ್ಯಾಥೋಜನಿಕ್ ( Unpathogenic ) ಎಂತಲೂ ಹೆಸರು. ಈ ಎರಡನೆಯ ಪ್ರಕಾರದ ಕ್ರಿಮಿಗಳು ಹುಲ್ಲು-ಮಣ್ಣುಗಳ ಮೂಲಕವಾಗಿ ಹೊರಗಿನಿಂದ ಹಾಲಿನಲ್ಲಿ ಸೇರುವವು. ಇವುಗಳಿಂದ ಅಪಾಯವಿಲ್ಲ ಮೊದಲನೆಯ ಜಾತಿಯ ಕ್ರಿಮಿಗಳು ಹಾಲಿನ ಮೇಲೆ ಹವೆಯಕಾರ್ಯವುಂಟಾಗುವದರಿಂದ ಅದರಲ್ಲಿಯೇ ಜನ್ಮ ತಾಳುವವು. ಇವುಗಳಿಂದ ಟಾಯ್‌ಫಾಯಿಡ್, ಸ್ಕಾರ್ಲೆಟ್‌ಫೀವರ, ಕಾಲರಾ ಮುಂತಾದ ರೋಗಗಳು ಪ್ರಾದುರ್ಭವಿಸುವವು

ಧಾರೋಷ್ಣವಾದ ಹಾಲು ಎಲ್ಲ ಬಗೆಯಿಂದ ಮೇಲಾದದ್ದಾದರೂ ಎಲ್ಲರಿಗೂ ಎಲ್ಲ ಕಾಲದಲ್ಲಿಯೂ ದೊರೆಯುವದು ದುರ್ಲಭವು. ಮುಂಜಾವಿನಲ್ಲಿ ದೊರೆತ ಹಾಲನ್ನೇ ಸಂಜೆಯ ವರೆಗೆ ಉಪಯೋಗಿಸಬೇಕಾಗುವದು. ವಿಷಕ್ರಿಮಿಗಳನ್ನು ನಾಶಗೊಳಿಸಿ, ಹಾಲನ್ನು ಬಹಳ ಹೊತ್ತಿನ ವರೆಗೆ ಶುದ್ಧವಾಗಿಟ್ಟುಕೊಳ್ಳಬೇಕಾದರೆ

ಚನ್ನಾಗಿ ಕಾಸಿ ಮರಳಿಸಬೇಕು. ನಮ್ಮ ಜನರು ಈ ಪದ್ಧತಿಯನ್ನು ಬಹು ಕಾಲದಿಂದಲೂ ಕಂಡು ಹಿಡಿದಿದ್ದಾರೆ. ಆದರೆ ಬಹಳ ಹೊತ್ತಿನ ವರೆಗೆ ಮಿತಿಮೀರಿ ಕಾಸುವದರಿಂದ ಹಾಲು ಗುಣದಲ್ಲಿ ಬಲಹೀನವಾಗುವದು. ರುಚಿಯೂ ಬಲವೂ ಕುಂದದಂತೆ ಅದನ್ನು ಹೇಗೆ ಶುದ್ಧವಾಗಿಟ್ಟುಕೊಳ್ಳಬಹುದೆಂಬದು ಎಷ್ಟೋ ದಿನಗಳಿಂದ ಶಾಸ್ತ್ರಜ್ಞರಿಗೆ ಸಮಸ್ಯೆಯ ಪ್ರಶ್ನವಾಗಿ ಕುಳಿತಿತ್ತು. ಇತ್ತಲಾಗಿ ಕೆಲವು ವರ್ಷಗಳಿಂದ ಇಂಥ ಶುದ್ಧೀಕರಣ ಪದ್ಧತಿಯೊಂದು ಕಂಡು ಹಿಡಿಯಲ್ಪಟ್ಟಿದೆ. ಅದಕ್ಕೆ ಪಾಶ್ಚುರೈಝೇಶನ್ ( Pasteurisation ) ಎಂಬ ಹೆಸರು.

ಈ ಪದ್ಧತಿಯಿಂದ ಹಾಲನ್ನು ತಯಾರಿಸುವ ಪ್ರಕಾರವು ಹೇಗಂದರೆ— 167°/ ಉಷ್ಣಾಂಶದ ವರೆಗೆ ಚನ್ನಾಗಿ ಕಾಸಿ ಅರ್ಧತಾಸಿನ ವರೆಗೆ ಅದೇ ಉಷ್ಣಾಂಶದಲ್ಲಿಟ್ಟು, ಆಮೇಲೆ ಹಾಲಿನ ಪಾತ್ರೆಯನ್ನು ಬರ್ಫದಲ್ಲಾಗಲಿ ತಣ್ಣೀರಿನಲ್ಲಾಗಲಿ ಇಟ್ಟು ಕೂಡಲೆ ತಣ್ಣಗಾಗುವಂತೆ ಮಾಡಬೇಕು. ಹೀಗೆ ಕಾಸುವದರಿಂದ ಪ್ಯಾಥೋಜನಿಕ್ ಕ್ರಿಮಿಗಳೆಲ್ಲವೂ ಸಾಯುವವಲ್ಲದೆ ಗುಣಗಳಾದರೂ ಅಂದರೆ ರುಚಿಯೂ ಹಾಲಿನ ಮುಖ್ಯ ಘಟಕಗಳಾದ ಪ್ರೋಟೀನ, ಕೊಬ್ಬು, ಲವಣ, ಮತ್ತೂ ಕಾರ್ಬೋಹೈಟ್ರೇಟಗಳೂ ಅಷ್ಟೊಂದು ಕಡಿಮೆಯಾಗದ್ದರಿಂದ ಬಲವರ್ಧನೆಯ ಕಾರ್ಯವು ಚನ್ನಾಗಿ ಕೈಗೂಡುವದು. ಮತ್ತು ಈ ಬಗೆಯ ಸಂಸ್ಕರಣದಿಂದ ಅನ್‌ಪ್ಯಾಥೋಜನಿಕ್ ಎಂಬ ನಿರುಪದ್ರವಿಗಳಾದ ಕ್ರಿಮಿಗಳಾದರೂ ಸಾಕಷ್ಟು ನಾಶಹೊಂದುವವು. ಇಂಥ ಹಾಲಿನ ಉಪಯೋಗದಿಂದ ಕ್ಷಯ, ಸನ್ನಿಪಾತ ಮೊದಲಾದ ರೋಗಗಳು ಪ್ರಾದುರ್ಭವಿಸಲಾರವು. ಚಿಕ್ಕ ಮಕ್ಕಳಿಗಾದರೂ ಇಂಥ ಹಾಲು ಅನುಕೂಲವಾದ್ದರಿಂದ ಮಕ್ಕಳ ಅಕಾಲ ನಿಧನವು ಬಹು ಮಟ್ಟಿಗೆ ದೂರಾ-ಗುವದು ಅದಕ್ಕಾಗಿ ಹಾಲನ್ನು ಚನ್ನಾಗಿ ಕಾಸಿ, ಕೂಡಲೇ ತಣ್ಣಗೆ ಮಾಡಬೇಕಲ್ಲದೆ ಹಸನಾದ ಪಾತ್ರೆಯಲ್ಲಿರಿಸಿ ಉಪಯೋಗಿಸಬೇಕು.

ಪ್ರಿಯ ವಾಚಕರೆ, ಹಾಲು ಅದರಲ್ಲಿಯೂ ಆಕಳಹಾಲು ಪ್ರಸಾದರೂಪದಿಂದ ಪವಿತ್ರವಾದದ್ದಾದರೂ ಅದರಲ್ಲಿರುವ ಸರ್ವ-ಸತ್ವಮಯ ದ್ರವ್ಯಗಳಿಂದ ತಕ್ಕ ಲಾಭವನ್ನು ಹೊಂದಬೇಕಾದರೆ ಅದನ್ನು ಮೇಲೆ ಹೇಳಿದ ಪದ್ಧತಿಯಂತೆ ಸಂಸ್ಕರಿಸಿ ಪಾವನಗೊಳಿಸಬೇಕು. ಅದಕ್ಕಾಗಿಯೇ ಸ್ವಾಮಿಗಳವರ ತೇಜೋಂಶಸಂಭೂತಳಾದ ಚಿಕ್ಕ ಚಂದ್ರಿಕೆಯ ಪ್ರಥಮಸೇವೆಗಾಗಿ, ಧಾರ್ಮಿಕ, ಸಾಮಾಜಿಕ, ನೈತಿಕ ಮೊದಲಾದ ಎಲ್ಲ ವಿಧಗಳಿಂದಲೂ ತಕ್ಕದಾದ ಪಾವನವಾದ ಪವಿತ್ರ ಪ್ರಸಾದವನ್ನು ತಂದು ನಿವೇದಿಸಿರುವೆನು. ಚಂದ್ರಿಕೆಯ ತತ್ವೈಕನಿಷ್ಠಭಕ್ತರಾದ ತಾವು ಕೇವಲ ಪಾವನತೆಯನ್ನು ಲಕ್ಷಿಸಿ ಪವಿತ್ರ-ಪ್ರಸಾದವನ್ನು ಪರಿಗ್ರಹಿಸಬೇಕೆಂತಲೂ, ಪರಿಗ್ರಹಿಸುವ ಪವಿತ್ರ-ಪ್ರಸಾದವನ್ನು ಪಾವನಗೊಳಿಸುತ್ತಿರಬೇಕೆಂತಲೂ ಅಪೇಕ್ಷೆ.

# ಕನ್ಯಾಬಲಿ!

ಲೇಖಕ:—

ಶ್ರೀ. ವೆಂಕಟರಾವ ಫಡಣೀಸ ಶಿರಹಟ್ಟಿ

## ೧.

"ಏ ನೀಲೀ ನೀಲೀ ನೀಲೀ ನಿಂದರ ಏಟ ಶಡಗ್ರಾ ಆ ಶಿವ-ಶಂಕ್ರಪ್ಪಾ ಮುದಕ್ನ ಬಡನ್ನ ಅವನ್ನ ಲಗ್ನಾ ಮಾಡಿಕ್ಕೋ ಅಂದ್ರ ಒಲ್ಯಾಕಂತಿ ಆ ನಿನಗ ಓದಾಕ ಕಲಿಸಿದ್ದ ಒಂದು ದೊಡ್ಡ ತಪ್ಪಾಗೇತಿ. ನೀಲಿ ಶಿವಶಂಕ್ರಪ್ಪಾ ತೆರವು ಭಾಳ ಕೊಡತ್ತಾನ ಅಡುವಾಗಿ ತೆರವರ ಬಂದ್ರ ಮಕ್ಳು-ಮರಿ ಕಳ್ಳು ತೊಯ್ಯಾವು! ಪಿರುತಿ ಪಿರುತಿ ಅಂತ ಆ ಎಡ ಹುಡ್ಗ ಬಸಪ್ಪನ್ನ ಮಾಡಿಕೊಂಡ್ರ ಅವಾನ ಈಟು ತೆರವು ಕೊಡಾಕಿಲ್ಲಾ ಅಂತಾನ ನೀಲಿ ಏ ನೀಲವ್ವಾ ಹಾಗ ಮಾಡಬ್ಯಾಡ ಶಿವಶಂಕ್ರಪ್ನ ಕಡಿಂದ ಆರಿಪ್ಪತ್ರೂಪಾಯಿ ತಂದಿನೀಗ. ಬೀಜಾ ಬಿತಿಗಿ ಆಗಿ ಮೂರು ತಿಂಗಳ ಗಂಜಿ ಆಗೇತಿ. ಲಗ್ನದಾಗ ಮತ್ತ ಆರಿಪತ್ರೂ ಪಾಯಾ ಕೊಡ್ತಿನಿ ಅಂತ ಅಂದಾನ. ಮಾರ್ವಾಡೀ ಸಾಲಾ ತೀರತೈತಿ. ನೀಲಿ ಬಡ್ತನದ ಪರಪಂಚಾ. ಮಕ್ಳು-ಮರಿ ಕಳ್ಳ ಕತ್ರುಸ್ತಿಯಾ? ಏನ್ ಪಿರುತಿ ನೋಡ್ತಿಯಾ?"

ಚಿನಮಲ್ಲಪ್ಪನ ಈಟಿ ಇರತದಂತಹ ಮಾತುಗಳು ನೀಲಮ್ಮನ ಹೃದಯುವನ್ನು ಹೊಕ್ಕು ಬಹು ವೇದನೆಯುನ್ನು ಮಾಡಹತ್ತಿದವು! ಒಂದೆಡೆ ಬಡತನ! ಇನ್ನೊಂದೆಡೆ ಪ್ರೇಮ! ಒಂದು ಕಡೆ ಶಿವಶಂಕರಪ್ಪ! ಇನ್ನೊಂದು ಕಡೆಗೆ ಪ್ರೇಮದ ಭಾಗ್ಯ ನಿಧಿ ಬಸವರಾಜ! ಯಾವದನ್ನು ನೋಡಬೇಕು; ಆ ಚಿಕ್ಕ ಹುಡುಗಿ? ತುಂಬಿ ತುಳುಕಿ ಬರುವ ಕಂಬನಿಗಳನ್ನು ಒರಿಸಿಕೊಳ್ಳುತ್ತ 'ಶಿವ ಶಿವ' ಎಂದು ದೀರ್ಘವಾದ ನಿಟ್ಟುಸುರೊಂದನ್ನು ಬಿಟ್ಟಳು!

## ೨.

ಸಂಣೂರು ಒಂದು ಚಿಕ್ಕ ಹಳ್ಳಿ. ಊರ ಕಡೆಯು ಉಕ್ಕಡದಲ್ಲಿ ಚನಮಲ್ಲಪ್ಪನ ಮುರುಕ ಮನೆ. ಎರಡೆತ್ತು ಇಟ್ಟುಕೊಂಡು ತನ್ನ ದೊಡ್ಡ ಸಂಸಾರದ ಹಡಗವನ್ನು ದೂಡುತ್ತಲಿದ್ದಾನೆ. ಮನೆ ತುಂಬ ಮಕ್ಕಳು-ಮರಿ. ಈಗಿನ ಕಠಿಣ ಕಾಲದಲ್ಲಿ ಬಡತನದ ಬಾಳು? ಒಂದೊಂದು ದಿನ ಮಕ್ಕಳು ಹೊಟ್ಟೆ ಹೊಟ್ಟೆ

ಎಂದು ಬಡಕೊಳ್ಳುತ್ತ ಹಾಗೆಯೇ ಮಲಗಿ ಬಿಡುವವು ! ಸಂಸಾರ ಸಾಗರದ ಮಧ್ಯೆ ಇವನ ಹಡಗವು ನಿಂತಿದೆ ! ಮುಂದೆ ಸಾಗಿಸಲು ಹುಟ್ಟು !ಹಾಕಿ-ಹಾಕಿ ಕೈ ಸೋತಿವೆ ! ಚೆನಮಲ್ಲಪ್ಪನ ಸಂಸಾರದ ಹಡಗವನ್ನು ಬಡತನದ ಮೊಸಳೆಯು ನುಂಗಲಾರಂಭಿಸಿದೆ ! ಆ ಮೊಸಳೆಯ ದವಡೆಯಿಂದ ಬಿಡಿಸಿಕೊಂಡು ತೀರವನ್ನು ತಲಪುವದಕ್ಕಾಗಿ ತೆರವಿನ ಆಶೆಗೆ ಬಲಿ ಬಿದ್ದ ! ಇದ್ದೊಬ್ಬ ಮಗಳ ಕೊರಳನ್ನು ಕೊಯ್ದು ಚಿಮ್ಮುತ್ತಿರುವ ಅವಳ ಆ ರಕ್ತವನ್ನು ಬಡತನದ ಮೊಸಳೆಯ ಒಡಲಿಗೆ ಹಾಕಿ ತನ್ನ ಹಡಗವನ್ನು ಉಳಿಸಿಕೊಂಡು ಮುಂದೆ ಹೊರಡಲು ಸಿದ್ಧನಾದ ! ಆದರೆ.... .. ........?

+ + + +

ನೀಲಮ್ಮನು ಚೆನಮಲ್ಲಪ್ಪನ ಮಗಳು. ಬಲು ಬುದ್ಧಿವಂತೆ. ಕಲಿತ ಮೂರು ಬುಕ್ಕುಗಳನ್ನು ಮರೆಯದೆ ಹೊತ್ತು ದೊರೆತಾಗ ಮನೆಯಲ್ಲಿ ಬಸವ ರಾಜನ ಕಡೆಯಿಂದ ಚಿಕ್ಕ ಚಿಕ್ಕ ಕತೆಯ ಬುಕ್ಕುಗಳನ್ನು ತಂದು ಓದುತ್ತಿದ್ದಳು. ಇವಳೂ ಬಸವರಾಜನೂ ಚಿಕ್ಕಂದಿನಲ್ಲಿ ಕೂಡಿ ಆಡಿದವರು. ಒಂದೇ ಓಣಿಯಲ್ಲಿ ಇವರಿಬ್ಬರ ಮನೆಗಳು. ನೀಲಮ್ಮನು ಓದು ಕಲಿಯುವಾಗ ಬಸವರಾಜನ ಕಡೆಯಿಂದ ಮನೆಯಲ್ಲಿ ಓದು ಹೇಳಿಸಿಕೊಳ್ಳುತ್ತಿದ್ದಳು. ಆ ಚಿಕ್ಕಂದಿನ ಪ್ರೇಮವೇ ಅವರು ಪ್ರೌಢರಾದಂತೆ ಪ್ರೇಮವಾದರೋ ಪ್ರಣಯದಲ್ಲಿ ರೂಪಾಂತರಿಸಿತು. ನೀಲವ್ವನು ಪ್ರೇಮದಿಂದ ತನ್ನ ಹೃದಯದ ಗರ್ಭಗುಡಿಯಲ್ಲಿ ಪ್ರತಿಷ್ಠಾಪಿಸಿದ ಆರಾಧ್ಯ ದೇವತನಾದ ಬಸವರಾಜ ಮೂರ್ತಿಯನ್ನು ತಳ್ಳಲು ಪಿಶಾಚಿಯಾದ ತೆರವು ಅವಳ ಹೃದಯವನ್ನು ಸೇರಿ ಆ ಮೂರ್ತಿಯನ್ನು ಹೊರಗೆಳೆದು ಆ ತೆರವಾದ ಸ್ಥಳದಲ್ಲಿ ಜುಲ್ಮಾನೆಯಿಂದ ಶಿವಶಂಕರಪ್ಪನನ್ನು ಸ್ಥಾಪಿಸಲು ಹವಣಿಸಲಾರಂಭಿಸಿತು !

“ ಅಪ್ಪಾ ! ನಿನ್ನ ಪ್ರೇಮದ ಮುದ್ದು ಕುವರಿಯನ್ನು ಅವಳ ಮನೋವಿರುದ್ಧನಾಗಿ ಯಾವನೋ ಓರ್ವನ ಕೊರಳಿಗೆ ಬಿಗಿದು ಬಂದ ಹಣದಿಂದ ಹೊಟ್ಟೆ ತುಂಬಿಕೊಳ್ಳಲು ಸಿದ್ಧನಾದೆಯಾ ? ಅಪ್ಪಾ ತೆರವಿನ ಆಶೆಗೆ ಬೀಳಬೇಡ ! ಅದು ನಮ್ಮ ವೀರಶೈವ ಸಮಾಜಕ್ಕೆ ಬಡಿದುಕೊಂಡ ಭೂತ ! ಹೊಟ್ಟೆಯ ಕರಳನ್ನು ಮಾರುವ ನಿದೆಂತಹ ರೂಢಿಯೋ ದೇವರೇ ಬಲ್ಲ ! ಅಪ್ಪಾ ! ಒಂದು ವೇಳೆ ನೀನು ನಿನ್ನ ಮಗಳ ಅಂತರ್ಯ ಪ್ರೇಮಪಾಶವನ್ನು ಹರಿದೊಗೆದರೆ ಅವಳು ನಿನ್ನ ಕಣ್ಮರೆಯಾದಳೆಂದೇ ಭಾವಿಸು ! ಶಿವ ! ಶಿವ ! ನಮ್ಮ ಸಮಾಜವು ಎಚ್ಚರಾಗಬೇಕಾದರೆ ತೆರವಿನ ಭೂತ-ಬಾಧೆ ಹೋಗಲಾಡಿಸಬೇಕಾದರೆ ಅದಕ್ಕೆ ಒಂದು ಜೀವಿಯ ಬಲಿಯಾಗಬೇಕು ! ” ನೀಲಮ್ಮನು ದೀನವಾಣಿಯಿಂದ ತನ್ನ ತಂದೆಗೆ ಹೇಳಿದಳು.

“ ನೀಲಿ ಏ ನೀಲಿ ಹಾಗ-ಹೀಗ ಅಂದೀ ಅಂದ್ರs ಇನ್ನೆರಡದಿಂದಾಗs ಆ ಶಿವಶಂಕರ್ನ ಕೊರಳಿಗೆ ಕಟ್ಟಿ ಬಿಡ್ತಿನಿ ನಿನ್ನ. ಏನೋ ಸಾಯ್ತಾಳಂತ ಸಾಯ್ತಾಳ. ಧರ್ಮಾ ಬಿಟ್ಟು ಮಾಡಾಕ ಬರತೈತೆ? ಹೋಗು ಒಳ್ಯಾಕs ಹೋಗು ಮಂಕನ್ಹಾಂಗ ಹಿಂಗ್ಯಾಕ ನಿಂತಿ” ನೀಲವ್ವನು ತಂದೆಯ ದುರ್ಭಾಷಣಗಳನ್ನು ಕೇಳಲಾರದೆ ಒಳಗೆ ಹೋದಳು.

೩.

ಇಂದು ಶಿವಶಂಕರಪ್ಪನ ಕೂಡ ನೀಲವ್ವನ ಮದುವೆ. ಚೆನಮಲ್ಲಪ್ಪನ ಮನೆಯಲ್ಲಿ ಬೀಗರು-ಬಿಜ್ಜರು ಉಂಡು-ತಿಂದು ತೇಗುತ್ತಲಿದ್ದಾರೆ. ಆದರೆ ನೀಲವ್ವನ ಹೃದಯದಲ್ಲಿ ನಿರಾಶೆಯ ಬಿರುಗಾಳಿ ಬೀಸಿ-ಬೀಸಿ ದುಃಖದ ಜ್ವಾಲೆಯನ್ನು ಪ್ರಜ್ವಲಿಸುತ್ತ ಹೊರಟಿದೆ! ಪಾಪ ಏನು ಮಾಡುವಳು ಆ ಬಾಲೆ? “ ಹಾಯ್! ದೇವಾ! ನಮ್ಮ ವೀರಶೈವ ಸಮಾಜದಲ್ಲಿನ ಈ ಹೆಣ್ಣಿನ ಮಾರಾಟದ ಹೇಯ ಕೃತ್ಯದಿಂದ ಸಂಭವಿಸುವ ಅನಾಹುತಗಳು ದೇವಾ ನಿನ್ನ ಕಣ್ಣಿಗೆ ಕಾಣಿಸಲಾರವೆ? ಸಮಾಜವೇ ಕ್ರೂರ ಸಮಾಜವೇ ನನ್ನ ‘ಆತ್ಮ ಬಲಿದಾನ’ ದಿಂದಲಾದರೂ ಎಚ್ಚರಾಗು!” ಎಂದು ನೀಲಮ್ಮನು ಕಣ್ಣ ತುಂಬಾ ನೀರುತಂದು ಒಂದು ಪತ್ರವನ್ನು ಬರೆದು ಯಾರಿಗೂ ತಿಳಿಯದಂತೆ ಹೋಗಿ ಮನೆಯ ಹಿಂದಿನ ಬಾವಿಯಲ್ಲಿ ಹಾರಿಕೊಂಡು ಪಿಶಾಚೀ ತೆರವಿಗೆ ತನ್ನ ಜೀವವನ್ನು ಬಲಿಗೊಟ್ಟಳು!

+ + + +

ಆಯಿತು! ಕ್ಷಣಕಾಲದ ಹಿಂದೆ ಆನಂದದಿಂದ ನಲಿದಾಡುತ್ತಲಿದ್ದ ಚೆನಮಲ್ಲಪ್ಪನ ಮನೆಯು ಈಗ ದುಃಖದ ಕಡಲಲ್ಲಿ ಮುಳುಗೇಳುತ್ತಲಿದೆ! ಬಾವೀಬಿದ್ದು ಮಗಳು ಸತ್ತ ಸುದ್ದಿ ಚೆನಮಲ್ಲಪ್ಪನಿಗೆ, ಎದೆಗೆ ಸಿಡಿಲು ಬಡಿದಂತಾಯಿತು! ಮನೆಯ ಮುಂದೆ ನಿಂತು ಶಿವಶಂಕರಪ್ಪನು ತನ್ನ ರೂಪಾಯಿಗಳಿಗಾಗಿ ಒದರಾಡುತ್ತಲಿದ್ದಾನೆ! ಚೆನಮಲ್ಲಪ್ಪನ ಹೆಂಡರು-ಮಕ್ಕಳು-ಮರಿಗಳು ಹಾಹಾರಿ ಕುಳಿತ್ತಿದ್ದಾರೆ! ಬಸಪ್ಪನು ಬಂದು ಎಲ್ಲರಿಗೂ ನಾಲ್ಕು ಸಮಾಧಾನದ ಮಾತುಗಳನ್ನು ಹೇಳಿ ಬಾವಿಯಲ್ಲಿ ಬಿದ್ದ ನೀಲವ್ವನ ಕಳೇಬರವನ್ನು ತೆಗೆಯಿಸಿ ಅದಕ್ಕೆ ಮಣ್ಣು ಕೊಡಲು ಅಣಿಮಾಡಿದನು. ಆ ಬಾವಿಯ ಕಟ್ಟೆಯಮೇಲೆ ಒಂದು ಪತ್ರ ಸಿಕ್ಕಿತು. ಬಸಪ್ಪಗೆ ಯಾರದೋ ಎಂದು ಒಡೆದು ನೋಡಲಾಗಿ ನೀಲವ್ವನ ಅಕ್ಷರಗಳು ಕಂಡವು. ಅದನ್ನು ಓದಿದಾ ಬಸಪ್ಪ! ಮತ್ತೆರಡು ಸಲ ಓದಿದ. ತುಂಬಿಬರುವ ಕಂಬನಿಗಳನ್ನು ಒರಸಿಕೊಂಡನು. ಪ್ರಿಯ ಪಾಠಕರೇ ಆ ಪತ್ರದಲ್ಲಿನ ಸಂಗತಿ ಇಷ್ಟೇ—

ಪ್ರಿಯ ಬಸವರಾಜ!

ಭೂಗರ್ಭದಿಂದ ಹೊರಡುವ ಜ್ವಾಲಾಮುಖಿಯಂತಿರುವ ತೆರವಿನ ಮಹಾ ಪ್ರಳಯಾಗ್ನಿಗೆ ನಾನಿಂದು ಆಹುತಿಯಾಗಿರುವೆನು! ವೀರಶೈವ ಬಾಲೆಯರ ಭವಿಷ ಜ್ಜೀವನದ ಸುಖಕ್ಕಾಗಿ ಬಸವರಾಜ ನೀನಿನ್ನು ಮುಂದರಿಯು! ತೆರವಿನ ದಳ್ಳುರಿಯಿಂದ ವೀರಶೈವ ಸಮಾಜ ಮಂದಿರವು ಕುಸಿಬೀಳದಂತೆ ಪ್ರಯತ್ನಿಸು! ನಾನು ಮರೆಯಾದೆನೆಂದು ಚಿಂತಿಸದಿರು. ಈ ಜನ್ಮದಲ್ಲಿ ನನ್ನ ಆಶೆಯು ಬಯಲಾದರೂ ಮುಂದಿನ ಜನ್ಮದಲಾದರೂ ನೀನೇ ನನ್ನ ಪತಿಯಾಗಲೆಂದು ದೇವನಡಿಯಲ್ಲಿ ಪ್ರಾರ್ಥಿಸುವೆನು! ಬಸವರಾಜ! ನನ್ನ ಪ್ರೇಮದ ತಾಯಿ-ತಂದೆ ಸಹೋದರರನ್ನು ಸಮಾಧಾನಗೊಳಿಸು! ನೀನಾದರೂ ಲಗ್ನಮಾಡಿಕೊಂಡು ಸುಖದಿಂದ ಬಾಳು!

ನಿನ್ನ ಪ್ರೇಮದಾಸಿ,
ನೀಲ!

ಬಸಪ್ಪನು ಪತ್ರ ಓದಿದ ಕೂಡಲೇ ಒತ್ತಿ ಬರುವ ಕಂಬನಿಗಳನ್ನು ಒರಿಸಿಕೊಂಡು ಚೆನಮಲ್ಲಪ್ಪನಿಗೆ ಸಮಾಧಾನಗೊಳಿಸಿ ಮನೆಗೆ ಬಂದನು ಮುಂದೆ ಬಸಪ್ಪನು ಲಗ್ನ ಮಾಡಿಕೊಳ್ಳದಲೇ ತನ್ನ ಸಮಾಜದಲ್ಲಿನ ತೆರವಿನ ಉಚ್ಚಾಟನೆಗಾಗಿಯೇ ತನ್ನ ಭವಿಷತ್ ಜೀವನವು ಮೀಸಲಾಗಿರಲೆಂದು ಆ ಮಹಾಕಾರ್ಯಕ್ಕೆ ತೊಡಗಿದನು. ಇತ್ತ ಚನಮಲ್ಲಪ್ಪಗಾದರೂ ಪಶ್ಚಾತ್ತಾಪವಾಗಿ ತಾನು ತನ್ನ ಬಾಂಧವರಿಗೆ ಉಪದೇಶಿಸುತ್ತ ಶೇಷಾಯುಷ್ಯವನ್ನು ಕಳೆಯಲಾರಂಭಿಸಿದನು.



# ವೀರಶೈವ ಧರ್ಮವು ವಿಶ್ವವ್ಯಾಪಕ ಧರ್ಮವು



ಲೇಖಕ:— ನೀಲಕಂಠಯ್ಯನವರು ಸಂಗನಾಳಮಠ ಬಿ. ಎ. ( ಆನರ್ಸ )
ಬಸವನ ಬಳಗ-ಕೊಲ್ಹಾಪೂರ.

ಈ ವಿಶ್ವ ಪ್ರಪಂಚದಲ್ಲಿ ಧರ್ಮಬೋಧಕರೆಂದಿನಿಸಿ ವಿರಾಜಿಸಿ ಹೋದ ಮಹದ್ವಿಭೂತಿಗಳಲ್ಲಿ, ವೀರಶೈವಧರ್ಮಬೋಧಕನಾದ ಶ್ರೀ ಬಸವೇಶ್ವರನು ಅತಿವಿಶಾಲ ದೃಷ್ಟಿಯವನೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಈ ವಿಚಾರವನ್ನು ಸಿದ್ಧಪಡಿಸುವದೇ ಈ ನನ್ನ ಚಿಕ್ಕ ಲೇಖನದ ಉದ್ದೇಶವು.

ವೇದಗಳಲ್ಲಿ ಅಡಕವಾಗಿದ್ದ ಧರ್ಮವು ಕೇವಲ ಶೈವರನ್ನಾಗಿ ಅಥವಾ ವೈಷ್ಣವರನ್ನಾಗಿ ಮಾಡಿ ವಿಶ್ವದಲ್ಲಿಯ ಕೆಲವು ಜನರನ್ನು ಆಕರ್ಷಿಸಿಕೊಂಡಿತ್ತೇ ಹೊರ್ತಾಗಿ ಇಡೀ ವಿಶ್ವವನ್ನು ತನ್ನ ಕಡೆಗೆ ಸೆಳೆದುಕೊಂಡಿರುವದಿಲ್ಲ. ಮಹಾತ್ಮಾ ಸಿದ್ಧಾರ್ಥನು ಕೆಲವು ಜನರನ್ನು ಮಾತ್ರ ತನ್ನ ಬೌದ್ಧ ತತ್ವಕ್ಕೆ ಎಳೆದುಕೊಂಡನು. ಆದರೆ ಇಡೀ ವಿಶ್ವವನ್ನು ಎಳೆದುಕೊಳ್ಳಲಿಲ್ಲ. ಜೀನೇಂದ್ರ, ಮಹಮ್ಮದ, ಜೀಸಸ್‌ಕ್ರಾಯಿಸ್ಟ ಈ ಪೂಜ್ಯ ಪುರುಷರಾದರೂ ತಮ್ಮ ತಮ್ಮ ಪಂಥಗಳನ್ನು ಬೆಳೆಯಿಸಿದರೇ ಹೊರ್ತು ಯಾವದೇ ಒಂದು ಸಾಮಾನ್ಯವಾದ ವಿಶ್ವವ್ಯಾಪಕ ಧರ್ಮವನ್ನು ಸ್ಥಾಪಿಸಲಿಕ್ಕೆ ಪ್ರಯತ್ನ ಮಾಡಲಿಲ್ಲ. ಹೀಗಾಗುವದರಿಂದ ವಿಶ್ವಪ್ರಪಂಚದಲ್ಲಿ ಬೇರೆ ಬೇರೆ ಧರ್ಮ ಪಂಗಡಗಳಾದದ್ದರಿಂದ ಜನತೆಯು ವಿಂಗಡಿಸಲ್ಪಟ್ಟದೆ; ಹರಿದು ಹಂಚಿ ಹೋಗಿದೆ; ಅದರಲ್ಲಿ ಐಕ್ಯತೆ ಇಲ್ಲ. ಸುಖವಿಲ್ಲ. ನಿಜವಾಗಿ ತಿಳಿದು ನೋಡಿದರೆ, ಧರ್ಮವು ಜನತೆಯನ್ನು ವಿಂಗಡಿಸುವದಿಲ್ಲ. ಆದರೆ ಅದನ್ನು ಕೂಡಿಸಿ ಅದರಲ್ಲಿ ಐಕ್ಯತೆಯನ್ನುಂಟು ಮಾಡುತ್ತದೆ. ಹೀಗೆ ಮಾಡದಿದ್ದರೆ ಅದು ನಿಜವಾದ ಧರ್ಮವೇ ಅಲ್ಲ. ಹೀಗಿದ್ದ ಪಕ್ಷದಲ್ಲಿ ವೀರಶೈವ ಧರ್ಮವು ವಿಶ್ವದೃಷ್ಟಿಯಿಂದ ಅಂದರೆ ಇಡೀ ಜನಾಂಗವನ್ನು ಒಂದನ್ನಾಗಿ ಮಾಡುವ ದೃಷ್ಟಿಯಿಂದ ತನ್ನ ತತ್ವವನ್ನೇ ಅಥವಾ ಪಂಥವನ್ನು ಹರಡಿತೋ ಅಥವಾ ಕೇವಲ ಸ್ವಲ್ಪ ಜನರನ್ನು ಲಿಂಗಾಯತರನ್ನಾಗಿ ಮಾಡಿ, ಉಳಿದ ಧರ್ಮಗಳು ವಿಂಗಡಿಸದಂತೆ ಜನತೆಯನ್ನು ವಿಂಗಡಿಸಿತೋ ಎಂಬ ವಿಚಾರವನ್ನು ಮಾಡುವದು ಅವಶ್ಯಕವು. ಆದರೆ ಈ ವಿಷಯವನ್ನು ಬೆಳಸುವ ಮೊದಲು ಧರ್ಮವೆಂದರೇನೆಂಬದನ್ನಷ್ಟು ವಿಚಾರಿಸುವ.

ಧರ್ಮವೆಂಬ ವಿಚಾರವು ಮನುಷ್ಯೇತರ ಪ್ರಾಣಿಗೆ ಸಂಬಂಧಿಸಿರದೆ ಕೇವಲ ವಿಚಾರಶಕ್ತಿಯುಳ್ಳ ಮಾನವ ಪ್ರಾಣಿಗೆ ಸಂಬಂಧಿಸಿರುತ್ತದೆಂಬ ಮಾತು ಎಲ್ಲರಿಗೂ ಗೊತ್ತಿರುತ್ತದೆ. ಇನ್ನು ಮನುಷ್ಯನಲ್ಲಿ ವಿಚಾರಶಕ್ತಿಯು ಪ್ರಬಲವಾಗಿದ್ದರೂ ಅದಕ್ಕೆ ಕೆಲವೊಂದು ಕಟ್ಟು ಇರುತ್ತದೆ. ಅಂದರೆ ಅದು ಈ ವಿಶ್ವ ಪ್ರಪಂಚದಲ್ಲಿ ಅಡಕವಾಗಿರುವ ನಿಜವಾದ ಸತ್ವವನ್ನು ಕಂಡು ಹಿಡಿಯುವಷ್ಟು ಸಮರ್ಥವಾದುದಲ್ಲ. ಕೆಲವು ಮಟ್ಟಿಗೆ ಆ ಕೊನೆಯ ಸತ್ವದ ( Ultimate reality ) ಬಗ್ಗೆ ಅದು ವಿಚಾರಿಸಬಹುದು. ಆದರೆ ಅದರ ಪೂರ್ಣ ರೂಪವನ್ನು ಗ್ರಹಿಸಲಾರದು. ಈ ಸತ್ವವು (Reality) ಅನಂತವು (Eternal) ಮತ್ತು ಅಪಾರ (Infinite) ವಾಗಿರುವದರಿಂದಲೂ, ತನ್ನಲ್ಲಿ ಅದನ್ನು ಕಂಡು ಹಿಡಿಯಲಿಕ್ಕೆ ದಿವ್ಯಶಕ್ತಿ ಇಲ್ಲದ್ದರಿಂದಲೂ, ಮಾನವನಿಗೆ ತಾನೊಂದು ವಿಚಾರ ಶಕ್ತಿಯ ಕೇವಲ ಒಂದು ಅಂಶವುಳ್ಳ ಒಂದು ಕಿರಿದಾದ ಮೂರ್ತಿ ಎಂಬ ಭಾವನೆಯು ಹುಟ್ಟುತ್ತದೆ. ಆ ಅನಂತ ಅಪಾರವಾದ ಸತ್ವಕ್ಕೆ ಸರಿಹೋಲಿಸಿದ್ದರಂತೂ ತೀರೇ ಹೋಯಿತು. ಮನುಷ್ಯನು ಮೇಲೆ ಹೇಳಿದ ಕಿರಿದಾದ ಮೂರ್ತಿಯಾಗದೆ ಎಲ್ಲಿಯೋ ಹಾರಾಡುತ್ತಿದ್ದ ಧೂಳಿಯ ಒಂದು ಕಣದಷ್ಟಾಗುತ್ತಿದ್ದನು. ಸಾರಾಂಶವೇನಂದರೆ, ಮನುಷ್ಯನು ತಾನೊಂದು ಅತಿ ಸಣ್ಣವಿಚಾರ ಶಕ್ತಿಯುಳ್ಳ ಮೂರ್ತಿಯೆಂದೂ, ಮತ್ತು ಈ ಎಲ್ಲ ವಿಶ್ವದ ಆಧಾರವಾದಂಥ ಒಂದು ಅತಿದೊಡ್ಡ ಅನಂತ ಅಪಾರವಾದ ಒಂದು ದಿವ್ಯವಸ್ತುವಿನ ಆಭಾಸವಾಗುತ್ತದೆಂದೂ ಮನವರಿಕೆ ಮಾಡಿಕೊಂಡಿದ್ದಾನೆ.

ಮನುಷ್ಯನು ಕೇವಲ ಒಂದು ಸಾಮಾಜಿಕ ಅಥವಾ ರಾಜಕೀಯ ಅಥವಾ ಇನ್ನುಳಿದ ರೀತಿಯ ಪ್ರಾಣಿಯಾಗಿರದೆ ಆ ಅನಂತ ಸತ್ವವನ್ನು ಕಂಡು ಹಿಡಿಯುಲಿಕ್ಕೆ ನಿರಂತರ ಹೋರಾಡುತ್ತಿರುವ ಪ್ರಾಣಿಯಾಗಿದ್ದಾನೆ. ನಿಜವಾಗಿ ನೋಡಿದರೆ ಈ ಕೊನೆಯ ವಿಚಾರವೇ ಮಾನವ ಧರ್ಮದ ಅಥವಾ ಮನುಷ್ಯತ್ವದ ತಿರುಳು. ಆದ್ದರಿಂದ ಮನುಷ್ಯನು ದಿನಾಲು ತನಗೆ ಅರಿವೆ ಇಲ್ಲದೆಯೇ ತಾನು ಯಾರು ? ಮತ್ತು ಆ ಅನಂತ ಸತ್ವವೆಂದರೇನು ? ಅದಕ್ಕೂ ತನಗೂ ಇರುವ ಸಂಬಂಧವೇನು? ಈ ಮೊದಲಾದ ಪ್ರಶ್ನಗಳನ್ನು ವಿಚಾರಿಸುತ್ತಾನೆ. ಇಂಥ ವಿಚಾರಗಳು ಅವನ ಮನದಲ್ಲಿ ಹಗಲಿರಳು ಕುದಿಯುತ್ತಿದ್ದರೇನೇ ಅವನು ನಿಜವಾದ ಮಾನವ ಪ್ರಾಣಿಯು. ಇಲ್ಲವಾದರೆ ಅವನಿಗೂ ಮತ್ತು ಪಶು-ಪಕ್ಷಿಗಳಿಗೂ ಭೇದವೇನೂ ಇಲ್ಲ.

ಆ ಅಪಾರವಾದ ಸತ್ವಕ್ಕೆ ಮತ್ತು ಮನುಷ್ಯನಿಗೆ ಇರುವ ಸಂಬಂಧವೇ ಧರ್ಮವೆನಿಸುವದು. ಆ ಸತ್ವವನ್ನು ಕಾಣಲಿಕ್ಕೆ ಅವನು ಉತ್ಸಾಹದಿಂದ, ಪ್ರೀತಿಯಿಂದ, ಭಯದಿಂದ, ಮತ್ತು ವಿನಯದಿಂದ ಹವಣಿಸುತ್ತಿದ್ದರೆ ಅದು ಅವನಿಗೆ ಗೋಚರಿಸಬಹುದು. ಬಹಿರ್ದೃಷ್ಟಿಗೆ ಗೋಚರಿಸದಿದ್ದರೂ ಅವನ ಹೃದಯದಲ್ಲಿ

ಆ ದಿವ್ಯ ವಸ್ತುವಿನ ಪ್ರತಿಬಿಂಬವು ಅಥವಾ ಆ ಸತ್ವದ ಆಭಾಸವು ಅನುಭವಿಸಲ್ಪಡುತ್ತದೆ. ಅಂದರೆ ಧರ್ಮವು ಕೇವಲ ಮೆದುಳಿನಲ್ಲಿ ನಡೆಯುತಕ್ಕ ವ್ಯಾಪಾರದ ವಿಚಾರ ಶಕ್ತಿಗೆ ಸಂಬಂಧಿಸಿರದೆ, ಹೃದಯದಲ್ಲಿರುವ ಅಂತಃಕರಣಕ್ಕೆ ನಿಕಟವಾಗಿ ಸಂಬಂಧಿಸಿದೆ. ನಿಜವಾಗಿ ನೋಡಿದರೆ ಧರ್ಮವೆಂದರೆ ಮನುಷ್ಯನ ಹೃದಯದೊಳಗಿಂದ ಉಕ್ಕೇರಿ ಬಂದ ಆ ಅನಂತ ಸತ್ವದಮೇಲಿನ ಪ್ರೀತಿ. ಇದರಿಂದಲೇ ಭಕ್ತಿಯೂ ಹಾಗೂ ಆ ಸತ್ವದ ಮೇಲಿನ ಪ್ರೀತಿಯೂ ಒಂದೇ ಎಂದರೂ ತಪ್ಪಾಗಲಿಕ್ಕಿಲ್ಲ.

ಹೃದಯವು ತನ್ನಷ್ಟಕ್ಕೆ ತಾನೇ ಇದ್ದದ್ದಾದರೆ ಯಾವಾಗಲೂ ಐಕ್ಯತೆಯನ್ನು ಶಾಂತಿಯನ್ನು ಸುವ್ಯಸ್ಥಿತ ಪ್ರದೇಶವನ್ನು ಹುಡುಕುತ್ತದೆ. ಬೇಡುತ್ತದೆ; ಆದರೆ ಕಾಲಪರಿಸ್ಥಿತಿಗಳನ್ನನುಸರಿಸಿ ಕಠಿಣತೆಯನ್ನು ಮೃದುತ್ವವನ್ನು ಹೊಂದಿದಾಗ ಆದಾದರೂ ಮಾಡಬೇಕೇನು? ಅಷ್ಟಾದರೂ ಕಾಠಿಣ್ಯವನ್ನೂ ಮೃದುತ್ವವನ್ನೂ ಭೇದಿಸಿ ಅದರಾಚೆಗೆ ಹೋಗಿ ಐಕ್ಯತೆ-ಶಾಂತಿಯನ್ನು ಪಡೆಯಲು ಹವಣಿಸುತ್ತದೆ. ಮನುಷ್ಯನು ಎಲ್ಲಿದ್ದರೇನು? ಅವನ ಹೃದಯವು ಅದೇ ಸ್ವಭಾವದ್ದಿರುತ್ತದೆ ಕಾಲಪರಿಸ್ಥಿತಿಯಿಂದ ಮಾತ್ರ ಸ್ವಲ್ಪ ಭಿನ್ನವಾಗುತ್ತದೆ. ಆದರೂ ಮೇಲೆ ಹೇಳಿದಂತೆ ತನ್ನ ನಿಜಸ್ವಭಾವವನ್ನೇ ಬಿಡುವದಿಲ್ಲ. ಇಂಥ ಹೃದಯದಲ್ಲಿ ಹುಟ್ಟಿದ ಧರ್ಮದ ಸ್ವಭಾವವಾದರೂ ಐಕ್ಯತೆ, ಶಾಂತಿಯ ಕಡೆಗೆ ಇರುವದರಲ್ಲೇನಾಶ್ಚರ್ಯ? ಆದ್ದರಿಂದಲೇ ನಿಜವಾದ ಧರ್ಮದ ಗುಟ್ಟೆಂದರೆ ಐಕ್ಯತೆ ಮತ್ತು ವಿಶ್ವವ್ಯಾಪಕ ಶಾಂತಿ.

ಮನುಷ್ಯನ ಸ್ವಭಾವವು ವಿಚಿತ್ರವಾದದ್ದು. ಅವನು ತನಗಿಂತ ಹೆಚ್ಚಿನ ಶಕ್ತಿಯುಳ್ಳ ವ್ಯಕ್ತಿಯನ್ನು ಕಂಡರೆ ಅದಕ್ಕೆ ಮಣಿಯುತ್ತಾನೆ. ಬಾಗುತ್ತಾನೆ. ಶರಣಾಗತನಾಗುತ್ತಾನೆ. ಹಾಗಿಲ್ಲವಾದರೆ ಅದನ್ನು ತಿರಸ್ಕರಿಸುತ್ತಾನೆ; ಯಾಕಂದರೆ ತಾನು ಅದಕ್ಕಿಂತ ಹೆಚ್ಚಿನವನೆಂಬ ಭಾವನೆಯು ಅವನಲ್ಲಿ ಹುಟ್ಟುತ್ತದೆ. ನಾವು ಮೇಲೆ ಹೇಳಿದ ಆ ಸತ್ವವು ಅನಂತ ಮತ್ತು ಅಪಾರವಾಗದೆ ಇದ್ದು, ಕೇವಲ ಮಾನವ ದೃಷ್ಟಿಗೆ ಗೋಚರಿಸುವಂಥದ್ದಿದ್ದರೆ ಅದಕ್ಕವನು ಅಷ್ಟೊಂದು ಮಹತ್ವವನ್ನು ಕೊಡುತ್ತಿದ್ದಿಲ್ಲ. ಅದನ್ನು ಘನವಾದ ದೇವರೆಂದು ಭಾವಿಸುತ್ತಿದ್ದಿಲ್ಲ. ಆದ್ದರಿಂದ ಆ ಅನಂತ ಸತ್ವ ಅಥವಾ ನಿಜವಾದ ದೇವರಕಿಂತ ಕಡಿಮೆ ಯೋಗ್ಯತೆಯುಳ್ಳ ಯಾವ ದೇವರನ್ನು ತಂದು ಮುಂದಿಟ್ಟರೂ ಅವನಿಗೆ ಶಾಂತಿಯು ಬರಲಾರದು. ಗುಡಿ-ಗುಂಡಾರಗಳಲ್ಲಿರುವ ಕಲ್ಲದೇವರನ್ನು ಕೆಲವು ಸಮಾಜಗಳಲ್ಲಿ ಪೂಜಿಸುತ್ತಿದ್ದು ಪುರುಷ ದೇವರು ( Personal Gods in Jainism and Budhism ) ಹಾಗೂ ಇನ್ನುಳಿದ ಪುರುಷರೂಪೀ ಸಣ್ಣ-ಪುಟ್ಟ ದೇವತೆಗಳು ( Personified Gods ) ಮನುಷ್ಯನಲ್ಲಿ ಆದರ ಬುದ್ಧಿಯನ್ನು ಹುಟ್ಟಿಸಲಾರವು. ಯಾಕಂದರೆ ಅವು ಮನುಷ್ಯನಿಂದಲೇ ನಿರ್ಮಿಸಲ್ಪಟ್ಟವುಗಳಾಗಿವೆ. ತಾನೇ ನಿರ್ಮಿಸಿದ ದೇವರಕಿಂತ ತಾನು

ಹೆಚ್ಚೆಂಬ ಭಾವನೆಯು ಅವನಲ್ಲಿರುತ್ತದೆ. ಆದ್ದರಿಂದ ಅನಂತ ಅಪಾರವಾಗಿರದಂಥ ದೇವರು ಮನುಷ್ಯನಿಗೆ ಮನಶ್ಶಾಂತಿಯನ್ನೀಯಲಾರವು. ಹೀಗೆಂದು ತಿಳಿದು ಬಸವ ದೇವನು ಆ ಅನಂತ ಮತ್ತು ಅಪಾರವಾದ ಸತ್ವವೇ ದೇವರು. ಅದೇ ದಿವ್ಯ ಶಕ್ತಿಯು ಎಂದು ಸಾರಿ ಹೇಳಿದನು. ಈ ಅನಂತ ಶಕ್ತಿಯು ತನ್ನ ಯಾವ ಗುಣ ಭಾವಗಳನ್ನು ಹೊಂದಿರದಿದ್ದರೂ ಮನುಷ್ಯನು ಅದಕ್ಕೆ ತನ್ನ ಎಲ್ಲ ಗುಣ ಭಾವಗಳನ್ನು ಹಚ್ಚುತ್ತಾನೆ. ಇದೇ ಅವನ ತಪ್ಪು. ಹೀಗೆ ಹಚ್ಚುವದರಿಂದ ಆ ಅನಂತ ಮತ್ತು ಅಪಾರವಾದ ಶಕ್ತಿಯು ಒಂದು ಕಿರಿದಾದ ಪುರುಷರೂಪೀ ಶಕ್ತಿಯಾಗುತ್ತದೆ. ಆದರೆ ಮನುಷ್ಯನ ವಿಚಿತ್ರವಾದ ಸ್ವಭಾವವೇದರೆ ಅವನು ನೋಡಿದ ಅಥವಾ ವಿಚಾರಿಸಿದ ವಸ್ತುಗಳನ್ನು ತನಗೇ ಸಂಬಂಧಿಸಿವೆ ಎಂದು ತಿಳಿಯುತ್ತಾನೆ. ಇಲ್ಲಿ ಮನುಷ್ಯನ ಸ್ವಭಾವವನ್ನು ಅರ್ಥಾತ್ ಅವನ ಸ್ವಾರ್ಥತೆಯನ್ನು ನಾವು ಹಳಿಯಬೇಕಾಗುತ್ತದೆ. ಇಂಥ ಬಿಕ್ಕಟ್ಟಿನ ಪ್ರಸಂಗದಲ್ಲಿ ಅಂದರೆ ಸ್ವಾರ್ಥತೆಯ ರಾಜ್ಯದಲ್ಲಿ ಸಿಕ್ಕ ಬೀಳಬಹುದಾದ ಪ್ರಸಂಗದಲ್ಲಿ ಒಂದೇ ಒಂದು ಹಾದಿಯು ಸೂಚಿಸುತ್ತದೆ. ಮನುಷ್ಯನು ಇಂಥ ಪ್ರಸಂಗದಲ್ಲಿಯೇ ಆಗಲಿ ಅಥವಾ ಯಾವ ಕಾಲದಲ್ಲಿಯೇ ಆಗಲಿ ತನ್ನ ಸ್ವಾರ್ಥವನ್ನು ನೋಡಿಕೊಂಡು ಇಡೀ ವಿಶ್ವಪ್ರಂಪಚ ಹಿತವನ್ನು ನೋಡಿದರೆ ಅವನು ಪಾರಾಗಬಲ್ಲನು. ಸಾರಾಂಶವೇನಂದರೆ ಆ ಅನಂತ ಮತ್ತು ಅಪಾರವಾದ ಶಕ್ತಿಗೆ ಪೂರ್ಣವಾಗಿ ಮನುಷ್ಯನ ಎಲ್ಲ ಗುಣಗಳನ್ನು ಹಚ್ಚುವದಕ್ಕಿಂತ ಆ ಶಕ್ತಿಯು ತನ್ನ ಸಲುವಾಗಿಯೇ ಅಲ್ಲದೆ ಇಡೀ ವಿಶ್ವದಲ್ಲಿದ್ದ ಎಲ್ಲ ಪ್ರಾಣಿಗಳ ಸಲುವಾಗಿ ಕಲ್ಯಾಣಮಯ; ಹಿತಮಯ, ಶಿವಮಯ, ( Good ) ವಾಗಿರುತ್ತದೆಂದು ಕಲ್ಪಿಸಬೇಕು. ಹೀಗೆ ವಿಚಾರಿಸಿ ಬಸವದೇವನು ಆ ಅನಂತ ಮತ್ತು ಅಪಾರವಾದ ಶಕ್ತಿಯು ಕೇವಲ ಶಿವಮಯಶಕ್ತಿ ( Infinite Good Power ) ಅನು ಮನುಷ್ಯನ ಕಲ್ಯಣವನ್ನಷ್ಟೇ ಬಗೆಯುವದಿಲ್ಲ. ಇನ್ನಿತರ ಪ್ರಾಣಿಗಳಿಗೂ ಸಹ ಶಿವಮಯವಾಗಿರುತ್ತದೆ. ಮತ್ತು ಅದು ಕೇವಲ ಲಿಂಗಾಯತರಿಗೆ ಸಂಬಂಧಿಸಿದ್ದಲ್ಲ. ಆದರೆ ಇಡೀ ವಿಶ್ವದಲ್ಲಿರತಕ್ಕ ಜನರಿಗೂ ಕೂಡ ಸಂಬಂಧಿಸಿದೆ. ಎಲ್ಲರಿಗೂ ಶಿವಮಯವಾಗಿದೆ. ಕಲ್ಯಾಣಮಯವಾಗಿದೆ ಎಂದು ಸಾರಿಹೇಳಿದನು.

ಹೀಗಿದ್ದುದರಿಂದ ಇಂಥ ಅಪಾರ ಶಿವಮಯ ಶಕ್ತಿಯೇ ( Infinite Good Power ) ಮನುಷ್ಯನ ಹೃದಯವನ್ನು ಆಕರ್ಷಿಸಲಿಕ್ಕೆ ತಕ್ಕದ್ದಾಗಿದೆ. ಅದೇ ಎಲ್ಲ ಧರ್ಮದ ತಳಹದಿ. ಎಲ್ಲ ವಿಶ್ವದ ಜನರನ್ನು ಒಂದುಗೂಡಿಸುವ ತತ್ವ ಈ ಶಕ್ತಿಯನ್ನು ಪೂಜಿಸುವವರೇ ಅಥವಾ ಅದರ ನಿರಂತರ ಧ್ಯಾನಮಾಡುವವರೇ ವೀರಶೈವರು. ಶಿವಮಯವಾದ ಶಕ್ತಿಯನ್ನು ಪೂಜಿಸುವದರಿಂದ ಅದರ ಪೂಜಕರಲ್ಲಿ ವೀರತತ್ವವೂ ಮತ್ತು ಶಿವತತ್ವವೂ ಒದಗುತ್ತದೆ. ಇಂಥವರೇ ವೀರಶೈವರು.

ಈ ಶಕ್ತಿಯು ಇಡೀ ವಿಶ್ವದ ಜನರಿಗೆ ಪೂಜನಾರ್ಹವಾದದರಿಂದ ಅವರೆಲ್ಲರೂ ವೀರ ಶೈವರೇ ಆಗಿದ್ದಾರೆ. ಆದರೆ ಅಜ್ಞಾನದ ಮೂಲಕ ಅನೇಕ ಧರ್ಮದ ತಪ್ಪು ತಿಳುವಳಿಕೆಗಳು ಹುಟ್ಟಿ ಈ ಐಕ್ಯ ಭಾವನೆಯು ನೆಲೆಗೊಂಡಿಲ್ಲ. ಆ ಭಾವನೆಯನ್ನು ಸ್ಥಿರಗೊಳಿಸುವದೇ ನಮ್ಮೆಲ್ಲರ ಕರ್ತವ್ಯವು.

ವೀರಶೈವ ಸಮಾಜವೆಂದರೆ ಎಲ್ಲ ಸಮಾಜಗಳನ್ನು ತೃಪ್ತಿಗೊಳಿಸುವ ವಸ್ತುಗಳಿಂದ ಕೂಡಿದ ಸಮಾಜವು. ವೀರಶೈವ ಸಮಾಜವಲ್ಲೇನಿದೆ ಎಂದು ಕೇಳಿದರೆ ಅದರೊಳಗೇನಿಲ್ಲ? ಎಂಬ ಪ್ರತಿ ಪ್ರಶ್ನವು ಬರುತ್ತದೆ. ವೀರಶೈವ ಸಮಾಜದಲ್ಲಿ ಅಪಾರ ಶಿವಮಯಶಕ್ತಿಯಿದೆ. ದಿವ್ಯಾತ್ಮಾ ಬಸವದೇವನಿದ್ದಾನೆ. ಶರಣರಿದ್ದಾರೆ. ಶರಣರ ಸಂಘಗಳಿವೆ. ಉತ್ಕೃಷ್ಟವಾದ ನೀತಿ ಪದ್ಧತಿ ಇದೆ. ಅಹಿಂಸಾರತ್ನವಿದೆ. ಆ ದಿವ್ಯ ಶಕ್ತಿಯನ್ನು ಸಾಧಿಸಲು ಹಗುರಾದ ಮಾರ್ಗವಿದೆ. ಯಜ್ಞಯಾಗಾದಿ ಕರ್ಮಬಂಧನದಿಂದ ಮತ್ತು ವರ್ಣಾಶ್ರಮಗಳಿಂದ ದೂರಾದ ಸುಂದರ ಸಮಾಜ ಘಟನೆ ಇದೆ. ಕಿವಿಗೆ ಇಂಪಾಗಿ ನುಡಿದು ಹೃದಯಕ್ಕೆ ಆನಂದವನ್ನು ಬೀರುವ ಶರಣರ ವಚನಗಳಿವೆ. ಲಿಂಗಾಂಗ ಸಾಮರಸ್ಯವಿದೆ. ಇನ್ನೇನು ಬೇಕು? ವೀರಶೈವ ಸಮಾಜವು ಒಂದು ಘನವಾದ ಲೋಹಚುಂಬಕವೆಂದು ಕಲ್ಪಿಸಿದರೆ ವಿಶ್ವದಲ್ಲಿರುವ ಉಳಿದ ಸಮಾಜಗಳು ಸಣ್ಣ-ಪುಟ್ಟ ಕಬ್ಬಿಣ ತುಂಡುಗಳು ತಮ್ಮಿಂದ ತಾವೇ ಲೋಹಚುಂಬಕಕ್ಕೆ ಓಡಿಬರುತ್ತವೆ. ಇಲ್ಲವೆ ಅದರಲ್ಲಿದ್ದ ಶಕ್ತಿಯು ಅವುಗಳನ್ನು ಸೆಳೆಯುತ್ತದೆ. ಬೌದ್ಧರು ಬಸವನಲ್ಲಿ ಬುದ್ಧನ ರೂಪವನ್ನು ಶರಣರ ಸಂಘಗಳಲ್ಲಿ ತಮ್ಮ ಬೌದ್ಧ ಸಂಘಗಳ ರೂಪವನ್ನೂ, ಕ್ರಿಶ್ಚಿಯನ್ನರು ಬಸವನಲ್ಲಿ ತಮ್ಮ ಕ್ರಾಯಿಸ್ತನನ್ನೂ ತಮ್ಮ Almighty God ನನ್ನು ಅಪಾರವಾದ ಶಕ್ತಿಯಲ್ಲಿಯೂ, ಜೈನರು ವೀರಶೈವ ಸಮಾಜದ ಅಹಿಂಸಾ ನೀತಿರತ್ನದಿಂದ ಸೆಳೆಯಲ್ಪಟ್ಟ ಜಿನೇಂದ್ರನ ಸ್ವರೂಪವನ್ನು ಬಸವದೇವನಲ್ಲಿ, ಮುಹಮ್ಮದೀಯರು ಮುಹಮ್ಮದ ಪೈಗಂಬರನ ರೂಪವನ್ನು ಬಸವನಲ್ಲಿ, ತಮ್ಮ ಅಕಬರನಾದ ಅಲ್ಲಾನನ್ನು ದಿವ್ಯ ಶಿವಮಯ ಶಕ್ತಿಯಲ್ಲಿ ಕಂಡು ಮುದಿತರಾಗಿ ಶಾಂತಿಯನ್ನು ಹೊಂದಬೇಕಲ್ಲವೇ? ಈ ಎಲ್ಲ ಸಮಾಜಗಳಿಗೆ ನೆರಳಿನ ಆಶ್ರಯವನ್ನು ಕೊಡುವ ಛತ್ರವಾದ ವೀರಶೈವ ಸಮಾಜವು ಜಗದ್ವಂದ್ಯವು. ಅದನ್ನು ಸ್ಥಾಪಿಸಿದ ಶ್ರೀ ಬಸವದೇವನು ಸಹ ಜಗದ್ವಂದ್ಯನು.



# ದೈವ ಘಟನೆ

ಲೇಖಕರು :— ಶ್ರೀ. ಮಹಿಷಿ ಕೃಷ್ಣಶರ್ಮಾ

( ಹಿಂದಿನಿಂದ ಸಾಗಿದುದು. )

ಇಷ್ಟರಲ್ಲಿ ಅವಳಿಗೆ ಪತಿಯನ್ನೆನಪಾಗಿ ಅಸಿವಾರ ದುಃಖವಾಗಿದ್ದರೂ ಅವಳು ತನ್ನ ಮನದಲ್ಲಿಯೆ, ತಾಯಿ ದಾಕ್ಷಾಯಣೀ, ಅಡವಿಯ ಪಾಲಾಗಿದ್ದ ಭಗಿನಿಯನ್ನು ಶೋಧಿಸಲೆಂದು ಅಡವಿಯ ಪಾಲಾಗಿದ್ದ ನನ್ನ ಪ್ರಿಯಕರನಿಗೆ ಕ್ಷೇಮವಷ್ಟೆ ಹಾಗು ಕುಮಾರಿಯಾದ ನಾದಿನಿಯವರ ಕುಶಲತೆಗೆ ಬಾಧೆ ಇಲ್ಲವೆ? ಇಂತಹ ಎಡೆಯೊಡೆಯುವಂತಹ ಪ್ರಸಂಗದಲ್ಲಿ ಅವರೀರ್ವರ ಸಂರಕ್ಷಣಕರ್ತೃಗಳು ನೀನಲ್ಲದೆ ಮತ್ತಿನ್ನಾರಿರುವರು? ಗುಡಿಸಲಲ್ಲಿಯ ನೀರು ಈ ಹೊತ್ತು ಸಾಕಾಗುತ್ತಿದ್ದವು. ಈಗಾದರೋ? ಜಲಪ್ರಳಯವು ನಡೆದಿದೆ. ಹೀಗಿದ್ದು ನಾಳಿನ ನೀರಿಗಾಗಿ ನಾದಿನಿಯವರು ಇಂದೇಕೆ ಹೋಗಬೇಕಾಗಿತ್ತು? ವಿಧಾತಾ, ಇನ್ನೂ ನಮ್ಮ ಅದೃಷ್ಟದಲ್ಲಿ ಏನಿರುವದು? ಬಂಧು-ಭಗಿನಿಯರನ್ನೂ ಸತಿ–ಪತಿಗಳನ್ನೂ ಅಗಲಿಸಿದಂತಾಯಿತು. ಇನ್ನೇನು ತಾಯಿ-ಮಕ್ಕಳನ್ನೂ ದೂರಮಾಡಬೇಕೆಂದಿರುವಿಯೋ ಹೇಗೆ? ಚಿಂತೆಯಿಲ್ಲ. ಅದಕ್ಕೆ ನೀನೇನೂ ಕಷ್ಟಬಡುವ ಕಾರಣವಿಲ್ಲ. ಜಗನ್ನಿಯಂತನಾದ ನಿನ್ನ ಪ್ರೇರಣೆಯಿಂದ ನಡೆದಿರುವ ಈ ಹೃದಯವಿದಾರಣವಾದ ಮೇಘಗರ್ಜನಕ್ಕೂ ಸಿಡಿಲಿನಂತಹ ನೆತ್ತಿಯಿಂದಲೇ ಜೀವ ಹಾರುವಂತಹ ಸಪ್ಪಳಕ್ಕೂ ಮಗುವಂತೂ ಹೌಹಾರಿ ಮೃತಪ್ರಾಯವಾಗಿದೆ. ಅಷ್ಟೇಕೆ? ಇನ್ನು ಸ್ವಲ್ಪ ವೇಳೆ ಇದೇ ಪ್ರಕಾರ ನಡೆದಲ್ಲಿ ಅದೇಕೆ ಉಳಿಯುವದು? ಹಾಗಾದರೇನೇ ನಿನ್ನ ಮನವು ತೃಪ್ತಿಯಾಗುವಂತಿದ್ದರೆ, ಆಗಲಿ. ನಿನ್ನ ಮನದಿಚ್ಛೆಯಂತಾಗಲಿ.' ಎಂದು ಒತ್ತಿಬರುತ್ತಿರುವ ದುಃಖದಲ್ಲಿ ಕಣ್ಣಲ್ಲಿಯ ನೀರು ತಮ್ಮಷ್ಟಕ್ಕೆ ತಾವೇ ಝರಿಗಳಲ್ಲಿಯ ನೀರು ಹರಿಯುವಂತೆ ಒಂದೇ ಸವನೆ ಹೋಗಲಾರಂಭಿಸಿದವು.

ಆ ಪ್ರಕಾರವಾಗಿ ಆ ನಮ್ಮ ವೀರಮಾತೆಯು ಕಷ್ಟಬಡುತ್ತಿರಲು ಅವಳ ಮೌನವಾದ ಆರ್ತಸ್ವರವು ಮೇಘರಾಜನ ಕರ್ಣಪಟಲವನ್ನು ಸೇರಿತೋ ಏನೋ ಅನ್ನುವಂತೆ ಆತನು ತನ್ನ ಅನಾಥ ಮಗಳಂತಿದ್ದ ನಮ್ಮಾಪವಿತ್ರ ವಸುಂಧರಾ ಮಾತೆಯನ್ನೂ, ಹಾಗೂ ಅವಳ ಚಿಕ್ಕಮಗುವನ್ನೂ ರಕ್ಷಿಸಲೋಸುಗ, ಭೂಮಾತೆಯಲ್ಲಿ ಎಷ್ಟೊಂದು ಸಿಟ್ಟಾಗಿ ಬಡಿಯುತ್ತಿದ್ದರೂ ಕೂಡಲೇ ಶಾಂತನಾದಂತೆ ಮಳೆಯು ಕಡಿಮೆಯಾಗುತ್ತ ಒಂದೆರಡು ನಿಮಿಷಗಳಲ್ಲಿ ಸಂಪೂರ್ಣವಾಗಿ ನಿಂತು

ಭೂಮಿಯಲ್ಲಿದ್ದ ನೀರಾದರೂ ಅಲ್ಪ-ಸ್ವಲ್ಪ ಕಡಿಮೆಯಾಗಹತ್ತಿತು. ಅರಣ್ಯದಲ್ಲಿ ಹರಿಯುವ ನೀರಿನ ಸಪ್ಪಳವೂ ಹಾಗೂ ಕಪ್ಪೆಯಂತಹ ನೀರಲ್ಲಿಯ ಪ್ರಾಣಿಗಳು ಒದರುವಿಕೆಯ ಸಪ್ಪಳವೂ ಹೊರ್ತು ಬೇರೆ ಅದಾವ ಸಪ್ಪಳವೂ ಇಲ್ಲದಾಯಿತು. ವಸುಂಧರಾ ರಾಣಿಗೆ ನೆತ್ತಿಯಲ್ಲಿ ಜೀವಬಂದಂತಾಗಿ ತನ್ನಲ್ಲಿ ಕೃಪೆದೋರಿದ ಮೇಘ ರಾಜನನ್ನು ನೆನೆದು, ಅಷ್ಟುಹೊತ್ತಿನ ವರೆಗೆ ನಿದ್ರೆಯಿಲ್ಲದ ಮಗುವು ಕಣ್ಣುಮುಚ್ಚ ಹತ್ತಿದ್ದರಿಂದ ಅವಳು ಆ ತನ್ನ ಕುಮಾರನನ್ನು ತಾನು ಕುಳಿತಿದ್ದ ಕಟ್ಟಿಯ ಮೇಲೆಯೇ ಹಾಸಿ ಮಲಗಿಸಿ ತಾನು ಬೆಳಕುಮಾಡುವ ಪ್ರಯತ್ನವನ್ನು ನಡಿಸಿ, ಚಕಿಮುಕಿಯಿಂದ ಬೆಂಕಿಹೊತ್ತಿಸಿ ಗುಡಿಸಲಿನ ಯಾವದೊಂದು ಭಾಗದಲ್ಲಿ ತೊಯ್ಯದೆ ಇದ್ದ ಒಣ ಹುಲ್ಲನ್ನಷ್ಟು ಹುಡುಕಿ ಅದರಿಂದ ಪುಟಗೊಳಿಸಿ ದೀವಿಗೆ ಯನ್ನು ಹಚ್ಚಿ ಕುಟೀರದಲ್ಲಿಯ ವಸ್ತುಗಳನ್ನು ಸರಿಪಡಿಸಹತ್ತಿದಳು.

ರಾತ್ರಿ ಮೂರು ಪ್ರಹರಕ್ಕೆ ಬಂದ ವೇಳೆಯಾದರೂ ಸುತ್ತಲೂ ಕವಿದ ಮೋಡ ಗಳೆಲ್ಲವೂ ಹರಿದು ಬೈಲಾದ್ದರಿಂದ ಅದೇ ಚಂದ್ರಮನು ಪಶ್ಚಿಮಾಚಲವನ್ನು ಹತ್ತು ತ್ತಿದ್ದದರಿಂದ ಭೂಮಿಯಲ್ಲಿ ಅಲ್ಪ-ಸ್ವಲ್ಪ ಬೆಳಕು ಇತ್ತು. ಇಂಥ ಸಮಯದಲ್ಲಿ ತೇಕುತ್ತಲೂ, ಮುಗ್ಗುತ್ತಲೂ, ಬೀಳುತ್ತಲೂ, ಮತ್ತೆ ಸಾವರಿಸಿಕೊಂಡು ಏಳು ತ್ತಲೂ, ಓರ್ವ ನಡುಹರೆಯದವನು, ನಮ್ಮ ವಸುಂಧರಾ ರಾಣಿಯು ತನ್ನ ಪ್ರಿಯ ತಮನಮಾರ್ಗನಿರೀಕ್ಷಣಮಾಡುವದಕ್ಕೆಂದು ಹತ್ತಿಹೋಗಿದ್ದ ದಿನ್ನೆಯಮೇಲೆ ಹತ್ತಿ ನಿಂತು ಸುತ್ತುಮುತ್ತಲೂ ನೋಡುತ್ತ, ತನ್ನ ಗಾಬರಿಯ ಸ್ಥಿತಿಯಲ್ಲಿ ಸಮೀಪದ ಲ್ಲಿಯೇ ಇದ್ದ ಗುಡಿಸಲನ್ನು ಕಾಣದವನಾಗಿ, “ಅಯ್ಯೋ ದೇವರೆ, ಮಹಾರಾಜ ನನ್ನು ಎಲ್ಲಿಂದು ಹುಡುಕಲಿ? ಕಳೆದುಹೋದ ಮೂರು ವರ್ಷಗಳಿಂದಲೂ ಏಕ ಪ್ರಕಾರವಾಗಿ ಕಣ್ಣಲ್ಲಿ ಕಣ್ಣಿಟ್ಟು ಆ ನನ್ನ ಮಿತ್ರನನ್ನು ಹುಡುಕುತ್ತಿರುವೆ ನಲ್ಲವೆ? ಹೀಗಿದ್ದರೂ ಅವನ ಅಲ್ಪ-ಸ್ವಲ್ಪ ಸುಳುವಾದರೂ ನನಗೆ ಹತ್ತಲೊಲ್ಲದಲ್ಲ? ಮಿತ್ರ, ನಿನ್ನ ಅಂತರಾತ್ಮವೇ ಈ ಭೂಮಿಯಲ್ಲಿ ಇಲ್ಲದಾಯಿತೋ ಹೇಗೆ? ಹಾಗಾ ದರೆ ನಿನ್ನ ಸತೀಶಿರೋಮಣಿಯಾದ ವಸುಂಧರಾ ಮಾತೆಯೆಲ್ಲಿ? ಕುಮಾರ ಪ್ರದ ್ಯುಮ್ನನ ಹಾಗೂ ತಾರಾಕುಮಾರಿಯ ವೃತ್ತಾಂತವೇನು? ಅಥವಾ ನಿಮ್ಮ ನಾಲ್ಕೂ ಜನ್ಮಗಳು ಭೂಮಿಯಲ್ಲಿಲ್ಲವಾದವೇ? (ಸ್ವಲ್ಪವಿಚಾರಿಸಿ) ಛೇ ಹಾಗೆಂದೂ ಆಗಲಾರದು. ಮೂರು ದಿನಗಳ ಕೆಳಗೆ ನಾನು ನಿಮ್ಮನ್ನು ಶೋಧಿಸುತ್ತ ಬರುತ್ತಿ ರಲು ನನ್ನೋರ್ವ ಮಾರ್ಗ ಮಿತ್ರನು, ‘ಇದೇ ವಿಂಧ್ಯಾದ್ರಿಯ ಪೂರ್ವತುದಿಯ ದಕ್ಷಿಣಕ್ಕಿರುವ ಅರಣ್ಯದಲ್ಲಿ ಓರ್ವ ಅನಾಥನು ತನ್ನ ಸತಿ-ಸುತ-ಭಗಿನಿಯರೊಂದಿಗೆ ವಾಸಮಾಡಿರುವನು’ ಎಂದು ಹೇಳಿದ್ದರಿಂದ ಆ ಸಂಸಾರವು ನಿನ್ನದೇ ಎಂದು ಅರಿಸಿ ಅಂದಿನಿಂದ ರಾತ್ರಿಯಲ್ಲಿಯೂ ಹಗಲಿನಲ್ಲಿಯೂ ಒಂದು ಪ್ರಹರಕೂಡ ವಿಶ್ರಾಂತಿಯಿಲ್ಲದೆ ಕಂಡದ್ದು ತಿಂದು ಕಂಡಲ್ಲಿ ನೀರು ಕುಡಿಯುತ್ತ ಇಂದಿನ ಸಮಯ

ಹೊಡತತದಂತಹ ಮರಣಪ್ರಸಂಗಕ್ಕೂ ಎದೆಗೊಟ್ಟು ನೀವಿದ್ದ ಸ್ಥಳವನ್ನು ಹುಡುಕುತ್ತ ಅರಣ್ಯವೆಲ್ಲವನ್ನೂ ಸುತ್ತಿದ್ದಾಯಿತು. ಆದರೆ ಒಂದು ಗುಡಿಸಲಾದರೂ ನನ್ನ ದೃಷ್ಟಿಗೆ ಬೀಳಲೊಲ್ಲದಲ್ಲ! ಇನ್ನು ಹೇಗೆಮಾಡಲಿ? ಅಥವಾ ನಾನು ಜನ್ಮದಿಂದಿರುವ ವರೆಗೆ ನಿನ್ನ ಹಾಗೂ ನಿನ್ನ ಹೆಂಡಿರು ಮಕ್ಕಳ ದರ್ಶನಯೋಗವೇ ನನ್ನ ಲಭ್ಯದಲ್ಲಿಲ್ಲವೇ ಹೇಗೆ? ಮಿತ್ರಾ, ಏನು ಹೇಳಲಿ? ನೀನು ಜುಗಾರಿಯಂತಹ ಹೀನಕೃತ್ಯಕ್ಕೊಳಪಟ್ಟು ರಾಜ್ಯಭ್ರಷ್ಟನಾಗಿದ್ದರೂ ನಿನ್ನಂತಹ ಪರಮ ಮಿತ್ರನೂ, ಸಾಧುವೂ ಜಗತೀತಲದಲ್ಲಿ ಸಿಕ್ಕುವದು ದುರ್ಲಭವು. ಮಹಾರಾಯಾ, ವ್ಯಾಪಾರಕ್ಕೆ ಹೋದ ನಾನು ಉಜ್ಜಯಿನಿಗೆ ಬರುವವರೆಗಾದರೂ ಜನ್ಮ ನಿರ್ಧರಮಾಡಿಕೊಂಡು ಊರಲ್ಲಿಯೇ ನಿಲ್ಲಲಿಕ್ಕೆ ನಿನಗೆ ಅದಾವ ದುಷ್ಟನು ಬೇಡವೆಂದನು? ಅಥವಾ ನನ್ನಲ್ಲಿ ನಿನಗೆ ಏನಾದರೂ ಕೊರತೆ ಇತ್ತೊ ಹೇಗೆ? ನಿನ್ನನ್ನೂ ನಿನ್ನ ಹೆಂಡಿರು-ಮಕ್ಕಳನ್ನೂ ಹಾಗು ನಿನ್ನ ಪ್ರಿಯ ಭಗಿನಿಯನ್ನೂ ಪ್ರತ್ಯಕ್ಷ ಹೂಗಳಂತೆ ಪರಿಪಾಲಿಸಿ, ನಿನ್ನ ತಂದೆಯ ಆಜ್ಞಾನುಸಾರವಾಗಿ ನಿನ್ನ ಸಹೋದರಿಯ ಲಗ್ನವನ್ನು ಸಹ ನಿನ್ನ ಶೀಲಕ್ಕೆ ತಕ್ಕ ಮರ್ಯಾದೆಯಿಂದ ಮಾಡುವ ಸಾಮರ್ಥ್ಯವೂ ನನ್ನಲ್ಲಿ ಇತ್ತಲ್ಲ! ನಿಮ್ಮಂಥ ಮಹಾ ಭಗವದ್ಭಕ್ತರನ್ನೂ ಸತ್ಯಾಗ್ರಹಿಗಳನ್ನೂ ತೊಲಗಿ ಜೀವಿಸುವದಾಗದೆ ನನ್ನ ಯಾವತ್ತೂ ಐಶ್ವರ್ಯದ ಮೇಲೆಯೂ ಸಂಸಾರದ ಮೇಲೆಯೂ ತಿಲಾಂಜಲಿಯನ್ನು ಬಿಟ್ಟು ಹೊತ್ತಿಗೆ ಸರಿಯಾಗಿ ಅನ್ನವಿಲ್ಲದಿದ್ದರೂ ಉಪವಾಸದಂತಹ ಕಷ್ಟಗಳನ್ನು ಸಹ ಅನುಭವಿಸುತ್ತ ಸಾವಿರಾರು ಹಳ್ಳಿ-ಶಹರಗಳನ್ನೂ, ಗಿರಿಕಂದರಗಳನ್ನೂ, ಅರಣ್ಯಗಳನ್ನೂ ಎಡೆಬಿಡದೆ ಮೂರುವರ್ಷಗಳಿಂದಲೂ ಸುತ್ತುತ್ತಿರುವೆನಲ್ಲವೆ? ಅಯ್ಯೊ!" ಎಂದು ಇನ್ನೂ ಏನೇನೋ ಅನ್ನಬೇಕೆನ್ನುವಷ್ಟರಲ್ಲಿ ನಡೆದು ಬೇಸತ್ತವನೂ ಪ್ರಚಂಡ ವೃಷ್ಟಿಯ ಆಘಾತಕ್ಕೆ ಸಿಕ್ಕವನೂ ಆದ್ದರಿಂದ ಅವನಿಗೆ ಬವಳಿ ಬಂದು ಆತನು ನಿಲ್ಲುವದಾಗದೆ ತಲೆಗೆ ಕೈಹಚ್ಚಿಕೊಂಡು ನೆಲಕ್ಕೆ ಕುಳಿತನು.

ಪ್ರಿಯವಾಚಕರೆ, ನೋಡಿದಿರಾ ಮಿತ್ರತ್ವದ ಮಹತ್ವವನ್ನು? ತನ್ನ ಮಿತ್ರನಾದ ರಾಜನೋರ್ವನು ತನ್ನ ದುಷ್ಕೃತ್ಯದಿಂದಲೇ ತನಗೆ ಹೊತ್ತುಬಂದು ದೇಶಭ್ರಷ್ಟನಾದುದಕ್ಕೆ ಅಂಥವನ ಸಲುವಾಗಿಯೇ ತನ್ನ ಯಾವತ್ತೂ ಐಶ್ವರ್ಯದ ಹಾಗು ಸಂಸಾರ ಯಾತ್ರೆಯಮೇಲೆ ತುಲಸೀ ಪತ್ರವನ್ನಿಟ್ಟು ಕೇವಲ ಅವನಿಗಾಗಿ ಅನೇಕ ಕಷ್ಟಗಳನ್ನು ಅನುಭವಿಸುತ್ತ ಜನ್ಮದ ಪರಿವೆ ಇಲ್ಲದವನಾದ ಇವನ ಮಿತ್ರತ್ವವನ್ನು ನೋಡಿದಿರಾ? ಭಾಪು! ಭಾಪು! ಇದ್ದರೆ ಇಂಥ ಮಿತ್ರನಿರಬೇಕು. ಮಿತ್ರನ ಸಂಕಟವನ್ನರಿತು ಅವನಿಗೆ ನೆರವಾಗಬೇಕೆಂದು ಹೆಣಗುವವನೇ ಮಿತ್ರನು. ಇರಲಿ. ಇಂದಿನ ಜಗತ್ತಿನಲ್ಲಿಯ ಮಿತ್ರರಿಗೂ ಇವನಿಗೂ ಎಷ್ಟು ಅಂತರವನ್ನು ಕಲ್ಪಿಸುಪಿರೊಕ್ಕೀರು? ಇವನ್ನು ತುಲನೆ ಮಾಡಲು ಲೇಖಕನಾದ ನನಗಂತೂ

ಸಾಧ್ಯವಿಲ್ಲವು. ಇನ್ನು ಅಂತರಗಕ್ಕಂದರೆ, ಜ್ಞಾನಿಗಳು ' ಭೂವ್ಯಾಕಾಶಗಳಷ್ಟು ' ಎಂದು ಸಾಮ್ಯವನ್ನು ಕೊಡುತ್ತ ಬಂದಿರುವರು. ಅಂದರೆ ಅವರಿಗೆ ಅದೇ ಮಹತ್ತರವಾಯಿತು. ಆದರೆ ಇಂತಹ ಸಾಮಾನ್ಯವನ್ನು ಕೊಡುವದಕ್ಕೆ ಕೂಡ ನನ್ನ ಲೇಖಣಿಗೆ ಧೈರ್ಯವಿಲ್ಲವಾಗಿದೆ. ಅಂದರೆ ' ಈಗಿನ ಮಿತ್ರರೆಂದರೆ ಮಿತ್ರರಲ್ಲವೆ? ಶತ್ರುಗಳೇ ? ' ಎಂದು ನಿಮ್ಮ ಪ್ರಶ್ನೆಯು ಉದ್ಭವಿಸಬಹುದು. ಹಾಗೇನೂ ನನ್ನ ಅಭಿಪ್ರಾಯವಿಲ್ಲ. ಆದರೂ ಸಾಮಾನ್ಯವಾಗಿ ಈಗಿನ ಜನರ ಮಿತ್ರುತ್ವವು ಐಶ್ವರ್ಯವನ್ನವಲಂಬಿಸಿರುವದೆಂದು ಅವಿಚ್ಛಿನ್ನವಾಗಿ ಹೇಳಬಹುದು. ಆದರೆ ಅದೇ ಐಶ್ವರ್ಯವು ಅಳಿದ ಮರುದಿನವೇ ಅವನ ಸಮಾಚಾರವನ್ನು ತೆಗೆದುಕೊಳ್ಳಲು ನಾಯಿ ಸಹ ಹಿಂದುಮುಂದೆ ನೋಡುವವಂತೆ! ಇದು ಅಹುದೋ ಅಲ್ಲವೊ ? ಎಂಬದರ ನಿರ್ಣಯವನ್ನು ವಾಚಕ ಮಹಾಶಯರೇ ಪಂಚರಾಶಿಯನ್ನು ಹಾಕಿ ನೋಡಿಕೊಳ್ಳಬಹುದು. ಹಾಗಂತಲೇ ' ಹಣವಿಲ್ಲದವನ ಬಾಳ್ವೆ ಹೆಣಕ್ಕಿಂತಲೂ ಅಜೆಗೆ ' ಎಂಬ ಗಾದೆಯಾಗಿರುವದು. ಈ ತೆರದ ಮಿತ್ರನು ಈಗ ಬಂದಿಷ್ಟ ನಮ್ಮ ಅಪರಿಚಿತನಿಷ್ಟಿಲ್ಲವೆಂಬದು ಅವನ ಬಾಯಿಯಿಂದ ಹೊರಟ ಶಬ್ದಗಳಿಂದಲೇ ನಿಮಗೆ ತಿಳಿದಿರಬಹುದು. ಇರಲಿ.

ಕಂಣಿಗೆ ಕತ್ತಲು ಕವಿದಂತಾಗಿ ಆತನು ಸ್ವಲ್ಪವೇಳೆ ಸುಮ್ಮನೇ ಕುಳಿತು, ತರುವಾಯ ಅತ್ತಿತ್ತ ಆಶಾಮುದ್ರೆಯಿಂದ ಸುತ್ತಲೆಲ್ಲವೂ ನೋಡುತ್ತಿರಲು ಪಶ್ಚಿಮ ದಿಕ್ಕಿನ ಎಡಮೂಲೆಯಲ್ಲಿ ದೀಪ ಪ್ರಕಾಶವೊಂದು ಕಂಡಂತಾಗಿ ಪುನಃ ಕಾಣದಾಯಿತು. ಆಗಲವನು ಚಕಿತನಾಗಿ, ' ಇತ್ತೀನೋ ದೀಪವು ಕಂಡು ಮಾಯವಾಯಿತಲ್ಲ! ಇದೇ ನಿಟ್ಟಿಗೆ ನನ್ನ ಪ್ರಿಯ ಮಿತ್ರನ ಕುಟೀರವಿರಬಹುದೆ ? ' ಎಂಘು ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತ ಆ ಬೆಳಕು ಬಂದ ನಿಟ್ಟಿಗೆ ಹೋಗುತ್ತಲು ಪ್ರಕಾಶವು ಹೆಚ್ಚು ಹೆಚ್ಚು ಕಾಣಹತ್ತಿ ಕಡೆಗೆ ಕುಟೀರವೇ ಅವನ ಕಣ್ಣಿಗೆ ಬಿತ್ತು. ಆಗ ಅವನಿಗಾದ ಆನಂದವನ್ನು ವರ್ಣಿಸುವ ಸಾಮರ್ಥ್ಯವು ಚತುರ್ಮುಖ ಬ್ರಹ್ಮನಿಗಲ್ಲದೆ ನನ್ನಂತಹ ಬಡಲೇಖಕನಿಂದ ಸಾಧ್ಯವಿಲ್ಲವು. ಇದೆಲ್ಲವೂ ಇರಲಿ. ಇಂತಹ ಅಪರಾತ್ರಿಯಲ್ಲಿ ಪ್ರಾಪ್ತನಾಗಿದ್ದ ಈ ಮನುಷ್ಯನು ಯಾರು ? ರಾಜನಿಗಾಗಿ ಇವನು ಇಷ್ಟೊಂದೇಕೆ ಹಚ್ಚಿಕೊಂಡು ಕೊರಗುತ್ತಿರುವನು ? ಇವನಿಗೂ ಮಹಾರಾಜನಿಗೂ ಸಂಬಂಧವೇನು ? ಮುಂತಾದ ವಿಷಯಗಳನ್ನು ತಿಳಿದುಕೊಳ್ಳಲು ನಮ್ಮ ವಾಚಕರು ಆತುರ ಪಡುತ್ತಿರಬಹುದು, ಸ್ವಲ್ಪ ತಡೆಯಿರಿ. ನಿಮ್ಮಗಳಿಗೆ ಇವನ ಸಮಗ್ರ ವೃತ್ತಾಂತವನ್ನರುಹಿ ಪರಿಚಯಮಾಡಿಕೊಡುವೆನು.

( ಮುಂದೆ ಸಾಗುವದು. )

ಕನ್ನಡ ಮಾತೆಯ ಸಂದೇಶವನ್ನು ಸಾರಲು ಸಾವಿರಾರು ಮುಖಗಳಿವೆ. ಹಣಕಾಸಿನ ಯೋಚನೆ ನಮಗನವಶ್ಯಕ. ಪಂಡಿತರ ನೆರವು, ಕಲಾವಿದರ ಸಹಾಯ ಇದ್ದರೆ ಸಾಕು. ಅಧ್ಯಕ್ಷ ಕಾರ್ಯದರ್ಶಿ ಪದವಿಗಳು ನಾಮಮಾತ್ರವಾದವು. ಸೇವಾಜೀವನದಲ್ಲಿ ಎಲ್ಲರೂ ಒಂದೆ. ಒಮ್ಮನಸ್ಸಿನಿಂದ ಕಾರ್ಯಭಾರ ನಡೆಯಿಸಿದರೆ ಯಾವುದೂ ಅಸಾಧ್ಯವಿಲ್ಲ.

ಶ್ರೀ. ಎಂ. ನಂಜುಂಡ ಶಾಸ್ತ್ರಿಗಳು.

# ನಮ್ಮ ಮಾತು.

ಪಂಡಿತ, ಪಾಮರ, ಬಡವ, ಬಲ್ಲಿದ, ನಾಗರಿಕ, ನಾಡಾಡಿ ಎಂಬ ಭೇದವನ್ನಲ್ಲಗಳೆದು ಕನ್ನಡ ಜೀವಾಳವು ಕನ್ನಡಿಗರಿಗಾಗಿ ಕನ್ನಡಿಸಲ್ಪಡಬೇಕಾಗಿದೆ. ಹಾದಿ ಬಹಳ ಸುತ್ತು ಸುತ್ತು ಎನಿಸ ಬಹುದಾದರೂ ಎಲ್ಲವನ್ನೂ ಸುತ್ತದೆ ಗತಿಯಿಲ್ಲ. ರೂಢಶಾಸ್ತ್ರ ಸಂಕುಚಿತ ದೃಷ್ಟಿಯು ಹೋಗಬೇಕು. ಹೃದಯದ ವಿಶಾಲಮಾರ್ಗವು ತೆರೆಯಬೇಕು. ಮೈಸೂರ, ಧಾರವಾಡ, ಮಂಗಳೂರು ಎಂಬ ಭೇದವಡಗಿ ಹಳ್ಳಿ-ಪಳ್ಳಿಗಳಲ್ಲಿಯೂ ಹೆಣ್ಣು-ಗಂಡು ಎಲ್ಲರೂ ಒಂದೇ ಕನ್ನಡವನ್ನಾಡಬೇಕು. ಆ ಕನ್ನಡದ ಬೀದಿಗೆ ಈ ಕನ್ನಡವು ಹಾದಿ.

ಶ್ರೀಮನ್ ಜೇಂದ್ರೆ, ದತ್ತರಾಯರು.

# ಸಂದೇಶಗಳು.

**ಗುಂಜಾರವ**— ಇತ್ತಲಾಗಿ ಕರ್ನಾಟಕ ಸಾಹಿತ್ಯ ನಭೋಮಂಡಲದಲ್ಲಿ ನಿಯತಕಾಲಿಕ ತಾರಾಗಣದೊಳಗೆ ಮನೋಹರವಾಗಿ ಮಿನುಗುತ್ತಲಿರುವ ಚಂದ್ರಿಕೆಯು ತಪೋಧನರೂ ಮಹಾಮಹಿಮರೂ ಆದ ಶಿರಪುರದ ಶ್ರೀ ಫಕೀರೇಶ್ವರ ಸ್ವಾಮಿಗಳವರ ಮಾನಸಪುತ್ರಿ; ಎಂಬುದು ಬಹುತರವಾಗಿ ಎಲ್ಲರಿಗೂ ತಿಳಿದ ಮಾತಾಗಿದೆ. ಸಮಾಜವನ್ನು ಅವನತಿಗೆಳೆವ ಅಧರ್ಮ, ಅನೀತಿ, ಅಶಿಕ್ಷತೆ ಮೊದಲಾದವುಗಳ ರೂಪದಲ್ಲಿ ಅವಿತುಕೊಂಡ ಕಾರ್ಗತ್ತಲೆಯನ್ನು ತಳ್ಳಲಿಕ್ಕೆಂದು ಮಹಾತ್ಮರ ಪವಿತ್ರಾಂತಃಕರಣದಿಂದ ಜನ್ಮತಳೆದ ಚಂದ್ರಿಕೆಯನ್ನು ನೋಡಿದೊಡನೆ, ಸಮಾಜಕಂಟಕರಾದ ಪ್ರಬಲ ದೈತ್ಯರನ್ನು ಸಂಹರಿಸಲು ದೇವತೆಗಳೆಲ್ಲರೂ ತಮ್ಮ ಶಕ್ತಿ ವಿಶೇಷಗಳನ್ನು ಒಟ್ಟುಗೂಡಿಸಿ 'ಶಕ್ತಿ' ಎಂಬ ಸಮರ್ಥವಾದ ದೈವತವನ್ನು ಸೃಷ್ಟಿಸಿದ ಸಂಗತಿಯು ಸ್ಮರಿಸುವದು. ಅಭ್ಯಂತರವೆಂದರೆ, ದೈತ್ಯಹನನಕ್ಕಾಗಿ ಜನ್ಮವೆತ್ತಿದ ಶಕ್ತಿಯು ಉಗ್ರಸ್ವರೂಪಳು; ಆದರೆ ಸವಿನುಡಿಗಳಿಂದ ಸಮಾಜವನ್ನು ಸನ್ಮಾರ್ಗಕ್ಕೆಳೆವ ಚಂದ್ರಿಕೆಯು ಆಲ್ಹಾದಕರಳು, ನಿತಾಂತ ಮನೋಹರಳು. ಮಗುವಾದ ಚಂದ್ರಿಕೆಯ ಚಿನ್ನಾಟವನ್ನು ಜನನ ಕಾಲದಿಂದಲೂ ನಾನು ಕುತೂಹಲಪೂರ್ಣನಾಗಿ ನಿರೀಕ್ಷಿಸುತ್ತಿರುವೆನು. ಅದರಿಂದ ನನಗಾಗುವ ಆನಂದವು ಹೇಳಲಿಕ್ಕೆ ಬಾರದು. ಅದು ಸ್ವಸಂವೇದ್ಯವಾದದ್ದು. ಹಸುಮಗುವಿನ ಅದರಲ್ಲಿಯೂ ದೈವೀ-ಪ್ರಭಾವದ ಮಗುವಿನ ಬಾಲಲೀಲೆಗಳೂ ತೊದಲ್ನುಡಿಗಳೂ ಯಾರನ್ನು ತಾನೆ ಆನಂದಗೊಳಿಸಲಾರವು! ಚಂದ್ರಿಕೆಯ ಧರ್ಮಕ್ಷೇತ್ರವು ವೀರಶೈವ ಸಮಾಜದ ಮಟ್ಟಿಗೆ ಮರ್ಯಾದಿತವಾದಂತೆ ತೋರಿದರೂ ಕೂಡ ಸಾಮಾಜಿಕ, ನೈತಿಕ, ಕಾರ್ಯಕ್ಷೇತ್ರಗಳು ಕರ್ನಾಟಕ ಭಾಷಾಮಾತೆಯ ಸುಪುತ್ರರು ವಾಸಿಸಿರುವವರೆಗೂ ವಿಸ್ತೃತವಾಗಿವೆ 'ಅದಕ್ಕಾಗಿ ಈ ಮುದ್ದುಮಗುವು ಅಖಿಲ ಕನ್ನಡಿಗರ ವಾತ್ಸಲ್ಯಕ್ಕೂ ಜೋಪಾಸನೆಗೂ ಪಾತ್ರವಾಗಿದೆ. "ಹಣ್ಣಿನ ಪ್ರಭಾವವು ಹೀಚಿಯಲ್ಲಿ" ಎಂಬಂತೆ, ಪ್ರಗತಿ ಪಥವನ್ನಾಕ್ರಮಿಸುವ ಔತ್ಸುಕ್ಯದಿಂದಲೂ ತದನುಗುಣವಾದ ಚಟುವಟಿಕೆಗಳಿಂದಲೂ, ಚಂದ್ರಿಕೆಯ ಸರ್ವಾಂಗ ಸುಂದರವಾದ ಭಾವಿ ಸಂಸಾರಯಾತ್ರೆಯನ್ನು ಸಹಜವಾಗಿ ಊಹಿಸಬಹುದು. ದೈವೀಪ್ರಭಾವದಿಂದ ಜನ್ಮವೆತ್ತಿದ ಮಗುವು ತನ್ನ ಅವತಾರ ಕಾರ್ಯವನ್ನು ಕೊನೆಗಾಣಿಸುವದು ಸತ್ಯ ಸಂಗತಿಯಾದಾಗ್ಯೂ ನಮ್ಮ ಸುಖಕ್ಕಾಗಿಯೂ ಘನತೆಗಾಗಿಯೂ "ಚಂದ್ರಿಕೆಯು ಚಿರಂಜೀವಿಯಾಗಲಿ" ಎಂದು ಹಾರೈಸುತ್ತ ಅವಳನ್ನು ಎತ್ತಿ ಮುದ್ದಾಡುವದು ಮಾನವರಾದ ನಮ್ಮಗಳ ಸ್ವಭಾವ ಧರ್ಮವಲ್ಲವೆ?

मंगळानि भवन्तु ।

ಬೆಳ್ಳಟ್ಟಿ
ತಾ. ೧೪—೧—೩೩

ಕರ್ನಾಟಕ ಸಾಹಿತ್ಯ ಮಧುಪ,
ಕಾಶೀನಾಥ.

ಕನ್ನಡ ಭಾಷೆಯ ಸೇವೆಗಾಗಿ ತಾವು ಪ್ರಯತ್ನಿಸುತ್ತಿರುವದನ್ನು ಕೇಳಿ ಸಂತೋಷವಾಯಿತು. ಕನ್ನಡವು ಹಿಂದೆ ಬಿದ್ದಿರುವ ಪ್ರಾಂತದಲ್ಲಿ ಅದನ್ನು ಮುಂದೆ ತರಲು ದುಡಿಯುತ್ತಿರುವ ನೀವು ನಮ್ಮೆಲ್ಲರ ಕೃತಜ್ಞತೆಗೂ ಅಭಿನಂದನಕ್ಕೂ ಪಾತ್ರರಾಗಿದ್ದೀರಿ. ತಾವು ಕೈಗೊಂಡಿರುವ ಕಾರ್ಯದಲ್ಲಿ ನನ್ನ ಕೈಲಾಗಬಹುದಾದ ಸಹಾಯ ಮಾಡಲು ನಾನು ಯಾವಾಗಲೂ ಸಿದ್ಧನಿರುತ್ತೇನೆ. ತಮ್ಮ ಉದ್ಯಮಕ್ಕೆ ಜನರ ಬೆಂಬಲವೂ ಈಶನ ಅನುಗ್ರಹವೂ ದೊರೆಯಲೆಂದು ಆಶಿಸುತ್ತೇನೆ.

ಕೃಷ್ಣಮೂರ್ತಿಪುರಂ
ಮೈಸೂರು
ತಾ. ೧೮—೧—೩೫

ಟಿ. ಎಸ್. ವೆಂಕಣ್ಣಯ್ಯ

---

## ವೀರಶೈವ ಚಂದ್ರಿಕೆಯ ಪುಸ್ತಕ ಭಾಂಡಾರ.

---

ಚಂದ್ರಿಕೆಯ ಮಂಡಲದ ವತಿಯಿಂದ ವಾಚನಾಲಯವನ್ನು ಸ್ಥಾಪಿಸಲಾಗಿದೆ ಕನ್ನಡ ಗ್ರಂಥ ಕರ್ತೃಗಳು, ವಿಮರ್ಶೆಗಾಗಿ ಕಳುಹತಕ್ಕ ಪುಸ್ತಕಗಳನ್ನು ೫ ಕಳುಹ ಬೇಕು. ಅಂದರೆ ಅದರ ವಿಮರ್ಶೆ ಮಾಡಿ ಜಾಹೀರಾತು ಹಾಕುವೆವು. ಇದರಿಂದ ವಾಚನಾಲಯಕ್ಕೆ ಸಹಾಯವಾಗುವದು. ವಾಚನಾಲಯವು ಧರ್ಮಾರ್ಥ ಇರುವದು. ಗ್ರಂಥಕಾರರೆಲ್ಲರೂ ಸಹಾಯಮಾಡಿ ಕೀರ್ತಿ ಪಡೆಯಬೇಕೆಂಬ ನಮ್ಮ ಆಶೆ.

ಸಂಪಾದಕರು

---

ಈ ಮಾಸಪತ್ರಿಕೆಯ ಮೊದಲನೇ ಸಂಪುಟದ ೮ ನೇ ಸಂಚಿಕೆಯು ನಮ್ಮ ಕೈಗೆ ಬಂದು ಸೇರಿದೆ. ನೈತಿಕ, ಸಾಮಾಜಿಕ, ಧಾರ್ಮಿಕ ವಿಷಯಗಳನ್ನು ಪ್ರಕಟಿಸುವದೇ ಪತ್ರಿಕೆಯ ಧ್ಯೇಯವು. ಇದರಲ್ಲಿ ಮನೋರಂಜಕವಾದ ವಿಷಯಗಳಿವೆ. ಉತ್ತಮ ತರದ ಸಂಭಾಷಣೆಗಳು ಅನ್ಯಾಪದೇಶ ಕಾದಂಬರಿ ಈ ರೂಪದ ಬರಹಗಳಿವೆ. ಒಂದು ಐತಿಹಾಸಿಕ ಚರ್ಚೆ ಇದೆ. ಕರ್ನಾಟಕ ಸಂಸ್ಕೃತಿಯನ್ನು ಉದ್ಬೋಧಗೊಳಿಸುವದಕ್ಕೆ ಯತ್ನಿಸುತ್ತಿರುವ ಈ ಪತ್ರಿಕೆಯು ಚಿರಕಾಲ ಬಾಳಲೆಂದು ನಮ್ಮ ಹಾರೈಕೆ.

ವೈ. ಸುಬ್ಬರಾವ,
ಅಧ್ಯಾತ್ಮಪ್ರಕಾಶ ಕಾರ್ಯಾಲಯ,
ಬೆಂಗಳೂರು.

# ಕೃತಜ್ಞತೆ

ಈ ವರೆಗೆ ಚಂದ್ರಿಕೆಯ ಅಭಿವೃದ್ಧಿಗಾಗಿ ಸಂದೇಶಗಳನ್ನು ಹಾಗು ಸದಭಿಪ್ರಾಯಗಳನ್ನು ಕೊಟ್ಟು ನಮ್ಮನ್ನು ಋಣಿಯನ್ನಾಗಿ ಮಾಡಿದ ಮಹಾಜನಗಳಲ್ಲಿ ನಾವು ತುಂಬಾ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತೇವೆ.

—ಸಂಪಾದಕರು.

ಮ|| ರಾ|| ರಾ|| ಗಳಾದ

| | | |
|---|---|---|
| ೧ | ಜೇರಿಗೆ ಬಸಲಿಂಗಪ್ಪನವರು | ಬೆಂಗಳೂರು. |
| ೨ | ನೀಲಕಂಠ ದೇಶಿಕರು ಚಿಕ್ಕೋಡಿ | ಹುಬ್ಬಳ್ಳಿ |
| ೩ | ಪ್ರೋಫೆಸರ ಗೋಕಾಕ ವಿನಾಯಕರಾಯರು | ಪುಣೆ |
| ೪ | ಕವಿವರ್ಯ ಬೇಂದ್ರೆ ದತ್ತರಾಯರು | ,, |
| ೫ | ಪ್ರೋಫೇಸರ ಮುಗುಳಿ ರಂಗರಾಯರು | ಸಾಂಗಲಿ |
| ೬ | ಬಿ. ಶಿವಮೂರ್ತಿಶಾಸ್ತ್ರಿಗಳು ಕೀರ್ತನ ಕೇಸರಿ | ತುಮಕೂರು |
| ೭ | ವಿದ್ವಾನ್ ಬಿ. ಶಂಕರಭಟ್ಟರು | ಮಂಗಳೂರು |
| ೮ | ಕೀರ್ತನ ಕೇಸರಿ ರಾಮಶಾಸ್ತ್ರಿಗಳು | ಮುಳಗುಂದ |
| ೯ | ಕೀರ್ತನ ಕೇಸರಿ ಕೇಶವದಾಸರು | ಬೇಲೂರು |
| ೧೦ | ಎನ್. ಶಿವರಾಮಶಾಸ್ತ್ರಿಗಳು | ಬೆಂಗಳೂರು |
| ೧೧ | ಆರ್. ವ್ಹಿ. ಜತಾರ | ಧಾರವಾಡ |
| ೧೨ | ಪಂಡಿತ ವೇಂಕಟರಾಯರು | ಬೆಳಗಾವಿ |
| ೧೩ | ಚನಬಸಪ್ಪನವರು ಹಾಲಪ್ಪನವರ | ಹಾವೇರಿ |
| ೧೪ | ಎಮ್. ವ್ಹಿ. ಸಿ. ( ಸಾಹಿತ್ಯ ಪರಿಷತ ಆಫೀಸು) | ಬೆಂಗಳೂರು |
| ೧೫ | ಶ್ರೀಮತಿ ಆರ್ ಕಲ್ಯಾಣಮ್ಮಾ | ,, |
| ೧೬ | ನಾರಾಯಣ ಬಿ. ಎಮ್ ಕಲ್ಯ | ಶಿರ್ವ |
| ೧೭ | ಬಿ. ನರಸಪ್ಪಾ | ಮಂಗಳೂರು |
| ೧೮ | ಯು. ವ್ಹಿ. ಶೆಣೈ | ಮುಲ್ಕಿ |
| ೧೯ | ವೈ. ಸುಬ್ಬರಾವ | ಬೆಂಗಳೂರು |

# ವೀರಶೈವ ಚಂದ್ರಿಕೆ ಆಫೀಸ ಶಿರಹಟ್ಟಿ

## ಚಂದ್ರಿಕೆಯ ವಾಚನಾಲಯಕ್ಕೆ ವಿನಿಮಯವಾಗಿ ಬರುವ ಮಾಸಿಕ ಪತ್ರಗಳು-ವಾರಪತ್ರಗಳು—

| | | | |
|---|---|---|---|
| ೧ | ಸದ್ಬೋಧ ಚಂದ್ರಿಕೆ | ಆಗಡಿ-ಆನಂದವನ | ೩—೦—೦ |
| ೨ | ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆ | ಹಾರ್ಡಿಂಜರೋಡ ಬೆಂಗಳೂರು | ೪—೦—೦ |
| ೩ | ಬಡವರ ಬಂಧು | ಹಂಪನಕಟ್ಟೆ ಮಂಗಳೂರು | ೧—೪—೦ |
| ೪ | ವಿಶ್ವ ಭಾರತಿ | ಬೆಂಗಳೂರು ಸಿಟಿ | ೩—೮—೦ |
| ೫ | ಕಥೆಗಾರ | ,, | ೧—೪—೦ |
| ೬ | ಭಾರತಿ | ಮುಲ್ಕಿ ದ. ಕ. | ೨—೦—೦ |
| ೭ | ಕಥಾಕುಂಜ | ಮಾರುತಿ ಓಣಿ ಬೆಳಗಾವಿ | ೨—೪—೦ |
| ೮ | ಶಿಕ್ಷಕ ಬಂಧು | ಹುಬ್ಬಳ್ಳಿ | ೨—೦—೦ |
| ೯ | ಕಲಾಚಂದ್ರ | ಕಾರ್ಕಳ ದ. ಕ. | ೧—೪—೦ |
| ೧೦ | ಕರ್ನಾಟಕ ಬಂಧು | ಮುಂಬಯಿ ನಂ. ೪ | ೧—೮—೦ |
| ೧೧ | ವಿಕಟವಿನೋದಿನಿ | ಬೆಂಗಳೂರು ಸಿಟಿ | ೧—೫—೦ |
| ೧೨ | ಶ್ರೀ ದತ್ತಾತ್ರೇಯ ಗ್ರಂಥ-ಮಾಲಾ | ಶೀರ್ವ ಉಡಪಿ ದ. ಕಾ. | ೨—೪—೦ |
| ೧೩ | ಸ್ವದೇಶಿ ಪ್ರಚಾರಕ | ಮಂಗಳೂರು ದ. ಕ. | ೧—೪—೦ |
| ೧೪ | ವಿಕಟಮಾನ | ಹೊಳೆನರಸೀಪುರ ಹಾಸನ | ೧—೦—೦ |
| ೧೫ | ಸರಸ್ವತಿ | ಬೆಂಗಳೂರು | ೩—೦—೦ |
| ೧೬ | ಅಧ್ಯಾತ್ಮ ಪ್ರಕಾಶ | ,, | ೩—೦—೦ |

## ವಾರ ಪತ್ರಗಳು—

| | | | |
|---|---|---|---|
| ೧ | ಅರುಣೋದಯ | ಬೆಳಗಾವಿ | ೧—೮—೦ |
| ೨ | ರಾಜಹಂಸ | ಧಾರವಾಡ | ೧—೮—೦ |
| ೩ | ಬಸವರಾಜ | ಹಾವೇರಿ | ೧—೮—೦ |

## ಉತ್ತರ ಕರ್ನಾಟಕದ 'ಕರ್ನಾಟಕ ಸಂಘ' ಹಾಗೂ ವಾಚನಾಲಯಗಳ ಕಾರ್ಯದರ್ಶಿಗಳಲ್ಲಿ ವಿನಂತಿ.

ಕನ್ನಡ ಸಾಹಿತ್ಯ ಸೇವೆಗೈಯುವ ಉದ್ದೇಶದಿಂದ ನಾವಿಲ್ಲಿ 'ವೀರಶೈವ ಚಂದ್ರಿಕೆ' ಎಂಬ ಮಾಸಪತ್ರವೊಂದನ್ನು ಹೊರಡಿಸಿರುವೆವು. ಈ ಮೊದಲೇ [illegible] ಸಂಚಿಕೆಗಳು ಹೊರಬಿದ್ದಿವೆ. ಈ ಮುಂದೆ ನಮ್ಮ ಪತ್ರಿಕೆಯಲ್ಲಿ ಉತ್ತರ ಕರ್ನಾಟಕದಲ್ಲಿನ ಸಂಘಗಳ, ಹಾಗೂ ವಾಚನಾಲಯಗಳ ವತಿಯಿಂದ ಜರಗುವ ಕಾರ್ಯ ಕಲಾಪಗಳ ವಿಷಯವನ್ನು ಪ್ರಕಟಿಸಲಿರುವೆವು. ಆಯಾ ಸಂಘಗಳ ಕಾರ್ಯದರ್ಶಿಗಳು, ತಮ್ಮ ಸಂಘದ ಕಾರ್ಯ ಕಲಾಪದ ವಿಷಯಗಳನ್ನು ಬರೆದು ಕಳುಹಿಸಿ ಈ ಸುಸಂಧಿಯ ಲಾಭ ಪಡೆಯಬೇಕು.

ವೀರಶೈವ ಚಂದ್ರಿಕೆ ಕಾರ್ಯಾಲಯ
ಶಿರಹಟ್ಟಿ. ಜಿ. ಧಾರವಾಡ. } ಸಂಪಾದಕರು.

ವಾರ್ಷಿಕ ಚಂದಾ ೧-೮-೦, ಅಂಚೇ ವೆಚ್ಚ ಸೇರಿ ೧-೧೧-೦.
ಬಿಡಿ ಸಂಚಿಕೆ ೦-೩-೦.

ಶಿ ರ ಹ ಟ್ಟಿ
ಶ್ರೀ ಫಕ್ಕೀರೇಶ್ವರ ಸ್ವಾಮಿಗಳ ಕೃಪಾಛತ್ರದಲ್ಲಿ ನಡೆದ

# ಶ್ರೀ ವೀರಶೈವ ಚಂದ್ರಿಕೆ.

ನೈತಿಕ, ಸಾಮಾಜಿಕ, ಧಾರ್ಮಿಕ ವಿಷಯುಗಳಿಂದೊಡಗೂಡಿದ
ತಿಳಿಗನ್ನಡ ಮಾಸಪತ್ರಿಕೆ.

ಹುಟ್ಟು : ಶಕೆ ೧೮೫೭. ಶ್ರೀ ಬಸವ ಜಯಂತಿ.

| ಸಂಪುಟ | ಹೋಳಿಯ ಹುಣ್ಣಿವೆ. | ಸಂಚಿಕೆ |
|---|---|---|
| ೧. | ೧೯ — ೩ —೧೯೩೫. | ೧೧. |

ಕಂದ

ತನ್ನಯನಾಡ-ನಡೆನುಡಿಗ ।
ಳುನ್ನತಿಯಂ ಮಾಳ್ಪ ಕಜ್ಜ ಕಿನ್ನೆಣೆಯುಂಟೇ॥
ಕನ್ನಡದೇಳ್ಗೆಯು ಬಗೆಯಂ ।
ಕನ್ನಡಿಗರ್ ತಿಳಿದುಕೊಡಲಿದಕ್ಕಾಶ್ರಯ
ಮುಂ ॥೧॥

ಕಂದ

ಬಂದವರಂ ಬರಿಸದಿಹಂ ।
ಸಂದವರಂ ಸಂತವಿಸದನಹ ತಾಯ್ನುಡಿಯಂ॥
ವಂದಿಸದಿರುವಂ ಮನುಜನೊ! ।
ವಂಧ್ಯನೊ! ಕಾಣಿಳೆಗೆ ಪುಟ್ಟಿ ಫಲವೆನಿಸಿಹ
ನೋ! ॥೨॥

ಕವಿ- ವಾಜಪೇಯ ಶಿವಾನಂದಾರ್ಯರು.

ಒಂದು ಜನಾಂಗವು ಬದುಕಿಕೊಂಡಿರಬೇಕಾದರೆ ಅದಕ್ಕೊಂದು ಭಾಷೆ ಅಗತ್ಯ. ಅದು ಮನುಷ್ಯನ ನಿತ್ಯದ ಆಹಾರ ನಿದ್ರಾದಿ ಸಾಮಾನ್ಯ ವ್ಯವಹಾರಗಳಿಗೆ ಉಪಯುಕ್ತವಾಗುವದಷ್ಟೇ ಇದ್ದರೆ ಸಾಲದು. ಭಾಷೆಗೊಂದು ಬರಹ. ಬರಹದಲ್ಲುಳ್ಳ ಉತ್ತಮ ಗ್ರಂಥರಾಶಿ. ಗ್ರಂಥಗಳನ್ನು ಅನುಬಂಧಿಸುತ್ತಿರುವ ಜನರು, ಹಾಗಿದ್ದರೇ ಆ ಜನಾಂಗವು ಬಾಳನ್ನು ಕಾಪಾಡಿಕೊಂಡೀತು. ಹಾಗಿಲ್ಲದಿದ್ದರೆ ಜನರೊಳಗೆ ಪರಸ್ಪರ ವ್ಯವಹಾರಕ್ಕೆ ಕೊಡಕಾಗಿ ವಿಚಾರ ವಿನಿಮಯವು ನಿಂತು ಹೋಗಿ ಭಾವಗಳು ಅರಳದೆ ಆ ಜನಾಂಗವು ಬರಬರುತ್ತ ದುರ್ದೆಶೆಗೆ ತಗಲಿ ಸಂಸ್ಕಾರಗೆಟ್ಟು ಬದುಕಿ ಬದುಕದಂತಾಗಿದ್ದೀತು.

ಶ್ರೀ. ಪಂಜೆ ಮಂಗೇಶರಾಯರು,
ಬಿ. ಎ. ಎಲ್. ಟಿ., ಸಾಹಿತ್ಯ ಸಮ್ಮೇಲನದ ಅಧ್ಯಕ್ಷರು.

ಸಂಪಾದಕರು ಹಾಗು ಪ್ರಕಾಶಕರು :
ಆಲೂರ ಮುರಿಗೇಂದ್ರ ಶೆಟ್ಟರು.

ಕವಿತೆಯು ಜಗತ್ತಿನ ಪ್ರಕೃತಿಯ ಸ್ಫೂರ್ತಿಯಿಂದ ಬಗೆಯಲ್ಲಿ ರೂಪಗೊಳ್ಳುವ ಹೆಂಗಸಿನ ಚೆಲುವೆಳೆ ರೇಖೆಗಳ ಸ್ಪಷ್ಟ ಅನುಭವದ ಮೂಲಕ ಹೃದಯದಿಂದ ಹೊರಹೊಮ್ಮುವ ಮಧುರ ಮೋಹನ ಗಾಯನ. ಅದು ನಮ್ಮ ಆತ್ಮವಿಕಾಸತೆಯ ನೆಳಲು. "ರವಿ ಕಾಣದುದನ್ನು ಕವಿ ಕಾಣುವನು" ಎಂಬ ಲೋಕೋಕ್ತಿಯಲ್ಲಿ ಹೆಚ್ಚಿನ ಸತ್ಯಾಂಶವಿದೆ. ಕವಿಯ ಎದೆಗಡಲಿನ ಮಂಥನದಲ್ಲಿ ಸಹಾನುಭೂತಿಯಿಂದ ಮೂಡಿ ಬರುವ ನವನೀತವೇ ಸಾಹಿತ್ಯ. ಅವನ ಬಗೆಗನ್ನಡಿಯು ಸಾಮಾನ್ಯ ಜನಗಳಿಗೆ ಕಂಡುಬರದಿರುವ ಕಿರಿಯದಲ್ಲಿರುವ ಹಿರಿಯತನದ ರೂಪ, ರೇಖು, ಲಾವಣ್ಯ, ಶೀಲ, ಸ್ವಭಾವಗಳನ್ನು ಪ್ರತಿಬಿಂಬಿಸುತ್ತದೆ.

# ಪದ್ಯಸೀಮೆ.

ತಿಳಿದವರು ಪ್ರತಿಯೊಬ್ಬರು ಕವಿಗಳೇ ಎಂದು ಆಡುವರು. ಮಹಾತ್ಮರ ಹೃದ್ಗತವನ್ನರಿಯಲು ನಮ್ಮಲ್ಲಿಯೂ ಕೊಂಚ ಮಹತ್ತಿನ ಯೋಗ್ಯತೆ ಬೇಕೇ ಬೇಕು. ಎಂದು ಮಹನೀಯನೊಬ್ಬನು ಅಭಿಪ್ರಾಯ ಪಟ್ಟಿದ್ದಾನೆ.

ಶ್ರೀ. ಎಂ. ನಂಜುಂಡ ಶಾಸ್ತ್ರಿಗಳು
ಮೈಸೂರು.

ಸಿರಿಗನ್ನಡಂ ಗೆಲ್ಗೆ

# ವೀರಶೈವ ಚಂದ್ರಿಕೆ.

ಬಯಲುಮೂರ್ತಿಯಾಗಿ ನಿಂದನೊಬ್ಬಶರಣ. ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ. ಆತನ ಶಾಂತಿಸ್ಥೈರಣೆಯಿಂದ ಹುಟ್ಟಿದಾತ ವಿಷ್ಣು. ಆತನ ಕೋಪಕ್ರೋಧದಿಂದ ಹುಟ್ಟಿದಾತ ರುದ್ರ. ಈ ಮೂರು ಸೀಠವಂತಿರಲಿ. ಆ ಶರಣನ ನರಿದು ಶರಣೆನುತಿರ್ದೆನು ಕೂಡಲ ಸಂಗಮದೇವಾ. —ಶ್ರೀ ಬಸವೇಶ್ವರ.


| ಸಂಪುಟ ೧ | ಶ್ರೀಮನ್ನೃಪಶಾಲಿವಾಹನ ಶಕೆ ೧೮೫೭<br>ಹೋಳೀ ಹುಣ್ಣಿವೆ. | ಸಂಚಿಕೆ ೧೧ |
|---|---|---|


## ಪ್ರಾರ್ಥನಾ ಪದ್ಯ.

ರಾಗ— ಬಿಲಾವಲ ತಾಲ- ತ್ರಿಪುಟ

ಶಶಿಧರ ಪರಶಿವ ವ್ಯಾಲಮಾಲ ಭೋ ।
ಬಾ ಕರುಣಸಾರ ಗಡ ಬೀರು ಮುದವಾ ॥ ಪಲ್ಲ ॥

ಗಂಗಾಧರ ಭವ ಸಾಂಬ ಸದಾಶಿವ ।
ಅಂಗಜಾರಿ ಸುರ ಸುರಾದಿವಂದಿತ ॥ ೧ ॥

# ಪ್ರಾರ್ಥನಾ ಪದ್ಯದ ನೋಟೇಶನ್.

ರಾಗ- ಬಿಲಾವಲ ತಾಲ- ತ್ರಿವಟ ಮಾತ್ರಾ ೧೬

## ಅಸ್ತಾಯಿ

ಶ ಶಿ ಧ ರ ಪ ರ ಶಿ ವ ವ್ಯಾ ಽ ಲ ಮಾ ಽ ಲ ಭೋ ಃ
ನಿ ಧ ಪ ಮ ಗ ರಿ ಗ ರಿ ಸಾ ಽ ಸಾ ಗ ಪ ಮ ಗ ಮ
ಬಾ ಽ ಕ ರು ಣ ಸಾ ಽ ರ ಗ ಡ ಬಿ ಃ ರು ಮು ದ ವಾ
ಗ ಗ ಪ ಪ ನಿ ಧ ನಿ ಸಾ ಸಾ ರಿ ಸಾ ಧ ನಿ ಧಪ ಮ ಗ ||ಪ||

## ಅಂತರಾ

ಗ ಂ ಗಾ ಽ ಧ ರ ಭ ವ ಸಾ ಂ ಬ ಸ ದಾ ಽ ಶಿ ವ
ಗ ಗ ಪ ಽ ಪ ಪ ನಿ ಧ ನಿ ಸಾ ಸಾ ಽ ಸಾ ರಿ ಸಾ ಽ
ಅ ಂ ಗ ಜಾ ಽ ರಿ ಪು ರ ಸು ರಾ ಽ ದಿ ವ ಂ ದಿ ತ
ಮ ಗ ರಿ ನಿ ಸಾ ಸಾ ಸಾ ರಿ ಸಾ ನಿ ಧ ಪ ಧ ಪ ಮ ಗ ||೧||

## ತಾನುಗಳು

| | ಶ | ಶಿ | ಧ | ರ | ಪ | ರ | ಶಿ | ವ |
|---|---|---|---|---|---|---|---|---|
| ೧ | ಮಗ | ರಿಗ | ಪಧ | ನಿಸಾ | ನೀ | ಧಪ | ಮಗ | ರಿಗ |
| ೨ | ಧನಿ | ಧಪ | ಮಗ | ರಿಗ | ಪಮ | ಗರಿ | ಸಾರಿ | ನಿಸಾ |
| ೩ | ಸಾರಿ | ಗರಿ | ಗಪ | ಗಪ | ಧನಿ | ಧಪ | ಮಗ | ರಿಗ |
| ೪ | ಮಗ | ರಿಗ | ಪಧ | ನಿಸಾ | ಧನಿ | ಧಪ | ಮಗ | ರಿಸಾ |
| ೫ | ಧನಿ | ಸಾರಿ | ಗಮ | ಗರಿ | ಸಾನಿ | ಧಪ | ಮಗ | ರಿಸಾ |

ನಾರಾಯಣರಾವ ಬಿಜಾಪೂರ,
ಹಾರ್ಮೋನಿಯಮ್ ಮಾಸ್ಟರ
ಶಿರಹಟ್ಟಿ.

# ವೀರಶೈವ ಚಂದ್ರಿಕೆ.

ಲೇಖಕ— ಎಸ್. ಎನ್. ಕುಂಭಾರ (ಹರಭಟ್ಟ ಹಾಯಸ್ಕೂಲ ಕುಂದಗೋಳ.)

॥ ಕಂದ ॥

ವೀಣಾಪಾಣಿಯ ಪತಿಯಿಂ ।
ಮೇಣಚ್ಯುತನಿಂ ಮನುಮುನಿದಾನವಸುರರಿಂ ॥
ಬಣ್ಣಿಸಿಕೊಳ್ಳುವ ಸಾಂಬನೆ ।
ಜ್ಞಾನವ ನೀಡೆಂದು ಬೇಡಿಕೊಂಬೆನು ಸತತಂ ॥೧॥

ಭಾ ಮಿ ನಿ ಷ.

ರತಿಪತಿಯನು ದಹಿಸಿದಾತನು । ಪೃಥಿವಿಯೊಳ್ನೆಲಿಸಿರುವ ಭಾಷಾ ।
ರತುನಹಾರದ ಮಧ್ಯದೋಳ್ಕನ್ನಡವು ಥಳಥಳನೆ ॥
ಶತಗುಣಿತ ಭಾಸ್ಕರನ ತೇಜದಿ । ಗತಸಿರಿಯನುರೆ ಗಳಿಸಿಕೊಳ್ಳುತ ।
ಕ್ಷಿತಿಯೊಳಿಂದತಿ ವೈಭವದಿ ಮೆರೆಯುವದು ಯತಿಯಂತೆ ॥೨॥

ಶೈಲಸುತೆಯಧಿನಾಥಸಾಂಬನ । ಲೀಲೆಯಿಂದಲಿ ನನ್ನ ಕನ್ನಡ ।
ಬಾಲತನವನು ಕಳೆದು ತರುಣಾವಸ್ಥೆಯಲಿ ತಾನು ॥
ಕಾಲನಿಡುತಲೆ ಧೈರ್ಯದಿಂದಲಿ । ಕೀಳುವೈರಿಯ ಸದೆಬಡೆದು ನಿಜ ।
ತೋಳುತೊಡೆ ಚಪ್ಪರಿಸುತಾರ್ಭಟಿಸುತ್ತಲಿರುತಿಹನು ॥೩॥

ವರ ಶಿರಃಪುರದೊಳಗೆ ವಾಸಿಸಿ । ಉರೆ ದಯಾಕರನೆನಿಸಿ ಮೆರೆಯುವ ।
ಗುರು ಫಕೀರೇಶ್ವರನ ದಯದಿಂ ಹೊರಡುತಿರುವಂಥ ॥
ಸರಳಗನ್ನಡ ಮಾಸಪತ್ರಿಕೆ । ನೆರವಿನಿಂದಲಿ ಬುಧಜನರ ಮೇಣ್ ।
ಸರಸದಾಸಾಹಿತ್ಯಸೇವೆಯ ಗೈಯಲೆತ್ನಿಪುದು ॥೪॥

ಚಂದ್ರ ಬೆಳಗುವ ತೆರದಿ ನಭದೊಳು | ಚಂದ್ರಿಕೆಯು ಬೆಳಗುವಳು ಕನ್ನಡ |
ಅಂದದಿಂದಲೆ ಸೂಜ್ಞಜನಗಳ ಕರದಿ ವಿಧವಿಧದಿ ||
ಚಂದ್ರಿಕೆಯು ನಿರುತದಲಿ ತನ್ನಯ |
ಬಂಧುಚಂದಾದಾರರನ್ನಾ | ನಂದಿಸಲು ಹೆಣಗಾಡುತಿರುವಳು ಪ್ರೇಮದಿಂ
ಹೇಮಾ- ||೫||

ಧ್ರಿಯಲಿ ವಾಸಿಸುವವನ ದಯದಿಂ | ಧ್ಯೇಯವಿರುವದು ಚಂದ್ರಿಕಾಂಬೆಯ |
ತಾಯಿಸೇವೆಯ ಗೈಯ್ಯಬೇಕೆಂಬುವದು ಬಹುವಿಧದಿ ||
ಕಾಯಮನಧನದಿಂದ ಸರ್ವರು | ತಾಯಿನಾಡಿನ ಸೇವೆಮಾಡಲಿ |
ಜಯದ ಭೇರಿಯು ಸತತ ಮೊಳಗಲಿ ಆರ್ಯಭೂಮಿಯಲಿ ||೬||

ಕೆಲರು ಆಶ್ರಯದಾತರಾಗಿಯು | ಕೆಲರು ಚಂದಾದಾರರಾಗಿಯು |
ಹಲವು ಬಗೆಯಿಂ ನೆರವನೀಯುತ ಸಲಹಿ ಚಂದ್ರಿಕೆಯ ||
ಫಾಲನೇತ್ರನ ದಯದಿ ಚಂದ್ರಿಕೆ | ಎಲ್ಲ ಕನ್ನಡ ಜನರ ಕರದೊಳು |
ಲೀಲೆಯಿಂದಲಿ ಸೇರಿ ಸೆಳೆಯಲಿ ನಿರುತ ಪ್ರೇಮವನು ||೭||

---

## ಮೃಣ್ಮಯನಿಂದೆ ಚಿನ್ಮಯನೇ ದಿವ್ಯ !

---

ಜಗವನ್ನು ನಿರುಕಿಸಿದೆ | ಮುಗಿಲನ್ನು ಪರಿಕಿಸಿದೆ | ಪಾತಾಳವನು ನೋಡಿದೆ |
ಬಗೆಯ ಜಗ-ಮುಗಿಲು-ಪಾತಾಳಗಳು ಇವುಗಳಿಂ | ಕಡು ಭವ್ಯವೆಂದು ಬಗೆದೆ ||೧||
ಕಣ್ಮುಚ್ಚಿ ಮನ್ಮನವು | ತನ್ಮಯವು ತಾನಾಗಿ | ಚಿನ್ಮಯನೊಳೋಲಾಡಿತು |
ಮೃಣ್ಮಯನ ರೂಹಿನಿಂ | ಚಿನ್ಮಯನ ರೂಹೆ ತಾ-| ನುರೆ ದಿವ್ಯವೆಂದೆಂದಿತು ||೨||

ಈಶ್ವರ ಸಣಕಲ್ಲ
ರಬಕವಿ

# ನೀತಿಪದ್ಯಾವಳಿ.

ಲೇಖಕ— ಶಿವಾನಂದ ದೀಕ್ಷಿತ ವಾಜಪೇಯ ವಿರಚಿತಂ.

( ಮುಂದೆ ಸಾಗಿದ್ದು )

॥ ಕಂದ ॥

ಕರದಗ್ರದೊಳಿರುವಳ್ ಸಿರಿ |
ಸರಸತಿ ಮಧ್ಯದಲಿ ಮೂಲದೊಳ್ ಶ್ರೀಶನಿಹರ್ |
ಕರಮಂ ಬೆಳಗಿನೊಳೀಕ್ಷಲು |
ಪರಿಕಿಸಿ ನತಿಸಿದ ನರಂಗೆ ಶುಭಮಂದಕ್ಕುಂ ॥೬॥

ಸಿರಿಯುಂ ಶಿವೆಯುಂ ಹರಿಯುಂ |
ಹರನಂ ಗಂಗಾರ್ಕಧೇನು ತುಳಸೀ ಮುಖರಂ |
ನರನು ಮುಖದೊಳೆದು ನುತಿಸು |
ತ್ತಿರೆ ಶುಭದಿನವೆನಿಸಿ ಕಾರ್ಯಸಿದ್ಧಿಗಳಕ್ಕುಂ ॥೭॥

## ಬಾಲಕರಿಗೆ ಬೋಧನೆ.

ಭಾ. ಷಟ್ಪದಿ

ಮಗುವೆ! ಸೂರ್ಯನು ಬರುವ ಮೊದಲಲಿ |
ಲಗುವೆ ಎದ್ದುರೆದೊಳೆದು ಮೊಗವನು |
ಜಗದ ತಂದೆಗೆ ತಂದೆ-ತಾಯ್ಗಳ್ಗಿರದೆ ಮಣಿದೊಡನೆ ॥
ಮಿಗಿಲು ಮೋದದೆ ನೆರೆಯ ನಿನ್ನೋ |
ರಗೆಯ ಗೆಳೆಯರ ಕೂಡಿ ಸಾಲೆಯ |
ಪೊಗುತೆ ಗುರುಗಳಿಗೆರಗಿ ನಲವಿಂ ಕಲಿಯ ಹೆತ್ತುವುದೈ ॥೮॥

ಕಂದ ಪದ್ಯಂ

ದಾರಿಯೊಳಗಾಡುವೆರಡನೆ |
ಯೋರಗೆಯುವರಾಡ ಕರಿಯೆ ಕೂಡದಿರವರಂ ॥
ಓರಂತವರನೆ ನೀತಿಯ |
ಸಾರುತೆ ಸರಿ ನಡೆಗೆ-ಸಾಲೆಗೊಲಿಸೈ! ಮಗುವೇ! ॥೯॥

ಗೆಳೆಯರ ಪ್ರೀತಿಸಿ ಪ್ರೀತಿಯ |
ನೆಳೆಯಾರಿಗುವಾಡದಲಿರು! ಕೆಡಕು ನುಡಿಗಳಂ ॥
ಉಳಿ! ಸುಳ್ಳನು ಗುರುಜನರಲಿ |
ತಳೆ ಭಕ್ತಿಯನಂತೆ ಸೇವಿಸೈ! ಪೆತ್ತವರಂ ॥೧೦॥

# ಜನಪದ ಸಾಹಿತ್ಯ.



## ಹಳ್ಳಿಯ ಹಾಡುಗಳು.

ಸಂಗ್ರಾಹಕರು— ಬಸವನ ಬಳಗದ ಚೆನ್ನಬಸವಕುವರ, ಕೊಲ್ಹಾಪೂರ.

ಉಪ್ಪಿನಕಣ್ಣಿನ ಶೀರಿ | ಉಡಿಯಾಗ ಮಲ್ಲಿಗೆ | ಗೆಜ್ಜಿಕಾಲ ಮಗನ ಬಗಲಾಗ |
ಗೆಜ್ಜಿಕಾಲ ಮಗನ ಬಗಲಾಗ ಎತಿಕೊಂಡು | ಸಿದ್ಧರ ನಿಮ್ಮತಕ ಬರುವೆನು ||೧||

ಆಟವೆಲ್ಲಿ ಮಠವೆಲ್ಲಿ | ಕಟದ ರುದ್ರಾಕ್ಷಿ ಕದವೆಲ್ಲಿ | ಕಟದ ರುದ್ರಾಕ್ಷಿ ಕದವೆಲ್ಲಿ
ದೊಡ್ಡಯ್ಯಸ್ವಾಮಿ | ಮಠವೈತಿ ಬಾಳಿವನದಾಗ ||೨||

ಕರಿಯಶೀರಿಯನುಟ್ಟು | ಕೆರಿಯ ನೀರಿಗ್ಹೋದೆ | ಕರದ ಕೇಳ್ಯಾರು ಬಲುಮಂದಿ |
ಕರದು ಕೇಳ್ಯಾರು ಬಲುಮಂದಿ ಈ ಶೀರಿ | ಎಲ್ಲಿಂದ ಬಂತವ್ವ ನಿನಗೆಂದು ||೩||

ಕರಿದು ಕಾಶಾಪೂರ ಬಿಳಿದು ಬಂಕಾಪೂರ ಶಿರಗ ಶಹಾಪೂರ ಪಡಿಮಲಕ |
ಶಿರಗ ಶಹಾಪೂರ ಪಡಿಮಲಕಿನ ಶೀರಿ | ಸುರಗ್ಯಾಗ ನನ ತಮ್ಮ ಉಡಿಶ್ಯಾನ ||೪||

ಊರಿಗೆ ಹೋವರು ರಾಯರು | ಶೀರು ಬಂಗಾರ ಒಗದ್ಹಾಂಗ |
ಶೀರು ಬಂಗಾರ ಒಗದ್ಹಾಂಗ ದಾಸಾಳ | ಮುಗ್ಗ್ಯೈತ್ರಿ ಮಾರಿ ಬಳಲ್ಯಾವ ||೫||

ಮಾಲನು ಕಟ್ಟಿಸ್ಯಾನ | ಮ್ಯಾಲಕ ನೋಡ್ಯಾನ | ಮಾಲಿನ ತಕ್ಕ ಮನಿಯಿಲ್ಲ |
ಮಾಲಿನ ತಕ್ಕ ಮನೆಯಿಲ್ಲ ನನ್ನ ಫಕೀರಣ್ಣಲ್ಲ | ಮಾರಾಯನ ತಕ್ಕ ಮಡದಿಲ್ಲ ||೬||

ಸರಗಿ ಬಂಗಾರದ ಬಳಿ | ಅರಗಿಲ್ಲದ ಕಟ್ಟಾಣಿ | ಏನ ಬೇಡಿದರ ನಗುವರು |
ಏನ ಬೇಡಿದರ ನಗುವಂಥ ರಾಯರನ | ಪಡದ ಬಂದೇವ ಶಿವನಲ್ಲಿ ||೭||

---

### ನೀತಿ ಪದ್ಯಾವಳಿ.

( ಹಿಂದಿನ ಪುಟದಿಂದ ಸಾಗಿ ಬಂದುದು. )

ಕೆಟ್ಟ ಚಟಂಗಳ ಬಿಟ್ಟಿರು ! |
ಕೆಟ್ಟವರಗಲಿರು ! ಶರೀರಮುಂ ರಕ್ಷಿಸಿರೈ ! ||
ನೆಟ್ಟನೆ ಕಲಿ ! ಜಡಮತಿಯುಳಿ ! |
ಹುಟ್ಟಿದ ಗುಣವಟ್ಟಿ ಬಿಡದು ! ಕೆಡದಿರು ! ಮಗುವೇ ! ||೧೧||
ನಿನ್ನಯ ಕೆಲಸಂಗಳಿರಲ್ |
ನಿನ್ನನೆ ನಂಬು ! ಪೆರರೆರವು ಸುಮ್ಮನೆ ಬೇಡೈ ! ||
ಸನ್ನುತ ಗುಣಿಯಾಗೊಟ್ಟಿಗೆ |
ನಿನ್ನಾ ಶ್ರೀಶನ ನೆನೆದಿರು ! ಸುಖಿಸುವೆ ! ಮಗುವೇ ! ||೧೨||

ಕವಿಯು ಒಬ್ಬ 'ಮಾಟಗಾರ'. ಕಬ್ಬವೆಣ್ಣಿನ ಉಪವನದ ಸೊಗದ ಅನುಭವವು ಉಪಾಸಕನ ಸ್ವಚ್ಛಂದಾನಂದದಿಂದ ಬರುತ್ತದೆ. ಕಾವ್ಯದ ಸಲುವಾಗಿ, ತನ್ನ ಆತ್ಮದ ಸಲುವಾಗಿ ಕಾವ್ಯವನ್ನು ರಚಿಸುವದು ಆತನ ಹುಟ್ಟುಗುಣವಾಗಿ ಹೋಗಿದೆ. ನಿಜವಾದ ಕಾವ್ಯಾವೇಶದ ಸಮಯದಲ್ಲಿ ಹೊರ ಹೊಮ್ಮುವ ಕಿಡಿಗಳನ್ನು ಕುರಿತದ್ದು ಕೆಲವು ವೇಳೆಗಳಲ್ಲಿ ಹಲವು ರುಚಿಗಳ ಪೋಷಣೆಗಾಗಿ ಕುದಿದು ನುಡಿಯುವನು.

# ಕಾವ್ಯ ಕುಂಜ.

ಪದಗಳ ಸೆರೆಗೆ ಸಿಕ್ಕು ಬೀಳುವನು. ಹುಚ್ಚನಾಗುವನು. ಆತನ ಉಕ್ತಿಯಲ್ಲಿ ದಿವ್ಯ ಶಕ್ತಿಯೊಂದಡಗಿದೆ. ಆ ಮೋಹಕ ಸತ್ವವೇ ಶಿವಸತ್ಯಸೌಂದರ್ಯ! ಅದುವೇ ನಮ್ಮ ಬಾಳಿನ ಅಡಿಗಲ್ಲು.

ಶ್ರೀ ಎಂ. ನಂಜುಂಡ ಶಾಸ್ತ್ರಿಗಳು
ಮೈಸೂರ.

# ಪಡೆದಪ್ಪನಾಗು!

(' ಅಂಬಿಕಾತನಯ ದತ್ತ'ರು ಬರೆದುದು.)

[ ಸೂಚನೆ :—

' ಅಂಬಿಕಾತನಯ ದತ್ತ'ರೂ ಮೂಲತಃ ನಮ್ಮ ಶಿರಹಟ್ಟಿಯವರೂ ಆಗಿರುವ ಶ್ರೀ ಬೇಂದ್ರೆ ದತ್ತರಾಯರು ಈ ಕವನವನ್ನು ಹಳ್ಳಿಯ ಗೆಳೆಯನಾದ ತಮ್ಮೊಬ್ಬ ವೀರಶೈವ ಮಿತ್ರನ ವಿಷಾದಯೋಗದ ವಿಷಸಿವಿಮಷವನ್ನು ಹೋಗಲಾಡಿಸಬೇಕೆಂದು ಆತನಿಗೆ ಪತ್ರರೂಪವಾಗಿ ಬರೆದಿರುವರೆಂದು ತಿಳಿದು ಬರುತ್ತದೆ. ಆದ್ದರಿಂದಲೇ ವೀರಶೈವ ತತ್ವಜ್ಞಾನದ ಪಾರಿಭಾಷಿಕ ಶಬ್ದಗಳಾದ ಪಡೆದಪ್ಪ, ಪಟ್ಟದ ಮರಿ ಶ್ರೀಪಾದರೇಣು ಇತ್ಯಾದಿ ಪದಗಳು ಇಲ್ಲಿ ಇವೆ. ಆದರೆ ಈ ಕವನವು ಪ್ರತಿಯೊಬ್ಬ ಕನ್ನಡಿಗನಿಗೂ ಪ್ರೇರೇಪಕವಾಗಿದೆ.

ಮೊದಲಿನ ೮ ಪದ್ಯಗಳಲ್ಲಿ ಕರ್ನಾಟಕದ ಸಕಲ ಪುಣ್ಯ ಕ್ಷೇತ್ರಗಳ ತೀರ್ಥ ವನ್ನು ತಂದು ಕವಿಯು ತನ್ನ ಗೆಳೆಯನಿಗೆ ಎರೆಯುವೆನೆಂದೆನ್ನುತ್ತಾನೆ. ೨ ನೆಯ ಪದ್ಯದಲ್ಲಿ ಬರುವ ಶಾಲ್ಮಲೆಯು ಧಾರವಾಡದ ' ಸೋಮೇಶ್ವರ ' ತೀರ್ಥದಲ್ಲಿ ಹುಟ್ಟಿ ಕೂಡಲೆ ಗುಪ್ತವಾಗಿ ಮುಂದೆ ಕಲಘಟಗಿಯ ಕಡೆಗೆ ಎದ್ದು ದೊಡ್ಡ ಹೊಳೆಯಾ ಗುತ್ತಾ ಕಡೆಗೆ ಉತ್ತರ ಕನ್ನಡದಲ್ಲಿ ' ಕರಿಹೊಳೆ ' ' ಕಾಲೀನದಿ ' ಎಂದೆನಿಸಿಕೊಂಡು ಕಾರವಾರದ ಹತ್ತರ ಕನ್ನಡ ಕಡಲನ್ನು ಸೇರುವಳು. ಕವಿಯು ಧಾರವಾಡದಲ್ಲಿ ದ್ದುದರಿಂದ ' ನನ್ನ ಶಾಲ್ಮಲೆ' ಎಂದು ಕರೆದಿದ್ದಾನೆ. ೩ ನೆಯ ಪದ್ಯದಲ್ಲಿ ಹರಿಯೂ ಹರನೂ ಒಂದೇ ಎಂದು ಸಾಮರಸ್ಯದ ಸಂದೇಶವನ್ನು ಹೇಳುವ ಹರಿಹರನಾಥನ ಕಾಲು ತೊಳೆಯಬೇಕಾದರೆ ಮೊದಲು ತುಂಗೆಯೂ-ಭದ್ರೆಯೂ ಬೇರೆಬೇರೆಯಾಗಿ ಹರಿದರೂ ಹರಿಹರನ ಪಾದಸನ್ನಿಧಿಯಲ್ಲಿ ' ತುಂಗಭದ್ರೆ 'ಎಂಬ ಒಂದೇ ನದಿಯಾಗಿ ಆಕೆಯೂ ' ಸಾಮರಸ್ಯ 'ವನ್ನು ಹಾಡುತ್ತಾಳೆಂದು ಸೂಚಿತ ವಾಗಿದೆ. ೪-೫ ರಲ್ಲಿ ಕನ್ನಡ ನಾಡಿನ ಉತ್ತರ-ದಕ್ಷಿಣ ಸೀಮಾನದಿಗಳಾದ ಗೋದೆ ಕಾವೇರಿಯರ ವರ್ಣನೆಯುಂಟು; ನೃಪತುಂಗನು ವರ್ಣಿಸಿದ ' ಕಾವೇರಿಯಿಂದ ಮಾಗೋದಾವರಿ ವರೆಮಿರ್ದ ನಾಡದಾಕನ್ನಡದೊಳ್' ಇಲ್ಲಿ ಧ್ವನಿತವಾಗಿದೆ. ೬ ನೆಯ ಪದ್ಯದಲ್ಲಿ ' ಕನ್ನಡ ವಿಠ್ಠಲ' ಪುರಂದರನಾಥನ ಸನ್ನಿಧಿಯಲ್ಲಿ ಅರ್ಧ ವರ್ತುಲಾಕಾರವಾಗಿ ' ಚಂದ್ರಭಾಗಾ ' ನಾಮದಿಂದ ಹರಿಯುವ ಭೀಮರಥಿಯ ವರ್ಣನೆಯಿದೆ. ೭ ನೆಯ ಪದ್ಯದಲ್ಲಿ ಪಶ್ಚಿಮ ಘಟ್ಟಗಳಲ್ಲಿ ಅಲ್ಲಲ್ಲಿ ಹುಟ್ಟಿ ಹರಿಯುವ ನೇತ್ರಾವತಿ, ಶರಾವತಿ, ಘಟಪ್ರಭೆ, ಮಲಾಪಹಾರಿ ನದಿಗಳು ಸೂಚ್ಯವಾಗಿವೆ. ೮ ನೆಯದರಲ್ಲಿ ಕರಿನಾಡಿನ ರಾಷ್ಟ್ರೀಯ ನದಿಯಾದ ಕೃಷ್ಣೆಯನ್ನು ಮಲಾಪಹಾರಿಯು ಸೇರುವ ' ಸಂಗಮ ' ಕ್ಷೇತ್ರವು ಗೆಳೆಯನ ಮಾತೃಗ್ರಾಮದ ಹತ್ತರ ಇರುವದಾದ್ದರಿಂದ ' ನಿನ್ನ ಕೂಡಲ ' ಎಂಬ ಪದವು ಪ್ರಯೋಗಿಸಲ್ಪಟ್ಟಿದೆ.

ನಡುವಿನ್ನ ರಿಂದ ೧೨ ಈ ನಾಲ್ಕು ಪದ್ಯಗಳಲ್ಲಿ ಕರ್ನಾಟಕ ಸಂಸ್ಕೃತಿಯ ನಾಲ್ಕು ಅಂಗಗಳಾದ ಜೈನ, ವೀರಶೈವ, ಮಾಧ್ವ, ಸ್ಮಾರ್ತ ಸಂಸ್ಕೃತಿಗಳ ಪ್ರಾತಿನಿಧಿಕ ವಿಭೂತಿಗಳಾದ ಪೂಜ್ಯಪಾದರು, ಅಲ್ಲಮಪ್ರಭುಗಳು, 'ಆನಂದತೀರ್ಥ' ರೆಂದು ಹೆಸರಾದ ಶ್ರೀಮನ್ಮಧ್ವಾಚಾರ್ಯರು, ವಿದ್ಯಾರಣ್ಯರು ಈ ನಾಲ್ವರ ಪಾದತೀರ್ಥವನ್ನೆರೆಯುವೆನೆಂದು ಕವಿಯು ಹೇಳುತ್ತಾನೆ. 'ಗುರುಪಾದತೀರ್ಥ' 'ಆನಂದತೀರ್ಥ' 'ವಿದ್ಯಾತೀರ್ಥ' ಈ ಪದಗಳು ಅಂಕಿತನಾಮಗಳನ್ನು ಸೂಚಿಸುವ ಅನ್ವರ್ಥಕ ನಾಮಪದಗಳಾಗಿವೆ.

ಕೊನೆಯ ೮ ಪದ್ಯಗಳಲ್ಲಿ ಕನ್ನಡಿಗರು ಇಂದು ಇರಬೇಕಾದ ಹೊಸ ಬಾಳುವೆಯ 'ದರ್ಶನ' ವನ್ನು ವಿವರಿಸಿದ್ದಾರೆ. 'ದೇವನಲ್ಲಿ ನಿವೃತ್ತಿ ದೇವನಿಂದ ಪ್ರವೃತ್ತಿ' ಎಂದು ಹೇಳಿ ನಿವೃತ್ತಿ ಪ್ರವೃತ್ತಿಗಳ ಸಹಜಸಾಮರಸ್ಯವೇ ಇಂದು ಅಗತ್ಯವಾಗಿದೆಂದು ಕವಿಯ ನವಸಂದೇಶವಿದೆ; ಕೊನೆಯದು ಕನ್ನಡ ಅನುಷ್ಟುಪ್ ಶ್ಲೋಕವು. 'ತನ್ನ ತಾನರಿತರೆ ತನ್ನರಿವೇ ಗುರು' ಎಂಬ ಶರಣರ ವಚನದಲ್ಲಿ ಸೂಚಿತವಾದ ದಿವ್ಯ ಸಂದೇಶವು ಇಲ್ಲಿ ಧ್ವನಿತವಾಗಿದೆ.

ಒಟ್ಟಿನಲ್ಲಿ ಕರ್ನಾಟಕದ ರಾಷ್ಟ್ರೀಯ ಸಂಸ್ಕೃತಿಯು ಎಂಥ ! ಅಮೋಘವಾದ 'ಸಾಮರಸ್ಯ' ವನ್ನು ಅಳವಡಿಸಿಕೊಂಡಿರುವದೆಂಬದನ್ನೇ ಹೇಳಿ ಅದನ್ನೇ ಹೊಸ ಕಾಲದಲ್ಲಿ ಕಂಡುಂಡು ಇದ್ದು ತೋರಿಸಬೇಕಾಗಿದೆಯೆಂಬದನ್ನು ವರ್ಣಿಸಿ ಪರಶಿವನಲ್ಲಿ ಬೆರೆಯಲು ಅರ್ಹನಾಗುವ 'ಪಡೆದಪ್ಪ' ನಾಗೆಂದು ತನ್ನ ಗೆಳೆಯನನ್ನು ಕವಿಯು ಹರಸುತ್ತಾನೆ. ದೇವ ದೇವನ ಪ್ರಸಾದವೂ ಕೃಪೆಯೂ ಪೌರುಷಕ್ಕೆ ಪ್ರೇರೇಪಕ ಶಕ್ತಿಗಳೆಂದು ತಿಳಿಸುವದಕ್ಕೇನೇ ಅಂಥವುಗಳನ್ನು ಪಡೆದ 'ವರಪುರುಷ'ನಾಗೆಂದೂ 'ಸೋಲುವವ ಶರಣನಲ್ಲ' ವೆಂದೂ ವಿಜಯದ ಸಂದೇಶವನ್ನು ಸಾರುತ್ತಾನೆ.

(೨) ಈ ಪದ್ಯದ ತರುವಾಯ ಪ್ರಕಟವಾದ 'ಗೆಳೆತನದ ಅಗಲಿಕೆ' ಎಂಬ ಪದ್ಯವಾದರೂ ಅದೇ ಗೆಳೆಯನನ್ನು ಕುರಿತು ಬರೆದುದು. ಶ್ರೀ ಬೇಂದ್ರೆಯವರ 'ಕೆಳೆವಾಡು' ಗಳಲ್ಲಿ ಪ್ರಚೋದಕ ಪ್ರೇರಣೆಯನ್ನುಂಟು ಮಾಡುವ ಅದ್ಭುತ ಸಾಮರ್ಥ್ಯವಿದೆಯೆಂಬದನ್ನು ನಾವು ಹೇಳಬೇಕಾಗಿಲ್ಲ. ಈ ಪದ್ಯಗಳನ್ನು ನಮ್ಮ 'ಚಂದ್ರಿಕೆ' ಯಲ್ಲಿ ಪ್ರಕಟಿಸಲು ಅಪ್ಪಣೆ ಇತ್ತುದ್ದಕ್ಕಾಗಿ ಅವರಿಗೆ ನಾವು ಉಪಕೃತರಾಗಿದ್ದೇವೆ.

ವೃತ್ತವು ವಾರ್ಧಿಕ ಷಟ್ಪದಿಯ ತೃತೀಯ, ಚರಣವೇ ಒಂದು ಪಾದವಾಗಿ ಉಳ್ಳ 'ವಾರ್ಧಿಕ ದೀರ್ಘ ದ್ವಿಪದಿ' ಯು. ಅಲ್ಲಲ್ಲಿ ಸ್ಫೂರ್ತಿಪ್ರವಾಹದ ಸೆಳವು ಹೆಚ್ಚಾದಾಗ ಒಂದು ಗಣವು ಹೆಚ್ಚೂ ಉಂಟು.

—ಸಂಪಾದಕರು. ]

ಎರೆಯುವೆನು ಬಾ ನಿನ್ನ, ನಮ್ಮ ಪಟ್ಟದ ಮರಿಯೆ ಸಕಲ ತೀರ್ಥದ ಕ್ಷೀರ ನೀರ ತಂದು
ಬೆರಗಾಗಿ ಬೆರೆತು ಆ ಶಿವನಲ್ಲಿ ದೇವನಲಿ ಪಡೆದಪ್ಪನಾಗು ಎಂದು ||೧||
ನಿಸ್ಸಂಗಳಿಪ್ಪ ಈ ಗುಪ್ತ ಗಂಗೆಯು ನನ್ನ ಶಾಲ್ಮಲೆಯು ನೀರ ತಂದು
ನಿಶ್ಶಂಕನಾಗಿ ಬೆರೆಯೆಂದು ಎರೆಯುವೆನಿಂದು ಪಡೆದಪ್ಪನಾಗು ಎಂದು ||೨||
ಹರಿಹರರ ಕಾಲ್ತೊಳೆವ ದಕ್ಷಿಣದ ಗಂಗೆಯೀ ತುಂಗಭದ್ರೆಯ ಪುಣ್ಯ ಜಲವ ತಂದು
ಎರೆಯುವೆನು ನಿನ್ನನ್ನು ಸಮರಸಿಯು ಆಗೆಂದು ಪಡೆದಪ್ಪನಾಗು ಎಂದು ||೩||
ನಮ್ಮ ತಾಯಿಯು ಸೆರಗಿನಂಚಾಗಿ ಹರಿದಿಪ್ಪ ಭವ್ಯ ಗೋದೆಯ ದಿವ್ಯ ಜಲವ ತಂದು
ತಮ್ಮ! ಎರೆಯುವೆ ಸೆರಗುಬೆರಗಿಲ್ಲದಂಥ ಕಲಿ–ಪಡೆದಪ್ಪನಾಗು ಎಂದು ||೪||
ನಮ್ಮ ತಾಯಿಯು ದಿವ್ಯ ಶ್ರೀರಂಗಪಾದವನು ತೊಳೆವ ಕಾವೇರಿಯಾ ನೀರ ತಂದು
ತಮ್ಮ! ಎರೆಯುವೆನು ಶ್ರೀಪಾದ ರೇಣುವೆ ಬಾರೊ ಪಡೆದಪ್ಪನಾಗು ಎಂದು ||೫||
ಇಟ್ಟಿಗೆಯ ಮೇಲೆ ಅಡಿಯಿಟ್ಟ ವಿಠ್ಠಲನನ್ನು ಬಿಟ್ಟು ಮುಟ್ಟುವ ನದಿಯ ನೀರ ತಂದು
ಮೆಟ್ಟು-ಭಕ್ತಿಯ ಮೆಟ್ಟು–ಎರೆಯುವೆನು ನಾನಿಂದು ಪಡೆದಪ್ಪನಾಗು ಎಂದು ||೬||
ಘಟ್ಟ ಮಲೆಗಳ ಬಿಟ್ಟು ತಾರಕರ ಬಿರಿದಿಟ್ಟು ಹರಿವ ನದಿಗಳ ಮಡಿಯ ನೀರ ತಂದು
ಬಿಟ್ಟು ಬಿಡದಲೆ ನಾನು ಎರೆಯುವೆನು ನಿನ್ನನ್ನು ಪಡೆದಪ್ಪನಾಗು ಎಂದು ||೭||
ಕರಿನಾಡ ಕನ್ನೆಯೀ ಕೃಷ್ಣೆ ಕೇಳುವದೇನು ? ನಿನ್ನ ಕೂಡಲದಿಂದ ನೀರ ತಂದು
ಎರೆಯುವೆನು ಅರಿವಾಗು ತಾನೆ ತಾನಾಗಿನ್ನು ಪಡೆದಪ್ಪನಾಗು ಎಂದು ||೮||

\+ + + +

ಕನ್ನಡದ ನಾಡ ಕವಿಕುಲತಿಲಕರಾ ಕಾವ್ಯಗಂಗಾಪ್ರವಾಹವೆಲ್ಲಿಂದ ಬಂತೋ—
ಘನ್ನ ತೀರ್ಥಂಕರರ ಆ ಪೂಜ್ಯಪಾದಗಳ ತೀರ್ಥದಿಂದೆರೆಯುವೆನು ನಿನ್ನನಿಂತೋ ||೯||
ಕಲ್ಯಾಣದಧ್ಯಕ್ಷನಾದ ಪ್ರಭು ಅಲ್ಲಮನ ಗುರುಪಾದತೀರ್ಥ ತಂದು
'ಕಲ್ಯಾಣ ಕಲ್ಯಾಣ!' ಎರೆಯುವೆನು ಶಿರ ಬಾಗು ಶಿವಶರಣನಾಗು ಎಂದು ||೧೦||
ಉಡುಪಿಯೊಡೆಯನ ಅಡಿಯನುಡುಪ ಮಾಡುವ ನಮ್ಮ ಆನಂದತೀರ್ಥ ತಂದು
ಮುಡಿಯಲ್ಲಿ ಧಾರೆಯಾಗಿಡುವೆ ಪುರುಷೋತ್ತಮನ ದಾಸ ನೀನಾಗು ಎಂದು ||೧೧||
ಹಂಪುಗೊಳಿಸುವ ದೇವಿಯೊಲಿದ ಮಾಧವನ ವಿದ್ಯಾತೀರ್ಥವನ್ನು ತಂದು
ಹಂಪು ಪಡೆಯೆಂದು ನಾನೆರೆಯುವೆನು ನೀ ಸರ್ವಸಂನ್ಯಾಸಿಯಾಗು ಎಂದು ||೧೨||

\+ + + +

ಈ ನಾಡು ಅವನ ಹೊಲ, ಇದರ ಒಕ್ಕಲಿಗನವ; ನಾ ನೀನು ರಂಟೆ ಕುಂಟೆ
ಏನಾದರೇನು ಗೆಲವಿಹುದು ನೀನಿರಬೇಡ ಸೋಲೆಂಬ ಚಿಂತೆಗಂಟೆ ||೧೩||
ಜಗದ ಪಟ್ಟವನೇರಿ ಕುಳಿತಿಹ ಜಗದ್ಗುರುವು ನಮ್ಮ ಕರಿನಾಡಿನಲಿ ಕಾಲನಿಟ್ಟು
ಮುಗಿದು ಎಡೆಮುಗುಳನ್ನು ಅಡಿಯ ಹುಡಿಯಾಗೋಣ ಇಲ್ಲ ಸಲ್ಲದ ಬಗೆಗಳೇಕೆ ಇಷ್ಟು ||೧೪||

'ಸೋಲು'ಎಂಬದು ಕೇಳು ಮೃತ್ಯುಲೋಕದ ಸೊಲ್ಲು; ಗೆಲವು ಒಂದೇ ಬಲ್ಲನವ್ಮು ನಲ್ಲ
'ಸೋಲು ಹುಂಬರ ಗುಲ್ಲು' 'ಗೆಲವು' ಕಾಣ್ಬರ ಸೊಲ್ಲು ; ಸೋಲುವವ ಶರಣನಲ್ಲ||೧೫||

ಉಸುರು ಉಸುರಿಗೆ ಅವನ ಹೆಸರಸಾರುತ್ತಿರುವ ಗಾಳಿಯಂದದಿ ನಾವು ಚರಿಸಬೇಕು
ಹೆಸರು ಹೆಸರಿಗೆ ಅವನ ಕುಸುರು ತೋರುವ ಹಾಗೆ ಬೆಳಕನ್ನು ಸುರಿಸಬೇಕು||೧೬||

ತಾಪ ಕಂಡಲ್ಲೆಲ್ಲ ನಮ್ಮ ಸಂಪ್ರೀತಿಯನು ನೀರಾಗಿ ಹರಿಸಬೇಕು
ಪಾಪ ಪತಿತರ ಕಂಡು ಕೈ ನೀಡಿ ನೆಲೆಗೊಟ್ಟು ನೆಲವಾಗಿ ಧರಿಸಬೇಕು ||೧೭||

ಅಣು ರೇಣು ತೃಣಕಾಷ್ಠ ಪತಿತ ಪಾವನರ ಮುಗಿಲಾಗಿ ಆವರಿಸಬೇಕು
ಅಣುವಿಗೂ ಅಣುವಾಗಿ ಮುಗಿಲಿಗೂ ಮುಸುಕಾಗಿ ಅವನ ಆಜ್ಞೆಯ ನಾವು ಸ್ಮರಿಸಬೇಕು||೧೮||

ಪಡೆವಪ್ಪನಾಗದಲೆ ದುಡಿದಪ್ಪನಾದವಗೆ ಚಿಂತೆ ನೆರೆಯುವದೊಂದು ಸಂತೆಯಾಗಿ
ಪಡೆದು ದುಡಿದವ ಜಾಣ, ವ್ಯಸ್ತನಾದವ ಕೋಣ; ಆಗಬಾರದು ಹಿಂತೆಮುಂತೆ ಯಾಗಿ||೧೯||

ದೇವನಲ್ಲಿ ನಿವೃತ್ತಿ ದೇವನಿಂದ ಪ್ರವೃತ್ತಿ ಈ ಹಾದಿಯರಿಯಬೇಕು
ಜೀವಬಂಧುವೆ ಕೇಳು ಉಳಿದ ಜಂಜಾಲವನು ತಾನಾಗಿ ಮರೆಯಬೇಕು ||೨೦||

ಗುರುವಂ ಮರೆಯಬೇಡೈ ಗೆಳೆಯಾ ಗುರುಬಂಧುವೇ !
ಅರುಹಂ ತೊರೆಯಬೇಡೈ ಒಲವೇ ಸ್ನೇಹಸಿಂಧುವೇ ! ||ಅನುಷ್ಟುಪ್||

---

## ೨ ಗೆಳೆತನದ ಅಗಲಿಕೆ !

ಮುಗಿಲ ತುದಿಗಿದ್ದರೂ ನನ್ನ ಬದಿಗಿರುವಂಥ ವಿಶ್ವದಗಲದ ನನ್ನ ಗೆಳೆಯ ಕೇಳ್ಳೈ
ಅಗಲಿಕೆಂಬದು ಕಣ್ಣುಮುಚ್ಚಾಣಿಕೆಯಾಟವಲ್ಲವೆ ಜೀವಬಂಧು ಹೇಳೈ ||೧||

ಒಡಲೆಂಬ ಒಡ್ಡಿನಿಂದಡ್ಡಗಟ್ಟಿಸಿಕೊಂಡ ದಿವ್ಯ ಚೈತನ್ಯ ಘನ ಬಿಂದುವನ್ನು
ಒಡಗೂಡಿ ಒಡಮೂಡಿ ಅವನು ಮಾಡಿಲ್ಲವೇ ಸಚ್ಚಿದಾನಂದಮಯ ಸಿಂಧುವನ್ನು ||೨||

ಜನ್ಮವಗಲಿಸಲಾರದನ್ನು ಅಗಲಿಸಬಹುದೆ ಹೊತ್ತು ಗೊತ್ತಿನ ಕುತ್ತು ಅಡ್ಡಬಂದು
ಮನ್ಮನಕ್ಕೀಗಲೇ ಕಂಡು ಉಂಡದ್ದಾಯ್ತು ಹಿಗ್ಗಿನಗಲಿಕೆ ಕೆಳೆಯ ನಿಕಷವೆಂದು ||೩||

ಇಂದಿನೀ ಗೆಳೆತನವು ಹಿಂದಿನಿಂದಲೆ ಬಂತು ಮುಂದೆ ಜನ್ಮಾಂತರದಿ ಸಾಗಿಸಾಗಿ
ಹೊಂದಿರುವ ಪಕಳೆಗಳ ಹಿಂದೆ ಕೋಶದಿಂದನೇಕ ಬೀಜದ ಏಕಫಲವು ಆಗಿ ||೪||

ಕಂಗೊಳಿಸುವಂತೆ ನಡೆದಿಹುದು ಆಟವುನೋಡು ಅಗಲಿಕೂಡುತ ಮತ್ತೆಕೂಡಿ ಅಗಲಿ
ಜಂಗಮದ ಜಗುಲಿಯಲಿ ಹಿಗ್ಗಿ ಕುಣಿಯುತ್ತಲಿದೆ ಕಣ್ಗೊನೆಯು ಹೊರಹೊರಗೆ ಅಳಲಿ ನಗಲಿ ||೫||

--ಅಂಬಿಕಾತನಯ ದತ್ತ.

ಈಗಳಿನವರ ಗ್ರಂಥಗಳಲ್ಲಿ ಉತ್ತಮ ತರಗತಿಯವುಗಳಲ್ಲಿ ನೂತನವಾದ ಉತ್ಕೃಷ್ಟವಾದ ರಸವಿದೆ. ಇದರಲ್ಲಿ ಪಂಡಿತರಾದವರು ವ್ಯಾಕರಣವನ್ನು ಬಿಟ್ಟಲ್ಲಿ ಶಬ್ದಗಳ ರೂಪ ಮತ್ತು ಅರ್ಥವನ್ನು ಕೂಡ ಕಾಪಾಡಿಕೊಂಡಿದ್ದಾರೆ. ಆದರೆ ಉಳಿದ ಎಷ್ಟೋ ಲೇಖಕರು ತಿಳಿದೋ ತಿಳಿಯದೆಯೋ ಕೇವಲ ನಿರಂಕುಶ ಬುದ್ಧಿಯಿಂದ, ಕೇವಲ ಗ್ರಾಮ್ಯವಾದ ಭಾಷೆಯನ್ನು ಅಸಂಬದ್ಧವಾದ ಶಬ್ದರೂಪಗಳನ್ನು ಎಲ್ಲಿಲ್ಲೂ ಕಾಣಬಾರದ ಅರ್ಥಕೊಟ್ಟು ಉಪಯೋಗಿಸಿ ಗ್ರಂಥಲೇಖನವನ್ನು ತೀರ ಅಧೋಗತಿಗೆ ಇಳಿಸಿಬಿಟ್ಟದ್ದಾರೆ.

# ವಿವಿಧ ಸಾಹಿತ್ಯ

ಭಾಷೆಯು ದೇಶದ ಎಲ್ಲ ಭಾಗಗಳಲ್ಲಿಯೂ ಓದುವವರಿಗೆ ತಿಳಿಯುವಂತಿರಬೇಕು. ಶಬ್ದಗಳಿಗೆ ಗೊತ್ತಾದ ಅರ್ಥವೂ ರೂಪವೂ ಇರಬೇಕು.

ಶ್ರೀ, ಬೆನಗಲ್ಲ ರಾಮರಾವ

ಎಂ. ಎ. ಎಲ್. ಎಲ್. ಬಿ.

# ವಚನ ಸಾಹಿತ್ಯ.

ಸಾಹಿತ್ಯವು ಜನಜೀವನದ ಆದರ್ಶವು. ಜನಜೀವನವು ಉಚ್ಚ ತರಗತಿಯ ಶಿಖರವನ್ನು ಏರಿದ್ದಾದರೆ, ಸಾಹಿತ್ಯವೂ ಮುಂದುವರಿಯುವದಲ್ಲದೆ ಜನ ಜೀವನದ ಪ್ರಗತಿಗೆ ಕಾರಣೀಭೂತವಾಗಿಯೂ, ಮಾರ್ಗ ಪ್ರದಾಯಕವಾಗಿಯೂ ಆಗುತ್ತದೆ. ಅಂದಮೇಲೆ ಸಾಹಿತ್ಯವು ಜನಜೀವನದ ಮೇಲೆ ಅವಲಂಬಿಸಿರುತ್ತದೆ ಮತ್ತು ಜನಜೀವನವು ಸಾಹಿತ್ಯದ ಮೇಲೆ ಅವಲಂಬಿಸಿರುತ್ತದೆ.

ಕನ್ನಡ ಭಾಷಾಸೇವೆ ಮಾಡಬೇಕೆಂಬ ಹಂಬಲವು ಉಂಟಾಗಬೇಕಾದರೆ ನಮ್ಮ ಸಾಹಿತ್ಯ ಚರಿತ್ರೆಯ ನಾಯಕರಾದ ಅಂಥ ಸೇವಕರ ಮಣಿಮಾಲೆಯಲ್ಲಿರು ವವರನ್ನು ಉದಾಹರಣೆಗೆ ತೆಗೆದುಕೊಳ್ಳುವದು ಸಹಜ. ಇಂಥ ಮಹಾವಿಭೂತಿಗಳ ಗ್ರಂಥ, ಕಾವ್ಯ, ನಾಟಕಾದಿಗಳ ಅವಲೋಕನದಿಂದ, ಅಭ್ಯಾಸದಿಂದ, ಪಠಣ ದಿಂದ ಸ್ಫೂರ್ತಿಯುಂಟಾಗಿ ಭಾಷಾಮಾತೆಯ ಮೇಲೆ ಅಭಿಮಾನವೂ, ಆದರವೂ ಉದಯವಾಗುತ್ತವೆ.

ನಮ್ಮ ಕನ್ನಡ ತಾಯಿಗೋಸ್ಕರ ಆಕೆಯ ಮಕ್ಕಳು ಮಮತೆಯಿಂದ ತೊಡಿಸಿದ ಆಭರಣಗಳು ಎಷ್ಟೇ ಇದ್ದರೂ ಆಕೆಯ ಮೂಗಿನೊಳಗಿನ ಮೂಗುತಿಯ ಕಡೆಗೆ ಸ್ವಲ್ಪ ಲಕ್ಷ್ಯ ಕೊಡುವಾ. ಈ ಆಭರಣವು ಮೊದಲಿನಿಂದಲೇ 'ಗದ್ಯ'ದಿಂದ ಉಂಟಾಗಿತ್ತು. ಅದು ಕಾಲಗತಿಯಿಂದ ೧೨ ನೇ ಶತಮಾನದಲ್ಲಿ ವೀರಶೈವ ಶರಣರು ಮತ್ತು ಶರಣೆಯರು ಮಾತೆಯ ಸಾದಾ ಮೂಗುತಿಯನ್ನು ತೆಗೆದು, ತಮ್ಮ ಆತ್ಮಜ್ಞಾನ ಅನುಭವದ ಹರಳಿಗೆ 'ವಚನ'ವೆಂಬ ಕುಂದಣವನ್ನು ತಮ್ಮ ಬುದ್ಧಿ ಕುಶಲತೆಯಿಂದ ಚಂದವಾಗಿಯೂ, ಮಾಟವಾಗಿಯೂ ಕೂಡ್ರಿಸಿದರು. ಈ ಹರಳಿನ ಸುತ್ತಲು ಅಂಧಶ್ರದ್ಧೆಯಿಲ್ಲದ ಭಕ್ತಿಯೆಂಬ ಚೊಕ್ಕ ಚಿನ್ನದ ತಂತಿ ಯಿಂದ, ಭಾವಗರ್ಭಿತ ಶಬ್ದ, ವಾಕ್ಯ, ಶಬ್ದಮಂಜರಿ, ಪದಲಾಲಿತ್ಯ ಮತ್ತು ಸಮಯುಕ್ತಸುಗುಣವಾದ ಉದ್ದೇಶಾರ್ಥವನ್ನು ವ್ಯಕ್ತಪಡಿಸುವ ಉಪಮೇಯ ಗಳೆಂಬ ಬಹುಬೆಲೆಯ ಜ್ಯೋತಿಯುಳ್ಳ ಮುತ್ತುಗಳನ್ನು ಸರಳವಾಗಿಯೂ, ಮನೋಹರವಾಗಿಯೂ ಬಿಗಿದು, ತಯಾರಿಸಿದ ಮೂಗುತಿಯನ್ನು ಇಟ್ಟಿದ್ದಾರೆ. ಈ ಆಭರಣವು ಕಂದಿಲ್ಲ, ಕುಂದಿಲ್ಲ; ಅಂದಿನಂತೆ ಇಂದಾದರೂ ಪ್ರಭೆಯನ್ನು ಹರಡುತ್ತದೆ. ಈ ಆಭರಣವೇ ನಮ್ಮ ಶರಣ-ಶರಣೆಯರ ವಚನಶಾಸ್ತ್ರವು. ಈ ವಚನಶಾಸ್ತ್ರವು ಸಾಹಿತ್ಯಕ್ಷೇತ್ರದಲ್ಲಿ ಬಹಳ ಮಹತ್ವವನ್ನು ಹೊಂದಿದೆ.

ವಚನಕಾರರು ತಮ್ಮ ಕೀರ್ತಿಯ ಬೆಳಕನ್ನು ವಚನಶಾಸ್ತ್ರದಲ್ಲಿ ಹರಡಿದ್ದಾರೆ. ಮುಖ್ಯವಾಗಿ ಭಕ್ತಿಭಾಂಡಾರಿ ಬಸವಣ್ಣ, ಚನ್ನಬಸವಣ್ಣ, ಅಲ್ಲಮಪ್ರಭು, ಮಹದೇವಿ, ಘನಲಿಂಗ, ಅಖಂಡೇಶ್ವರ, ಅಂಬಿಗರ ಚವಡಯ್ಯ, ಕಾಡಸಿದ್ಧೇಶ್ವರ, ಸಂಗಮೇಶ್ವರ ಮೊದಲಾದ ವಚನ ಗ್ರಂಥಕಾರರು ಆಗಿ ಹೋಗಿದ್ದಾರೆ. ಇವರಲ್ಲಿ ಭಕ್ತಿಭಾಂಡಾರಿ ಬಸವಣ್ಣ ಮತ್ತು ಮಹಾದೇವಿಯಕ್ಕ ಇವರ ವಚನಗಳನ್ನು ವಿಮರ್ಶೆಯ ಒರೆಗಲ್ಲಿಗೆ ಹಚ್ಚಿ ನೋಡುವಾ.

## ವಚನಗಳ ಉದ್ದೇಶ.

ಶಿವಶರಣರ ವಚನಗಳು ಭಕ್ತಿ ಮತ್ತು ಧರ್ಮವನ್ನು ಬೋಧಿಸುತ್ತವೆ. ಮಾಯಾತೀತನೂ, ವಿಶ್ವವ್ಯಾಪಿಯೂ, ಜಗಚ್ಚಾಲಕನೂ, ಭಕ್ತೋದ್ಧಾರಕನೂ ಆದ ಪರಮೇಶ್ವರನೇ ಸರ್ವರಿಗೂ ಕರ್ತನು ; ಸರ್ವರ ಭವಪಾಶವನ್ನು ಛೇದಿಸುವಾತನು ಆತನೇ ಎಂದರಿತು ಮಾಯಾಪಾಶವನ್ನು ನೀಗಬೇಕೆಂಬ ಬುದ್ಧಿಯಿಂದ ಆತನಲ್ಲಿ ನಿಬ್ಬೆರಗಾಗಿ ದೃಢ ಮನಸಿನಿಂದ ಧ್ಯಾನ ಮಾಡುವದು, ಸ್ತೋತ್ರಮಾಡುವದು, ಆತನ ಸಾನ್ನಿಧ್ಯ ಹೊಂದುವದು ಇವೇ ಮೊದಲಾದ ಉದ್ದೇಶಗಳೇ ಶರಣರ ಹೆಗ್ಗುರುತುಗಳಾಗಿವೆ. ಈ ಹೆಗ್ಗುರುತುಗಳನ್ನು ಮುಂದೆ ಮಾಡಿಕೊಂಡು ವಚನಗಳ ರೂಪವಾಗಿ ತಮ್ಮ ಮನಸ್ಸಿನ ಭಾವ, ವಿಚಾರಪರಿಪಕ್ವತೆ, ವಿಶಾಲ ಜ್ಞಾನಗಳನ್ನು ವ್ಯಕ್ತ ಮಾಡಿದ್ದಾರೆ. ಧರ್ಮ ಪ್ರಚಾರ ಮಾಡುವದೂ ಅವರ ಮುಖ್ಯ ಉದ್ದೇಶಗಳಲ್ಲಿ ಒಂದಾಗಿತ್ತು. ಸಾಮಾನ್ಯರಿಗೆ ಧರ್ಮತತ್ವಗಳು ತಿಳಿದು ಬರಬೇಕೆಂದು ಈ ವಚನಗಳನ್ನು ಬರೆದಿಟ್ಟಿದ್ದಾರೆ.

### ಶರಣರ ಧರ್ಮ ಭಕ್ತಿಗಳ ವಿಚಾರವು ಅಂಧ ಶ್ರದ್ಧೆಯ ನೆರಳನ್ನು ಆಶ್ರಯಿಸಿದೆಯೋ ?

ನಿಶ್ಚಯವಾಗಿಯೂ ಇಲ್ಲ; ಅಜ್ಞಾನವೆಂಬ ಕತ್ತಲೆಯನ್ನು ಜ್ಞಾನವೆಂಬ ಖಡ್ಗದಿಂದ ಹೊಡೆದೋಡಿಸಿದ್ದಾರೆ. ಸತ್ಯಜ್ಞಾನದ ಬೇರುಹಿಡಿದು ಆತ್ಮಜ್ಞಾನದ ಅರಿವನ್ನು ಕಂಡುಕೊಂಡಿದ್ದಾರೆ. ಅಂಧಶ್ರದ್ಧೆಯ ನೆರಳು ಅವರನ್ನು ಸೋಂಕಿಲ್ಲ. ಕ್ರಿಯೆಗಳಿಗೂ, ಕಾಯಕಗಳಿಗೂ ಅವರು ಪ್ರಾಧಾನ್ಯವಿತ್ತಿದ್ದಾರೆ. ಬಸವಣ್ಣನವರು ಧರ್ಮ, ಸತ್ಯ, ಅಹಿಂಸೆ, ಪಾಪಪುಣ್ಯ, ಸ್ವರ್ಗ-ನರಕ, ವಿನಯ ಮುಂತಾದವುಗಳ ವಿಚಾರಗಳನ್ನು ಕೆಳಗಿನ ವಚನಗಳಲ್ಲಿ ತೋರ್ಪಡಿಸಿದ್ದಾರೆ.

೧ ದಯವಿಲ್ಲದ ಧರ್ಮವದಾವದಯ್ಯ ? ದಯವೇ ಬೇಕು ಸಕಲ ಪ್ರಾಣಿಗಳಲ್ಲಿ ದಯವೇ ಧರ್ಮದ ಮೂಲವಯ್ಯ ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯ.

೨ ದೇವಲೋಕ, ಮರ್ತ್ಯಲೋಕವೆಂಬದು ಬೇರಿಲ್ಲ ಕಾಣಿರೋ, ಸತ್ಯವ ನುಡಿವುದೇ ದೇವಲೋಕ. ಮಿಥ್ಯನುಡಿವುದೇ ಮರ್ತ್ಯಲೋಕ. ಆಚಾರವೇ ಸ್ವರ್ಗ ಅನಾಚಾರವೇ ನರಕ. ಕೂಡಲಸಂಗಮದೇವ ಇದಕ್ಕೆ ನೀವೇ ಪ್ರಮಾಣ.

೩ ಪಾಪಪುಣ್ಯಗಳು ನಮ್ಮ ಇಷ್ಟಕ್ಕೆ ಕಂಡಿರೇ, ಅಯ್ಯಾ ಎಂದಡೆ ಸ್ವರ್ಗ. ಎಲವೋ ಎಂದಡೆ ನರಕ. ಜೀಯ-ಜೀಯಾ ಎಂಬ ನುಡಿಯೊಳಗೆ ಕೈಲಾಸ ವಿಹುದು ಕೂಡಲಸಂಗಮದೇವಾ.

## ಬಸವಣ್ಣನವರ ಕಿಂಕರ ಭಾವ.

೪ ನನಗಿಂತ ಕಿರಿಯರಿಲ್ಲ. ಶಿವಭಕ್ತರಿಗಿಂತ ಹಿರಿಯರಿಲ್ಲ. ನಿಮ್ಮ ಪಾದಸಾಕ್ಷಿ. ಕೂಡಲಸಂಗಮದೇವ ಎನಗಿದೇ ದಿಬ್ಯ.

### ಹೊಲೆಯನಾರು ?

೫ ಕೊಲ್ಲುವನೇ ಮಾದಿಗ, ಹೊಲಸು ತಿಂಬುವವನೇ ಹೊಲೆಯ, ಕುಲವೇನೋ? ಆವಂದಿರ ಕುಲವೇನೋ ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು.

ಮೇಲಿನ ವಚನದಿಂದ ತಿಳಿದು ಬರುವದೇನಂದರೆ ಯಾವನೇ ಮನುಷ್ಯನು ಉಚ್ಚವರ್ಣದಲ್ಲಿ ಹುಟ್ಟಿದಾಗ್ಯೂ ಅವನಲ್ಲಿ ತಕ್ಕ ಆಚರಣೆ ಇರದಿದ್ದರೆ ಅವನೇ ಹೊಲೆಯನು. ಕುಲದಲ್ಲಿ ( ಹೊಲೆಯ ) ಸ್ಪೃಶ್ಯ, ಅಸ್ಪೃಶ್ಯವೆಂಬ ಭೇದವು ಇಲ್ಲವೆಂದು ಹೇಳುವದೇ ಇದರ ಅರ್ಥವು. 'ಸಕಲರಿಗೆ ಲೇಸನೇ ಬಯಸುವ' ವರು ಕುಲಜರು. ಈ ಮಾತು ಹೇಳಿದುದು ೧೨.ನೇ ಶತಮಾನದಲ್ಲಾದುದು. ಆದರೆ ೨೦ ನೇ ಶತಮಾನದಲ್ಲಿ ಮಹಾತ್ಮಾ ಗಾಂಧಿಯವರು ಅಸ್ಪೃಶ್ಯತಾ ನಿವಾರಣೆಯ ಚಳವಳಿಯನ್ನು ಕೈಕೊಂಡಿರುವರು. ಬಹುಕಾಲದಿಂದ ಕಲೆತುಹೋದ ಈ ಅಸ್ಪೃಶ್ಯತೆಯೆಂಬ ಕಲಂಕವು ವರ್ಣಾಶ್ರಮ ಧರ್ಮಕ್ಕೆ ಅಂಟಕೊಂಡಿರುತ್ತದೆ. ನಾವು ನಿಜವಾದ ಹಿಂದುಗಳೆನಿಸಿಕೊಳ್ಳಬೇಕಾದರೆ ಈ ಕಲಂಕವನ್ನು ಸ್ಪೃಶ್ಯತೆ ಎಂಬ ನೀರಿನಿಂದ ತೊಳೆಯಲು ನಿಶ್ಚಯ ಮಾಡಿದರೇನೇ ಅದು ನಿವಾರಣೆಯಾಗುವದು. ಬಸವ ಮಹಾತ್ಮನು ಈ ಅಸ್ಪೃಶ್ಯತೆಯ ಅನಿಷ್ಟ ರೋಗವನ್ನು ತನ್ನ ಆತ್ಮಜ್ಞಾನದ ಔಷಧಿಯಿಂದ ನಿವಾರಣ ಮಾಡಿದ್ದಾನೆ. ಈ ಸಂಗತಿಯ ಸತ್ಯತೆಯು ಈ ವಚನದಿಂದೇಕೆ, ಹರಳಯ್ಯ-ಮಧುವಯ್ಯಗಳ ಕಥೆಯಿಂದಲೂ ತಿಳಿದುಬರುತ್ತದೆ.

### ಇವರ ವಚನಶಾಸ್ತ್ರಕ್ಕೆ ನಾವು ಅಷ್ಟೊಂದು ಮಾನ್ಯತೆಯನ್ನು ಯಾಕೆ ಕೊಡಬೇಕು ?

ಮಾನ್ಯತೆಯನ್ನು ಕೊಡಲು ಮುಖ್ಯವಾಗಿ ಧರ್ಮ ದೃಷ್ಟಿಯಿಂದ, ಸಾಹಿತ್ಯ ದೃಷ್ಟಿಯಿಂದ ಹೀಗೆ ಎರಡು ಕಾರಣಗಳುಂಟು. ಇವುಗಳಿಂದ ವಚನಶಾಸ್ತ್ರಕ್ಕೆ ಪ್ರಶಸ್ತವಾದ ಕಳೆಬಂದಿದೆ. ಮೊದಲು ಧರ್ಮ ದೃಷ್ಟಿಯಿಂದ ವಚನಗ್ರಂಥಗಳಿಗೆ ಮಾನ್ಯತೆಯು ಹೇಗೆ ಯೋಗ್ಯವಾದುದು ಎಂಬದನ್ನು ವಿಚಾರಿಸುವಾ.

ಧರ್ಮದ ಹೊಲಬನ್ನು ಮತ್ತು ಅದರ ಮೆಟ್ಟಲುಗಳನ್ನು ಕುರಿತು ಅನೇಕ ಗ್ರಂಥಗಳನ್ನು ಬರೆದಿರಬಹುದು, ಬರೆಯಬಹುದು. ಆ ಗ್ರಂಥಗಳು ಗ್ರಂಥ ಕರ್ತರ ಪಾಂಡಿತ್ಯ ಪ್ರೌಢಿಮೆಯನ್ನು ಒಳಗೊಂಡಿರಬಹುದು, ಒಳಗೊಳ್ಳಬಹುದು. ಆದರೆ ಈ ವಚನಗಳ ಮಾಧುರ್ಯವಾಗಲಿ, ಸರಳತೆಯಾಗಲಿ ಅವುಗಳಲ್ಲಿ ಬಾರದು. ಯಾಕಂದರೆ 'ನುಡಿದಂತೆ ನಡೆದು' ತಮ್ಮ ಅನುಭವ ಮತ್ತು ಅಭಿಪ್ರಾಯ ಗಳನ್ನು ಸಾದರ ಪಡಿಸಿದವರ ಗ್ರಂಥಗಳು ಹೆಚ್ಚಿಗೆ ಮಹತ್ವವಾದವುಗಳಲ್ಲವೆ? ಅಂದಮೇಲೆ ಈ ವಚನಗ್ರಂಥ ಕರ್ತರು 'ನುಡಿದಂತೆ ನಡೆದು' ತಮ್ಮ ಮುಖ್ಯ ಧ್ಯೇಯವಾದ ಮುಕ್ತಿಸಾಧನೆಯ ಮಾರ್ಗದಲ್ಲಿ ಉಂಟಾದ ಅನುಭವ, ಜ್ಞಾನ ಮತ್ತು ಅಭಿಪ್ರಾಯಗಳನ್ನು ಪ್ರಶಸ್ತವಾಗಿ ವಿಶದಪಡಿಸಿದ್ದಾರೆ. ಶರಣರ ಆಚರಣೆಯ ಬಗ್ಗೆ ಮಹದೇವಿಯಕ್ಕನು ತನ್ನ ವಚನದಲ್ಲಿ ಹೇಳಿದ್ದಾಳೆ.

"ಆಡುವದು, ಪಾಡುವದು, ಕೇಳುವದು, ಹೇಳುವದು, ನಡೆವುದು, ನುಡಿವುದು, ಸರಸ ಸಮ್ಮೇಳವಾಗಿಪ್ಪುದಯ್ಯಾ ಶರಣರೊಡನೆ ಚನ್ನಮಲ್ಲಿಕಾರ್ಜುನಯ್ಯ, ನೀ ಕೊಟ್ಟ ಆಯುಷ್ಯವುಳ್ಳನ್ನಕ್ಕರ, ಲಿಂಗಸುಖಿಗಳ ಸಂಗದಲ್ಲಿ ದಿನಂಗಳ ಕಳೆವೆನು."

"ಹೇಳುವದು ವೇದ, ಹಾಕುವದು ಗಾಣ" ವೆಂಬಂತೆ ಲೋಕದ ಗಾದೆಯು ಮನುಜರು ಪ್ರಪಂಚದ ಮೋಹಪಾಶಕ್ಕೆ ಒಳಗಾಗಿ, ಅದರಿಂದ ತೊಲಗಲಾರದೆ ತಮ್ಮ ಬೇಳೆ ಬೇಯಿಸಿಕೊಳ್ಳುವದಕ್ಕಾಗಿ ಕಾಲಹರಣಮಾಡುವದನ್ನು ನಾವು ಕಣ್ಣಾರೆ ನೋಡುತ್ತೇವೆ. ಆದರೆ ಬಸವಣ್ಣ ಮತ್ತು ಮಹಾದೇವಿಯಕ್ಕ ಇವರು ವಚನಗಳಲ್ಲಿ ತಮ್ಮ ಹೃದಯವನ್ನು ಬಿಚ್ಚಿ ಇಟ್ಟಿದ್ದಾರೆ. ಅಂದಮೇಲೆ ಅವರ ಹೃದಯಕ್ಕೂ, ವಚನಗಳಿಗೂ ಅತಿಶಯ ನಿಕಟಸಂಬಂಧವು ಇರುತ್ತದೆ. ವಚನಗಳ ಉಚ್ಚಾರಮಾಡಿದೊಡನೆಯೇ ಅವರ ದಿವ್ಯಮೂರ್ತಿಗಳು ಓದುಗರ ಹೃದಯದಲ್ಲಿ ಒಡಮೂಡಿ ಕಣ್ಣಮುಂದೆ ಕಟ್ಟಿದಂತಾಗುತ್ತದೆ. ಅವರ ಹೃದಯದ ತಿರುಳು ನಿಮ್ಮ ಹೃದಯದಲ್ಲಿ ಸಮರಸವಾಗಿ ನಿಮ್ಮ ಭಾವದಲ್ಲಿ ಸ್ಥಿತ್ಯಂತರವನ್ನು ಉಂಟುಮಾಡುತ್ತಿದೆಯೋ ಇಲ್ಲವೋ? ಎಂಬದನ್ನು ನೀವೆ ಪರಿಕ್ಷಿಸಿರಿ.

ಮಹಾದೇವಿಯಕ್ಕನ ವಚನಗಳು.

೧ ಚಂದನವ ಕಡಿದು ಕೊರೆದು ತೇದೊಡೆ, ನೊಂದೆನೆಂದು ಕಂಪ ಬಿಟ್ಟಿತ್ತೆ! ತಂದು ಸುವರ್ಣವ ಕಡಿದೊಡೆದೊಡೆ ಬೆಂದು ಕಳಂಕ ಹಿಡಿದಿತ್ತೆ! ಸಂದು ಸಂದು ಕಡಿದು ಕಬ್ಬುನವ ಗಾಣಲಿಕ್ಕಿ ಬೆಂದು ಪಾಕಾಗುಳ್ಳ, ಸಕ್ಕರೆಯಾಗಿ ನೊಂದೆನೆಂದು ಸವಿಯ ಬಿಟ್ಟಿತ್ತೆ! ನಾ ಹಿಂದೆ ಮಾಡಿದ ಹೀನಂಗಳನೆಲ್ಲವ ತಂದು ಮುಂದಿಳುಹಲು ನಿಮಗೆ ಹಾನಿಯೇ? ಎನ್ನ ತಂದೆ ಚನ್ನ ಮಲ್ಲಿಕಾರ್ಜುನದೇವಯ್ಯ ಕೊಂದಡೆ ಶರಣೆಂಬುದ ಮಾಣೆ.

೨ ಹಸಿವಾದೊಡೆ ಭಿಕ್ಷಾನ್ನಗಳುಂಟು, ತೃಷೆಯಾದೊಡೆ ಕೆರೆ-ಹಳ್ಳಬಾವಿಗಳುಂಟು, ಶಯನಕ್ಕೆ ಹಾಳುದೇಗುಲಗಳುಂಟು, ಚನ್ನಮಲ್ಲಿಕಾರ್ಜುನಯ್ಯ ಆತ್ಮಸಂಗಾತಕ್ಕೆ ನೀನೆ ನನಗುಂಟು.

ಬಸವಣ್ಣನವರ ವಚನಗಳು.

೧ ಎಲ್ಲಿ ನೋಡಿದಡಲ್ಲಿ ಮನನೆಳಿಸಿದೊಡೆ ಆಣೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ ಪರವಧುವನು ಮಹಾದೇವಿಯೆಂಬೆ ಕೂಡಲಸಂಗಮದೇವ.

೨ ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ, ಕಿವುಡನ ಮಾಡಯ್ಯ ತಂದೆ, ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಸದಂತೆ ಇರಿಸು ಕೂಡಲಸಂಗಮದೇವ.

ಇದಲ್ಲದೆ ವೀರಶೈವ ಧರ್ಮ ತತ್ವಗಳು ವಚನಗ್ರಂಥಗಳ ವಿಷಯವಾಗಿವೆ. ಮುಖ್ಯವಾಗಿ ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲಗಳ ವಿಚಾರವನ್ನು ಸಂಪೂರ್ಣವಾಗಿ ವಿವರಿಸಿದ್ದಾರೆ. ಪರಮಾತ್ಮನ ಸ್ವರೂಪ, ಸಂಸಾರ ಹೇಯಸ್ಥಲಗಳಿಗೆ ಆಸ್ಪದ ಕೊಡುವದು ಸಹಜ.

ಆದ್ದರಿಂದ ಈ ವಚನಗಳು ವೀರಶೈವರಿಗಷ್ಟೇ ಮಾನ್ಯವೊ? ಸರ್ವ ಧರ್ಮದವರಿಗೂ, ಸರ್ವ ಪಂಥದವರಿಗೂ ಉಪಯುಕ್ತವಾಗಿವೆ. ವಿಶ್ವಧರ್ಮದ ತತ್ವಗಳು ಇವುಗಳಲ್ಲಿ ಅಡಕವಾಗಿವೆ. ಆದುದರಿಂದ ಹಿಂದೂ, ಮುಸಲ್ಮಾನ, ಕ್ರೈಸ್ತ ಮುಂತಾದ ಧರ್ಮದವರ ತತ್ವಗಳು ಕಂಡುಬರುತ್ತವೆ. ವೇದಶಾಸ್ತ್ರ, ಆಗಮ, ಪುರಾಣಾದಿಗಳ ಸಾರವು ವಚನಗಳಲ್ಲಿ ಬೆರೆತುಕೊಂಡಿದೆ. ಬಾಯಿಬಲ್ ಕುರಾನಗಳ ಸಾಮಾನ್ಯ ಧರ್ಮತತ್ವಗಳಿಗೆ ಮತ್ತು ಬಸವಣ್ಣನವರ ವಿಚಾರಗಳಿಗೆ ಹೋಲಿಕೆಯುಂಟು. ಮಹಾತ್ಮಾಗಾಂಧಿಯವರ ಆಚಾರ-ವಿಚಾರಗಳು ಸಹಿತ ಆವರಂತೆಯೇ ಅವೆಯೆಂದಮೇಲೆ ವಚನಗಳ ಮಹತ್ವವನ್ನು ತಂದು ಕೊಟ್ಟಂತಾಗುವದಲ್ಲವೆ?

೧ ಇಬ್ಬರು ಮೂವರು ದೇವರೆಂದು ಉಬ್ಬುಬ್ಬಿ ಮಾತಾಡಬೇಡ ದೇವನೊಬ್ಬ ಕಾಣಿರೋ, ಇಬ್ಬರೆಂಬುದು ಹುಸಿನೋಡು ಕೂಡಲಸಂಗಮದೇವನೊಬ್ಬನಲ್ಲದಿಲ್ಲೆಂದಿತ್ತು ವೇದ.

೨ ದೇವನೊಬ್ಬ ನಾಮ ಹಲವು; ಪರಮ ಪತಿವ್ರತೆಗೆ ಗಂಡನೊಬ್ಬ. ಮತ್ತೊಂದಕ್ಕೆರಗಿದರೆ ಕಿವಿಮೂಗು ಕೊಯ್ಯುವ. ಹಲವು ದೈವದ ಎಂಜಲನ ತಿಂಬುವವರೇನೆಂಬೆ ಕೂಡಲಸಂಗಮದೇವ.

ಈ ವಚನಗಳಲ್ಲದೆ ಹಿಂದಿನ ಪಾಸುಗಳಲ್ಲಿ ಕಾಣಿಸಿದ ವಚನಗಳಲ್ಲಿಯೂ ವಿಶ್ವ ಧರ್ಮದ ತತ್ವಗಳ ಸಮಾವೇಶನೆಯನ್ನು ನೋಡಬಹುದು. ಆದ್ದರಿಂದ ಬಸವೇಶ್ವರನು 'ವಸುಧೈವ ಕುಟುಂಬಿ' ಯೆಂದು ಧಾರಾಳವಾಗಿ ಹೇಳಬಹುದು. ಆತನ ಚರಿತ್ರೆ-ಪುರಾಣಗಳಲ್ಲಿ 'ವಸುಧೈವ ಕುಟುಂಬಿ' ಯಾಗಿದ್ದನೆಂದು ಹೇಳಲು ಆಧಾರಗಳುಂಟು. ಆದರೆ ಆಧಾರಗಳನ್ನು ಕೊಡುವದೂ, ಸಿದ್ಧ ಮಾಡುವದೂ ನನ್ನ ಸದ್ಯದ ಕರ್ತವ್ಯವಲ್ಲ.

ಸಾಹಿತ್ಯ ಶಾಖೆಯಲ್ಲಿ ವಚನ ಗ್ರಂಥಗಳ ಸ್ಥಾನ ಇದರ ವಿಷಯಕ್ಕೆ ವಿಚಾರ ಮಾಡುವಾ. ವೀರಶೈವ ಧರ್ಮವು ಸ್ವಾವಲಂಬಿಯೂ, ಪರಧರ್ಮದಲ್ಲಿ ಸಹಿಷ್ಣುತೆಯುಳ್ಳದ್ದಾಗಿಯೂ, ಅದು ಒಂದು ಮಾದರಿಯ ಧರ್ಮವಾಗುವಂತೆ ಮಾಡುವದು ಶರಣರ ಧ್ಯೇಯವಾಗಿತ್ತು. ಧರ್ಮಪ್ರಚಾರ ಮಾಡುವದು ಅವರ ಉದ್ದೇಶವಾಗಿತ್ತೆಂದು ಹಿಂದೆ ಹೇಳಿದ್ದಾಗಿದೆ. ಈ ಪ್ರಚಾರ ಕಾರ್ಯಕ್ಕಾಗಿ 'ಅನುಭವ ಮಂಟಪ' ವೆಂಬ ಕಾರ್ಯಕಾರೀ ಮಂಡಲವನ್ನು ಏರ್ಪಡಿಸಿದ್ದರು. ಆದರಲ್ಲಿ ಮಹದೇವಿಯಕ್ಕ ಇವರು ಭಾಗಿಗಳಾಗಿದ್ದರು. ವೇದಶಾಸ್ತ್ರಾಗಮ ಪುರಾಣಗಳ ಆಧಾರವನ್ನು ಆಯ್ದುಕೊಂಡು ಸಂಸ್ಕೃತ ಭಾಷೆಯಿಂದ ಧರ್ಮಪ್ರಚಾರ ಮಾಡುವದು ಅವರಿಗೆ ಅಷ್ಟು ಸರಿದೋರಿದಂತೆ ಕಾಣುವದಿಲ್ಲ. ಸರ್ವ ಸಾಮಾನ್ಯರಿಗೆ ಧರ್ಮದ ಗುಟ್ಟು ತಿಳಿಯಬೇಕಾದರೆ ಕಾವ್ಯ ಇಲ್ಲವೆ ಗದ್ಯಗ್ರಂಥಗಳಿಂದ ಆಗುವದಿಲ್ಲವೆಂದು ಅರಿತು ಸುಲಭವಾದ, ಸರಳವಾದ, ಸೌಮ್ಯ ಮಾತುಗಳಲ್ಲಿ ಧರ್ಮ ಪ್ರಚಾರಕ ಕಾರ್ಯವನ್ನು ಮಾಡಿದ್ದಾರೆ. ವೇದಾಗಮಗಳ ತಿರುಳು ವಚನಗಳಲ್ಲಿ ಕ್ರೋಡೀಕರಿಸಿಕೊಂಡಿದೆ. ಅಚ್ಚಕನ್ನಡದಲ್ಲಿ ಸುಲಭ ಶೈಲಿಯಲ್ಲಿ ಮನಸ್ಸಿಗೆ ತೀವ್ರ ಹೊಳೆಯುವಂಥ ಈ ವಚನಗಳನ್ನು ಬರೆದಿದ್ದಾರೆ. ಸಂಶಯವು ತಿಲಮಾತ್ರ ಉಳಿಯುವಂತಿಲ್ಲ. ವಿಷಯ ವಿವೇಚನೆಯಲ್ಲಿ ನಿರ್ದಾಕ್ಷಿಣ್ಯ, ಸ್ಪಷ್ಟತೆ ಮತ್ತು ಸರಳತೆಗಳು ಕಂಡುಬರುತ್ತವೆ.

ವಚನ ಶೈಲಿಯು ಭಾವೋದ್ರೇಕವನ್ನುಂಟುಮಾಡುತ್ತಿದೆ. ಓದಿದಂತೆ ಆಸಕ್ತಿಯುಂಟಾಗುತ್ತದೆ. ಹೃದಯನೈರ್ಮಲ್ಯದ ಛಾಯವು ಸುಳಿಯುತ್ತದೆ. ಸತ್ಯಮಾರ್ಗದ ಕಡೆಗೆ ಮನಸ್ಸು ಓಡುತ್ತದೆ. ಊಹಾಶಕ್ತಿಗೆ ನಿಲುವಿಲ್ಲ. ಅದಕ್ಕೆ ತತ್ವಜ್ಞಾನ ಮತ್ತು ಅಗಾಧ ವಿಚಾರಗಳ ಎರಕಹೊಯಿದಂತಾಗಿದೆ. ಭಾವಗರ್ಭತೆ ಮತ್ತು ಪ್ರಧಾನತೆಯು ವಚನಗಳ ಸ್ವರೂಪವಾಗಿರುವವಲ್ಲದೆ, ಅವುಗಳ ಹೊದಿಕೆಗಳಾಗಿವೆ. ಇಷ್ಟು ಉಚ್ಚತರಗತಿಯಿಂದ ಗುಣಗಣಾನ್ವಿತವಾಗಿದ್ದರೂ ಸರಳತೆಯ ಸೊಂಪನ್ನು ಬಿಟ್ಟಿಲ್ಲ. ಇದಕ್ಕೆ ಕೆಳಗೆ ಕಾಣಿಸಿದ ವಚನವೇ ಸಾಕ್ಷಿಯಾಗಿದೆ.

“ಮರ ಮಥನಿಸಿ, ಕಿಚ್ಚು ಹುಟ್ಟಿ, ಸುತ್ತಣ ತರುಮರಾದಿಗಳ ಸುಡಲಾಯಿತು
ಆತ್ಮವಾತ್ಮ ಮಥನಿಸಿ, ಅನುಭಾವ ಹುಟ್ಟಿ, ತನು-ಗುಣಾದಿಗಳ ಸುಡಲಾ
ಗಿತ್ತು, ಇದು ಕಾರಣ ನಿಮ್ಮ ಮಹಾನುಭಾವಿಗಳ ಅನುಭಾವವ ತೋರಿ,
ಎನ್ನೊಡಲನುಳುಹಿಕೊಳ್ಳು ಚನ್ನಮಲ್ಲಿಕಾರ್ಜುನಾ.”

ಹೀಗೆ ಶರಣೆಯ ವಿಚಾರ ಪರಿಪೂರ್ಣತೆ, ವಿಜ್ಞಾನಶಾಸ್ತ್ರದ ಆಂತರೀಯ ಜ್ಞಾನ ಮೊದಲಾದವುಗಳ ಪ್ರಯೋಗವನ್ನೂ, ಪ್ರತಿವಚನದಲ್ಲಿ, ಪ್ರತಿವಾಕ್ಯದಲ್ಲಿ, ಪ್ರತಿಶಬ್ದದಲ್ಲಿ ಕಾಣುತ್ತೇವೆ. ಅಂತೂ ಶರಣೆಯ ಆತ್ಮಜ್ಞಾನ ಮತ್ತು ಭೌತಿಕ ಜ್ಞಾನವು ಅತಿಶಯವಾದದ್ದು.

ಧಾರ್ಮಿಕ ವಿಷಯವನ್ನು ಅಭ್ಯಾಸಿಸುವದಾಗಲಿ, ಇಲ್ಲವೆ ಕೇಳುವದಾಗಲಿ ಬಹುತರವಾಗಿ ಬೇಸರವೆಂದು ಅನೇಕರು ಅಭಿಪ್ರಾಯಪಡುತ್ತಾರೆ. ಯಾಕಂದರೆ ಧಾರ್ಮಿಕ ವಿಷಯವು ಅಷ್ಟು ಗಹನವಾದದ್ದು. ಇಂಥ ವಿಷಯವನ್ನು ರುಚಿಕರ ವಾಗುವಂತೆ ಆಸಕ್ತಿಯು ಬೆಳೆಯುವಂತೆ ನಿತ್ಯ ವ್ಯವಹಾರದಲ್ಲಿ ಕಂಡುಬರುವ ಉದಾಹರಣೆಗಳಿಂದ ಶರಣ-ಶರಣೆಯರು ತುಲನೆಮಾಡುವರು.

“ಗಟ್ಟಿತುಪ್ಪ ತಿಳಿತುಪ್ಪಕ್ಕೆ ಭೇದ ಉಂಟೆ? ದೀಪಕ್ಕೆ ದೀಪ್ತಿಗೆ ಭೇದ ಉಂಟೆ ಅಯ್ಯ? ಆತ್ಮಕ್ಕೆ ಅಂಗಕ್ಕೆ ಭೇದ ಉಂಟೆ ಅಯ್ಯ? ಎನ್ನಂಗವನ್ನು ಶ್ರೀಗುರು ಮಂತ್ರವ ಮಾಡಿತೋರಿದನಾಗಿ, ಸಾವಯಕ್ಕೆ ನಿರವಯಕ್ಕೆ ಭಿನ್ನವಿಲ್ಲವಯ್ಯ; ಚೆನ್ನ ಮಲ್ಲಿಕಾರ್ಜುನ ದೇವರ ಬೆರಸಿ ಮತಿಗೆಟ್ಟವಳ ಏನ ನುಡಿಸುವಿರಯ್ಯ ಪ್ರಭುವೇ!

ಹೀಗೆ ಪರಮಾತ್ಮನಲ್ಲಿ ಸಾಮರಸ್ಯ ಭಾವವನ್ನು ತೋರಿದ್ದಾಳೆ. ಭಕ್ತಿಯ ಸ್ವರೂಪವನ್ನಾಗಲಿ, ಇಲ್ಲವೆ ಪರಮಾತ್ಮನ ಸ್ವರೂಪವನ್ನಾಗಲಿ ತಿಳಿಸಬೇಕಾದರೆ ಸಮಯಕ್ಕನುಗುಣವಾದ, ಉದ್ದೇಶಾರ್ಥವನ್ನು ತೋರುವ ಉಪಮೇಯಗಳ ಉಪಯೋಗವನ್ನು ಬೆರಳು ಕಚ್ಚುವಂತೆ ಮಾಡಿದ್ದಾರೆ.

“ಹಾಲು ತುಪ್ಪವ ನುಂಗಿ ಬೇರಾಗಬಲ್ಲದೇ? ಸೂರ್ಯಕಾಂತಿಯಲ್ಲಿದ್ದಗ್ನಿಯ
ನಾರು ಭೇದಿಸಬಲ್ಲರು? ಅಪಾರ ಮಹಿಮ ಚೆನ್ನಮಲ್ಲಿಕಾರ್ಜುನ ನೀನೆನ್ನೊ
ಳಡಗಿರ್ದ ಪರಿಯ ಬೇರಿಲ್ಲದೆ ಕಂಡು ಕಣ್ದೆರೆದೆನು.

ಇಂಥ ಪರಿಣಾಮದಾಯಕವಾದ ಹೋಲಿಕೆಗಳು ಕರ್ಣರಂಧ್ರಕ್ಕೆ ತಲ್ಪಿದ ಕೂಡಲೆ ಅವರ ಉದ್ದೇಶವು ಸ್ಪಷ್ಟವಾಗುವದಲ್ಲದೆ, ಮನಸ್ಸಿನಲ್ಲಿ ಸ್ಥಿರವಾಗಿ ಉಳಿ ಯುವದು. ಇಂಥ ಅಪಾರವಾದ ವಚನಸಾಗರವು ದೊರೆತದ್ದು, ಕನ್ನಡಿಗರ ಅಭ್ಯುದಯವೇ ಸರಿ. ಎಲ್ಲ ಶರಣ-ಶರಣೆಯರ ವಚನಗಳನ್ನು ಸಂಗ್ರಹಿಸಿ, ಪ್ರಕಟ ಮಾಡಿ, ಅವುಗಳನ್ನೋದುವ ಸಂಧಿಯನ್ನು ಕೊಟ್ಟದ್ದಕ್ಕಾಗಿ ರಾ| ಸಾ|| ಫ. ಗು. ಹಳಕಟ್ಟಿಯವರಿಗೆ ಕನ್ನಡಿಗರು ಋಣಿಯಾಗಿದ್ದಾರೆ.

—ಬಸವರಾಜ ವೀ. ಮೆಣಸಿನಕಾಯಿ, ಜೂನಿಯರ ಬಿ. ಎ.
ಬಸವನ ಬಳಗ, ಕೊಲ್ಲಾಪುರ.



# ಪಂಚದಶೀ ಸಾರವು.



ಲೇಖಕ :— ಶ್ರೀ ನೀಲಕಂಠಸ್ವಾಮಿ ಚಿಕ್ಕೋಡಿ,

ಶ್ರೀ. ಜಿ. ಗಂಗಾಧರ ಸಂ. ಕಾ. ಹುಬ್ಬಳ್ಳಿ.

( ಮುಂದೆ ಸಾಗಿದುದು. )

" ತತ್ವಮಸಿ " ಅನಾದಿ ಸಂಸಿದ್ಧಿಯಾಗಿಯೂ ನಾಮರೂಪಗಳಿಲ್ಲದ್ದೂ ಆದ ಚೈತನ್ಯವೇ ತತ್ವದ ವಾಚ್ಯಾರ್ಥವು.

" ಅಸಿ " ಪದಕ್ಕೆ ಐಕ್ಯಾರ್ಥವು.

" ಅಯಮಾತ್ಮಾ ಬ್ರಹ್ಮ " ಸ್ವಪ್ರಕಾಶವಾಗಿಯೂ, ಪ್ರತ್ಯಕ್ಷವಾಗಿಯೂ ಇರುವ ಚೈತನ್ಯವೇ 'ಅಯಮ್' ಪದದ ಅರ್ಥವು. ಅಹಂಕಾರ, ಪ್ರಾಣ, ಮನಸ್ಸು, ಇಂದ್ರಿಯ, ದೇಹ ಇಷ್ಟೆಲ್ಲವುಗಳಿಂದ ಭಿನ್ನವಾಗಿರುವ ಚೈತನ್ಯವೇ ಆತ್ಮಪದದ ವಾಚ್ಯಾರ್ಥವು. ಕಾಣುವ ಮಿಥ್ಯಾಭೂತ ಅಖಿಲ ಪ್ರಪಂಚಕ್ಕೆ ಅಧಿಷ್ಠಾನವಾದ ಚೈತನ್ಯವೇ ಇಲ್ಲಿ ಬ್ರಹ್ಮಪದವಾಚ್ಯಾರ್ಥವು ಸಂಭವಿಸುವದು.

## ೬ ಚಿತ್ರದೀಪವು.

ಶುಭ್ರವಾದ ಬಟ್ಟೆಯನ್ನು ಗಂಜೀಮಾಡಿ ನೀಲೀಬಣ್ಣ ಎದ್ದಿ ತರುವಾಯ ಅನೇಕ ಬಣ್ಣಗಳಿಂದ ಚಿತ್ರಿಸಿ ಚಿತ್ರ-ವಿಚಿತ್ರವಾದ ಬಟ್ಟೆಯನ್ನು ಹೇಗೆ ತಯಾರಿಸುವರೋ ಹಾಗೆ ಶುದ್ಧ ಬ್ರಹ್ಮವು ಮೊದಲು ಚಿತ್ತವೆಂತಲೂ ಮಾಯಾಸಂಸರ್ಗದಿಂದ ಅಂತರ್ಯಾಮಿಯೆಂತಲೂ ಸೂಕ್ಷ್ಮಶರೀರದ ಯೋಗದಿಂದ ಸೂತ್ರಾತ್ಮನೆಂತಲೂ ಸ್ಥೂಲಕಾಯದ ಸಂಪರ್ಕದಿಂದ ವಿರಾಟನೆಂತಲೂ ಭೇದವಾಯಿತು. ಚಿತ್ರದಲ್ಲಿ ಬರೆಯಲ್ಪಟ್ಟ ಗಿರಿ-ನದಿ ಮೊದಲಾದವುಗಳಂತೆ ಮೇಲೆ ಹೇಳಿದವರೆಲ್ಲರೂ ಚಿದಾಭಾಸರು. ಅಂದರೆ ಅವಿದ್ಯೆಯಿಂದ ಕಲ್ಪಿತರು. ಇದನ್ನು ತಿಳಿಯುವದಕ್ಕೆ ವಿದ್ಯೆಯೆನ್ನುತ್ತಾರೆ. ಈ ವಿದ್ಯೆಯಿಂದಲೇ ಬ್ರಹ್ಮನ ಸಿದ್ಧಿಯುಂಟಾಗುವದು. ಆದ್ದರಿಂದ ಪರೋಕ್ಷಾಪರೋಕ್ಷರೂಪ ಬ್ರಹ್ಮನ ವಿಚಾರವೇ ಇಲ್ಲಿ ಮುಖ್ಯವಾದುದು. ಘಟಾಕಾಶ, ಮಹಾಕಾಶ, ಜಲಾಕಾಶ, ಮೇಘಾಕಾಶಗಳಿದ್ದಂತೆ ಕೂಟಸ್ಥ, ಬ್ರಹ್ಮ-ಜೀವ ಈಶರೆಂಬ ಚತುರ್ವಿಧ ಚಿತ್ ಭೇದವುಂಟಾಯಿತು. ಜೀವೇಶ್ವರಾದಿಗಳು ಆವರಣ ವಿಕ್ಷೇಪ ಶಕ್ತ್ಯುಸಹಿತರಾದ್ದರಿಂದ ಇತರೇತರಾಧ್ಯಾಸವನ್ನು ಮಾಡಿಕೊಂಡು ಆತ್ಮಜ್ಞಾನಶೂನ್ಯರಾಗಿ ಭಾಗವತ, ಶೈವ ಗಾಣಪತ್ಯ ಮೊದಲಾದ ಮತಾಭಿಮಾನದಿಂದ ನಾನಾವಿಧವಾಗಿ ಹೋರಾಡಿ ಯಾವ ನಿಲುಕಡೆಯನ್ನು ಹೊಂದದೆ ಪರಬ್ರಹ್ಮವೇ

ಗತಿಯೆಂದು ತಿಳಿದು ಅದಕ್ಕೆ ಶರಣುಹೋಗುತ್ತಾರೆ. ಯಾಕಂದರೆ ಬ್ರಹ್ಮಾತಿರಿಕ್ತವೆಲ್ಲವೂ ಮಿಥ್ಯೆಯಾದ್ದರಿಂದಲೂ ಜಡವಿರುವದರಿಂದಲೂ ಅದರಿಂದ ಮುಕ್ತಿಯು ಎಂದಿಗೂ ಸಂಘಟಿಸದು. ಆದರೂ ಆಡಂಬರಪ್ರಿಯಮಾಯೆಯ ಚಮತ್ಕೃತಿಯು ಅತಿ ರಮಣೀಯವಾದುದು. ಯಾಕಂದರೆ ಅಸಾಧಾರಣ ಸಾಮರ್ಥ್ಯವುಳ್ಳ ಬ್ರಹ್ಮನನ್ನೂ ಸಹ ಮೋಹಿಸಿ ಬಿಟ್ಟಿತು. ಅಹಹ ಈ ಮಾಯೆಯನ್ನು ತಿಳಿಯಲು ಲಕ್ಷಿಸಲು ಶಕ್ಯವಿಲ್ಲ ಇದಲ್ಲದೆ ಅಜಡದಿಂದ ಜಡವನ್ನೂ ಜಡದಿಂದ ಅಜಡವನ್ನೂ ಹುಟ್ಟಿಸುವದೆಂದಮೇಲೆ ಈ ಮಾಯೆಯ ಜಾದುವಿದ್ಯೆಯನ್ನು ಯಾರು ತಾನೇ ಅರಿಯುವರು? ಕನ್ನಡಿಯಲ್ಲಿ ಮುಖದ ಪ್ರತಿಬಿಂಬ ಬೀಳುವಂತೆ ಬ್ರಹ್ಮನ ಪ್ರತಿಬಿಂಬವು ಮಾಯೆಯಲ್ಲಿ ಮೂಡಿದ್ದರಿಂದ ಹಿಂದೆ ಹೇಳಿದ ಜೀವೇಶಾದಿಗಳೆ ಆಭಾಸರೂಪವಾಗಿ ತೋರಿದರು. ಇಷ್ಟು ಮಾತ್ರಕ್ಕೆ ಪ್ರತಿ-ಬಿಂಬವು ನನ್ನಲ್ಲಿದೆಯೆಂದು ಮಾಯೆಯು ಉಬ್ಬಬಾರದು. ಯಾಕಂದರೆ ಬಿಂಬವಿಲ್ಲದಿದ್ದರೆ ಪ್ರತಿ-ಬಿಂಬವು ಎಲ್ಲಿಂದ? ಆದ್ದರಿಂದ ಇದೆಲ್ಲವೂ ಬ್ರಹ್ಮನ ಸನ್ನಿಧಿಯಿಂದಲೇ ಆಗುತ್ತಿದೆಯೆಂದು ಗಟ್ಟಿಯಾಗಿ ತಿಳಿದುಕೊಂಡಿರತಕ್ಕದ್ದು. ಸರ್ವಜ್ಞನಾದ ಪರಮೇಶ್ವರನೇ ಸರ್ವರಲ್ಲಿದ್ದು ಮಾಯೆಯಿಂದ ಜಗಚ್ಚಕ್ರವನ್ನು ತಿರುಗಿಸುತ್ತಾನೆ. ಮತ್ತು ಬ್ರಹ್ಮನಲ್ಲಿ ಕ್ರಮಸೃಷ್ಟಿಯಿದ್ದಂತೆ ಯುಗಪತ್ಸೃಷ್ಟಿಯೂ ಕೂಡ ಇರುವದು. "ತತ್ ಸೃಷ್ಟ್ವಾ ತದೇವಾನು ಪ್ರವಿಶತ್" ಎಂಬ ಶ್ರುತಿಪ್ರಮಾಣದಿಂದ ಬ್ರಹ್ಮನಿಗೆ ನಿಮಿತ್ತ ಉಪಾದಾನ ಕಾರಣಗಳು ಸಿದ್ಧವಾದವು. ಮತ್ತು ಬ್ರಹ್ಮವು ಸರ್ವವ್ಯಾಪಿಯೆಂದು ನಿಶ್ಚಯವಾಯಿತು. ಇದನ್ನರಿಯದೆ ಕೆಲವರು ಕಲ್ಲು-ಕಟ್ಟಿಗೆ-ಮಣ್ಣು ಮೊದಲಾದ ಪಂಚಭೂತಗಳಿಗೆ ದೇವರೆಂದು ಭಾವಿಸಿ ಕ್ಷುದ್ರಫಲವನ್ನು ಹೊಂದುತ್ತಾರೆ. ಇದನ್ನರಿತರೂ ಅಜ್ಞಾನದ ಅತಿಶಯದಿಂದ ಮತ್ತೆ ಕೆಲವರು ಭೂತಾತ್ಮವಾದಿಗಳಂತೆ ಗುಣಗುಟ್ಟುತ್ತಾರೆ. ಆದರೆ "ಬ್ರಹ್ಮಮಯಂ ಜಗತ್ ಸರ್ವಂ" ಎಂಬ ವಾಕ್ಯಾರ್ಥವನ್ನರಿತು ಸರ್ವವು ಬ್ರಹ್ಮಮಯವೇ ಅದೆಯೆಂದು ತಿಳಿದು ಉಪಾಸಿಸಿದಲ್ಲಿ ದೋಷವೇನೂ ಸಂಭವಿಸದು. ಕ್ಷುದ್ರದೇವತೆಗಳಿಂದ ಫಲವೇನೋ ತೋರುವದು; ಅದು ನಿಜವಲ್ಲ. ಸ್ವಪ್ನದಂತೆ ಆಭಾಸಮಾತ್ರವು. ಸಾಂಖ್ಯಯೋಗ ಮೊದಲಾದ ಮತವಾದಿಗಳು ಮಾಡುವ ಆತ್ಮಭೇದವು ನಿರಾಧಾರವಾದದ್ದು. ಮತ್ತು ಅನುಭವಕ್ಕೆ ವಿರೋಧವಾದದ್ದು. "ಏಕಮೇವಾದ್ವಿತೀಯಂ ಬ್ರಹ್ಮ" ಎಂಬ ಶ್ರುತಿಗಳಿರುವದರಿಂದ ಆತ್ಮಭೇದ ಮಾಡುವದೂ ಎಷ್ಟೂ ಸಮಂಜಸವಲ್ಲ. ಇಂಥ ಮತವಾದಿಗಳ ಅಳುಕಿನಲ್ಲಿ ಸಿಕ್ಕ ಆತ್ಮನಿಗೆ ಬಂಧವೂ, ಇದಕ್ಕೆ ಹೊರತಾಗಿದ್ದರೆ ಮೋಕ್ಷವೂ ಸಿದ್ಧಿಸುವದು. ಇದನ್ನರಿಯದ ಮಂದಮತಿಗಳು ಮನ ಬಲ್ಲಂತೆ ಮಾಡುವರು. ಇರಲಿ, ವಿಷಯದಲ್ಲಿ ದೋಷದೃಷ್ಟಿ, ತ್ಯಾಗಬುದ್ಧಿ ಮತ್ತು ಅನಧೀನತ್ವ ಇವು ಮೂರು ವೈರಾಗ್ಯಕ್ಕೆ ಮೂಲಕಾರಣಗಳು. ವಿರಾಗಿಯಾಗಿ ಶ್ರವಣ-ಮನನ-ನಿದಿಧ್ಯಾಸಗಳಿಂದಲೂ ಸಾಧನ ಚತುಷ್ಟಯ ಸಂಪತ್ತಿನಿಂದಲೂ ಬ್ರಹ್ಮಸ್ವರೂಪವನ್ನು

ತಿಳಿದವನು ಜೀವಿಸಿದ್ದರೂ ಮುಕ್ತನೇ ಸರಿ! ಒಟ್ಟಿನಮೇಲೆ ವಸ್ತ್ರದಲ್ಲಿ ಹೇಗೆ ಚಿತ್ರಗಳು ಬರೆಯಲ್ಪಡುವವೋ ಅದರಂತೆ ಬ್ರಹ್ಮ ಚೈತನ್ಯದಲ್ಲಿ ಮಾಯೆಯು ಜಡಾಜಡಾತ್ಮಕವಾದ ಜೀವೇಶ್ವರ ಪ್ರಪಂಚವನ್ನು ಬರೆದಿದ್ದಾಳೆ. ಆದ್ದರಿಂದ 'ಚಿತ್ರದೀಪ'ವೆಂದು ಹೆಸರು ಬಂದಂತೆ ತೋರುತ್ತದೆ. ಇರಲಿ, ಮಾಯೆಯು ಮಿಥ್ಯೆಯೆಂದು ಜಗತ್ಪ್ರಸಿದ್ಧವಷ್ಟೇ? ಆ ಮಿಥ್ಯವನ್ನರಿತರೆ ಸತ್ಯವಾದ ಬ್ರಹ್ಮನ ಉಳುಮೆಯೇ ಕಾಣುತ್ತದೆ. ನಂತರ ದ್ವೈತವೆಲ್ಲವು ಅಡಗಿ ಜೀವಾತ್ಮನು ಬ್ರಹ್ಮಾನಂದದಲ್ಲಿ ಬೆರೆಯುವನು.

## ೭ ತೃಪ್ತಿ ದೀಪವು.

---

ಈ ಪ್ರಕರಣದಲ್ಲಿ ಜೀವನ್ಮುಕ್ತನಿಗುಂಟಾಗುವ ತೃಪ್ತಿಯು ಹೇಳಲ್ಪಟ್ಟಿದೆ. ಈ ಮೊದಲು ಜೀವೇಶ್ವರಾದಿಗಳು ಮಾಯಾಕಲ್ಪಿತರೆಂತಲೂ ಸೃಷ್ಟಿ ಸ್ಥಿತಿಲಯಗಳು ಈಶನಿರ್ಮಿತಗಳೆಂತಲೂ ಜಾಗ್ರದಾದಿ ಪ್ರಪಂಚವು ಜೀವಕಲ್ಪಿತವೆಂತಲೂ ನಿರೂಪಿಸಲ್ಪಟ್ಟಿದೆ. ಮೊದಲು ಪುರುಷನಾರೆಂದು ನಿರ್ವಚನಿಸುತ್ತಾನೆ. ಪುರುಷ ಶಬ್ದಕ್ಕೆ ಬ್ರಹ್ಮನೇ ಲಕ್ಷ್ಯವಹುದು. ಆ ಲಕ್ಷ್ಯವಾದ ಪರಬ್ರಹ್ಮವನ್ನು ಕುರಿತು ಇಲ್ಲಿ ವಿವೇಚಿಸಲ್ಪಡುವದು. ಬುದ್ಧಿಯಲ್ಲಿ ಪ್ರತಿಫಲಿತವಾದ ಅಸಂಗ ಕೂಟಸ್ಥ ಚೈತನ್ಯವೇ ಪುರುಷನೆಂದು ಕರೆಯಲ್ಪಟ್ಟಿರುವದು. ಜೀವನಲ್ಲ ಯಾಕೆಂದರೆ ಇವನು ಭ್ರಮಿಷ್ಠನಾದ್ದರಿಂದ ಸಂಸಾರಿ ಎಂದು ಪ್ರಸಿದ್ಧವಾಯಿತು. ಭ್ರಮಾಂಶವು ಹೋದಲ್ಲಿ ಅವನಿಗೆ (ಜೀವನಿಗೆ) ನಾನು ಅಸಂಗ (ಅಂದರೆ ಕೂಟಸ್ಥ) ನಿದ್ದೇನೆಂದು ತಿಳಿವಳಿಕೆಯುಂಟಾಗುವದು. ಇದಾದರೂ ಅಧ್ಯಾಸದಿಂದಲೇ ಆಗುವದು 'ಅಹಂ ಕೂಟಸ್ಥ' ನಾನು ಕೂಟಸ್ಥನಿದ್ದೇನೆ ಎಂಬ ಜ್ಞಾನದಲ್ಲಿ ಪರೋಕ್ಷಾಪರೋಕ್ಷವುಂಟು ಮತ್ತು 'ದಶಮುಸ್ತ್ವಮುಸಿ' ಅಂದರೆ ಹತ್ತನೆಯವನು ನೀನಿರುವಿ ಎಂಬ ಶಬ್ದಜ್ಞಾನದಿಂದ ಅವನಿಗೆ ನಾನು ಹತ್ತನೆಯವನು ಎಂಬ ಪ್ರತ್ಯಕ್ಷಜ್ಞಾನವಾಗುವದು. ಇದಲ್ಲದೆ ಜೀವನ ಅಜ್ಞಾನ ಆವರಣ ಮೊದಲಾದ ಸಪ್ತಾವಸ್ಥೆಗಳು ಬ್ರಹ್ಮನಲ್ಲಿ ಆರೋಪಿತಗಳಾದ್ದರಿಂದ ಅಹಂಕಾರ ಮೊದಲಾದ ಗುಣಗಳುಂಟಾಗುವವು. ಈ ಅಧ್ಯಾರೋಪವನ್ನು ನಾಶಮಾಡುವದರಿಂದ ಅಪಾರವಾದ ಆನಂದವುಂಟಾಗವದು. ಬ್ರಹ್ಮವಸ್ತುವು ಆಗಮಾದಿ ಪ್ರಮಾಣಗಳಿಂದ ಅರಿಯತಕ್ಕದಾದ್ದರಿಂದ ಅಪರೋಕ್ಷವಾಗಲಿಲ್ಲವೆಂದು ಶಂಕಿಸಕೂಡದು. ಪರೋಕ್ಷಜ್ಞಾನದಿಂದಲೂ ಅಪರೋಕ್ಷಜ್ಞಾನವುಂಟಾಗುವದು. ಯಾಕಂದರೆ— ಭೃಗುಮುನಿಯು ಜಗತ್ಕಾರಣನಾದ ಬ್ರಹ್ಮನನ್ನು ಅಧ್ಯಾರೋಪ ಅಪವಾದ ಗರ್ಭಿತ ಗುರೂಪದೇಶವುಳ್ಳ ಪರೋಕ್ಷರೂಪಗಳಾದ ತತ್ವಮಸ್ಯಾದಿ ಮಹಾವಾಕ್ಯಗಳಿಂದ ಪ್ರತ್ಯಕ್ಷಮಾಡಿಕೊಂಡಿದ್ದಾನೆಂದು

ಐತಿಹ್ಯಪ್ರಮಾಣವುಂಟು. ಮತ್ತು ಕಿಂಚಿತ್ ಜ್ಞಾನದ ಜೀವನಿಗೂ ಸರ್ವಜ್ಞನಾದ ಬ್ರಹ್ಮನಿಗೂ ಐಕ್ಯ ಸಂಘಟಿಸದೆಂದು ಅನ್ನಲು ಬರುವದಿಲ್ಲ. ಯಾಕಂದರೆ 'ಸೋಯಂ ದೇವದತ್ತಃ' ಎಂಬ ವಾಕ್ಯಾರ್ಥದಂತೆ ಇಲ್ಲಿಯೂ ವಿರೋಧಾಂಶಗಳಿಂದ ಸರ್ವಜ್ಞತ್ವ ಕಿಂಚಿತ್ ಜ್ಞತ್ವ ಇವುಗಳನ್ನು ಬಿಟ್ಟು ಅವಿರೋಧಿಗಳಾದ ಚೈತನ್ಯಾಂಶಗಳಿಗೆ ಐಕ್ಯ ಸಂಭವಿಸುವದರಲ್ಲಿ ಬಾಧೆಯೇನು? ಇದಕ್ಕೆ ವೇದಾಂತದಲ್ಲಿ ಭಾಗಲಕ್ಷಣೆಯೆಂದು ಕರೆಯುವರು. ಇರಲಿ. ಈ ಜೀವೇಶ್ವರರಿಗೆ ಉಪಾಧಿಯಂತೂ ಬಿಟ್ಟದ್ದಲ್ಲ; ಆದ್ದರಿಂದ ದೂಷಣಾರ್ಹರೇ? ಬೇಡಿಗಳಲ್ಲಿ ಭಂಗಾರ ಮತ್ತು ಕಬ್ಬಿಣವೆಂದು ಅಭಿಮಾನ ಪಡುವದೇಕೆ? ಬಂಧನದಲ್ಲಿ ಎರಡೂ ಸಮಾನಗಳಷ್ಟೆ? ಅದರಂತೆ ಉಪಾಧಿಯಿಂದ ಭೇದವಾಗಿದ್ದರೂ ಚೈತನ್ಯಮಾತ್ರಕ್ಕೆ ಏಕತ್ವವುಂಟು. ಆ ಚೈತನ್ಯವು ದೀವಿಗೆಯಂತೆ ಪ್ರಕಾಶಮಾನವಾಗಿ ಸರ್ವವಸ್ತುಗಳನ್ನು ಬೆಳಗುವದು. (ಸೋಪಾಧಿಕ) ಜೀವನು ತನಗೆ ಬ್ರಹಾತ್ಮಭಾವವು ಸಿದ್ಧಿಸುವವರೆಗೆ ಶಮ-ದಮಾದಿ ಸಾಧನವುಳ್ಳವನಾಗಿ ಶ್ರವಣ ಉಪಾಸನಾದಿಗಳಿಂದಲೂ ಅಘಟಿತಘಟನಾಸಾಮರ್ಥ್ಯವುಳ್ಳ ಮನಸ್ಸಿನ ಚಾಂಚಲ್ಯ ಗುಣವನ್ನು ಹೊಡೆದೋಡಿಸಿ ಮನೋದಾರ್ಢ್ಯವನ್ನು ಪಡೆದಮೇಲೆ ಬ್ರಹ್ಮಭಾವವು ಸಿದ್ಧಿಸುವದು. ಇಷ್ಟೆಲ್ಲವನ್ನು ಏಕೆ ಮಾಡಬೇಕೆಂದು ಅಲ್ಲಗಳೆಯಲು ಬರುವದಿಲ್ಲ. ಪ್ರಾರಬ್ಧ ಕರ್ಮವನ್ನುಂಡೇ ತೀರಬೇಕಾಗುವದು. ಜನಕಾದಿಗಳು ಲೌಕಿಕವುಳ್ಳವರಾಗಿದ್ದರೂ ಪಾರಮಾರ್ಥಿಕ ಮಾರ್ಗದಿಂದಲೇ ಪರಮಾತ್ಮನನ್ನು ಕಂಡುಕೊಂಡಿದ್ದಾರೆ. ಅವರಿಗಾದರೂ ಈ ಪ್ರಾರಬ್ಧವು ಬಿಟ್ಟದ್ದಲ್ಲ. ಆದರೆ ಜ್ಞಾನಿಗಳ ಪ್ರಾರಬ್ಧಕ್ಕೂ ಅಜ್ಞಾನಿಗಳ ಪ್ರಾರಬ್ಧಕ್ಕೂ ವೈಷಮ್ಯವುಂಟು. ಯಾಕಂದರೆ ಜ್ಞಾನಿಗಳು ಲೌಕಿಕದಲ್ಲಿದ್ದರೂ ಧನ-ಕನಕಾದಿ ವಸ್ತುಗಳಲ್ಲಿ ಆಸಕ್ತರಾಗುವದಿಲ್ಲ; ಅವು ಅನಿತ್ಯಗಳಾಗಿರುವವು. ಅಜ್ಞಾನಿಗಳು ಮಾತ್ರ ಅವುಗಳಲ್ಲಿ ಯಾವಾಗಲೂ ಮೋಹಿತರಾಗಿರುತ್ತಾರೆ; ಆದ್ದರಿಂದಲೇ ಅವರಿಗೆ ಸದಾ ದುಃಖವು ಇದ್ದೇ ಅದೆ. ದ್ರವ್ಯಾರ್ಜನೆಯಲ್ಲಿ ದುಃಖ, ದ್ರವ್ಯರಕ್ಷಣೆಯಲ್ಲಿ ದುಃಖ, ದ್ರವ್ಯನಾಶದಲ್ಲಿ ದುಃಖ ಹೀಗೆ ದುಃಖವೇ ದುಃಖವು. ಜ್ಞಾನಿಗಳಿದನ್ನರಿತವರಾದ್ದರಿಂದ ವನಿತಾದಿ ವಿಷಯುಗಳಲ್ಲಿ ಲೋಲುಪರಾಗುವದಿಲ್ಲ. ಒಂದು ವೇಳೆ ಲೋಲುಪರಾದರೆ ಅಲ್ಲಿ ಪ್ರಾರಬ್ಧಕರ್ಮವು ಪ್ರಬಲವಾಗಿದೆಯೆಂದು ಹೇಳಬೇಕು. ಯಾಕಂದರೆ ವಿಷಯಸೇವನೆಯಿಂದ ವಿಷಯೇಚ್ಛೆಯನ್ನು ಪೂರ್ತಿಗೊಳಿಸುತ್ತೇನೆಂದು ಹೇಳುವದು, ಅಗ್ನಿಯನ್ನು ತುಪ್ಪದಿಂದ ಆರಿಸಲು ಪ್ರಯತ್ನಪಡುವಂತೆ ತಿಳಿಗೇಡಿತನದ ಮಾತೇ ಸರಿ. ಒಟ್ಟಿನಮೇಲೆ ವಿವೇಕಿಗಳಿಗಾದರೂ ಪ್ರಾರಬ್ಧಕರ್ಮವು ಬಿಟ್ಟಿರುವದಿಲ್ಲವೆಂಬದು ಸಿದ್ಧಾಂತದ ಮಾತು. ಈ ಪ್ರಾರಬ್ಧಕರ್ಮವು ಇಚ್ಛಾ-ಅನಿಚ್ಛಾ-ಪರೇಚ್ಛಾ ಹೀಗೆ ಮೂರು ವಿಧ ಉಂಟು.

ಈ ಪ್ರಾರಬ್ಧಕರ್ಮ ವಿಸ್ತೀರ್ಣವಾದ ಇತಿಹಾಸವನ್ನು ಇಲ್ಲಿ ಬರೆಯಲು ಅನುವಿಲ್ಲ. ಅದರ ಬಗ್ಗೆ ವಿಶೇಷ ಮಾಹಿತಿಯು ಬೇಕಾದಲ್ಲಿ ಭಗವದ್ಗೀತೆಯಲ್ಲಿ ನೋಡಿಕೊಳ್ಳತಕ್ಕದ್ದು. ಇಂದ್ರಜಾಲದಂತೆ ಪ್ರಾರಬ್ಧವು ನಾನಾವಿಧವಾಗಿ ತೋರುವದು. ಅಷ್ಟೇಕೆ ಇಡೀ ಜಗತ್ತನ್ನೇ ಕುಣಿಸುತ್ತಿರುವದು. ಇದನ್ನು ತಿಳಿದು ಸರ್ವಮಿಥ್ಯಾವಸ್ತುವನ್ನು ತ್ಯಾಗಮಾಡಿ ಮೂರು ಅವಸ್ಥೆಗಳಲ್ಲಿ ಬ್ರಹ್ಮ ಚೈತನ್ಯವು ಒಂದೇ ಇರುವದು—ಆ ಚೈತನ್ಯವೇ ನಾನು ಎಂಬದಾಗಿ ತಿಳಿದು ಕೊಂಡು ಯಾವನು ವರ್ತಿಸುತ್ತಾನೆಯೋ ಅವನೇ ಜೀವನ್ಮುಕ್ತನು. ಮರಣೋ-ನ್ಮುಖನಿಗೆ ಹೇಗೆ ಲಗ್ನದ ಇಚ್ಛೆಯು ಆಗಲಾರದೋ ಅದರಂತೆ ವಿಷಯಗಳಲ್ಲಿ ದೋಷದೃಷ್ಟಿಯುಳ್ಳ ಜೀವನ್ಮುಕ್ತನು ಮರಳಿ ವಿಷಯಗಳಿಗೆ ಮೋಹಿಸಲಾರನು. ಇದೆಲ್ಲವನ್ನು ವಿಚಾರಿಸುತ್ತಿರಲು ದೇಹಧರ್ಮಗಳನ್ನು ಆತ್ಮನಲ್ಲಿ ಅಧ್ಯಾಸಮಾಡಿ ಕೊಂಡು ಮರಮರನೆ ಮರಗುವದು ಎಂಥ ಹುಚ್ಚುತನದ ಮಾತು? ಕಡೆಗೆ ಪ್ರಾಯಶ್ಚಿತ್ತವನ್ನುಂಡೇ ತೀರಬೇಕಾಗುತ್ತದೆ. ಆದ್ದರಿಂದ ಅದನ್ನು ತುಚ್ಛೀಕರಿಸಿ ಆತ್ಮನು ನಿರ್ಲೇಪನೂ, ನಿರ್ವಿಕಾರಿಯೂ, ನಿರ್ಗುಣಿಯೂ, ನಿಷ್ಕರ್ಮಿಯೂ, ನಿತ್ಯಶುದ್ಧ ಬುದ್ಧಸ್ವಭಾವರೂಪನೂ, ಪ್ರಾಪಂಚಿಕ ಸುಖ–ದುಃಖಗಳ ಸಂಬಂಧ ವಿಲ್ಲದವನೂ ಮತ್ತು ಪ್ರಾರಬ್ಧಾದಿ ಕರ್ಮಗಳ ಬಲೆಗೆ ಸಿಲುಕದೆ ಇರುವವನೂ ಎಂದು ತಿಳಿದು ವರ್ತಿಸುವದೇ ಜೀವನ್ಮುಕ್ತನ ಸ್ಥಿತಿಯು; ಇದೇ ಲಕ್ಷಣವು. ಈ ಜೀವನ್ಮುಕ್ತನ ಸ್ಥಿತಿಯಲ್ಲಿಯೇ ಅಪಾರವಾದ ತೃಪ್ತಿಯು ಆತ್ಮನಿಗುಂಟಾಗುವದು.

(ಮುಂದೆ ಸಾಗುವದು)

---

## ವಿದ್ಯಾರಣ್ಯರ ಗ್ರಂಥಗಳು ಕನ್ನಡದಲ್ಲಾಗಬೇಕು!

'ಪಂಚದಶೀ' ಗ್ರಂಥವು ಭಾರತೀಯ ವೇದಾಂತ ಶಾಸ್ತ್ರದಲ್ಲಿ ವಿಶಿಷ್ಟಸ್ಥಾನ ವನ್ನುಳ್ಳದುದಾಗಿದೆ. ಪಂಚದಶೀ ಮೊದಲಾದ ಶ್ರೀಮದ್ವಿದ್ಯಾರಣ್ಯರ ಸಕಲ ಸಂಸ್ಕೃತ ಗ್ರಂಥಗಳನ್ನೂ ಕನ್ನಡಿಸುವದು ಕನ್ನಡಿಗರ ಆದ್ಯಕರ್ತವ್ಯವಾಗಿದೆ. 'ಪಂಚದಶಿ' ಯನ್ನೇನೋ ಶ್ರೀ ಹೊಸಕೆರೆ ಚಿದಂಬರಯ್ಯನವರು ಸಂಕ್ಷೇಪ ರೂಪದಲ್ಲಿ ಕನ್ನಡಿಸಿ ರುವರು. ಅದರಂತೆ ವಿದ್ಯಾರಣ್ಯರು ತಮ್ಮ ತಮ್ಮಂದಿರಾದ ಸಾಯಣಾಚಾರ್ಯ ರೊಡನೆ ವೇದಗಳಿಗೆ ಬರೆದ ಭಾಷ್ಯವಾದರೂ ಮೊದಲು ಕನ್ನಡಿಸಲ್ಪಡಬೇಕಾಗಿದೆ. ವಿದ್ಯಾರಣ್ಯರ ಗ್ರಂಥಗಳು ಜರ್ಮನ್ ದೇಶೀಯರೇ ಮೊದಲಾದ ವಿದೇಶೀಯರಿಂದ ಅಭ್ಯಾಸಿಸಲ್ಪಟ್ಟು ಆ ಜರ್ಮನ್ ಮೊದಲಾದ ಭಾಷೆಗಳಲ್ಲಿ ಪರಿವರ್ತಿಸಲ್ಪಟ್ಟಿವೆ. ಆದರೆ ಕನ್ನಡಿಗರಾದ ಅವರ ಗ್ರಂಥಗಳು ಕನ್ನಡಿಗರಿಂದ ಕನ್ನಡದಲ್ಲಿ ಪರಿವರ್ತಿತವಾ ಗಿಲ್ಲವೆಂಬದು ಶೋಚನೀಯ ಮಾತು. ವಿಜಯನಗರದ ಷಟ್‌ಶತ ಸಾಂವತ್ಸರಿ ಕೋತ್ಸವವು ನಿಜವಾದ ರೀತಿಯಲ್ಲಿ ಪಾಲಿಸಲ್ಪಡುವದಾದರೆ ವಿದ್ಯಾರಣ್ಯರ ಗ್ರಂಥ ಗಳನ್ನು ಕನ್ನಡಿಸಲಿಕ್ಕೇಬೇಕು. ಮತ್ತು 'ಜ್ಞಾನಿನಾ ಚರಿತುಂ ಶಕ್ಯಂ ಸಮ್ಯಗ್ರಾ ಜ್ಯಾದಿ ಲೌಕಿಕಮ್' ಎಂದು ಉದ್ಘೋಷಿಸಿದ ಅವರ ಗ್ರಂಥಗಳ ಆಳವಾದ ಅಭ್ಯಾಸ ವಾಗಬೇಕಾದುದೂ ಕನ್ನಡಿಗರ ರಾಷ್ಟ್ರೀಯ ಕರ್ತವ್ಯಗಳಲ್ಲೊಂದಾಗಿದೆ.

—ಸಂಪಾದಕರು.

# ಹಣ್ಣಿನ ಹೆಡಿಗಿ!

## (ಐತಿಹಾಸಿಕ ಕಿರುಗತೆ)

---

ಲೇಖಕ— ಎನ್. ಎಸ್. ಕುಂಭಾರ, ಹರಭಟ್ಟ ಹಾಯಸ್ಕೂಲ, ಕುಂದಗೋಳ.

### ೧.

ಮೇವಾಡದ ಅರಸನಾದ ವಿಕ್ರಮಜಿತುವು ರಾಜ್ಯವನ್ನು ಆಳಲು ಅಯೋಗ್ಯನಾಗಿದ್ದರೂ ಸಹ, ಕುಶಲಬುದ್ಧಿಯ ಮಂತ್ರಿಗಳೂ, ಅಪ್ರತಿಮ ಸ್ವದೇಶ ಪ್ರೇಮಿಗಳಾದ ಶೂರ ಸರದಾರ ಸೇನಾಪತಿಗಳೂ, ಅನುಪಮ ಸ್ವಾಮಿನಿಷ್ಠೆಯುಳ್ಳ ವರಾದ ವೀರಯೋಧರೆಲ್ಲರೂ ಕೂಡಿಕೊಂಡು ರಾಜಮನೆತನದ ಪದ್ಧತಿಯ ಪ್ರಕಾರ ಅವನಿಗೇ ಪಟ್ಟವನ್ನು ಕಟ್ಟಿ ರಾಜ್ಯಶಕಟವನ್ನು ಸುಸೂತ್ರವಾಗಿ ಸಾಗಿಸಿದ್ದರು, ಆದರೆ ಅರಸುಮನೆತನಕ್ಕೆ ಸಂಬಂಧಿಸಿದ ಬನಬೀರನು, ಮೇವಾಡದ ಸಿಂಹಾಸನ ವನ್ನು ತಾನು ಹಿಡಿದುಕೊಳ್ಳಬೇಕೆಂಬ ದುರಭಿಲಾಷೆಯಿಂದ ಒಡಕನ್ನು ಹುಟ್ಟಿಸಿ, ರಾಜದ್ರೋಹಿಗಳಾದ ಕೆಲವರನ್ನು ತನ್ನ ಕಡೆಗೆ ಒಡಿಸಿಕೊಂಡು, ರಾಜ ಮನೆತನ ವನ್ನು ನಿರ್ಮೂಲವಮಾಡುವದಕ್ಕಾಗಿ ಹೊಂಚುಹಾಕಿಕೊಂಡು ಕುಳಿತಿದ್ದನು. ದಿನೇ ದಿನೇ ನೀಚನಾದ ಬನಬೀರನ ಪಕ್ಷವು ಬಲಿಯ ತೊಡಗಿತು. ರಾಜನ ಪಕ್ಷದಲ್ಲಿ ಸದ್ಧರ್ಮಶೀಲ ಸ್ವಾಮಿನಿಷ್ಠ ಸರದಾರನಾದ ಸತ್ಯಸಿಂಹನೊಬ್ಬನಿಲ್ಲದಿದ್ದರೆ, ಇಷ್ಟೊತ್ತಿಗೆ ಬನಬೀರನು ಆಯಾಸವಿಲ್ಲದೆ ರಾಜಮನೆತನವನ್ನು ನಿರ್ನಾಮಗೊಳಿಸಿ ಸಿಂಹಾಸನವನ್ನು ಹಿಡಿದುಕೊಳ್ಳುತ್ತಿದ್ದನು. ಆದರೆ ಸ್ವಾಮಿಭಕ್ತನಾದ ಸತ್ಯಸಿಂಹನ ಮುಂದೆ ಆತನ ಆಟವು ನಡೆಯದಂತಾಗಿತ್ತು. ಇಂಥ ಗಂಡಾತರದ ವೇಳೆಯಲ್ಲಿ ರಾಜ ಕುಮಾರನಾದ ಉದಯಸಿಂಗನ ಸಂರಕ್ಷಣೆಯ ಭಾರವನ್ನು ಸತ್ಯಸಿಂಹನೇ ಹೊತ್ತು ಕೊಂಡಿದ್ದನು.

ಸತ್ಯಸಿಂಹನ ಸತಿಯಾದ ಪನ್ನೆಯು ಉದಯಸಿಂಗನನ್ನು ತನ್ನ ಹೊಟ್ಟೆಯ ಮಗನಂತೆಯೇ ಜೋಕೆಮಾಡುತ್ತಿದ್ದಳು. ನೀಚನಾದ ಬನಬೀರನು ಯಾವ ವೇಳೆಯಲ್ಲಿ ಏನು ಮಾಡುವನೆಂಬ ನೇಮವಿಲ್ಲದ್ದರಿಂದ ಅವಳು ಯಾವಾಗಲೂ ರಾಜ ಕುಮಾರನನ್ನು ಕಣ್ಣುಮುಂದಿರಿಸಿಕೊಂಡು ಆತನ ದೃಷ್ಟಿಗೆ ಬೀಳಗೊಡದಂತೆ ನೋಡಿಕೊಳ್ಳುತ್ತಿದ್ದಳು. ಪ್ರತ್ಯಕ್ಷ ಬನಬೀರನು ರಾಜಕುಮಾರನನ್ನು ನೋಡಲು

ಬಂದು "ರಾಜಕುಮಾರನೆಲ್ಲಿ" ಎಂದು ಕೇಳಿದರೆ ಪನ್ನೆಯು "ಇದೇ ಈಗ ಆಟವನ್ನಾಡಿ ಬಂದು ದಣಿದು ಮಲಗಿಕೊಂಡಿದ್ದಾ"ನೆಂದು ಸುಳ್ಳುಹೇಳಿ ನೀಚನಿಗೆ ಆತನ ಮುಖವನ್ನು ಸಹ ತೋರಗೊಡುತ್ತಿದ್ದಿಲ್ಲ! ಬಂದ ದಾರಿಗೆ ಸುಂಕವಿಲ್ಲೆಂದು ಬನಬೀರನು ನಿರುಪಾಯನಾಗಿ ಪನ್ನೆಯ ಮೇಲೆ ಕರಕರ ಹಲ್ಲುಕಡಿಯುತ್ತ "ಆಗಲಿ! ಇನ್ನೊಮ್ಮೆ ಬರುವೆನು" ಎಂದು ಹೇಳಿ ಹೋಗುತ್ತಿದ್ದನು. ಇಂತಪ್ಪ ಸ್ವಾಮಿನಿಷ್ಠ ದಂಪತಿಗಳ ಬಲವಾದ ಕಾವಲಿನೊಳಗಿನ ರಾಜ ಕುಮಾರನಿಗೆ ಅಪಾಯವನ್ನು ಮಾಡುವದು ಯಾರಿಗೆ ತಾನೆ ಸಾಧ್ಯವು? ಮೇವಾಡದ ಸಿಂಹಾಸನ ವನ್ನು ಹಿಡಿದುಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯಿಂದ ದುರ್ಮಾರ್ಗದಲ್ಲಿ ನಡೆದ ಬನಬೀರನು ಸತ್ಯಸಿಂಹನೊಬ್ಬನನ್ನು ಮಾತ್ರ ತನ್ನ ಕಡೆಗೆ ಒಡಿಸಿಕೊಂಡರೆ, ಎಲ್ಲವೂ ಸುಲಭಸಾಧ್ಯವಾಗುವದೆಂದು ತಿಳಿದುಕೊಂಡು, ಆತನನ್ನು ತನ್ನ ಕಡೆಗೆ ಬರಮಾಡಿಕೊಂಡು, ಮುಖಸ್ತುತಿಯನ್ನು ಮಾಡಿ, ಸರದಾರ ಸುಭೇದಾರಿಕೆಗಳ ಆಶೆ ತೋರಿಸಿದನು! ಅವನೊಬ್ಬನು ತನ್ನ ಪಕ್ಷಕ್ಕೆ ವಿರುದ್ಧ ನಿಂತಲ್ಲಿ ಮುಂದೊದಗ ಬಹುದಾದ ಕಠಿಣ ಪರಿಸ್ಥಿತಿಯ ಬೆದರಿಕೆಯನ್ನು ಹಾಕಿದನು. ಅದಾವದಕ್ಕೂ ಸತ್ಯಸಿಂಹನು ಸೊಪ್ಪುಹಾಕದೆ ಯಥಾಪ್ರಕಾರ ರಾಜ್ಯದಾಡಳಿತವು ಸಡಿಲಾಗದಂತೆ ಪ್ರಯತ್ನಿಸುತ್ತಿದ್ದನು; ಆದರೂ ಬರಬರುತ್ತ ರಾಜನ ಪಕ್ಷವು ಕ್ಷೀಣವಾಗತೊಡಗಿತು. ಸ್ವಾಮಿಭಕ್ತ ಸಂಪನ್ನರೆಂದು ಮೆರೆದಾಡುತ್ತಿದ್ದ ಅನೇಕ ಸರದಾರ ಸೇನಾಪತಿಗಳು ಬನಬೀರನ ಪಕ್ಷವನ್ನು ಕೂಡಿಕೊಳ್ಳಹತ್ತಿದರು. ಅಧಿಕಾರದ ಆಶೆಗೆ ಬಿದ್ದು ರಾಜ ದ್ರೋಹಿಗಳಾಗಹತ್ತಿದರು. ವೃದ್ಧನೂ ಶೂರನೂ ಆದ ಲಕ್ಷ್ಮಣಸಿಂಹನಂಥ ಪ್ರಬಲ ಮುತ್ಸದ್ದಿಗಳ ಬೆಂಬಲವೂ, ಅನುಪಮ ಸ್ವಾಮಿನಿಷ್ಠೆಯುಳ್ಳವರಾದ ಕೆಲ ಯೋಧರ ಸಹಾಯವೂ ಸತ್ಯಸಿಂಹನಿಗೆ ತನ್ನ ಕರ್ತವ್ಯಮಾರ್ಗದಲ್ಲಿ ನಡೆಯಲು ಹುರುಪು ಕೊಡುತ್ತಿದ್ದವು. ಆದರೂ ಕೃಷ್ಣಕಾರಸ್ಥಾನಿಯಾದ ಬನಬೀರನ ಬಲಾಢ್ಯವಾದ ಪಕ್ಷದೆದುರಿಗೆ, ಕೇವಲ ನಿರ್ಬಲ ಪಕ್ಷದ ಸತ್ಯಸಿಂಹನೆಷ್ಟು ವೇಳೆಯ ವರೆಗೆ ತಡೆದು ನಿಲ್ಲಬಲ್ಲನು? ಜೀವಕ್ಕೆ ಜೀವಕೊಡಲು ಬದ್ಧರಾದ ಸರದಾರ ಸೇನಾಪತಿಗಳು ಒಳಗಿಂದೊಳಗೆ ರಾಜನ ವಿರುದ್ಧ ನಿಲ್ಲಬೇಕಾದರೆ ವಿಕ್ರಮಜಿತು ಮಹಾರಾಜನ ದುರ್ದೈವವಲ್ಲದಿನ್ನೇನು?

## ೨.

ರಾಜದರ್ಬಾರಕ್ಕೆ ಹೋದ ಗಂಡನು ಸರಿರಾತ್ರಿಯಾಗುತ್ತ ಬಂದರೂ, ಇನ್ನೂ ಯಾಕೆ ಬರಲಿಲ್ಲೆಂಬ ಚಿಂತೆಯಿಂದ ಪನ್ನೆಯು ವಿಚಾರಗ್ರಸ್ತಳಾಗಿ ಕುಳಿತುಕೊಂಡಿದ್ದಳು. ಇತ್ತೀಚೆಗೆ ನೀಚನಾದ ಬನಬೀರನಿಂದ ಪ್ರತಿ ದಿವಸ ನಡೆಯುತ್ತಿದ್ದ ಕ್ರೂರಕೃತ್ಯಗಳನ್ನು ಕೇಳಿಕೊಂಡ ಪನ್ನೆಯು ಇಂದು ಇಷ್ಟೊತ್ತಾದರೂ

ಪತಿಯು ಯಾಕೆ ಬರಲಿಲ್ಲವೆಂದು ಹೌಹಾರಿ ಗಂಡನ ಮಾರ್ಗಪ್ರತೀಕ್ಷೆ ಮಾಡುತ್ತಿದ್ದಳು. “ದೇಶದ್ರೋಹಿಗಳಿಂದ, ಕೊಲೆಪಾತಕರಿಂದ ತುಂಬಿತುಳುಕುವ ಇಂದಿನ ರಾಜ ದರ್ಬಾರಕ್ಕೆ ಹೋಗಬೇಡಿರೆಂದು ಹೇಳಿದರೂ ಕೇಳದೆ ಹೋದರು. ಏನಾಗುಪದೋ ಏನೋ” ಎಂದು ಅವಳ ಹೃದಯವು ಕಾತರಗೊಳ್ಳುತ್ತಿತ್ತು. ಅವಳ ಎಡಭಾಗದಲ್ಲಿ ವಿಕ್ರಮಜಿತುವಿನ ಒಬ್ಬನೇ ಒಬ್ಬ ಮಗನಾದ, ಮೇವಾಡದ ಯುವ ರಾಜಕುಮಾರನಾದ ಉದಯಸಿಂಗನು ಮಲಗಿ ನಿದ್ರಿಸುತ್ತಿದ್ದನು. ಬಲಭಾಗದಲ್ಲಿ ಪನ್ನೆಯ ಮಗನು ಮಲಗಿಕೊಂಡಿದ್ದನು. ಹಗಲೆಲ್ಲಾ ಆಡಿ ಆಡಿ ದಣಿದ ಬಾಲಕರೀರ್ವರೂ ನಿದ್ರಾದೇವಿಯು ಮೋಹಪಾಶಗಳಿಂದ ಬಿಗಿಯಲ್ಪಟ್ಟವರಾಗಿ, ಜಗತ್ತಿನ ಜೀವಿಗಳ ಕ್ರೂರಕೃತ್ಯಗಳನ್ನು ನೋಡಲಾರದವರಂತೆ ಕಣ್ಣುಮುಚ್ಚಿಕೊಂಡಿದ್ದರು. ಅರಮನೆಯಲ್ಲೆಲ್ಲ ಭಯಮಿಶ್ರಿತವಾದ ಶಾಂತ ವಾತಾವರಣವು ಸುಳಿದಾಡುತ್ತಿತ್ತು. ಪನ್ನೆಯು ಒಮ್ಮೆ ತೂಕಡಿಸುತ್ತಲೂ, ಮತ್ತೊಮ್ಮೆ ಭಯಚಕಿತ ದೃಷ್ಟಿಯಿಂದ ಬಾಲಕರೀರ್ವರ ಕಡೆಗೆ ನೋಡುತ್ತಲೂ ಕುಳಿತುಕೊಂಡಿದ್ದಳು.

“ಪನ್ನಾ ತಾಯೀ! ಪನ್ನಾ ತಾಯೀ, ಘಾತವಾಗಿದೆ! ಬಾಗಿಲನ್ನು ತೆರೆಯಿರಿ; ಸರ್ವಸ್ವವೂ ಘಾತವಾಗಿದೆ!!” ಓಡುತ್ತ ಬಂದ ವ್ಯಕ್ತಿಯು ತೇಕುತ್ತ ನುಡಿದನು.

ಪನ್ನೆಯು ಸರಿರಾತ್ರಿಯಲ್ಲಿ ಈ ಪ್ರಕಾರ ಕೂಗುತ್ತ ಬಂದ ವ್ಯಕ್ತಿಯು ಯಾರೆಂದು ನೋಡಲು ಬಾಗಿಲ ತೆರೆಯುತ್ತ “ಯಾರವರು? ಏನು ಘಾತವಾಗಿದೆ” ಎಂದು ಕೇಳಿದಳು.

“ನಾನು ತಮ್ಮ ಸ್ವಾಮಿನಿಷ್ಠ ಸೇವ........”....ನೆಂದು ಹೇಳುತ್ತಿರುವಷ್ಟರಲ್ಲಿ ಪನ್ನೆಯು “ಇರಲಿ! ಮೊದಲು ಏನಾಗಿದೆ ಹೇಳು. ಹೂ.” ಆತುರದಿಂದ ಕೇಳಿದಳು.

“ತಾಯೀ ಇಂದಿಗೆ ಮೇವಾಡದ ಸರ್ವಸ್ವವೂ ಹಾಳಾಗಿ ಹೋಯಿತು! ಮೇವಾಡವು ದುಷ್ಟರ ಕಪಟಕಾರಸ್ಥಾನಿಗಳ ಪ್ರಾಬಲ್ಯವು ಮಿತಿಮೀರತೊಡಗಿತು! ಸ್ವಾಮಿನಿಷ್ಠ ಸರದಾರ ಸೇವಕರೆಲ್ಲರು ಸೆರೆಮನೆ ಉಳಿಯುವ ಹೊತ್ತು ಬರಲಿಲ್ಲ! ಸ್ವಾಮಿನಿಷ್ಠ ಸರದಾರ ಸೇವಕರೆಲ್ಲರು ಸೆರೆಮನೆಯನ್ನು ಕಾಣುವ ಹೊತ್ತು ಬಂದಿತು.” ಹೀಗೆಂದು ಕಂಬನಿ ಸುರಿಸುತ್ತಾ ಆ ಸೇವಕನು ನುಡಿದನು.

“ಹೀಗೆ ದುಃಖಿಸಿದರೆ ಬರುವದೇನು? ಏನಾಗಿದೆ ಬೇಗನೆ ಹೇಳು. ನನ್ನ ಹೃದಯವು ಕಸವಿಸಿಗೊಳ್ಳುತ್ತಲಿದೆ. ಹೂ.” ಆತುರದಿಂದ ಪನ್ನೆಯು ಮತ್ತೆ ಕೇಳಿದಳು.

ಸೇವಕ— ತಾಯೀ! ಏನು ಹೇಳಲಿ ಇಂದಿನ ರಾಜದರ್ಬಾರದಲ್ಲಿಯ ಕ್ರೂರ ಕೃತ್ಯಗಳನ್ನು? ಬನಬೀರನ ಆಜ್ಞೆಯ ಮೇರೆಗೆ ಕೂಡಿದ ಇಂದಿನ ರಾಜ ದರ್ಬಾರಕ್ಕೆ ಬಂದವರಲ್ಲಿ ಸತ್ಯಸಿಂಹ, ಲಕ್ಷ್ಮಣಸಿಂಹರೀರ್ವರ ಹೊರ್ತಾಗಿ ಉಳಿದವ ರೆಲ್ಲರೂ ಬನಬೀರನ ಪಕ್ಷದವರೇ ಇದ್ದರು! ಸತ್ಯಸಿಂಹ ಲಕ್ಷ್ಮಣಸಿಂಹರೀರ್ವರೂ ಬನಬೀರನ ರಾಜ್ಯಬಾಧ್ಯತೆಗೆ ಒಪ್ಪದೆ "ನಮ್ಮ ದೇಹದಲ್ಲಿ ಒಂದು ಹನಿ ರಕ್ತವಿರುವ ವರೆಗೂ ನಮ್ಮ ಸ್ವಾಮಿಯ ಸಲುವಾಗಿ, ಸ್ವದೇಶೋದ್ಧಾರದ ಸಲುವಾಗಿ ಕಾದಾ ಡುವೆವಲ್ಲದೆ, ನೀಚನೂ ಕೃಷ್ಣಕಾರಸ್ಥಾನಿಯೂ ಆದ ನಿನ್ನಂಥ ಅಧಮಾಧಮನ ಪಕ್ಷಕ್ಕೆ ಎಂದಿಗೂ ಸೇರಲಾರೆವು. ಪ್ರಸಂಗಬಂದಲ್ಲಿ ಸ್ವದೇಶ, ಸ್ವಾಮಿಯ ಹಿತ-ಕ್ಕಾಗಿ ರಣಾಂಗಣದಲ್ಲಿ ಕಾದಾಡುತ್ತ ಮರಣವನ್ನೈದುವೆವಲ್ಲದೆ ರಾಕ್ಷಸೀ ರಾಜ್ಯ ತೃಷ್ಣೆಯುವನಾದ ನಿನ್ನ ಪಕ್ಷಕ್ಕೆ ಒಳಗಾಗಿ, ತುತ್ತು ರೊಟ್ಟಿಗೆ ಆಶೆಮಾಡಿ ಬಾಲ ವನ್ನು ಗುಂಡಾಡಿಸುತ್ತ ಬೆನ್ನತ್ತಿ ಬರುವ ನಾಯಿಯಂತೆ ಆಗಿ, ರಾಜದ್ರೋಹವನ್ನು ಮಾಡಲಾರೆವು" ಹೀಗೆಂದು ಖಂಡ-ತುಂಡಾಗಿ ಹೇಳಿದ ಕೂಡಲೆ, ಬನಬೀರನು ಕೋಪಾವಿಷ್ಟನಾಗಿ ಸ್ವಲ್ಪಾದರೂ ಅನುಮಾನಗೊಳ್ಳದೆ, ಸೇವಕರಿಂದ ಪ್ರಬಲ ಮುತ್ಸದ್ದಿಯೂ ವೃದ್ಧನೂ ಆದ ಲಕ್ಷ್ಮಣಸಿಂಹನನ್ನು ರಾಜದರ್ಬಾರದಿಂದ ಹೊರ ದೂಡಿಸಿ ಬಿಟ್ಟನು! ಸತ್ಯಸಿಂಹ ಸರದಾರರನ್ನು ರಾಜದರ್ಬಾರದಲ್ಲಿಯೇ ಬಲತ್ಕಾರ ದಿಂದ ಬಂಧಿಸಿ ಸೆರೆಮನೆಯನ್ನು ಕಾಣಿಸಿದನು! ಅಯ್ಯೋ! ಸ್ವಾಮಿನಿಷ್ಠ ಸರ ದಾರರಿಗೆ, ಸ್ವದೇಶಪ್ರೇಮಿಗಳಿಗೆ ಪವಿತ್ರವಾದ ಈ ಮೇವಾಡದಲ್ಲಿ ಮಾನವಿಲ್ಲದಾ ಯಿತೇ? ಸತ್ಯಸಿಂಹನಂಥ ಸ್ವಾಮಿಭಕ್ತನಿಗೆ ಕಾರಾಗ್ರಹವಾಸವೆಂದರೆ ಎಂಥ ವಿಚಿತ್ರ ವಿದು! ಮೇವಾಡದ ವೀರರೆಲ್ಲರೂ ಇಂದು ರಾಜದ್ರೋಹಿಗಳಾದರೇ? ಅಧಿಕಾರದ ಆಶೆಗೆ ಬಿದ್ದು ಸ್ವಾಮಿಭಕ್ತಿಯಿಲ್ಲದವರಾಗಿ ಪಶುಗಳಾದರೇ? ಮೇವಾಡದ ದುರ್ದೈ ವವು!!

ಪನ್ನಾ— ಹೀಗಾಗುವದೆಂದೇ ನಾನು ಮೊದಲು ಅವರಿಗೆ ಇಂದಿನ ರಾಜ ದರ್ಬಾರಕ್ಕೆ ಹೋಗಬೇಡಿರೆಂದು ಅಲ್ಪರಿದು ಹೇಳಿದೆನು. ಹೋದರೂ ಎಚ್ಚರಿಕೆ ಯಿಂದಿರಬೇಕೆಂದು ಹೇಳಿದ್ದೆನು. ಎಲ್ಲವೂ ವ್ಯರ್ಥವಾಗಿ ಹೋಯಿತು! ನೀಚ ನಾದ ಬನಬೀರನು ಇಂಥ ಸುಸಂಧಿಯನ್ನು ವ್ಯರ್ಥವಾಗಿ ಕಳೆದುಕೊಳ್ಳುವನೇ? ಮದಾಂಧನಾದ ಬನಬೀರನೇ ಇಷ್ಟೊಂದು ಕ್ರೂರ ಹಾಗೂ ರಾಜದ್ರೋಹಕಾರ್ಯ ಪ್ರವರ್ತಕನಾದೆಯಾ?.... ಹಾಯ್! ಹಾಯ್!! ಪ್ರಾಣನಾಥನೇ, ಇನ್ನುಮೇಲೆ ರಾಜಕುಮಾರನ ಸಂರಕ್ಷಣೆಯ ಬಗೆಯೇನು? ಅಬಲೆಯಾದ ನಾನೇನು ಮಾಡಲಿ? ಕಪಟಿಯಾದ ಬನಬೀರನು ಅಂತ್ಯಕ್ಕೆ ತನ್ನ ಕೈಯನ್ನು ಚನ್ನಾಗಿ ತೋರಿಸಿದನಲ್ಲವೆ?

ಸೇವಕ— ಪನ್ನಾ ತಾಯಿಯವರೇ, ಇಷ್ಟೇ ಏಕೆ? ಇನ್ನೂ ಸಹಿಸಲಸಾಧ್ಯ ವಾದಂಥ ದುಃಖವನ್ನು ನಮ್ಮೆಲ್ಲರ ಮೇಲೆ ತಂದೊಡ್ಡಿದ್ದಾನೆ. ನಾವೆಲ್ಲರು

ಆತನ ಈ ಕಪಟಕಾರಸ್ಥಾನದ ಬಲೆಯೊಳಗಿಂದ ಪಾರಾಗುವದೇ ಪರಮ ದುಸ್ತರವಾಗಿರುತ್ತದೆ. ರಾಜದರ್ಬಾರದಲ್ಲಿ ಇಷ್ಟೊಂದು ಅನನ್ವಿತ ಕೃತ್ಯಗಳನ್ನು ಮಾಡಿ ಹೋಗಿ ನೀಚನಾದ ಬನಬೀರನು, ವಿಕ್ರಮಜಿತು ಮಹಾರಾಜರ ಕೊಲೆಯನ್ನು ಮಾಡಿದ್ದಾನೆ! ಅಯ್ಯೋ! ಇಂದಿಗೆ ಮೇವಾಡದ ಮಾರ್ತಾಂಡನು ಅಸ್ತಂಗತನಾದನು! ನೀಚನಾದ ಬನಬೀರನ ರಾಕ್ಷಸೀ ರಾಜ್ಯತೃಷೆಗೆ ಆಹುತಿಯಾದನು!!

ಪನ್ನಾ— ಅಯ್ಯೋ ದೈವವೇ, ಇಷ್ಟೊಂದು ಪರಿ ದುಃಖವನ್ನು ತಂದೊಡ್ಡಬೇಕೆಂದು ನಿನ್ನ ಇಚ್ಛೆಯಿತ್ತೇ! ವಿಕ್ರಮಜಿತು ಮಹಾರಾಜರೇ, ಸ್ವಾರ್ಥಿಯಾದ ಬನಬೀರನ ಕಲುಷಿತ ಖಡ್ಗಧಾರೆಗೆ ತುತ್ತಾದಿರಾ? ರಾಜ್ಯಪದವಿಯು ಬೇಡಬೇಡವೆಂದರೂ ಕೇಳದೆ ನೀವು ನನಗೆ ಗಂಟುಹಾಕಿ ಬನಬೀರನಿಂದ ನನ್ನ ಪ್ರಾಣಾಹುತಿಯನ್ನು ತೆಗೆದುಕೊಂಡಿರೆಂದು ನಮ್ಮನ್ನು ಹೀಯಾಳಿಸುವಿರಾ? ಪ್ರಭುವೇ, ನಿಜವಾಗಿ ನಾವು ಹೇಡಿಗಳು! ತಮ್ಮ ಪ್ರಾಣವನ್ನು ರಕ್ಷಿಸದೆ ನನ್ನ ಪತಿಯಾದರೂ............"

ಸೇವಕ— ಹಾ! ತಡೆಯಿರಿ! ಮುಂದಿನ ಶಬ್ದಗಳು ತಮ್ಮಂಥ ವೀರವನಿತೆಯರ ಬಾಯೊಳಗಿಂದ ಹೊರಡಬಾರದು! ಪ್ರಭುವಿನ ರಕ್ಷಣೆಗಾಗಿಯೇ, ರಾಜದ್ರೋಹಿಗಳನ್ನು ಸೆದೆಬಡೆಯುವದಕ್ಕಾಗಿಯೇ, ರಾಜದರ್ಬಾರಕ್ಕೆ ಹೋದ ಸತ್ಯಸಿಂಹರನ್ನು ಮೋಸಮಾಡಿ ಕೈದಿಗಳನ್ನಾಗಿ ತೆಗೆದುಕೊಂಡಿರುವರೆಂದಮೇಲೆ ಅವರ ಮೇಲೆ ವೃಥಾ ಅಪವಾದವನ್ನೇಕೆ ಹೊರಿಸುವಿರಿ? ಈಶ ಸಂಕಲ್ಪಕ್ಕೆ ಯಾರೇನು ಮಾಡಬಲ್ಲರು? ಆದದ್ದು ಆಗಿಹೋಯಿತು! ಪನ್ನಾ ತಾಯೀ, ಹೀಗೆ ರೋದಿಸುತ್ತ ಕುಳಿತರೇನಾಗುವದು? ವಿಕ್ರಮಜಿತು ಮಹಾರಾಜರನ್ನು ಕೊಂದ ನೀಚನು ರಾಜಕುಮಾರನನ್ನು ಕೊಲ್ಲದೆ ಬಿಡುವನೇ? ವಿಕ್ರಮಜಿತು ಮಹಾರಾಜರ ವಂಶವನ್ನೇ ನಿರ್ಮೂಲಮಾಡಬೇಕೆಂದಿರುವ ಆ ಕೊಲೆಗಡಕನು ಇನ್ನು ಬಹಳ ವೇಳೆಯವರೆಗೆ ತಡೆಯಲಾರನು. ಈಗ್ಗೆ ಇಷ್ಟರಲ್ಲಿಯೇ ಆತನು ಇತ್ತ ಕಡೆಗೆ ಬರಬಹುದು. ಆದ್ದರಿಂದ ಮೊದಲು ರಾಜಕುಮಾರನ ಸಂರಕ್ಷಣೆಯ ಕಾರ್ಯವನ್ನು ಮಾಡಲಿಕ್ಕೇಬೇಕು. ಇಲ್ಲದಿದ್ದರೆ ರಾಜಕುಮಾರನು ವ್ಯರ್ಥವಾಗಿ ನೀಚನಾದ ಬನಬೀರನ ಖಡ್ಗಧಾರೆಗೀಡಾಗುತ್ತಾನೆ. ವಿಕ್ರಮಜಿತು ಮಹಾರಾಜರಿಗೆ ಕೊಟ್ಟಿರುವ ವಚನವನ್ನು ನೆನಪಿಗೆ ತಂದುಕೊಳ್ಳಿರಿ! ನೀಚನಾದ ಬನಬೀರನ ಕೈಯೊಳಗಿಂದ ರಾಜಕುಮಾರನನ್ನು ಪಾರುಮಾಡುವದು ಈಗ್ಗೆ ಎಷ್ಟು ಮಹತ್ವದ್ದಾಗಿರುವದೋ ಅಷ್ಟೇ ಕಷ್ಟದಾಯಕವಾದದ್ದೂ ಆಗಿರುತ್ತದೆ. ಆದ್ದರಿಂದ ಬೇಗನೇ ಏನಾದರೊಂದು ಯುಕ್ತಿಯಿಂದ ರಾಜಕುಮಾರನನ್ನು ಮೊದಲು ಮೇವಾಡದಿಂದ ಪಾರಮಾಡಲಿಕ್ಕೆಬೇಕು! ಇಲ್ಲದಿದ್ದರೆ ರಾಜವಂಶವು ನಿರ್ಮೂಲವಾಗುವದೇ ಖಂಡಿತ! ಈಗ್ಗೆ ಶಕ್ತಿಗಿಂತ ಯುಕ್ತಿಯೇ ಮೇಲೆಂದು ನನಗೆ ಹೊಳೆಯುವದು!

ಪನ್ನಾ— ಸ್ವಾಮಿನಿಷ್ಠ ಸೇವಕನೇ, ಇಷ್ಟೊಂದು ಕಳ್ವತನವೇಕೆ? ಆ ನೀಚನು ಇಲ್ಲಿಗೆ ಬಂದಾದರೂ ಬರಲಿ. ಆ ಮೇಲೆ ನೋಡು ಈ ಅಬಲೆಯ ಸಾಹಸವನ್ನು! ನನ್ನ ರಮಣನ ಈ ವಿಜಯ ಖಡ್ಗವನ್ನು ಧರಿಸಿ, ಭಾರತೀಯ ವೀರವನಿತೆಯರಂತೆ ನಾನೂ ನನ್ನ ಸ್ವಾಮಿಯ ಸಲುವಾಗಿ, ಸ್ವದೇಶೋದ್ಧಾರದ ಸಲುವಾಗಿ, ಏಕಲಿಂಗಜಿಯನ್ನು ಸ್ಮರಿಸುತ್ತ, ಆ ನೀಚನಾದ ಬನಬೀರನೊಡನೆ ಕಾದಿ, ಆತನ ಸೊಕ್ಕನ್ನು ಇಳಿಸದಿದ್ದರೆ ನನ್ನ ಹೆಸರು ವೀರ ಪನ್ನೆಯೇ ಅಲ್ಲ! ಆ ರಾಜದ್ರೋಹಿಗೆ ರಾಜಕುಮಾರನ ನೆರಳನ್ನು ಸಹ ತೋರಗೊಡುವದಿಲ್ಲವೆಂದು ತಿಳಿ! ಸ್ವಾಮಿನಿಷ್ಠ ಸೇವಕನೇ ಹೆದರಬೇಡ! ರಾಜವಂಶವನ್ನು ಸಮೂಲ ನಾಶಗೊಳಿಸಬೇಕೆಂದು ತದೇಕಧ್ಯಾನಮಾಡುತ್ತಿರುವ ಆ ನೀಚನು ಹೇಗಾದರೂ ಈಗ್ಗೆ ಇತ್ತ ಕಡೆಗೆ ಬಂದೇ ಬರುವನು! ಇಗೋ, ನೀನೂ ಖಡ್ಗವನ್ನೂ ಧರಿಸಿಕೊಂಡು ಕಾವಲುಗಾರರನ್ನೂ ಎಚ್ಚರಿಸಿ ಸುಸಜ್ಜಿತನಾಗಿ ನಿಲ್ಲು! ಪ್ರಸಂಗ ಬಂದಲ್ಲಿ ಪ್ರಾಣಾಹುತಿಯನ್ನಿತ್ತಾದರೂ ರಾಜಕುಮಾರನನ್ನು ರಕ್ಷಿಸೋಣ!!

ಸೇವಕ— ಧನ್ಯ ಧನ್ಯ ತಾಯೀ! ಇದ್ದರೆ ನಿನ್ನಂಥ ವೀರನಾರೀರತ್ನವಿರಬೇಕು!! ಆದರೆ ಪನ್ನಾತಾಯೀ, ಈಗ್ಗೆ ನಮ್ಮ ಮೇಲೆ ಪ್ರಸಂಗವು ಪ್ರತಿಯೊಂದು ಕ್ಷಣಕ್ಷಣಕ್ಕೆ ಕಠಿಣವಾಗುತ್ತ ನಡೆದಿರುವದರಿಂದ, ಬಲಾಢ್ಯನೂ ನೀಚನೂ ಆದ ಬನಬೀರನೆದುರಿಗೆ ನಿಂತು ಕಾದಾಡಿ ರಾಜಕುಮಾರನನ್ನು ರಕ್ಷಿಸುವದು ನನಗೆ ಉಚಿತವಾಗಿ ತೋರುವದಿಲ್ಲ. ಬನಬೀರನೆದುರಿಗೆ ನಿಂತು ಯುದ್ಧ ಮಾಡಲು ನಮ್ಮಲ್ಲಿ ಸಾಕಷ್ಟು ಬಲವಿಲ್ಲ. ಈಗ್ಗೆ ಎಲ್ಲರೂ ರಾಜದ್ರೋಹಿಗಳಾಗಿದ್ದಾರೆ. ನೆಲವೇ ಎದ್ದು ಬಡೆಯಲಿಕ್ಕೆ ಹತ್ತಿದೆ. ನಾವೀರ್ವರೇ ಆತನೆದುರಿಗೆ ಎಷ್ಟೊತ್ತು ತಡೆದು ನಿಲ್ಲಬಹುದು? ಹೀಗೆ ಮಾಡುವದರಿಂದ ಸ್ವತಃ ನಾವೇ ರಾಜಕುಮಾರನನ್ನು ಕೊಲೆ ಮಾಡಿಸಿದಂತಾಗುವದು! ಉಪಾಯದಿಂದ ಮೊದಲು ರಾಜಕುಮಾರನನ್ನು ಮೇವಾಡದಿಂದ ಪಾರು ಮಾಡಿ ಎಲ್ಲಿಯಾದರೂ ಒಂದು ಸುರಕ್ಷಿತ ಸ್ಥಳದಲ್ಲಿಟ್ಟು ಮುಂದೆ ಮಾಡುವದನ್ನು ಮಾಡೋಣ. ಆದರೆ ಸದ್ಯಕ್ಕೆ ಮಾತ್ರ ರಾಜಕುಮಾರನನ್ನು ಮೇವಾಡದಿಂದ ಪಾರು ಮಾಡುವ ಉಪಾಯವನ್ನು ಹೇಳಿರಿ.

ಪನ್ನಾ:— ಸ್ವಾಮಿನಿಷ್ಠ ಸೇವಕನೇ, ನೀನು ಹೇಳುವದಾದರೂ ಯೋಗ್ಯವೇ ಸರಿ! ನಮ್ಮೆಲ್ಲರಿಗೂ ಆಧಾರಸ್ತಂಭನಾಗಿರುವ ರಾಜಕುಮಾರನನ್ನು ಕಳೆದು ನಾವು ಮಾಡುವದಾದರೂ ಏನು? ಅಗೋ ಅರಮನೆಯ ದಿಕ್ಕಿನಿಂದ ಮತ್ತೆ ಆರ್ತಸ್ವರವು ಕೇಳಬರುತ್ತದೆ. ನೀಚನು ಮತ್ತೇನು ಅನಾಹುತ ಮಾಡಿದನೋ? ಇಗೋ! ಮೊದಲು ಆ ಹಣ್ಣಿನ ಹೆಡಿಗೆಯನ್ನು ತೆಗೆದುಕೋ; ಅದರಲ್ಲಿ ರಾಜಕುಮಾರನನ್ನು ಮಲಗಿಸಿ ಮೇಲೆ ಎಲೆ-ಕಾಯಿ-ಹಣ್ಣುಗಳನ್ನು ತುಂಬೋಣ;

ಆದರಿಂದ ಜನರಾರಿಗೂ ಸಂಶಯ ಬರಲಿಕ್ಕಿಲ್ಲ. ನೀನು ಹಣ್ಣು ಮಾರುವ ಬಾಗವಾನನ ವೇಷವನ್ನು ಹಾಕಿಕೋ; ಇನ್ನಿಬ್ಬರು ಸ್ವಾಮಿನಿಷ್ಠ ಸಂಗಡಿಗರನ್ನು ಕರೆದುಕೊಂಡು ಈ ಹಣ್ಣಿನ ಹೆಡಿಗೆಯನ್ನು ಲಕ್ಷ್ಯಪೂರ್ವಕವಾಗಿ, ರಾಜಕುಮಾರನು ಮಿಸುಗದಂತೆ ಹೊತ್ತುಕೊಂಡು ಅರವಲೀಗುಡ್ಡದೊಳಗಿಂದ ಹಾಸಿ ಮುಂದೆ ಕಮಳನೇರ ದುರ್ಗಕ್ಕೆ ಹೋಗುವದು ನಿನ್ನ ಕರ್ತವ್ಯವು! ಇಷ್ಟಾದರೆ ರಾಜಕುಮಾರನು ಸುರಕ್ಷಿತವಾಗಿ ಪಾರಾಗುವನು. ಕಮಳನೇರಾಧಿಪತಿಗೆ ನಾನೊಂದು ಪತ್ರವನ್ನು ಕೊಡುವೆನು. ಆದರೆ ಮಾತ್ರ ಈ ಹಣ್ಣಿನ ಹೆಡಿಗೆಯನ್ನು ದಾರಿಯಲ್ಲಾಗಲಿ ಪಟ್ಟಣಗಳಲ್ಲಾಗಲಿ ರಾಜದ್ರೋಹಿಗಳಿಗೆ ಸಂಶಯ ಬಾರದಂತೆ ಜಾಗ್ರತೆಯಿಂದ ತೆಗೆದುಕೊಂಡು ಹೋಗುವದು ನಿನ್ನನ್ನು ಕೂಡಿದೆ.

ಸೇವಕ— ಪಸನ್ನಾ ತಾಯೀ, ನಿಮ್ಮ ಯುಕ್ತಿಯು ಅತಿಯೋಗ್ಯವಾದದ್ದಿರುತ್ತದೆ. ರಾಜಸೇವೆಯನ್ನು ಮಾಡಿ ಅವರ ಕೃಪೆಯನ್ನು ಪಡೆದು ಸ್ವಾಮಿನಿಷ್ಠೆಯನ್ನು ತೋರಿಸಬೇಕೆನ್ನುವ ವೀರನಿಗೆ, ಇದು ಸುಸಮಯವಲ್ಲವೇ? ಇಂದಿಗೆ ನಾನು ಧನ್ಯನಾದೆನು! ಪುನೀತನಾದೆನು!! ರಾಜಕುಮಾರನ ಜೀವರಕ್ಷಣೆಯಂಥ ಮಹತ್ವದ ಕಾರ್ಯವು ನನ್ನಿಂದ ಜರುಗಬೇಕೆಂದರೆ ನಾನೇ ಸುದೈವಿಯು! ತಾಯೀ, ಯಾರಿಗೂ ಸಂಶಯ ಬಾರದಂತೆ ರಾಜಕುಮಾರನನ್ನು ಹೊತ್ತುಕೊಂಡು ಹೋಗಿ ಕಮಳನೇರ ದುರ್ಗಕ್ಕೆ ಮುಟ್ಟಿಸುವದು ನನ್ನನ್ನು ಕೂಡಿತು. ಬೇಗನೇ ರಾಜಕುಮಾರನನ್ನು ತೆಗೆದುಕೊಂಡು ಬರ್ರಿ" ಹೀಗೆಂದು ಈರ್ವರೂ ಕೂಡಿ ಹಣ್ಣಿನ ಹೆಡಿಗೆಯಲ್ಲಿ ರಾಜಕುಮಾರನನ್ನು ಮಲಗಿಸಿ ಮೇಲೆ ಉಸುರಾಡಿಸಲಿಕ್ಕೆ ಸ್ಥಳವು ಉಳಿಯುವಂತೆ ಎಲೆ ಕಾಯಿ ಹಣ್ಣುಗಳನ್ನು ತುಂಬಿದರು. ಆ ಸ್ವಾಮಿನಿಷ್ಠ ಸೇವಕನು ನಿಜವಾದ ತೋಟಗನಂತೆ ವೇಷವನ್ನು ತಳೆದನು. ಮತ್ತಿರ್ವರನ್ನು ತನ್ನ ಸಂಗಡ ಕರೆದುಕೊಂಡು, ಹಣ್ಣಿನ ಹೆಡಿಗೆಯನ್ನು ಹೊತ್ತುಕೊಂಡು ಕಮಳನೇರದ ಮಾರ್ಗವಾಗಿ ಹೊರಟು ಹೋದನು! ನಿಜವಾದ ಸ್ವಾಮಿಭಕ್ತರ ಯೋಗ್ಯತೆಯು ಸಂಕಟ ಸಮಯಗಳಲ್ಲಿಯೇ ವ್ಯಕ್ತವಾಗುತ್ತದೆ! ನಿಜವಾದ ಸ್ವಾಮಿಭಕ್ತನು ಸಂಕಟಗಳಿಗೆ ಹೆದರನು! ಸತ್ಯವನ್ನು ಬಿಡನು!!

೩.

" ಕಪಟಕಾರಸ್ಥಾನಿಯಾದ ಬನಬೀರನಿಗೆ ನಾನು ರಾಜಕುಮಾರನನ್ನು ಮೇವಾಡದಿಂದ ಗುಪ್ತವಾಗಿ ಪಾರುಮಾಡಿ ಕಳುಹಿಸಿರುವೆನೆಂಬುದು ಸ್ವಲ್ಪ ಗೊತ್ತಾದ ಮಾತ್ರಕ್ಕೆ ಆತನು ಆಕಾಶ ಪಾತಾಳಗಳನ್ನು ಒಂದು ಮಾಡದೆ ಬಿಡಲಿಕ್ಕಿಲ್ಲ. ಮುಂದೆ ರಾಜಕುಮಾರನಿಗೆ ಮಾರ್ಗದಲ್ಲಿ ತೊಂದರೆ ಬಂದು ಇಷ್ಟೊತ್ತಿನ

ವರೆಗೆ ಪರಿಶ್ರಮಪಟ್ಟು ಮಾಡಿರುವ ಕಾರ್ಯವು ಕೆಟ್ಟು ಹೋಗುತ್ತದಲ್ಲದೆ ರಾಜ ವಂಶವು ನಿರ್ನಾಮವಾಗಿ ಹೋಗುವದು ! ಹಸಿದ ಹುಲಿಯು ತಪ್ಪಿಸಿಕೊಂಡ ಬೇಟೆ ಯನ್ನು ಹುಡುಕುತ್ತ ಬರುವಂತೆ ಈಗ್ಗೆ ಬನಬೀರನು ರಾಜಕುಮಾರನ ಕೊಲೆ ಯನ್ನು ಮಾಡಲಿಕ್ಕೆ ಬರುವನು ! ಈ ಪ್ರಸಂಗದಲ್ಲಿ ನೀಚನಾದ ಬನಬೀರನ ಕಣ್ಣು ಗಳಲ್ಲಿ ಮಣ್ಣನ್ನು ತುಂಬಲೇಬೇಕು " ಈ ಪ್ರಕಾರವಾಗಿ ಪನ್ನೆಯು ಮುಂದೊದಗ ಬಹುದಾದ ಸಂಕಟಗಳನ್ನು ಸಾರಾಸಾರ ವಿಚಾರ ಮಾಡಿ ಕಡೆಗೆ, ಹೋದರೆ ತನ್ನ ಮಗನ ಜೀವವೇ ಹೋಗಲಿ; ರಾಜಕುಮಾರನ ರಕ್ಷಣೆಯಾದರೆ ಸಾಕು ! ಸ್ವದೇಶೋ ದ್ಧಾರದ ಸಲುವಾಗಿ, ಸ್ವಾಮಿಸೇವೆಗಾಗಿ, ಜೀವವನ್ನು ಕೊಡುವ ತನ್ನ ಮಗನಿಗೆ ವೀರ ಸ್ವರ್ಗವಾಗುವದು. " ಏಕಲಿಂಗಜಿಯ ಕೃಪೆ ಇದ್ದರೆ ಇನ್ನಿಂಥ ಸುಪುತ್ರರನ್ನು ಪಡೆಯಬಹುದು " ಹೀಗೆಂದು ಪನ್ನೆಯು ಧೈರ್ಯ ತಂದುಕೊಂಡು ಬರಿದಾದ ರಾಜಕುಮಾರನ ಮಂಚದ ಮೇಲೆ ತನ್ನ ಮಗನನ್ನು ಮಲಗಿಸಿದಳು ! ಮೇಲೆ ಸಂಪೂರ್ಣವಾಗಿ ರಾಜಕುಮಾರನ ಜರತಾರೀ ಶಲ್ಲೆಯನ್ನು ಹೊಚ್ಚಿ ಬಿಟ್ಟಳು ! ಪನ್ನೆಯ ಮಗನದೂ ಮತ್ತು ರಾಜಕುಮಾರ ಉದಯಸಿಂಗನದೂ ಒಂದೇ ಮುಖ ಚರ್ಯ ! ಅಷ್ಟೇ ಎತ್ತರ ! ಒಂದೇ ಬಣ್ಣ ! ಆದ್ದರಿಂದ ಪನ್ನೆಗೆ ತನ್ನ ಕಾರ್ಯದಲ್ಲಿ ಮತ್ತಿಷ್ಟು ಅನುಕೂಲವಾಯಿತು ! ರಾಜ್ಯಲೋಭಿಯಾದ ಮದಾಂಧ ಬನಬೀರನಿಗೆ ಪನ್ನೆಯ ಯುಕ್ತಿಯ ಮರ್ಮವು ಹೇಗೆ ಹೊಳೆಯಬೇಕು ?

ಒಂಬತ್ತು ತಿಂಗಳುಗಳ ವರೆಗೆ ಗರ್ಭದಲ್ಲಿ ಹೊತ್ತುಕೊಂಡು, ಕೋಟಿ ಸಿಡಿಲಿನಂಥ ಪ್ರಸೂತ ವೇದನೆಯನ್ನು ತಾಳಿಕೊಂಡು, ಹೆತ್ತು, ಹೊತ್ತು, ಮೊಲೆ ಹಾಲನುಣಿಸಿ, ತಿನಿಸಿ, ಬೇನೆ-ಬೇಸರಿಕೆಗಳು ಬಂದರೆ ಔಷಧೋಪಚಾರವನ್ನು ವ್ರತನೇಮ ಉಪವಾಸಗಳನ್ನು ಮಾಡಿ ಬೇಡಿದ್ದನ್ನು ಕೊಡುತ್ತಾ ವಿದ್ಯಾ-ಬುದ್ಧಿ ಯನ್ನು ಕಲಿಸಿ ಪ್ರೇಮದಿಂದ ಇಷ್ಟೊಂದು ದೊಡ್ಡವನನ್ನಾಗಿ ಮಾಡಿದ ಮಗನಜೀವ ವನ್ನು ತನ್ನ ಸ್ವಾಮಿಯ ಪುತ್ರನ ಜೀವರಕ್ಷಣೆಗಾಗಿ, ಮೇವಾಡದ ಸ್ವಾತಂತ್ರ್ಯ ಕ್ಕಾಗಿ ಕೊಡಲು ಸಿದ್ಧಳಾದ ವೀರಪನ್ನೆಯು ಧನ್ಯಳೇ ಸರಿ ! ಆದರ್ಶ ವೀರವನಿತೆ ಯರಲ್ಲಿ ಅಗ್ರಗಣ್ಯಳೇ ಸರಿ !! ವೀರಪನ್ನೆಯ ಅನುಪಮ ಸ್ವಾಮಿನಿಷ್ಠೆಯನ್ನು ಎಷ್ಟು ಹೊಗಳಿದರೂ ಅಲ್ಪವೇ ಸರಿ !! ಇರಲಿ. ಇನ್ನೊಂದು ಕ್ಷಣಕ್ಕೆ ಮಗನ ಆತ್ಮವು ಹೊರಟು ಹೋಗುವದೆಂದು ಅವಳ ಹೃದಯವು ತಳಮಳಗೊಳ್ಳತೊಡಗಿತು ! ಎಷ್ಟಾದರೂ ಹಡೆದ ತಾಯಿಯು ! ಪನ್ನೆಯು ಎದ್ದು ನಿಂತು ಮಗನನ್ನು ಕರುಣಾ ಪೂರಿತವಾದ ನಯನಗಳಿಂದ ನಖಶಿಖಾಂತದ ವರೆಗೆ ನೋಡಿದಳು ! ಚಂದ್ರನಂತೆ ಆಲ್ಹಾದಕರವಾದ ಮಗನ ಮುಖಕ್ಕೆ ಮುತ್ತಿಟ್ಟಳು. ಮಾತೃಪ್ರೇಮವು ಉಕ್ಕೇರಿ ಬರಲು ಅವಳ ಕಣ್ಣುಗಳೊಳಗಿಂದ ಅಶ್ರುಗಳು ಧಾರೆಯಾಗಿ ಸುರಿಯಹತ್ತಿದವು. ಮಗನ ಮೈಮೇಲೆ ಕೈಯಾಡಿಸಿ,ಆತನ ತಲೆಯ ಮೇಲೆ ಹಸ್ತವನ್ನಿಟ್ಟು " ಮಗುವೇ

ಪ್ರತಾಪಾ! ನಿನ್ನ ಮರಣದಿಂದಲೇ ಮೇವಾಡದ ಬಾಲ ಮಾರ್ತಾಂಡನ ಉದಯ ವಾಗಬೇಕಾಗಿದೆ. ನಿನ್ನ ಮರಣದಿಂದಲೇ ಇಡೀ ಮೇವಾಡವು ಇಂದು ಉದ್ಧಾರ ವಾಗಬೇಕಾಗಿದೆ! ಮೇವಾಡ ಮಾತೆಯು ನಿನ್ನ ಆಹುತಿಯನ್ನೇ ಕೋರಿದ್ದಾಳೆ! 'ಮಲಗಿ ನಿದ್ರಿಸುತ್ತಿದ್ದ ಮಗನನ್ನು ಕೊಲೆ ಮಾಡಿಸಿದವಳು ಇವಳೆಂಥ ತಾಯಿ? ತಾಯಿಯಲ್ಲ! ಕಠೋರ ಹೃದಯದ ರಾಕ್ಷಸಿಯು!' ಹೀಗೆಂದು ಹಳಿಯುವಿಯಾ? ನನ್ನ ಮರಣದಿಂದ ಮೇವಾಡದ ಬಾಲ ರಾಜಕುಮಾರನು;-ಅದೇಕೆ ಮೇವಾಡಕ್ಕೆ ಸ್ವಲ್ಪಾದರೂ ಹಿತವಾಗುವಂತಿದ್ದರೆ ನಾನು ಈಗಲೂ-ಯಾವಾಗಲೂ ಜೀವ ಕೊಡಲು ಸಿದ್ಧಳೇ ಇದ್ದೇನೆ! ಆದರೆ ಕಂದಮ್ಮಾ! ಪಾಪಿಯಾದ ನನ್ನ ಜೀವವು ಮೇವಾಡ ಮಾತೆಗೆ ಬೇಕಾಗಿಲ್ಲ! ವೀರಕುಮಾರನೇ, ಜಗತ್ತಿನಲ್ಲಿ ಇಂದಿನ ವರೆಗೆ ಯಾರಿಂದಲೂ-ಎಂದೂ ಆಗದಂಥ ದೇಶೋದ್ಧಾರದ ಕಾರ್ಯವು, ಸ್ವಾಮಿಭಕ್ತಿ ಪ್ರದರ್ಶನದ ಕಾರ್ಯವು ಇಂದು ನಿನ್ನಿಂದಾಗಬೇಕಾಗಿದೆ! ನಿಜವಾಗಿ ನಿನಗೆ ವೀರ ಸ್ವರ್ಗವಾಗುವದು! ಇದು ವೀರಮಾತೆಯ ಆಶೀರ್ವಾದವು!! ನನ್ನ ವಂಶೋದ್ಧಾರಕ ನಾದ ಕುಮಾರನೇ, ಈ ವೇಳೆಯಲ್ಲಿ ನಿನ್ನ ಹಡೆದವರಿದ್ದರೆ ನಿನಗಿಂಥ ಸ್ಥಿತಿಯು ಒದಗುತ್ತಿರಲಿಲ್ಲ.! ನಮ್ಮ ರಾಷ್ಟ್ರದೊಡೆಯನ ಹಿತಕ್ಕಾಗಿ ನಿನ್ನ ಹಡೆದವರು ಮಾಡ ಬೇಕಾದ ಸ್ತುತ್ಯ ಕಾರ್ಯವನ್ನು ಇಂದು ನೀನೇ ನಿನ್ನ ಆತ್ಮಾಹುತಿಯನ್ನಿತ್ತು ಮಾಡಲು ಸಿದ್ಧನಾಗಿರುವೆ. ಆದರೆ ಪಾಪಿಯಾದ ಮಾತೆಯೆಂದೆನಿಸಿಕೊಳ್ಳುವ ದುರ್ದೈವಿಯು ನಾನು, ನಿನ್ನ ಕೊಲೆಯನ್ನು ಕಣ್ಮುಟ್ಟ ನೋಡಬೇಕಾಯಿತೇ? ಮೇವಾಡ ಮಾತೇ! ನಿನಗೀ ತೆರವು ಯೋಗ್ಯವಾಗಿ ಕಾಣುವದೇ?" ಹೀಗೆಂದು ಆತ್ಮ ವೇದನೆಯನ್ನು ತೋಡಿಕೊಳ್ಳುತ್ತಿರುವಷ್ಟರಲ್ಲಿ ಹೊರಗಿನಿಂದ ಕರ್ಕಶ ಸ್ವರವು ಕೇಳಬಂದಿತು! ಅದು ಮಾನವನ ಕರ್ಕಶ ಸ್ವರವಲ್ಲ! ಪನ್ನೆಯ ಮಗನಾದ ಪ್ರತಾಪನ ಆಹುತಿಯನ್ನು ನುಂಗಲು ಬರುವ ಕಾಲಾಂತಕನ ಕರ್ಕಶ ಸ್ವರವು!! ಆ ಭೀಕರ ಸ್ವರವನ್ನು ಕೇಳಿ ಪನ್ನೆಯು ಗಾಬರಿಯಾಗಿ ಕಿವಿಗೊಟ್ಟು ಕೇಳತೊಡ ಗಿದಳು. ಈ ಕಾಲದಲ್ಲಿ ಅವಳ ಮನಸ್ಸು ಇತ್ತಂಡ ವೇದನೆಯಿಂದ ಒದ್ದಾಡುತ್ತಿತ್ತು! ಅತ್ತ ರಾಜಕುಮಾರನ ಸ್ಥಿತಿಯೇನಾಯಿತೋ? ಇತ್ತ ತನ್ನ ಮಗನ ಹಾಗು ಪತಿ ದೇವನ ಸ್ಥಿತಿಯೇನಾಗುವದೋ ಎಂದು ಅವಳು ಮನದಲ್ಲಿಯೇ ಚಿಂತಿಸುತ್ತಿದ್ದಳು. ತನ್ನ ದೇಹದ-ಜೀವದ ಪರಿವೆಯನ್ನೇನೋ ಅವಳು ತೊರೆದು ಬಿಟ್ಟಿದ್ದಳು! ಅವಳ ಹೃದಯದಾಶೆಯು "ಮೇವಾಡದ ಯುವರಾಜಕುಮಾರನ ಜೀವರಕ್ಷಣೆ, ಪತಿ ದೇವ, ಪ್ರತಾಪನ ಕಲ್ಯಾಣ, ಮೇವಾಡದ ಉದ್ಧಾರ" ಇಷ್ಟೇ ಆಗಿತ್ತು!

ಮತ್ತೆ ಹೊರಗಿನಿಂದ ಧಡ ಧಡ ಸಪ್ಪಳವು ಕರ್ಕಶ ಸ್ವರದೊಂದಿಗೆ ಕೇಳಬರ ತೊಡಗಿತು! ಪನ್ನೆಯು ಕಿವಿಗೊಟ್ಟು ಕೇಳತೊಡಗಿದಳು. "ಪನ್ನೆ, ಏ ಪನ್ನೆ! ಬಾಗಿಲನ್ನು ತೆರೆ." ರಾಜವಂಶವನ್ನು ನಿರ್ಮೂಲ ಮಾಡುವದಕ್ಕಾಗಿ ವೈತುಂಬೆಲ್ಲ

ಕಪ್ಪು ಆವರಣವನ್ನು ಹಾಕಿಕೊಂಡು, ಕರದಲ್ಲಿ ಹದನಾದ ಒಂದು ಆಯುಧವನ್ನು ಹಿಡಿದುಕೊಂಡು ಬಂದ ಬನಬೀರನು ನುಡಿದನು.

ಪನ್ನೆ :— ಯಾರವರು? ನಾನು ಈಗ್ಗೆ ಬಾಗಿಲನ್ನು ತೆರೆಯುವದಲ್ಲ. ಅಪ ರಾತ್ರಿ ವೇಳೆಯಲ್ಲಿ ಸ್ತ್ರೀಯಾದ ನನಗೆ ಭಯವಾಗುವದರಿಂದ ಬಾಗಿಲನ್ನು ತೆರೆಯುವದಿಲ್ಲ. ಬಂದ ದಾರಿಯಿಂದ ತಿರುಗಿ ಹೋಗಿರಿ!

ಬನಬೀರ :— ಪನ್ನೇ, ಇನ್ನೂ ನಿನಗೆ ನಾನಾರೆಂಬುದು ಗೊತ್ತಾಗಿಲ್ಲವೇ? ನಾನು ಮೇವಾಡದ ವಲ್ಲಭನಾದ ಬನಬೀರ ಮಹಾರಾಜನು! ಪ್ರತ್ಯಕ್ಷ ಮಹಾರಾಜನೇ ನಿನ್ನ ಬಾಗಿಲದಲ್ಲಿ ನಿಂತಿರಲು ನೀನು ಭಯಪಡುವ ಕಾರಣವೇನು? ಬೇಗನೆ ಬಾಗಿಲನ್ನು ತೆರೆ.

ಪನ್ನೆಯ ನಿಷ್ಠುರವಾದ ಉತ್ತರವನ್ನು ಕೇಳಿ ಖತಿಗೊಂಡ ಬನಬೀರನು "ನೀಚಳಾದ ದಾಸಿಯೇ, ನಿನಿಗಿಷ್ಟೊಂದು ಸೊಕ್ಕೇ!" ಹೀಗೆಂದು ಕದವನ್ನು ಬಲವಾಗಿ ಹಾರಿ ಒದ್ದುಬಿಟ್ಟನು. ಹಲಿಗೆಗಳು ತುಂಡು ತುಂಡಾಗಿ ಮುರಿದು ಬಿದ್ದವು. ಆ ಆವೇಶದ ಭರದಲ್ಲಿಯೇ ಬನಬೀರನು ನೆಟ್ಟಗೆ ಪನ್ನೆಯ ಶಯನಗೃಹದ ಕಡೆಗೆ ನಡೆದನು. ಪನ್ನೆಯು ಒಂದೇ ಸವನೆ ಮಲಗಿದ ಮಗನನ್ನು ದಯಾರ್ದ್ರ ದೃಷ್ಟಿಯಿಂದ ನೋಡುತ್ತ, ಕಂಬನಿಗಳನ್ನು ದುರಿಸುತ್ತ ಕುಳಿತುಕೊಂಡಿದ್ದಳು. ವಿಕೃತ ವೇಷವನ್ನು ಧರಿಸಿಕೊಂಡು ಕಾಲಾಂತಕನಂತೆ ಎದುರಿನಲ್ಲಿ ಬಂದು ನಿಂತ ನೀಚನಾದ ಬನಬೀರನನ್ನು ನೋಡಿ ಅವಳು ಭೀತಿಗೊಂಡಳು! ಅವಳ ಹೃದಯವು ಒಂದೇ ಸವನೆ ಡವ ಡವ ಹಾರತೊಡಗಿತು! ಅವಳ ಹೃದಯವು ವೀರತನದಿಂದ ತುಂಬಿ ತುಳುಕುತ್ತಿದ್ದರೂ ಕೂಡ ಮಗನ ಮುಂದಿನ ದುಃಸ್ಥಿತಿಯನ್ನು ನೋಡಲಾರದೆ ಚಡಪಡಿಸುತ್ತಿತ್ತು! ಆವೇಶದಿಂದ ಬಂದ ಬನಬೀರನು "ಪನ್ನೇ ರಾಜಕುಮಾರನೆಲ್ಲಿ?" ಹೀಗೆಂದು ಕೇಳಿದನು. ಆತನ ಈ ಧ್ವನಿಯಲ್ಲಿ ಕೋಪವು ಸಿಡಿದೊಡೆದು ಗುಡುಗು ಹಾಕುತ್ತಿತ್ತು!

ಪನ್ನೆ :— ರಾಜಕುಮಾರನೇತಕ್ಕೆ ಬೇಕು?

ಬನಬೀರ :— ಆತನೊಡನೆ ಕೆಲವು ರಾಜಕೀಯ ವಿಷಯಗಳ ಸಂಬಂಧ ಮಾತನಾಡಬೇಕಾಗಿದೆ.

ಪನ್ನೆ :— ಏನು? ಇಂಥ ಅಪರಾತ್ರಿಯಲ್ಲಿ ಸಣ್ಣ ಬಾಲಕನಾದ ರಾಜಕುಮಾರನ ಸಂಗಡ ರಾಜಕೀಯ ವಿಚಾರಗಳ ಆಲೋಚನೆಯೇ! ಇದೆಂಥ ವಿಚಿತ್ರ! ಇದರಲ್ಲಿ ಕಪಟವಿಲ್ಲವಷ್ಟೇ?

ಬನಬೀರ:— ಇಲ್ಲದ ಅಧಿಕ ಪ್ರಸಂಗತನವು ದಾಸಿಯಾದ ನಿನಗೇತಕ್ಕೆ ಬೇಕು? ಸೊಕ್ಕಿನವಳೇ, ಸುಮ್ಮನೆ ರಾಜಕುಮಾರನನ್ನು ತೋರಿಸೆಂದರೆ, ಕಪಟತನ ವಂತೆ ಕಪಟ! ಮೇವಾಡದ ಮಹಾರಾಜನ ಮುಂದೆ ಪೋರಿಯಾದ ನಿನ್ನ ಉದ್ಧಟ ತನವೆಷ್ಟು?" ಹೀಗೆಂದು ಬನಬೀರನು ಪನ್ನೆಗೆ ಜಾಡಿಸಿ ಒದ್ದು ಬಿಟ್ಟನು. ಪನ್ನೆಯ ಕೋಪಾಂಬುಧಿಯು ಉಕ್ಕೇರಿತು! ಕ್ಷಣಮಾತ್ರದಲ್ಲಿ ಅವಳು ದುರ್ಗಿಣಿಯಂತೆ ಭವ್ಯ ಸ್ವರೂಪವನ್ನು ತಾಳಿದಳು. ನಿಜವಾಗಿ ಆಗಿನ ಕಾಲದಲ್ಲಿ ಪನ್ನೆಗೆ ಆತನ ಗಂಟಲಕ್ಕೆ ಹಾರಿ, ನೀಚನ ರಕ್ತವನ್ನು ಸರ್ರನೇ ಹೀರಿ ಬಿಡುವಷ್ಟು ಕೋಪವೂ ವೀರಾವೇಶವೂ ಬಂದಿತ್ತು! ಆದರೆ ಅವೆಲ್ಲವುಗಳನ್ನು ರಾಜಕುಮಾರನ ರಕ್ಷಣೆಗಾಗಿ ಸಹಿಸಿಕೊಳ್ಳಬೇಕಾಯಿತು! ಇಲ್ಲದಿದ್ದರೆ ಇಷ್ಟೊತ್ತಿಗೆ ಬನಬೀರನ ಇಹಲೋಕ ಯಾತ್ರೆಯು ಮುಗಿದು ಹೋಗುತ್ತಿತ್ತು. ಸ್ವಲ್ಪ ಹೊತ್ತಿನ ಮೇಲೆ ಬನಬೀರನು "ಪನ್ನೇ, ಬೇಗನೆ ಹೇಳು; ರಾಜಕುಮಾರನೆಲ್ಲಿರುವನು?" ಎಂದು ಕೇಳಿದನು. ನೀಚನಾದ ಬನಬೀರನಿಗೆ ರಾಜಕುಮಾರನನ್ನು ತೋರಿಸದೆ ಹೀಗೆಯೇ ಕುಳಿತಲ್ಲಿ ಪ್ರಸಂಗವು ವಿಪರೀತವಾಗಬಹುದೆಂದು ತಿಳಿದುಕೊಂಡು ಪನ್ನೆಯು, ಇನ್ನು ಮಗನ ಮರಣಕ್ಕೆ ಅಪ್ಪಣೆಯನ್ನು ಕೊಡಬೇಕಾಗುವದೆಂಬ ದುಃಖವು ಆವರಿಸಿ ಬರಲು, ಬಿಕ್ಕಿ ಬಿಕ್ಕಿ ಅಳುತ್ತ ಮಾತಾಡಲಾರದೆ ಕಣ್ಣು ಮುಚ್ಚಿ ಹಾಗೇ ಕೈ ಬೆರಳಿನಿಂದ ತನ್ನ ಮಗನು ಮಲಗಿಕೊಂಡಿದ್ದ ಮಂಚದ ಕಡೆಗೆ ತೋರಿಸಿದಳು! ಆಯಿತು! ಬೇಟೆಯಮೇಲೆ ಕಣ್ಣಿಟ್ಟು ಜಪ್ಪಿಸಿಕೊಂಡು ಕುಳಿತ ಹುಲಿಯು, ತನ್ನ ಅಳವಿನಲ್ಲಿ ಭಕ್ಷ್ಯವು ಬಂದ ಕೂಡಲೆ ಹಾರಿ ಹಿಡಿಯುವಂತೆ ಬನಬೀರನು ಮಂಚದ ಕಡೆಗೆ ಹಾರಿ "ಇಂದಿಗೆ ನಿಶ್ಚಿಂತನಾದೆನು! ರಾಜವಂಶದ ಬೀಜವೇ, ನನ್ನ ಮಹತ್ವಾಕಾಂಕ್ಷೆಗೆ ಅಡ್ಡ ಬರುತ್ತಿರುವ ಪೋರನೇ, ನಿನ್ನನ್ನು ವಧಿಸದೆ ನನ್ನ ಆತ್ಮವು ಶಾಂತಿಯನ್ನು ಹೊಂದಲಾರದು! ಸೊಕ್ಕಿನವಳಾದ ಪನ್ನೇ, ಸ್ವಾಮಿಭಕ್ತನೆಂದು ಜಂಭ ಕೊಚ್ಚಿಕೊಳ್ಳುತ್ತಿದ್ದ ನಿನ್ನ ಪತಿಯಾದ ಅಸತ್ಯಸಿಂಹನೆಲ್ಲಿ? ಆ ನಿನ್ನ ಪೋರನಾದ ಪತಿಗೆ ರಾಜವಂಶದ ಬೀಜ—ರಾಜಕುಮಾರನೆಂದು ಸ್ವಾಮಿಭಕ್ತಿಯಿಂದ ಕುಣಿದಾಡುವ ಆ ನಿನ್ನ ಅನುಚರರಿಗೆ, ಇನ್ನು ಮೇಲೆ ಈ ರಾಜಕುಮಾರನ ಶವವನ್ನು ಹೊತ್ತುಕೊಂಡು ಸಿಂಹಾಸನಕ್ಕೆ ಬಡಿದಾಡೆಂದು ಹೇಳು! ಉದಯಸಿಂಗಾ, ನಿಮ್ಮಪ್ಪನಂತೆಯೇ ನೀನೂ ರಾಜವೈಭವವು ಹೇಗಿದೆಯೆಂಬದನ್ನು ಅನುಭೋಗಿಸು!" ಹೀಗೆಂದು ನೀಚನಾದ ಬನಬೀರನು ತನ್ನ ಕರದೊಳಗಿನ ಹದನಾದ ಆಯುಧದಿಂದ ಪನ್ನೆಯ ಮಗನಾದ ಪ್ರತಾಪನ ಶಿರದಲ್ಲಿ ಇರಿದುಬಿಟ್ಟನು! ರಕ್ತವು ಚಿಲ್ಲೆಂದು ಆಳೆತ್ತರ ಪ್ರಮಾಣ ಕಾರಂಜಿಯಂತೆ ಪುಟಿಯತೊಡಗಿತು! ಪ್ರತಾಪನು ವಿಲಿವಿಲಿ ಒದ್ದಾಡುತ್ತ "ಅವ್ವಾ ಅವ್ವಾ" ಎಂದು ಚೀರಿ ಪ್ರಾಣವನ್ನು ನೀಗಿದನು! ಮಗನು ಅಂತ್ಯಾವಸ್ಥೆಯಲ್ಲಿ ನೀಚನ ಇರಿತದಿಂದುಂಟಾದ ವೇದನೆ

ಯನ್ನು ತಾಳಲಾರದೆ ವಿಲಿ ವಿಲಿ ಒದ್ದಾಡುವದನ್ನು ನೋಡಿ, " ಅವ್ವಾ ಅವ್ವಾ " ಎಂದು ಸಹಾಯಕ್ಕಾಗಿ ಕೂಗಿದ ಆರ್ತಸ್ವರವನ್ನು ಕೇಳಿ ಪನ್ನೆಯು ಮೂರ್ಛೆಗೊಂಡು ಬಿದ್ದು ಬಿಟ್ಟಳು! ಇತ್ತ ಕಡೆಗೆ ಬನಬೀರನು, ರಾಜವಂಶವನ್ನು ಸಂಪೂರ್ಣವಾಗಿ ನಾಶಗೊಳಿಸಿ ನಿಶ್ಚಿಂತನಾದೆನು; ಧನ್ಯನಾದನೆಂದು ಆನಂದಿತನಾಗಿ ವಿಕೃತ ಪೈಶಾಚಿಕ ಅಟ್ಟಹಾಸದಿಂದ ಕುಣಿದಾಡಿ ಬಿಟ್ಟನು! ಆದರೆ ರಾಜಕುಮಾರನಾದ ಉದಯಸಿಂಗನು, ಮೇವಾಡದ ಬಾಲ ಮಾರ್ತಾಂಡನು, ಕಮಳನೇರದ ರಾಜನಾಶ್ರಯದಲ್ಲಿ ಸುಖರೂಪವಾಗಿರುವನೆಂಬುದು ರಾಜ್ಯಲೋಭವೆಂಬ ಪಿಶಾಚಿ ಬಡಿದ ಮದೋನ್ಮತ್ತ ಬನಬೀರನಿಗೆ ಹೇಗೆ ತಿಳಿಯಬೇಕು ?

ಯಾವನು ತನ್ನ ಬಾಲ್ಯತ್ವವನ್ನು ಮುತ್ತು ರತ್ನಾದಿಗಳಿಂದ ಕೆಚ್ಚಲ್ಪಟ್ಟ ಸುವರ್ಣ ತೊಟ್ಟಿಲದಲ್ಲಿಯ ಹಂಸತೂಲಿಕಾತಲ್ಪ ಶಯನದಲ್ಲಿ ದಾಸ-ದಾಸಿಯರಿಂದ ಸೇವೆಗೊಳ್ಳುತ್ತ, ಬೆಲೆಯುಳ್ಳ ನಾನಾತರದ ಆಟಿಗೆಗಳಿಂದಾಡುತ್ತ ಸುಖರೂಪವಾಗಿ ಕಾಲ ಕಳೆಯುತ್ತಿದ್ದನೋ, ಅಂಥ ಯುವರಾಜಕುಮಾರನಾದ ಉದಯಸಿಂಗನಿಗೆ ಕಡೆಗೆ " ಹಣ್ಣಿನ ಹೆಡಿಗೆ " ಯೇ ಜೀವಾಧಾರವಾಯಿತಲ್ಲವೇ ? ದೈವಲೀಲೆಯ ವೈಚಿತ್ರ್ಯವು !!

ಶಾಂತಿಃ ! ಶಿವಂಭೂಯಾತ್ !!



# ದೈವ ಘಟನೆ

ಲೇಖಕರು :— ಶ್ರೀ. ಮಹಿಷಿ ಕೃಷ್ಣ ಶರ್ಮಾ

( ಹಿಂದಿನಿಂದ ಸಾಗಿದುದು )

ಶೂರಸಿಂಹನ ತಂದೆಯಾದ ಬಲಸಿಂಹನು ಉಜ್ಜಯನಿಯಲ್ಲಿ ರಾಜ್ಯ
ವಾಳುತ್ತಿರುವಾಗ್ಗೆ ಅವನಿಗೆ ಪರಮ ಮಿತ್ರನೂ ರತ್ನಪರೀಕ್ಷಕನೂ ಆದ ಗೋಕುಲ
ದಾಸನೆಂಬ ವ್ಯಾಪಾರಿಯು ಅದೇ ಉಜ್ಜಯನಿಯಲ್ಲಿಯೇ ಇರುತ್ತಿದ್ದನು. ಇವನ
ವಂಶಜರು ಆಗಿನ ಕಾಲಕ್ಕೆ ರತ್ನಕುಠಾರರೆಂದು ಹೆಸರಾಗಿದ್ದರು. ಯಾಕಂದರೆ
ಇದೇ ಗೋಕುಲದಾಸನ ಮುತ್ತಜ್ಜನ ಕಾಲಕ್ಕೆ ಅವನಂತಹ ರತ್ನ ಪರೀಕ್ಷಕನು
ಇಡೀ ಭರತಖಂಡದಲ್ಲಿ ಇದ್ದಿಲ್ಲವಿಷ್ಟೇ ಅಲ್ಲ, ಅವನು ಯಾವದೇ ತರದ ಹರಳಿನ
ಬೆಲೆಯನ್ನು ಒಮ್ಮೆ ಕಣ್ಣಿನಿಂದ ನೋಡಿದ ಮಾತ್ರದಿಂದಲೇ ಕೊಡಲಿಯ ಕಚ್ಚು
ಬಿದ್ದಂತೆ ತಟ್ಟನೆ ಯೋಗ್ಯ ಬೆಲೆಯನ್ನು ಹೇಳಿ ಬಿಡುವನು. ಆದ್ದರಿಂದಲೇ ಇವರ
ವಂಶಕ್ಕೆ ರತ್ನಕುಠಾರರೆಂಬ ನಾಮಾಂಕಿತವು ಉಂಟಾಗಿತ್ತು. ಅದೇ ವಂಶಜನಾದ
ಗೋಕುಲದಾಸನಾದರೂ ಆ ವಿಷಯದಲ್ಲಿ ಅಗ್ರಗಣ್ಯನಾದುದರಿಂದಲೂ ಗುಣದಲ್ಲಿ
ಪರಮ ವಿಶ್ವಾಸಿಕನಾದುದರಿಂದಲೂ ಆತನು ಮಹಾರಾಜನ ಅತ್ಯಧಿಕ ಪ್ರೇಮಕ್ಕೆ
ಪಾತ್ರನಾಗಿದ್ದನು. ಹೀಗಿರುತ್ತಿರಲು ದುರ್ದೈವದಿಂದ ಆ ವ್ಯಾಪಾರಿಗೆ ಮರಣವು
ಪ್ರಾಪ್ತವಾಗಲು ರಾಜನಾದ ಬಲಸಿಂಹನು ಆತನ ಹೆಂಡಿರು-ಮಕ್ಕಳನ್ನು ತನ್ನವರೇ
ಎಂದು ತಿಳಿದು ಅವರನ್ನು ಅತ್ಯಂತ ಪ್ರೇಮದೃಷ್ಟಿಯಿಂದ ನೋಡುತ್ತಿದ್ದನು. ಆ
ಗೋಕುಲದಾಸ ವ್ಯಾಪಾರಿಗೆ ಮನೋಹರನೆಂಬ ಓರ್ವನೆ ಮಗನಿದ್ದು, ತಂದೆಯು
ಕಾಲವಾದ ಸಮಯಕ್ಕೆ ಅವನು ವಯಸ್ಸಿನಿಂದ ಆರೇ ವರ್ಷದವನಾಗಿದ್ದರಿಂದಲೂ
ಹಾಗು ಆಂದಿನಿಂದ ಅವನ ಸಂಗಕ್ಷಣವು ರಾಜಮನೆತನದಲ್ಲಿಯೇ ಆದದ್ದರಿಂದಲೂ
ಅವನು ತನ್ನ ತಂದೆ-ತಾಯಿಗಳೆಂದರೆ ರಾಜಾ-ರಾಣಿಯರೆಂದೇ ತಿಳಿದಿದ್ದನು. ಆದ್ದ
ರಿಂದ್ದ ಅವನಿಗೂ ನಮ್ಮ ಬಲಸಿಂಹಪುತ್ರಸೇನನಿಗೂ ಪರಮ ಮಿತ್ರತ್ವವೇಕೆ, ಈರ್ವರ
ಪಾಲನ-ಪೋಷಣವೂ ಒಂದೇ ಸ್ಥಳದಲ್ಲಿಯಾದ್ದರಿಂದ ಸಮಾನ ವಯಸ್ಕರಾದ
ಅವರಲ್ಲಿ ಬಂಧುಪ್ರೇಮವೇ ಉಂಟಾಗಿತ್ತು. ನಂತರ ಬಲಸಿಂಹನ ತರುವಾಯ
ಅಂದರೆ ಶೂರಸೇನನ ಇಪ್ಪತ್ತನೇ ವಯದ ಕಾಲಕ್ಕೆ ರಾಜ್ಯಲಕ್ಷ್ಮಿಯು ಅವನ
ಕೊರಳಲ್ಲಿ ಮಾಲೆ ಹಾಕಿದ್ದರಿಂದಲೂ, ಮೊದಲಿನಿಂದಲೂ ಈ ನಮ್ಮ ಶೂರಶೇನನ
ಜನ್ಮವು ಮುತ್ಸಾಳತನದಲ್ಲಿಯೂ ಪೋಲೀತನದಲ್ಲಿಯೂ ಕಳೆದು ಹೋದದ್ದ
ರಿಂದಲೂ ಮೊದಲೇ ಹಾರಾಡುತ್ತಿರುವ ಮರ್ಕಟನಿಗೆ ಸುರಾಪಾನ ಮಾಡಿಸಿ

ದಂತಾಗಿ, ಅವನು ಮನಬಂದಂತೆ ರಾಜಭಾರ ನಡೆಸುವದೂ ಲೆತ್ತ ಮುಂತಾದ ಜುಗಾರಿಯಂಥ ಅಸಹ್ಯ ಕೃತ್ಯಗಳನ್ನು ಕೈಕೊಳ್ಳುವದೂ ಪರಮ ಸಾಧುವಾದ ನಮ್ಮ ಮನೋಹರನ ಮನಸ್ಸಿಗೆ ಬಾರದಾಯಿತು. ಅವನು ಅರಸನಿಗಾಗಿ ಮನದಲ್ಲಿಯೇ ದುಃಖಬಡುತ್ತ ಸಹಸ್ರ ವೇಳೆಯಾದರೂ ಅವನ ಕಾಲುಗಳನ್ನು ಹಿಡಿದು, 'ಆ ಮಾರ್ಗವು ವಿಹಿತವಲ್ಲ' ವೆಂದು ಅಂಗಲಾಚಿ ಹೇಳಿ ಕೊಂಡಿದ್ದನು. ಆದರೆ ಷಡ್ರಿಪುಗಳ ಆಧೀನಕ್ಕೊಳಪಟ್ಟ ಮಹಾರಾಜನಿಗೆ ಮನೋಹರನ ಅಮೃತದಂಥ ಹಿತೋಪದೇಶವು ವಿಷಪ್ರಾಯವಾಗಿ ಮಹಾರಾಜನು ಬಳಿಯಲ್ಲಿದ್ದ ಅವನನ್ನು ದೂರು ಮಾಡಿದನು.

ಈ ಪ್ರಕಾರ ಮನೋಹರ ರತ್ನಕುಠಾರನು ರಾಜನ ಪ್ರೇಮದಿಂದ ತ್ಯಜಿತನಾಗಿದ್ದರೂ ಬಾಲ್ಯದಿಂದಲೂ ಅವನ ಜನ್ಮವು ರಾಜಮನೆತನದಲ್ಲಿ ಕಳೆದು ಹೋಗಿದ್ದರಿಂದ ಅವರೆಲ್ಲರೂ ತನ್ನವರೇ ಎಂದು ತಿಳಿದಿದ್ದ ಅವನು, ಅರಸನಿಗೆ ಮುಂದೊದಗ ತಕ್ಕ ಪರಿಣಾಮವು ಕಣ್ಣಿಗೆ ಕಟ್ಟಿದಂತಾಗಿ ಹಗಲಿರುಳು ವ್ಯಸನ ಪಡುತ್ತ ತನ್ನ ಪ್ರಿಯ ಬಂಧುವಿನಂತಿದ್ದ ಮಹಾರಾಜನ ಚಿತ್ತದೌರ್ಬಲ್ಯವನ್ನು ಸ್ಥಿರಗೊಳಿಸಿ ಅವನನ್ನು ಸನ್ಮಾರ್ಗಕ್ಕೆ ಹಚ್ಚುವದಾಗಿ ಶ್ರೀ ದೇವನಲ್ಲಿ ಮೊರೆಯಿಡುತ್ತಿದ್ದನು. ಆದರೆ ಭವಿತವ್ಯವನ್ನು ತಪ್ಪಿಸುವದು ಯಾರಿಂದಲಾಗುವದು? ರಾಜನ ಅಸಹ್ಯ ಕೃತ್ಯಕ್ಕೆ ನೊಂದು ಅವನಿಗೆ ಬೇಡಾದವನಾಗಿದ್ದರೂ ಮನೋಹರನು ಪ್ರತಿ ಕ್ಷಣಕ್ಕೂ ಅವನನ್ನು ಬಿಡದೆ ದೂರಿನಿಂದಲಾದರೂ, "ಮಿತ್ರ ಶೂರಸಿಂಹ, ನಿನ್ನ ಜನ್ಮವಾವದು? ನಿನ್ನ ಕರ್ತವ್ಯವಾವದು? ಈಗ ನೀನು ನಡೆಸಿದ ಕೃತ್ಯವೆಂತಹದು? ಹಾಗೂ ಇದರ ಮುಂದಿನ ಪರಿಣಾಮವೇನು? ಎಂಬದನ್ನು ಪೂರ್ಣ ವಿಚಾರದಿಂದ ತಿಳಿದು ನೋಡು." ಎಂದು ಬೇಕಾದಷ್ಟು ಕಣ್ಣೀರು ಸುರಿಸಿ ಹೇಳಿಕೊಳ್ಳುತ್ತಿದ್ದರೂ ನಮ್ಮ ಸೌದಾಗರನು ವ್ಯಾಪಾರಕ್ಕಾಗಿ ಹೋಗಿದ್ದ ಒಂದೇ ತಿಂಗಳಲ್ಲಿ ಶೂರಸಿಂಹನು ಜುಗಾರಿಗೆ ಬಿದ್ದು, ರಾಜ್ಯಲಕ್ಷ್ಮಿಯನ್ನು ನೀಗಿ ಕಪ್ಪು ಹೊಡೆದ ತನ್ನ ಮುಖವನ್ನೆತ್ತಿ ಅಡ್ಡಾಡದವನಾಗಿ ಅಡವಿಯ ಪಾಲಾಗಿದ್ದನು. ಪರದೇಶಕ್ಕೆ ಹೋದ ಸೌದಾಗರನು ತಿರುಗಿ ಉಜ್ಜಯನಿಗೆ ಬಂದೊಡನೆಯೇ ಅವನಿಗೆ ಈ ವರ್ತಮಾನವು ತಿಳಿಯಲು, ಆತನ ಮನಃಪಟಲಿಗೆ ವಜ್ರಾಘಾತವಾದಂತಾಗಿ, ರಾಜನನ್ನು ಹೊಡೆದೋಡಿಸಿದ ತಂತ್ರಗಾರರ ಕುಚೇಷ್ಟೆಗಳಿಂದ ತನಗಾಗುವ ಅವಮಾನವನ್ನು ಸಹಿಸಲಾರದೆ ಆತನು ಓಡಿ ಹೋಗಿದ್ದ ತನ್ನ ಮಹಾರಾಜನನ್ನು ಅವನ ಸತಿ-ಸುತರೊಂದಿಗೆ ಕರತಂದು ಬಲಸಿಂಹ ಚಕ್ರವರ್ತಿಯ ಮನೋಭೀಷ್ಟದಂತೆ ಶೂರನ ತಂಗಿಯ ಲಗ್ನವನ್ನು 'ಅವನ ಸಮಾನಸ್ಕಂಧರಲ್ಲಿ ಮಾಡಿಯೇ ತೀರುವೆನೆಂ' ದು ಆ ದಂಪತಿಗಳನ್ನು ಕರತರುವದಕ್ಕಾಗಿ ಕಷ್ಟದಿಂದ ಶೋಧಿಸುತ್ತ ನಮ್ಮ ವಸುಂಧರಾ ರಾಣಿಯಿದ್ದ ಗುಡಿಸಲೆಡೆಗೆ ಬಂದವನೇ 'ಮನೋಹರ ವ್ಯಾಪಾರಿ'ಯು. (ಮುಂದೆ ಸಾಗುವದು)

ಕನ್ನಡ ಸಮಾಜದಲ್ಲಿ ಈಚೆಗೆ ಪ್ರಬಲವಾಗಿ ಕಾಣಬರುತ್ತಿರುವ ಒಂದಾನೊಂದು ಪ್ರವೃತ್ತಿಯನ್ನು ಎತ್ತಿ ತೋರಿಸಿ ಅದು ಕನ್ನಡದ ಏಳಿಗೆಗೆ ಹೇಗೆ ಹಾನಿಕರವಾಗಬಹುದೆಂಬದನ್ನು ಮಹಾಜನರ ಗಮನಕ್ಕೆ ತರುವದೊಂದೇ ನಮ್ಮ ಉದ್ದೇಶ. ಈಗ ಕನ್ನಡಕ್ಕೊದಗಿರುವ ಆಪತ್ತು ನಮ್ಮ ಅಲಕ್ಷ್ಯಕ್ಕೆ ತಕ್ಕುದಲ್ಲವೆಂದು ಧಾರಳವಾಗಿ ತೋರಿ ಬರುತ್ತದೆ.

# ನಮ್ಮ ಮಾತು.

ಪರಕೀಯರ ಸ್ವಾರ್ಥಕ್ಕಿಂತ ಹೆಚ್ಚಾಗಿ ಸ್ವಕೀಯರ ದಾಕ್ಷಿಣ್ಯವೇ ಅಪಕಾರವಾದೀತೆಂಬದು ಈಗ ನಮಗಿರುವ ಭೀತಿ. ಈಗ ಸದ್ಯಕ್ಕೆ ಕನ್ನಡವು ಮತ್ತೊಬ್ಬರಿಗೆ ಉಪಕಾರ ಮಾಡುವ ಸ್ಥಿತಿಯಲ್ಲಿ ಇಲ್ಲವೆಂಬದನ್ನು, ಮೊದಲು ತನ್ನನ್ನೇ ತಾನು ಉದ್ಧಾರಮಾಡಿಕೊಳ್ಳಬೇಕಾಗಿದೆ ಎಂಬದನ್ನು ಅರಿಯದೆ ಈಗ ತನಗೆ ಸಲ್ಲಬೇಕಾದ ಪೋಷಣೆ ಆದರಗಳನ್ನು ಅದು ಇತರರಿಗೆ ಬಿಟ್ಟುಕೊಟ್ಟರೆ ತಾನು ಹಸಿದು ಸೊರಗಿ ಸಾಯಬೇಕಾಗುವದು.

ಸಂಪಾದಕರು,
**ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ**
ಬೆಂಗಳೂರ.

# ಸಂದೇಶಗಳು

---

ನಾನು ಇವತ್ತಿನ ವರೆಗಿನ ಚಂದ್ರಿಕೆಯೊಳಗಿನ ವಿಷಯಗಳನ್ನು ಓದಿ ಮನಗಂಡೆನು. ಚಂದ್ರಿಕೆಯೊಳಗಿನ ವಿಷಯಗಳು ವಿದ್ವಾನ್ ಲೇಖಕರಿಂದ ಬರೆಯಲ್ಪಡುತ್ತಿದ್ದು, ನಮ್ಮ ವೀರಶೈವರಿಗಷ್ಟೇ ಅಲ್ಲದೆ ಯಾವತ್ತೂ ಮತದವರು ಓದಲು ತಕ್ಕವುಗಳಾಗಿರುತ್ತವೆ. ಚಂದ್ರಿಕೆಯ ಧ್ಯೇಯವು ಅತ್ಯಂತ ಉದಾತ್ತವಾಗಿದೆ. ಉಜ್ವಲವಾಗಿರುತ್ತದೆ. ಚಂದ್ರಿಕೆಯು ಉತ್ತರೋತ್ತರ ಅಭಿವೃದ್ಧಿ ಹೊಂದಿ, ತಾಯ್ನುಡಿಯ ಸೇವೆ ಮಾಡಿ ಕೀರ್ತಿಶಾಲಿಯಾಗಿ ಚಿರಕಾಲ ಬಾಳಲೆಂದು ಕನ್ನಡಿಗರ ಕುಲದೈವತೆಯಾದ ಶ್ರೀ ಭುವನೇಶ್ವರಿಯನ್ನು ಪ್ರಾರ್ಥಿಸುತ್ತೇನೆ.

ಜೈಲೂರ,
೨೫—೨—೩೫

ಕನ್ನಡಿಗರ ಅಡಿಯಾಳು,
ಬಾಗೀಹಳ್ಳಿ ದುಂಡಪ್ಪ
ಸಾನಿಟರಿ ಕಮಿಟಿ ಚೇಅರಮನ್.

---

ನಿಮ್ಮ ಚಂದ್ರಿಕೆಗಳು ತಪ್ಪದೆ ತಲ್ಪುತ್ತಿವೆ. ಚಂದ್ರಿಕೆಯಲ್ಲಿಯ ಲೇಖಗಳಾದರೂ ಕನ್ನಡಿಗರನ್ನು ಎಚ್ಚರಿಸುತ್ತಲಿವೆ. ಇದರಂತೆಯೇ ಕನ್ನಡ ಸೇವೆಯನ್ನು ಮಾಡಿ ಕೀರ್ತಿವಂತರಾಗುವಿರೆಂದು ಆಶಿಸುತ್ತೇನೆ.

ಅಗಡಿ,
೫—೩—೩೫

ಶ್ರೀಮಂತ ಬಾಬಾಸಾ|| ಬಹದ್ದೂರ ದೇಸಾಯರು
ಇನಾಮದಾರ
ಟಿ. ಎಲ್. ಬಿ. ಮೆಂಬರ, ಹಾವೇರಿ.

---

# ವಿಮರ್ಶೆ

---

## ಸಚಿತ್ರ ಕನ್ನಡ ಹೊಸ ಬಾಲಬೋಧೆ

ಲೇಖಕರು:- ನರಸಿಂಹ ಪುರಾಣಿಕ ತಿಪಟೂರ. ಬೆಲೆ ೦—೧—೬

ಚಿಕ್ಕ ಮಕ್ಕಳಿಗೆ ಸುಲಭರೀತಿಯಿಂದ ಅಕ್ಷರಜ್ಞಾನ ಮಾಡಿಕೊಡುವದಕ್ಕೆ ಪುರಾಣಿಕರು ರಚಿಸಿದ ಬಾಲಬೋಧಿನಿಯು ಒಳ್ಳೇ ಅನುಕೂಲವಾಗಿದೆ. ಇಂತಹ ಪುಸ್ತಕವು ಮುಂಬಯಿ, ಮದ್ರಾಸ, ಮೈಸೂರ ಸರಕಾರದವರಿಂದ ಪ್ರಾಥಮಿಕ ಶಾಲೆಗಳಿಗೆ ಪಠ್ಯಪುಸ್ತಕವಾಗಿ ನಿಯಮಿಸಲ್ಪಟ್ಟಿದ್ದು ಯಥಾಯೋಗ್ಯವೇ ಸರಿ. ನಾವಾದರೂ ಈ ಮುಂದೆ ಕನ್ನಡ ಭಾಗದ ಶಾಲೆಗಳಿಗೆ ಪಠ್ಯಪುಸ್ತಕವನ್ನಾಗಿ ನಿಯಮಿಸಲು ಶಿಫಾರಸು ಮಾಡಲಿಕ್ಕಿರುವೆವು.

ವಾ. ವಾ. ಮಹಿಷಿ,
ಹೆಡ್ ಮಾಸ್ತರ, ಸೇ. ಗ್ರೇ ಸ್ಕೂಲ, ಶಿರಹಟ್ಟಿ.

# ಶ್ರೀ ಜಗದ್ಗುರು ಜಯದೇವ ಮುರಘಾರಾಜೇಂದ್ರ ಮಹಾಸ್ವಾಮಿಗಳು ಚಿತ್ರಕಲ್‌ದುರ್ಗ ಅವರು ಶ್ರೀ ನಂದಿವೇರಿ ಮಠಕ್ಕೆ ಆಗಮಿಸಿದ್ದು.

---

ಶ್ರೀ ನಂದಿವೇರಿ ಮಠದ ದೇಶಿಕಮೂರ್ತಿಗಳಾದ ಶ್ರೀ ಶಂಕರದೇವರಿಗೆ ವಿರಕ್ತಾಶ್ರಮವನ್ನು ದಯಪಾಲಿಸಲಿಕ್ಕೆ ಮಹಾಸನ್ನಿಧಿಯು ಅಪ್ಪಣೆ ಕೊಡಿಸಿದ ಪ್ರಕಾರ ಶ್ರೀ ನಂದಿವೇರಿ ಮಠದ ಸದ್ಭಕ್ತ ಜನರು ಶ್ರೀ ಗುರುಶಾಂತಸ್ವಾಮಿಗಳನ್ನು ಬರಮಾಡಿಕೊಂಡು, ಇದೇ ಶ್ರೀಮನ್ನೃಪ ಶಾಲಿವಾಹನ ಶಕೆ ೧೮೫೬ ನೇ ಭಾವ ಸಂ|| ಮಾಘ ಶು|| ೧೦ (ತಾ.೧೩-೨-೩೫ ನೇ) ಬುಧವಾರದಿಂದ ಆಶ್ರಮಾಧಿಕಾರ ಕಾರ್ಯಕ್ರಮಗಳು ನಡೆದವು. ಈ ಕಾರ್ಯಕ್ಕೆ ಚಿತ್ರಕಲ್ ಮಹಾಸ್ವಾಮಿಗಳವರು ಅನೇಕ ಭಕ್ತ ಸಮುದಾಯದೊಡನೆ ತಾ. ೨೨-೨-೩೫ ನೇ ಶುಕ್ರವಾರ ಪ್ರಾತಃಕಾಲಕ್ಕೆ ೧೦ ಗಂಟೆಗೆ ದಯಮಾಡಿಸಿದ್ದಾಯಿತು. ಕ್ಷೇತ್ರದ ಪ್ರವೇಶದ ಬಗ್ಗೆ ರಚಿಸಿದ ನಿಲ್ದಾಣದಿಂದ ಪಂಚ ಕಲಶಯುಕ್ತ ಅಡ್ಡಪಲ್ಲಕ್ಕಿ ಮಹೋತ್ಸವವು ಸಕಲ ಬಿರುದಾವಳಿಗಳಿಂದಲೂ ಆನೆ-ಕುದುರೆಗಳಿಂದಲೂ ಸಕಲ ಮಂಗಲ ವಾದ್ಯಗಳಿಂದಲೂ ಶ್ರೀ ಕ್ಷೇತ್ರಕ್ಕೆ ಆಗಮಿಸಿದ ಅನೇಕ ಭಕ್ತ ಮಹೇಶ್ವರ ಸಮುದಾಯಗಳೊಡನೆ ೧೧ ಗಂಟೆಗೆ ಮಠವನ್ನು ಸೇರಿ, ಮಠದಲ್ಲಿ ಅಲಂಕೃತವಾದ ಸಿಂಹಾಸನದ ಮೇಲೆ ಶ್ರೀ ಜಗದ್ಗುರುಗಳು ಆರೋಹಣಗೈದರು. ಕೂಡಲೇ ಆಯಾ ಸ್ಥಾನಗಳಲ್ಲಿ ನಿರಂಜನ ಮೂರ್ತಿಗಳು, ಈ ಭಾಗದ ಪ್ರಾಂತಸಾಹೇಬರಾದ ಮೇಹರಬಾನ್ ಡಿ. ಬಿ. ದೇಶಪಾಂಡೇ ಸಾಹೇಬರು ಮತ್ತು ಮುಂಡರಗಿಯ ಸಬ್‌ಇನಸ್ಪೆಕ್ಟರು, ಪಂಡಿತರು ಗವಾಯಿಗಳು, ಅನೇಕ ಜನ ಸಭ್ಯ ಗೃಹಸ್ಥರು ಆಯಾ ಸ್ಥಳಗಳಲ್ಲಿ ಮಂಡಿಸಿದ್ದರಲ್ಲದೆ ಅನೇಕ ಜನ ಪ್ರೇಕ್ಷಕರಿಂದ ಸಭೆಯು ಕಿಕ್ಕಿರಿದು ಹೋಗಿತ್ತು.

ವಿರಕ್ತಾಶ್ರಮಸ್ವಾಮಿತ್ವವನ್ನು ವಹಿಸಿದ ಶ್ರೀಶಂಕರಸ್ವಾಮಿಗಳವರು ಮಹಾಸನ್ನಿಧಿಯ ಅಪ್ಪಣೆಯಂತೆ ಸಮಾಜ ಸೇವೆಯೇ ತಮ್ಮ ಕರ್ತವ್ಯವೆಂದು ಸರ್ವರಿಗೂ ತಿಳಿಯುವಂತೆ ಭಾಷಣ ಮಾಡಿದರು. ಮುಂದೆ ಸಂಪುಟಕಾರ್ಯವು ನಡೆದು ತರುವಾಯ ಮಂಗಲವಾಗಿ ಕಾರ್ಯವು ಸಮಾಪ್ತಿಯಾಯಿತು. ೮-೧೦ ಸಾವಿರ ಜನರಿಗೆ ಅನ್ನಸಂತರ್ಪಣೆಯಾಯಿತು. ಮಧ್ಯಾಹ್ನ ೫ ರಿಂದ ಅಡ್ಡಪಲ್ಲಕ್ಕಿ ಮಹೋತ್ಸವವು ನಡೆಯಿತು. ಪುನಃ ಸಭೆ ಸೇರಿ ಧಾರ್ಮಿಕ ಉಪದೇಶವು ಶ್ರೀ ನವಲಗುಂದ ಬಸವಲಿಂಗ ದೇಶಿಕರಿಂದಲೂ ಬೆಂಗಳೂರ ಶ್ರೀಗಳವರಿಂದ ಪ್ರವಚನವು ನಡೆದು, ಮಹಾಸನ್ನಿಧಿಯಿಂದ ಶುಭಾಶೀರ್ವಚನವಾದನಂತರ, ಮುಂಡರಗಿಯ ವ್ಹಿ.ಮುನಸೂಫರೂ ಡಿ. ಲೋ. ಮೆಂಬರರೂ ಆದ ಶ್ರೀ ವೀರಭದ್ರಪ್ಪನವರು ಕೊಪ್ಪಳ ಇವರು ಇದರಲ್ಲಿ, ಕೆಲಸ ಮಾಡಿದ್ದಕ್ಕೆ ಶ್ರೀ ಜಗದ್ಗುರುಗಳು "ಲೋಕ ಸೇವಾಪ್ರವೀಣ" ರೆಂಬ ಬಹುಮಾನವನ್ನು ಸನ್ನಿಧಿಯಿಂದ ದಯಪಾಲಿಸಿದರು.

ನಿಂಗಪ್ಪ ಅಮೃತಪ್ಪ ಗೋಡಿ, ಗದಗ.

# ಅತ್ಯುತ್ತಮವಾದ ಕೆಲವು ಅನುಭವಸಿದ್ಧ

## — ಔಷಧಗಳು. —

ಕೇವಲ ಮೋಹಕವಾದ ಲೇಬಲುಗಳಿಂದ ಕೂಡಿದ ಹಾಗು ಆಡಂಬರದ ಜಾಹೀರಾತುಗಳಿಗೆ ಮೋಸಹೋಗಿ ಸಲ್ಲದ ಔಷಧಗಳನ್ನು ತರಿಸಿ ನಿಮ್ಮ ದೇಹಾರೋಗ್ಯದ ಹಾನಿಯನ್ನು ಮಾಡಿಕೊಳ್ಳಬೇಡಿ! ಕಸ್ತೂರಿಯ ವಾಸನೆಯನ್ನು ಬಾಯಿಂದ ಹೇಳಬೇಕಾದವಶ್ಯವಿಲ್ಲ. ಹಾಗೆ ನಮ್ಮ ಔಷಧಗಳಲ್ಲಿರುವ ಗುಣದಬಗ್ಗೆ ಖಾತ್ರಿ ಮಾಡಿಕೊಳ್ಳಬೇಕು.

### ಔಷಧಗಳ ವಿವರ :

[೧] ಕಾಲರಾಪಿಲ್ಸ ೧೦೦ಕ್ಕೆ ೫ ರೂ. [೨] ವ್ಯಾಧಿಗಜಕೇಸರಿ ೧ ರೂ ೨ ತೊಲಿ [೩] ಹುರಕಿನ ಚೀಟು ೧೦೦ಕ್ಕೆ ೫ ರೂ. [೪] ವ್ಯಾಧಿಹರಗುಟಿಕಾ ೧ ರೂ. ೨ ತೊಲಿ [೫] ಥಂಡಿಜ್ವರಕ್ಕೆ ೨೪ ಮಾತ್ರೆಗೆ ೧ ರೂ. [೬] ಬಚನಾಗಾದಿಗುಟಿಕಾ ೧ ರೂ ೨ ತೊಲಿ [೭] ಅಶ್ವಗಂಧಿಚೂರ್ಣ ೧ರೂ. ೪ ತೊಲಿ [೮] ಸಂಜೀವಿನಿ ಗುಟಿಕಾ ೧ ರೂ. ೨ ತೊಲಿ. [೯] ನಾಗಾರ್ಜುನಚೂರ್ಣ ೧ ರೂ. ೪ ತೊಲಿ [೧೦] ಹಿಂಗ್ವಾದಿಚೂರ್ಣ ೧ ರೂ. ೨ ತೊಲಿ [೧೧] ಪುಷ್ಯಾನುಗಚೂರ್ಣ ೧ ರೂ. ೪ ತೊಲಿ [೧೨] ಗುಲಜಲೋದರಮಹೋದರ ಚೂರ್ಣ ೧ ರೂ. ೨ ತೊಲಿ [೧೩] ಭಾಸ್ಕರಲವಣ ೧ ರೂ. ೪ ತೊಲಿ [೧೪] ಅಗ್ನಿಕುಮಾರ ರಸ ೧ ರೂ. ೧ ತೊಲಿ [೧೫] ಮಹಾಜರಾಂಕುಶ ೨ ರೂ. ೧ ತೊಲಿ [೧೬] ವಾತುವಿಧ್ವಂಸ ರಸ ೧ ರೂ. ೪ ತೊಲಿ [೧೭] ಮೃತ್ಯುಂಜಯ ರಸ ೨ ರೂ. ೧ ತೊಲಿ [೧೮] ಮಹಾಯೋಗರಾಜ ಗುಗ್ಗಳ ೪ ರೂ. ೧ ತೊಲಿ [೧೯] ಪ್ರದವಾದಿ ರಸ ೨ ರೂ. ೧ ತೊಲಿ [೨೦] ಕಾಮೇಶ್ವರ ೪ ರೂ. ೧ ತೊಲಿ [೨೧] ಗರ್ಭಿಗೆ ೧೪ ಮಾತ್ರೆಗೆ ೫ ರೂ. [೨೨] ಮೂಲವ್ಯಾಧಿಗೆ ೧೪ ಮಾತ್ರೆಗೆ ೧ ರೂ. [೨೩] ಶೂಲವಜ್ರಿಣಿ ೫ ರೂ. ತೊಲಿ ೧ [೨೪] ಯಾವತ್ತೂ ವ್ರಣಗಳಿಗೆ ಮಲಮು ಡಬ್ಬಿ ೨ ಆಣೆ [೨೫] ಸರ್ವವಾತಕ್ಕೆ ೫ ರೂ ೧ ತೊಲಿ [೨೬] ಪರಿಣಾಮಶೂಲಿಗೆ ೨ ರೂ. ೧ ತೊಲಿ [೨೭] ಸುದರ್ಶನ ಚೂರ್ಣ ೧ ರೂ. ೪ ತೊಲಿ [೨೮] ಶ್ಲೇಷ್ಮಿಗೆ ೧ ರೂ. ೨ ತೊಲಿ.

ಅನುಪಾನ— ಪಥ್ಯ ಔಷಧಗಳಕೂಡ ವಿವರಿಸುವದು. ಹೆಚ್ಚಿನ ಮಾಹಿತಿ ಬೇಕಾದಲ್ಲಿ ಕೆಳಗಿನ ವಿಳಾಸಕ್ಕೆ ಬರೆದು ತಿಳಕೊಳ್ಳಬಹುದು.

ನಮ್ಮ ವಿಳಾಸ:— **ಬ. ಕೆ. ಪಾಟೀಲ ಶಿರಹಟ್ಟಿ**

ಪೋ. ಶಿರಹಟ್ಟಿ

R. NO. B. 3350 VEERASHAIVA CHANDRIKE



ಉತ್ತರ ಕರ್ನಾಟಕದ 'ಕರ್ನಾಟಕ ಸಂಘ'
ಹಾಗೂ ವಾಚನಾಲಯಗಳ ಕಾರ್ಯದರ್ಶಿಗಳಲ್ಲಿ

## ವಿನಂತಿ.

ಕನ್ನಡ ಸಾಹಿತ್ಯ ಸೇವೆಗೈಯುವ ಉದ್ದೇಶದಿಂದ ನಾವಿಲ್ಲಿ 'ವೀರಶೈವ ಚಂದ್ರಿಕೆ' ಎಂಬ ಮಾಸಪತ್ರವೊಂದನ್ನು ಹೊರಡಿಸಿರುವೆವು. ಈ ಮೊದಲೇ ಅದರ ೧೦ ಸಂಚಿಕೆಗಳು ಹೊರಬಿದ್ದಿವೆ. ಈ ಮುಂದೆ ನಮ್ಮ ಪತ್ರಿಕೆಯಲ್ಲಿ ಉತ್ತರ ಕರ್ನಾಟಕದಲ್ಲಿನ ಸಂಘಗಳ ಹಾಗು ವಾಚನಾಲಯಗಳ ವತಿಯಿಂದ ಜರಗುವ ಕಾರ್ಯ ಕಲಾಪಗಳ ವಿಷಯವನ್ನು ಪ್ರಕಟಿಸಲಿರುವೆವು. ಆದ್ದರಿಂ ಸಂಘಗಳ ಕಾರ್ಯದರ್ಶಿಗಳು, ತಮ್ಮ ಸಂಘದ ಕಾರ್ಯ ಕಲಾಪದ ವಿಷಯ ಗಳನ್ನು ಬರೆದು ಕಳುಹಿಸಿ ಈ ಸುಸಂಧಿಯ ಲಾಭ ಪಡೆಯಬೇಕು.

ವೀರಶೈವ ಚಂದ್ರಿಕೆಯ ಕಾರ್ಯಾಲಯ,
ಶಿರಹಟ್ಟಿ. (ಜಿ. ಧಾರವಾಡ)

-ಸಂಪಾದಕರು.

ಇದನ್ನು ಗದಗ-ರಸಿಕರಂಜನಿ ಮುದ್ರಣಾಲಯದಲ್ಲಿ ಮುದ್ರಿಸಿ
ಶಿರಹಟ್ಟಿ-ವೀರಶೈವ ಚಂದ್ರಿಕೆಯ ಆಫೀಸಿನಲ್ಲಿ ಪ್ರಸಿದ್ಧ ಪಡಿಸಿತು.

ವಾರ್ಷಿಕ ಚಂದಾ ೧-೮-೦, ಅಂಚೇ ವೆಚ್ಚ ಸೇರಿ ೧-೧೧-೦.
ಬಿಡಿ ಸಂಚಿಕೆ ೦-೩-೦.

ಶಿ ರ ಹ ಟ್ಟಿ
ಶ್ರೀ ಫಕ್ಕೀರೇಶ್ವರ ಸ್ವಾಮಿಗಳ ಕೃಪಾಛತ್ರದಲ್ಲಿ ನಡೆದ
ಶ್ರೀ

# ವೀರಶೈವ ಚಂದ್ರಿಕೆ.

ನೈತಿಕ, ಸಾಮಾಜಿಕ, ಧಾರ್ಮಿಕ ವಿಷಯಗಳಿಂದೊಡಗೂಡಿದ
ತಿಳಿಗನ್ನಡ ಮಾಸಪತ್ರಿಕೆ.

ಹುಟ್ಟು : ಶಕೆ ೧೮೫೬. ಶ್ರೀ ಬಸವ ಜಯಂತಿ.

| ಸಂಪುಟ | ದವನದ ಹುಣ್ಣಿವೆ. | ಸಂಚಿಕೆ |
|---|---|---|
| ೧. | ೧೮ — ೪ —೧೯೩೫. | ೧೨. |

ಕಂದ

ತನ್ನಯ ನಾಡ–ನಡೆನುಡಿಗ ।
ಳುನ್ನತಿಯಂ ಮಾಳ್ಪ ಕಜ್ಜ ಕಿನ್ನೆಸೆಯುಂಟೇ॥
ಕನ್ನಡದೇಳ್ಗೆಯ ಬಗೆಯಂ ।
ಕನ್ನಡಿಗರ್ ತಿಳಿದುಕೊಡಲಿದಕ್ಕಾಶ್ರಯ
ಮಂ ॥೧॥

ಕಂದ

ಬಂದವರಂ ಬರಿಸದಿಹಂ ।
ಸಂದವರಂ ಸಂತವಿಸದನಹ ತಾಯ್ನುಡಿಯಂ॥
ವಂದಿಸದಿರುವಂ ಮನುಜನೊ ! ।
ವಂಧ್ಯನೊ ! ಕಾಣಿಳೆಗೆ ಪುಟ್ಟಿ ಫಲವೆನಿಸಿಹ
ನೋ ! ॥೨॥

ಕವಿ– ವಾಜಪೇಯ ಶಿವಾನಂದಾರ್ಯರು.

ಸಾಹಿತ್ಯದ ಉದ್ದೇಶ ಜೀವನವನ್ನು ಹೊಸದು ಮಾಡುವದು. ಜೀವನಕ್ಕೆ ಹೊಸತನವನ್ನೀಯ ಬಲ್ಲ ಸಾಹಿತ್ಯವು ನವೋನವರೂಪತಾಳುವ ಶಕ್ತಿಯುಳ್ಳದ್ದಾಗಿರಬೇಕು. ಆದುದರಿಂದ ಸಾಹಿತ್ಯವು ತನ್ನ ಬೆಂಕಿ ಬೆಳಗುತ್ತಿರುವ ವರೆಗೂ ಹೊರಗಿನ ಕಿಡಿಗಳನ್ನು ಎಳೆದುಕೊಳ್ಳಲು ಹಿಂಜರಿಯಲಾಗದು. ಕನ್ನಡವು ಬರೀ ಇಂಗ್ಲೀಷ, ಬಂಗಾಲೀ, ಸಂಸ್ಕೃತಿಗಳಿಂದಷ್ಟೇ ಅಲ್ಲ ಭಾರತದ ಒಳಹೊರಗಿನ ಸಾಹಿತ್ಯಗಳಿಂದ ಸಾಧ್ಯವಾದಷ್ಟು ಕಿರಣಗಳನ್ನು ತನ್ನಲ್ಲಿ ಎಳೆದುಕೊಂಡು ತನ್ನ ವಾಗಿ ಮಾಡಿಕೊಳ್ಳಬೇಕು. ಇದು ಅನುಕರಣವಲ್ಲ ಸಮೀಕರಣ. ಇಂಥ ಸಮೀಕರಣ ಸಾಹಿತ್ಯವೇ ನಮಗೆ ಬೇಕಾದುದು.

ಶ್ರೀಮಾನ್ ಶ್ರೀನಿವಾಸರು,
ಸಣ್ಣಕತೆಗಳನ್ನು ಬರೆಯುವದರಲ್ಲಿ ಅಗ್ರೇಸರರು.

ಸಂಪಾದಕರು ಹಾಗು ಪ್ರಕಾಶಕರು :
ಆಲೂರ ಮುರಿಗೇಂದ್ರ ಶೆಟ್ಟರು.

ಬಾಲಸುಧಾ ೧ ಔಂಸಿನ ಬಾಟ್ಲಿಗೆ ೦-೭-೦, ೮ ಔಂಸಿನ ಬಾ. ೧-೧೨-೦.




ವಾಸಕ ೧ ಔಂಸಿನ ಬಾಟ್ಲಿ ಕಿಂಮತ್ತು ೦-೬-೦.

## — ಬಾಲ ಸುಧಾ —

ಚಿಕ್ಕ ಮಕ್ಕಳ ಹೊಟ್ಟೆ ದೊಡ್ಡದಾಗುವದು, ಅಜೀರ್ಣದಿಂದ ಹೊಟ್ಟೆ ಉಬ್ಬುವದು. ಝಾಡಿಸುವದು, ಹೊಟ್ಟೆನೋವು, ಮಲಬದ್ಧತೆ ಮುಂತಾದ ಅಪಚನದ ವಿಕಾರಗಳು, ಮುಟ್ಟ ದೋಷಗಳು. ರಿಕೆಟ್ಸ ಕೆಮ್ಮು, ನೆಗಡಿ ಮುಂತಾದ ಕಫವಿಕಾರಗಳು, ಯಕೃದಭಿವೃದ್ಧಿ ಪ್ಲೀಹಾಭಿವೃದ್ಧಿ ಮುಂತಾದ ಭಯಂಕರ ರೋಗಗಳು ತೀವ್ರ ಕಡಿಮೆಯಾಗಿ ಚಿಕ್ಕ ಬಾಲಕರು ಸಶಕ್ತರೂ, ಪುಷ್ಟರೂ, ಸುಂದರರೂ ಆಗುವರು.

## — ವಾಸಕ —

ಈ ಔಷಧದಿಂದ ಕಫಕ್ಷಯ ದಮ್ಮು, ಕೆಮ್ಮು, ನೆಗಡಿ, ಇನ್‌ಫ್ಲುಯಂಝಾ, ನ್ಯೂಮೋನಿಯಾ ಸಣ್ಣ ಹುಡುಗರ ಪಕ್ಕೆ ಬಡಕೊಳ್ಳುವ ಭಯಂಕರ ರೋಗ (ಬ್ರಾಂಕೋನ್ಯೂಮೊನಿಯಾ) ಕೊಡಗಕೆಮ್ಮು. ಕಫಜ್ವರ, ಕಫ ಗಟ್ಟಿಯಾಗುವದು, (ತ್ರಿದೋಷಜ್ವರದಲ್ಲಿ) ಮುಂತಾದ ತ್ರಾಸದಾಯಕ ಭಯಂಕರ ರೋಗಗಳು ಖಾತ್ರಿಯಿಂದ ಗುಣ. ಬಹುದಿವಸ ದಮ್ಮಿನಿಂದ ಬಳಲುವ ಎಷ್ಟೋ ಜನರು ಇದನ್ನು ಉಪಯೋಗಿಸಿ ಸುಖಹೊಂದಿದ್ದಾರೆ.

**ಕರ್ನಾಟಕ ಆಯುರ್ವೇದಿಕ ಫಾರ್ಮಸಿ,**

**ಶಿರಹಟ್ಟಿ. ಜಿಲ್ಲಾ ಧಾರವಾಡ.**

---

# ಪದ್ಯ ಸೀಮೆ

ಕವಿಗಳು ನಿರಂಕುಶರಾಗಿರುವದರಿಂದ ಭಾಷೆಯನ್ನು ತಮಗೆ ಬೇಕಾದಂತೆ ಮಾರ್ಪಡಿಸಿಕೊಳ್ಳುವ ಅಧಿಕಾರವು ಅವರಿಗಿದೆಯೆಂಬ ಭಾವವು ಈಚೆಗೆ ನಮ್ಮ ಕವಿಗಳಲ್ಲಿ ಬೆಳೆಯತೊಡಗಿದೆ. ಭಾವಗಳು ಪ್ರವಹಿಸುವಾಗ ವ್ಯಾಕರಣದ ಕಟ್ಟುಗಳನ್ನು ಅವು ಲೆಕ್ಕಿಸವೆಂಬ ನೆವದಿಂದ ತಮ ತಮಗೆ ಬೇಕಾದ ರೀತಿಯಿಂದ ಕನ್ನಡವನ್ನು ವಿಕಾರಗೊಳಿಸುತ್ತಿರುವದನ್ನು ಇಂದು ನಾವು ಕಾಣಬಹುದಾಗಿದೆ. ಈ ಸ್ವಚ್ಛಂದವೃತ್ತಿಗೆ ತಡೆ ಹಾಕುವದು ಎಷ್ಟು ಮಟ್ಟಿಗೆ ಸಾಧ್ಯವಾಗಿದೆ? ಶುಷ್ಕವೈಯಾಕರಣಿಗಳಾಗದೆ ಶುದ್ಧ ಸ್ವರೂಪವನ್ನು ಕಾಯ್ದುಕೊಳ್ಳುವ ಉದ್ದೇಶದಿಂದ ನಮ್ಮ ಲೇಖಕರು ಮುಂದುವರಿಯುವ ಕಾಲವು ಈಗ ಬಂದೊದಗಿದೆಯೆಂದು ಹೇಳಬಹುದು.

ಶ್ರೀ. ಎ. ಟಿ ಸಾಸನೂರ,
ಪ್ರೋಫೇಸರ– ಕರ್ನಾಟಕ ಕಾಲೇಜ, ಧಾರವಾಡ.

---

# ಪ್ರಾರ್ಥನಾ ಪದ್ಯದ ನೋಟೇಶನ್.

ರಾಗ- ಜಿಲ್ಲಾ ಝಿಂಜೋಟಿ ತಾಲ- ಧುಮಾಳಿ ಮಾತ್ರಾ ೮

ಸೂಚನೆ.— ಈ ರಾಗಕ್ಕೆ ಮಧ್ಯಮ ನಿಷಾಧಗಳು ೨ ಹಸ್ತಿತ್ತವೆ. ಉಳಿದ ಸ್ವರಗಳು ತೀವ್ರ.

| | | |
|---|---|---|
| ಆರೋಹ | ಪ ಧ ಸಾ ರಿ ಗ ಽ ಮ ಪ | ಗ. ವಾದಿ ಧ ಸಂವಾದಿ |
| ಅವರೋಹ | ಪ ಮ ಗ ರಿ ಸಾ ನಿ ಧ ಪ | |

| | | | | |
|---|---|---|---|---|
| ಅ ಭಿ ನ ಮಿ | ಸು ವೆ ಶಿ ವ | ಶಂ ಭೋ ಽ ಽ | ಘ ನ ದ ಯ | |
| ಗ ಗ ಮ ಮ | ಗ ರಿ ಗ ಽ | ರಿ ಸಾ ರಿ ರಿ | ಸಾ ನಿ ಸಾ ಽ | |
| ಕ ರು ಣಾ ಂ | ಬು ಧಿ ಸ ದ | ಯಾ ಽ ಽ ಽ | ಜೀ ಽ ಯಾ ಽ | ‖ಪ‖ |
| ನಿ ಸಾ ರಿ ಗ | ಸಾ ರಿ ಗ ಮ | ಗ ಽ ಽ ರಿ | ನಿ ರಿ ಸಾ ಽ | |
| ಅ ರಿ ಷ ಽ | ಡ್ವ ಽ ರ್ಗ ವು | ಶಾ ಽ ಪ ವ | ನಿ ಽ ವು ದು | |
| ಸಾ ಸಾ ಸಾ ಗ | ಗ ಮ ರಿ ಗ | ಮ ಽ ಪ ಪ | ಮ ಧ ಪ ಽ | |
| ಕ ರ ವ ಮು | ಗಿ ವೆ ಬಾ ಽ | ಕ್ರೈ ಽ ಽ ಽ | ದೇ ಽ ವಾ ಽ | ‖೧‖ |
| ಗ ಽ ಗ ಗ | ಗ ಮ ಪ ಧ | ಮ ಽ ಽ ಗ | ಸಾ ಽ ರಿ ಽ | |
| ಜ ಗ ದೋ ಽ | ದ್ಧಾ ಽ ರ ಕ | ತ್ರಿ ಭು ವ ನ | ಸುಂ ದ ರ | |
| ಗ ಗ ಗ ಽ | ಗ ಮ ಪ ಧ | ರಿ ಽ ಪ ಪ | ಮ ಽ ಗ ಗ | |
| ಅ ಘ ನಾ ಽ | ಶಿ ಶು ದ ಯ | ದಿ ಽ ಽ ಽ | ದೇ ಽ ವಾ ಽ | ‖೨‖ |
| ಪ ಪ ಪ ಽ | ಮ ಪ ಮ ಪ | ಮ ಗ ಽ ಽ | ಸ ಽ ಸಾ ಽ | |


ತಮ್ಮ

**ನಾರಾಯಣ ಗಣೇಶ ವಿಜಾಪೂರ**

ಹಾರ್ಮೋನಿಯಮ್ ಮಾಸ್ತರ

ಶಿರಹಟ್ಟಿ.

# ತಾಯ್ನುಡಿ (ಕನ್ನಡ)

ಕವಿ :— ಶಿವಾನಂದ ದೀಕ್ಷಿತ ವಾಜಪೇಯಿ ಹಾವೇರಿ.

ಕನ್ನಡಿಗರ ಜನ್ಮದ ನುಡಿ |
ಕನ್ನಡವಿಂಪು—ತಿಳಿ—ಲಿಂಗ ಸುಲಭಂ ಬಗೆಯಲ್ ||
ಕನ್ನಡವೆನೆ ಕನ್ನಡಿಯೊ |
ಕನ್ನಡ ದೇಳ್ಗೆಯನೆಸಪರೆ! ಧನ್ಯರ್! ಮಾನ್ಯರ್ ||೧||

ಸವಿವಣ್ಣಿಗೆ ಸವಿ! ಜಿಹ್ವೆಗೆ |
ಕಿವಿಗಳ್ಗಾ ವೀಣೆಯಿಂಚರಕ್ಕಿಂಪಾ ಪಾಲ್ ||
ಸವಿಯುಣಿಸಿಗುಣಿಸು ಕನ್ನಡ |
ಮನಸಿಗೆನಿಸೆ ಕನ್ನಡಿಗರದೆಷ್ಟು ಸುಕೃತರೋ ! ||೨||

ಅಂಧರಿಳೆಯಂದವರಿವರೊ ! |
ಚಂದ್ರನಿನಾನಂದಮಹರೊ ! ವಿಷಯಾತುರರೇಂ ||
ಕಂದನ ಸೌಖ್ಯವೊ ! ಬಂಜಿಗೆ |
ಮಂದರ್ ಕನ್ನಡಮನೊಲಿಯರೊಲಿಯರೊ ! ಬಲ್ಲರ್ ||೩||

## ವಿದ್ಯೆ.

ವಸಂತ ತಿಲಕಂ

ವಿದ್ಯಂ ಸುಧೀ-ಸುಹಿತ-ಭೂತಿಗಳೀವುದೈ! ದಲ್ |
ವಿದ್ಯಂ ಸುಪೂಜ್ಯಮವನೀಧವರಿಂ ಯಶೋದಂ ||
ವಿದ್ಯಂ ವಿದೇಶದಲಿ ಬಂಧುವಭೀಷ್ಟವೆಲ್ಲಂ |
ವಿದ್ಯಾವಿಹೀನನಕಟಾ! ಪಶುತುಲ್ಯನಪ್ಪಂ ||೧||

ಕಂದ ಪದ್ಯಂ

ವಿದ್ಯಂ ಮನಕಾನಂದಂ |
ವಿದ್ಯಂ ಶ್ರುತಿಗಳ್ಗೆ ಗೀತೆ! ಮಧು! ನಾಲಗೆಗೈ ||
ವಿದ್ಯಂ ಬಡವರ್ಗೈಸಿರಿ |
ವಿದ್ಯಂ ಭೂಕಾಮಧೇನು! ವಿದ್ಯಕ್ಕೆಣೆಯೇಂ! ||೨||

# ಹಳ್ಳಿಯ ಹಾಡುಗಳು.

ಸಂಗ್ರಾಹಕರು:— "ತಿಮ್ಮಣ್ಣ" ಕಾಲವಾದ.

ಅಡಗೀಯ ಮನಿಯಾಗ ಮಡದೀಯ ಕೇಳ್ಯಾರ | ನಾ ಹೆಚ್ಚ ನಿನ್ನ ತವರ್ಹೆಚ್ಚ |
ನಾ ಹೆಚ್ಚ ನಿನ್ನ ತವರ್ಹೆಚ್ಚ ಹೇಳೆಂದ್ರ | ಮಡದಿ ನುಡಿದ್ಯಾಳ ಮನಸಿಂದ ||೧||

ತಾಯಿ ಇದ್ದರ ತವರ್ಹೆಚ್ಚ ತಂದಿ ಇದ್ದರ ಬಳಗ್ಹೆಚ್ಚ | ಸಾವೀರಕ್ಹೆಚ್ಚ ಸತಿಪುರುಷರು|
ಸಾವೀರಕ್ಹೆಚ್ಚ ಸತಿಪುರುಷರು ನಿಮ್ಮ ಮನಿಯಾಗ ತರಬಲ್ಲೆ ನಾ ಕೊಡಲರಿಯೆ||೨||

ಹಾಸಿಗಿ ಹಾಸೆಂದ ಶಾವಂತಿಗ್ಹೂವ ಮೂಸೆಂದ | ಬೇಸತ್ತರ ಮಡದಿ ಮನಗೆಂದ |
ಬೇಸತ್ತರ ಮಡದಿ ಮನಗೆಂದ ಬೇಗಿನ ಕಡಿಗೆ| ನನ್ನ ನೋಡಿ ತವರ ಮರಿಯಂದ||೩||

ಅಡಗೀಯ ಮನಿಯಾಗ ಮಡದೀಯ ಸುಳವಿಲ್ಲ | ಅಡಿಗೆ ಬಾಯಿಗೆ ರುಚಿಯಿಲ್ಲ |
ಅಡಿಗಿ ಬಾಯಿಗೆ ರುಚಿಯಿಲ್ಲ ಬಂಗಾರದ | ತಗಡ ಹೋಗ್ಯಾಳ ತವರೀಗೆ ||೪||

ಕಾಕಿಹಣ್ಣಿಗೆಹೋಗಿ ಯಾಕೆ ತಡದಿ ನನ ರಾಯ | ಮಗಿಮಾವಿನ್ಹಣ್ಣ ಮನಿಯಾಗ|
ಮಗಿಮಾವಿನ್ಹಣ್ಣ ಮನಿಯಾಗ ಇದ್ದಾಗ ನೀರಲ್ಹಣ್ಣಿಗ್ಯಾಕ ನಿಲಸಿಂತೀ ||೫||

ಹಡದಪ್ಪ ಇರುತನಕ ನಡುಮನಿ ಸಂದಪ್ಪ | ಕಡಗದ ಕೈಯ್ಯ ಸೊಸಿ |
ಕಡಗದ ಕೈ ಸೊಸಿ ಬಂದ ಬಳಿಕ ತುದಿಗಟ್ಟಿ ನನಗ ಎರವವ್ವ ||೬||

ತನ್ನವರು ಬಂದರೆ ತಂದೆ ಬಂದೆನ್ನುವಳು | ತನ್ನ ಗಂಡನ ಕಡೆಯುವರು ಬಂದರೆ |
ತನ್ನ ಗಂಡನ ಕಡೆಯುವರು ಬಂದರೆ | ಕಣ್ಣ ಬ್ಯಾನೆಂತ ಮಲಗ್ಯಾಳು ||೭||

ದೂರಿದ್ದ ತವರವರಿಗೆ ದುಃಖ ಮಾಡುವರ್ಯಾರ | ಅತ್ತರ ಅವರಿಗರವೇನ |
ಅತ್ತರ ಅವರಿಗರವೇನ ನಮ ಕಣ್ಣೀರು | ಉತ್ತರೀಯ ಮಳಿಯಾಗಿ ಸುರಿದಾವ||೮||

ಹೊತ್ತು ಮುಳಗ್ಯಾವ ನನ್ನ ಹೋಳಿಯ ಅಂಬಿಗರಿಲ್ಲ | ಹಂತೀಲೆ ತವರ ಮನಿಯಿಲ್ಲ |
ಹಂತೀಲೆ ತವರ ಮನಿಯಿಲ್ಲ ಗೆಳೆತೆವ್ವ ಮುತ್ತ ಕಟ್ಟೇನಿ ಕೊಡ ನೆಗವ ||೯||

ಕೂಸು ಕಾಡಿತು ನನ್ನ ದೇಶಾಪತಿ ಚಿನ್ನ ! ಬೇಸತ್ತರ ತವರ ಬೈದೇನ |
ಬೇಸತ್ತರ ತವರ ಬೈದೇನ ನನ ಹಡದವ್ವ | ಬೀಸೀದ ಹಿಟ್ಟ ಕಳವ್ಯಾಳ ||೧೦||

ಸೊಸಿಯು ಗಂಡ್ಹಡಿಯಲಿ ಮಗಳು ಹೆಣ್ಣಡಿಯಲಿ | ಎಳೆಗರ ಎಮ್ಮಿ ಈಯಲಿ |
ಎಳೆಗರ ಎಮ್ಮಿ ಈಯಲಿ ನನ ಮನೆಯ ಸಡಗರ ನೋಡಾಕ ಶಿವ ಬರಲಿ ||೧೧||

---

# ಕಾವ್ಯ ಕುಂಜ

ವಿಶ್ವವೇ ದೇವ ದೇವನ ಕಾವ್ಯವಾಗಿ ರಸಭಾವವುಳ್ಳದ್ದೂ ಭಾವಕ್ಕೆ ತಕ್ಕ ಭಾಷೆಯುಳ್ಳದ್ದೂ ಕಾವ್ಯ ಜಗತ್ತಿನಲ್ಲಿ ನಿಷ್ಕಲಂಕ, ಪ್ರೇಮ, ಔದಾರ್ಯ, ವಿಭೂತಿ ಮೊದಲಾದವುಗಳು ಇದುವರೆಗೆ ಕಾವ್ಯಕ್ಕೆ ಅಳಿವಿಲ್ಲ ಸೌಂದರ್ಯವು ರಸಾಶ್ರಯದಿಂದ ನಿಲ್ಲುವದು. ಕವಿಯು ರಸಯೋಗಿಯೂ ಅಧ್ಯಾತ್ಮಯೋಗಿಯೂ ಅಹುದು. ಕಾವ್ಯಕ್ಕೆ ತಕ್ಕ ರೀತಿ ಬೇಕು ಆತ್ಮವಿದ್ದಂತೆ ಶರೀರವಿರುವದು. ಸರಳವಾಗಿ ವ್ಯಂಗ ಸರಣಿಯಲ್ಲಿ ಬರೆಯಬೇಕಾದರೆ ತಪಶ್ಚರ್ಯ ಬೇಕು.

ಶ್ರೀ. ಕೊಣ್ಣೂರ ಹಣಮಂತರಾಯರು

---

# ದಯವಿಲ್ಲದ ದಿವ್ಯಸುಂದರಿ!

ಬರೆದವರು ;— ಶಂಕರ ನಾಗೇಶ ಕುಂಭಾರ, ಹರಭಟ್ಟ ಹಾಯಸ್ಕೂಲ ಕುಂದಗೋಳ.

( ಕೀಟ್ಸರವರ " ಲಾಬೆಲಾ ಡೇಮು ಸ್ಯಾನ್ಸಮರ್ಸಿ " ಎಂಬದರ ಆಧಾರದಿಂದ ).

ಕುಸುಮ ಷಟ್ಪದಿ

ಅಡವಿಯೊಳು ಬರುತಿರಲು ।
ಕಡುಗುಃಖಿ ಕಲಿಯೊಬ್ಬ ।
ಗಿಡ-ಗಂಟಿಯೊಳಗಿಂದ ಮರುಗುತಲಿ ತಾ ॥
ನಡುಗುತಲಿ ಮಿಡುಕತಲಿ ।
ನಡೆತರುವದಂ ನೋಡಿ ।
ಬಾಡಿಹುದು ಮುಖವೇಕೆ ? ಕೇಳದೆನು ನಾ ॥೧॥

ಕೋಕಿಲೆಯು ಕೂಗಿಲ್ಲ ।
ಪೀಕುಗಳು ಬಂದಿಲ್ಲ ।
ಯಾಕಿಂಥ ಚಳಿಯೊಳಗೆ ವಿಪಿನದಲಿ ನೀ ॥
ಶೋಕಿಸುತ ತಿರುಗುವದು ।
ಮೂಕ ವೃತ್ತಿಯ ಮುರಿದು ।
ಸಂಕೋಚ ಪಡದೆ ಪೇಳ್ ಕಾರಣವನು ॥೨॥

ಏನು ಹೇಳಲಿ ಕರುಣಿ ।
ಕಾನನದ ಸುರತರುಣಿ- ।
ಯನು ಕಂಡೆ ನಾ ಝುರಿಯ ಹೂಗದ್ದೆಯೊಳ್ ॥
ಮಾನವಳು ಅವಳಲ್ಲ ।
ದಾನವಳು ಅವಳಲ್ಲ ।
ಕಾನನದ ದೇವತೆಯು ! ಮುಂದಗಮನೆ ! ॥೩॥

ಘನಕೇಶ ನಡು ಸಣ್ಣ ।
ಮೀನಾಕ್ಷಿ ಹೊಂಬಣ್ಣ ।
ಇನಿದಾದ ಸ್ವರವುಳ್ಳ ಸುಂದರಿಯು ತಾ ॥
ನನ್ನಿಯನು ತೋರಿದಳು ।
ಮೋಹವನು ಬೀರಿದಳು ।
ನನ್ನನ್ನು ಕೋರಿದಳು ಮದನಾಟಕೆ ॥೪॥

ನಾನವಳ ರೂಪಕ್ಕೆ ।
ಮನಸೋತು ಮೋದದಲಿ ।
ಮಾನಿನಿಯು ಪ್ರೇಮವನು ನಿಜವೆಂದು ನಾ ॥
ಆನಂದ ಶರಧಿಯಲಿ ।
ಮನದಣಿಯುವಂದದಲಿ ।
ಮುಣಿಗೆದ್ದು ನನ್ನೊಳಗೆ ನಲಿಯುತಲಿ ನಾ ॥೫॥

ತರತರದ ಹೂಗಳನು ।
ಹರಿದ್ದರಿದು ಮಿಗಿಲಾದ ।
ಹಾರಗಳ ಹೆಣೆದು ಚೆನ್ನೆಯ ಕೊರಳಲಿ ॥
ತುರುಬಿನಲಿ ಹಾಕಿದೆನು ।
ಕರಗಳಲಿ ಕಟ್ಟಿದೆನು ।
ವರಹರಿಯ ಮೇಲಿರಿಸಿ ಕೋಮಲೆಯನು ॥೬॥

ಏಕಾಗ್ರಚಿತ್ತದಲಿ ।
ಸಾಕಾಗುವಂದದಲಿ ।
ಈಕ್ಷಿಸುತ ಮುಖವನ್ನು ನಡೆಯುತಲಿ, ಆ ॥
ಕೋಕಿಲೆಯ ರಾಗಕ್ಕೆ ।
ಹಾಕುತಲಿ ತಾಳವನು ।
ಏಕಾಗಿ ಹೋಗಿದ್ದೆ ಗಾಯನದಲಿ ॥೭॥

ಸುರತರುಣಿ ಎನ್ನನ್ನು ।
ಕರೆದೊಯ್ದು ಗವಿಯೊಳಗೆ ।
ಕಿರಿಕಿರೀ ಹಚ್ಚಿದಳು ಪ್ರೇಮದಲಿ ತಾ ॥
ಅರಿದಾದ ಭಾಷೆಯಲಿ ।
ಅರುಹಿದಳು ತಂದಿಡುತ ।
ತರತರದ ಕಂದ ಮೂಲಾದಿಗಳನು ॥೮॥

ಆಮ್ರ ಫಲ ಮಧುವನ್ನು ।
ಅಮೃತವನು ಸೇವಿಸಿರಿ ।
ನಿಮ್ಮನ್ನು ಪ್ರೀತಿಸುವೆ ನಿಜವಾಗಿ ನಾ ॥
ಕಾಮಿನಿಯ ಮನಕೊಪ್ಪಿ ।
ಪ್ರೇಮದಲಿ ಬಿಗಿದಪ್ಪಿ ।
ಭಾಮಿನಿಯ ಚುಂಬಿಸಿದೆ ಬಹು ವಿಧದಲಿ ॥೯॥

ಮಲಗಿದೆನು ಮೋಹಿನಿಯ ।
ಬಲಗಾಲ ತೊಡೆಮೇಲೆ ।
ತಲೆಭಾರವನು ಹಾಕಿ ಮೋಹದಲಿ ನಾ ॥
ಅಳುಕಿಸಿದೆ ಕುಚಗಳನು ।
ಬಲವಾಗಿ ಪೀಡಿಸಿದೆ ।
ಮಲಗೆಂದು ಪೇಳಿದಳು ಶಾಂತತೆಯಲಿ ॥೧೦॥

ಸರಸಾಗಿ ಪಾಡೆಂದೆ ।
ಸುರಕನ್ಯೆ ತಟ್ಟುತಲಿ ।
ಸುಸ್ವರದಿ ಪಾಡಿದಳು ಜೋಗುಳವನು ॥
ಗೊರಿಕೆಯನು ಹೊಡಿಯುತ್ತ ।
ಭರಪೂರ ನಿದ್ರೆಯನು ।
ಸೆರೆಸೂರೆಗೊಳ್ಳುತಲಿ ಕನಸೊಂದನು ॥೧೧॥

ಕಂಡೆ ನಾನದರೊಳಗೆ ।
ಸೊಂಡೆಯೊಣಗಿಸಿಕೊಂಡ ।
ಗಂಡುಗಲಿ ಭೂಪರನು ! ವೀರರನ್ನು ! ॥
ತಂಡೋಪತಂಡದಲಿ ।
ಕಂಡೆನ್ನ ಪೇಳಿದರು ।
ಉಂಡವರು ನಾವೆಲ್ಲ ಭಂಡಮುಂಡೆಯನು ॥೧೨॥

ನಂಬಿ ಸಲೆ ಹಾಳಾಗಿ ।
ಕಂಬನಿಯ ಸುಖವನ್ನು ।
ಹಂಬಲಿಸ ಬೇಡೆಮ್ಮ ಕುಲಬಂಧುವೇ ॥
ಅಂಬರದಿ ಕುಸುಮವನು ।
ಜಂಬದಲಿ ಶೋಧಿಸುವ ।
ಹುಂಬನೋಪಾದಿಯಲಿ ನಾವೆಲ್ಲರು ॥೧೩॥

ಕರುಣವನು ತೊರೆದ ಸುರ— |
ತರುಣಿಯಲಿ ಪ್ರೇಮವನು |
ಅರಸಿದೆವು; ಸಿಲ್ಕಿದೆವು ಬಂಧನವಲೀ ||
ಎಚ್ಚರಿಕೆ! ಎಚ್ಚರಿಕೆ!! |
ಹುಚ್ಚುಸಂದದಲಿ ನೀ |
ಕಚ್ಚಿರುವ ಹಾವನ್ನು ಹುಡುಕಬೇಡಾ ||೧೪||

ಕನಸಿನಿಂ ತಿಳಿದೆದ್ದೆ |
ಮನಗಂಡೆ ಚಳಿಯೊಳಗೆ |
ವನದಲ್ಲಿ ಮಲಗಿದ್ದು ನಾನೊಬ್ಬನೇ ||
ಕಾನನದ ದೇವತೆಯು |
ಜನಮೋಹ ಪಾಶದಲಿ |
ನಾನೀಗ ಬದ್ಧಿರುವೆ ಕನಕರಿಸುತ ||೧೫||

ಹೊರಟಿರುವೆನರಸುತಲಿ |
ತರುಣಿಯನು ಕಾಣದಲಿ |
ಮರುಗುತಲಿ ನಿಂತಿರುವೆ ನಿನ್ನೆದುರಿಗೆ ||

\+ + +

ಹರಿ-ಹರರು ಸುರರೆಲ್ಲ |
ಹರಿಸುತಗೆ ಸೋತಿರಲು |
ಧರೆಯ ಮಾನವರ ಪಾಡೇನು ಮನವೇ ||೧೬||



---

# ವಿವಿಧ ಸಾಹಿತ್ಯ



ನಮ್ಮ ಸಾಹಿತ್ಯವು ನಾನಾ ಮಾರ್ಗಗಳಲ್ಲಿ ಅಭಿವೃದ್ಧಿಯಾಗುತ್ತಿರುವದು ಸಂತೋಷದ ಸಂಗತಿ. ಆದರೆ ಮಾಸಪತ್ರಿಕೆ-ವೃತ್ತಪತ್ರಿಕೆ ಇವುಗಳಲ್ಲಿಯೂ ಕೆಲವು ದೈನಂದಿನ ಪತ್ರಿಕೆಗಳಲ್ಲಿಯೂ ಬರುತ್ತಿರುವ ಲೇಖನಗಳನ್ನು ಕಂಡರೆ ಅಸಹ್ಯವಾಗುತ್ತದೆ. ಇದು ಮರಾಠಿಯೋ ಮತ್ತೇನಾದರೂ ಭಾಷೆಯೋ ಎಂಬ ಸಂದೇಹಕ್ಕೆ ಎಡೆಕೊಡುತ್ತದೆ. ಸಾಧ್ಯವಾದ ಮಟ್ಟಿಗಾದರೂ ಮರಾಠೀ ಪದಗಳನ್ನು ಉಪಯೋಗಿಸುವದರ ಬದಲು ನಾನಾ ಭಾಷೆಗಳ ಕಲಸಲಮೇಲೋಗರ ಮಾಡಿ ಭಾಷೆ ಕಗ್ಗೊಲೆಮಾಡಿದ್ದಾರೆ.

ಟೀ.— ಮೇಲಿನದು ಮಹಾರಾಷ್ಟ್ರೀಯ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರಾದ ರಾವಸಾ|| ಚಾಫೇಕರ ಅವರ ಭಾಷಣದಲ್ಲಿರುವದೊಂದು ಉದ್ಗಾರವಿದೆ. ಅದು ಕನ್ನಡ ಬರಹಗಾರರಿಗೂ ಅನ್ವಯಿಸುವದಾದ್ದರಿಂದ ಇಲ್ಲಿ ಕೊಡಲಾಗಿದೆ.

---

ಸ್ವದೇಶದ ವಿಚಾರಗಳಿಂದ, ಸ್ವದೇಶದ ಕತೆಗಳಿಂದ, ಸ್ವದೇಶದ ವ[illegible]ಯಿಂದ ಸಾಲಂಕೃತವಾಗಿ ಸ್ವದೇಶದ ಆರ್ಥಿಕ, ವಾಣಿಜ್ಯ, ರಾಜಕಾರಣ, ಇತ್ಯಾದಿ ವಿಷಯ ಗಳನ್ನು ಚರ್ಚಿಸುವ ಸಚಿತ್ರ ಮಾಸಪತ್ರ

## ಸ್ವದೇಶೀ ಪ್ರಚಾರಕ

ವಾರ್ಷಿಕ ಚಂದಾ ೧—೪—೦

ವ್ಯವಸ್ಥಾಪಕ- ಸ್ವದೇಶೀ ಪ್ರಚಾರಕ,
ರಥಬೀದಿ, ಮಂಗಳೂರು

---

ಕನ್ನಡ ಲೇಖನ ಕಲೆಯಲ್ಲಿ ನುರಿತ ಮಹಾಜನಗಳ ಕತೆಗಳನ್ನೂ ಹರಟೆಗಳನ್ನೂ ಪ್ರಕಟಿಸುವ ಸಚಿತ್ರವಾದ ಮಾಸಪತ್ರಿಕೆ

## ಕತೆಗಾರ

ವ್ಯಂಗಚಿತ್ರಗಳನ್ನು ಹಾಕುವ ಸಾಹಸವನ್ನು ಹಾಕುವದಕ್ಕೆ ಮೊದಲು ಮಾಡಿದ ಪತ್ರವಿದು. ವಾರ್ಷಿಕ ಚಂದಾ ೧—೧೪—೦ ಅಂಚೇ ವೆಚ್ಚ ಸೇರಿ.

ಕತೆಗಾರ ಪ್ರಕಟನಾಲಯ,
೪೯. ಚಿಕ್ಕಪೇಟೆ, ಬೆಂಗಳೂರು ಸಿಟಿ.

---

ಕನ್ನಡ ನಾಡಿನ ಉಜ್ವಲವಾದ ಅಭಿಮಾನಿಗಳ ನೇತ್ರತ್ವದಲ್ಲಿ ಹೊರಟಿರುವ ಇದೊಂದು ಮಾಸಪತ್ರ. ಸಚಿತ್ರವಾಗಿದೆ.

## ವಿಶ್ವಭಾರತಿ

ವಾರ್ಷಿಕ ಚಂದಾ ೩—೮—೦

ಮ್ಯಾನೇಜರ- ವಿಶ್ವಭಾರತಿ,
ಬೆಂಗಳೂರು ನಗರ.

---

ಕನ್ನಡ ಸಾಹಿತ್ಯವನ್ನು ಬರೆಯುವ ವಿದ್ವನ್ಮಣಿಗಳ ಲೇಖನಗಳನ್ನು ಪ್ರಕಟಿಸುವ ಸರ್ವಾಂಗಸುಂದರವಾದ ಮಾಸಪತ್ರ

## ಭಾರತಿ

ವಾರ್ಷಿಕ ಚಂದಾ ೨ ೪—೦

ಮ್ಯಾನೇಜರ- ಭಾರತಿ,
ಮೂಲ್ಕಿ. ದಕ್ಷಿಣ ಕಾನಡಾ ಜಿಲ್ಲೆ

# ಪಂಚದಶೀ ಸಾರವು.

ಲೇಖಕ— ಶ್ರೀ ನೀಲಕಂಠಸ್ವಾಮಿ ಚಿಕ್ಕೋಡಿ,
,, ಗಂಗಾಧರ ಸಂ. ಕಾ. ಹುಬ್ಬಳ್ಳಿ.

(ಮುಂದೆ ಸಾಗಿಗುದು).

## ೮ ಕೂಟಸ್ಥ ದೀಪವು.

ಈ ದೀಪವದಲ್ಲಿ ನಿರ್ವಿಕಾರಿಯಾದ ಕೂಟಸ್ಥನ ವಿಚಾರವು ಮಾಡಲ್ಪಟ್ಟಿದೆ. ಸೂರ್ಯನಿಂದ ಬೆಳಗಲ್ಪಟ್ಟ ಗೋಡೆಯು ಕನ್ನಡಿಯಲ್ಲಿ ಪ್ರತಿಬಿಂಬಿಸಿದ ಸೂರ್ಯನ ಪ್ರಕಾಶದಿಂದ ಪುನಃ ಬೆಳಗಲ್ಪಡುವಂತೆ ಕೂಟಸ್ಥನಿಂದ ಪ್ರಕಾಶಸಲ್ಪಟ್ಟ ದೇಹವು ಕೂಟಸ್ಥನ ಪ್ರತಿಬಿಂಬವಾದ ಜೀವನಿಂದಲೂ ಬೆಳಗಲ್ಪಡುವದು. ಅನೇಕ ದರ್ಪಣಗಳ ಪ್ರತಿಬಿಂಬ ಪ್ರಕಾಶವು ಗೋಡೆಯಲ್ಲಿ ಚುಕ್ಕೆ ಚುಕ್ಕೆಗಳಾಗಿ ಬಿದ್ದಿರುವಾಗ ( ತನ್ಮಮಧ್ಯದಲ್ಲಿ ಅವುಗಳ ಒಂದಕ್ಕೊಂದು ನಡುವೆ ) ಬಿದ್ದಿರುವ ಪ್ರಕಾಶವು ಸೂರ್ಯನ ಪ್ರಕಾಶವು. ಪ್ರತಿಬಿಂಬ ಪ್ರಕಾಶವೂ ಬಿಂಬ ಪ್ರಕಾಶವೂ ಭಿನ್ನವಿರುವದೆಂದು ತಾತ್ಪರ್ಯ. ಅದರಂತೆ ಜೀವ ಕೂಟಸ್ಥರ ಪ್ರಕಾಶಗಳು ಭಿನ್ನವಿರುವವು. 'ಘಟವು ಅರಿಯಲ್ಪಟ್ಟಿತೆಂಬಲ್ಲಿ' ಜೀವನು ಘಟವೊಂದನ್ನೇ ಬೆಳಗುವನು ಕೂಟಸ್ಥನು ಅರಿಯಲ್ಪಟ್ಟಿತೆಂಬ ಧರ್ಮವನ್ನು ಬೆಳಗುವನು. ವೃತ್ತಿಯು ಹುಟ್ಟುವದಕ್ಕಿಂತ ಮೊದಲು ಘಟವು ಅಜ್ಞಾವಿದ್ದು ವೃತ್ತಿಯು ಹುಟ್ಟಿದನಂತರ ಜ್ಞಾನವಾಗುವದು. ಈ ಎರಡು ಧರ್ಮಗಳು ಒಂದರಲ್ಲಿದ್ದು ಬ್ರಹ್ಮನಿಂದ ಬೆಳಗಲ್ಪಡುವವು. ಬುದ್ಧಿಯು ಜಡವಾದ್ದರಿಂದ ಯಾವದನ್ನೂ ಸ್ವತಃ ಅರಿಯದು. ಇದು ಘಟವು ಎಂಬ ವಾಕ್ಯವು ಜೀವನಿಂದುದಯಿಸಿತು. ಅರಿಯಲ್ಪಟ್ಟಿತೆಂಬ ವಾಕ್ಯವು ಬ್ರಹ್ಮರೂಪ ಕೂಟಸ್ಥನಿಂದುದಯವಾಯಿತು. ಇದರಿಂದ ಜೀವಕೂಟಸ್ಥರ ಭೇದವು ಸಿದ್ಧಿಸಿತು. ಬಹಿರಂಗದಲ್ಲಿ ಉಪಾಧಿಯಿಂದ ಚೈತನ್ಯವು ಭೇದವಾದಂತೆ ಅಂತರಂಗದಲ್ಲಿಯ ಚೈತನ್ಯವು ಒಂದೇ ವಿಧವಾಗಿರುವದು. ಕರ್ತೃತ್ವಾದಿ ಅಂತಃಕರಣದ ಧರ್ಮಗಳನ್ನು ಭೇದಾಭಾಸನು ತನ್ನಲ್ಲಿ ಆರೋಪಮಾಡಿಕೊಂಡಿದ್ದರಿಂದ ಇಷ್ಟು ಅನುತಾಪ ಪಡುತ್ತಾನೆ. ಇದೆಲ್ಲಕ್ಕೆ ಮೂಲಕಾರಣವು ಅಜ್ಞಾನವೇ ಇಹುದು. ಇವುಗಳ ವಿವೇಚನೆಯಿಂದ ವಿವೇಕ ಉಂಟಾಗಿ ಸಚ್ಚಿದಾನಂದ ಸ್ವರೂಪನೇ ತಾನಾಗುತ್ತಾನೆ. ಜೀವೇಶ್ವರರಿಬ್ಬರು ಮಾಯಾಕಲ್ಪಿತರಾದ್ದರಿಂದ ಚಿದ್ರೂಪತ್ವವು ಹೇಗೆ ಸಂಭವಿಸುವದೆಂದು ಶಂಕಿಸಬಹುದು. ಆದರೆ ಬ್ರಹ್ಮನ ಸಂಬಂಧದಿಂದ ಇವರಿಗೂ ಪ್ರಕಾಶಕತ್ವವು ಉಂಟಾಗುವದು. ಅಥವಾ ಎಲ್ಲವನ್ನು ಮಾಡಬಲ್ಲ ಮಾಯೆಗೆ ಇವರಲ್ಲಿ ಪ್ರಕಾಶಕತ್ವ

ಧರ್ಮವನ್ನು ಹುಟ್ಟಿಸುವದು ದೊಡ್ಡನೂತಲ್ಲ. ಕೂಟಸ್ಥನು ಮಾತ್ರ ಮಾಯಾ ಕಲ್ಪಿತನಲ್ಲ. ಕೂಟಸ್ಥನು ಅದ್ವಿತಿಯನೂ ಸಚ್ಚಿದಾನಂದ ಸ್ವರೂಪನೂ ಅನ್ನುವದಕ್ಕೆ ಶೃತಿ ತರ್ಕ ಮೊದಲಾದ ಅನೇಕ ಪ್ರಮಾಣಗಳುಂಟು. ಹೀಗಿರುವದರಿಂದ ಪೂರ್ವೋಕ್ತ ಶುದ್ಧ ಬ್ರಹ್ಮನಿಂದ ಸಂಕಲ್ಪ ರೂಪವಾದ ಸೃಷ್ಟಿಯು ಮಾಡಲಟ್ಟಿತು. ಜಾಗ್ರದಾದಿ ಪ್ರಪಂಚವು ಜೀವಕಲ್ಪಿತವೆಂದು ಈ ಹಿಂದೆಯಾದರೂ ಹೇಳಲಾಗಿದೆ. ಆದ್ದರಿಂದ ಕೂಟಸ್ಥನು ಅಸಂಗನೂ ನಿರ್ವಿಕಾರಿಯೂ ಶೃತಿ–ಸ್ಮೃತಿ ಪ್ರಸಿದ್ಧನೂ ಇರುವನು. ಮಾಯಾ ಮೇಘವು ಜಗತ್ತೆಂಬ ವೃಷ್ಟಿಯನ್ನು ಎಷ್ಟು ಮಾಡಿದರೂ ಆಕಾಶಕ್ಕೆ ಹಾನಿಯಿಲ್ಲ ಎಂಬ ದೃಷ್ಟಾಂತವನ್ನು ವಿವೇಕಿಯು ಅಂದರೆ ಮುಮುಕ್ಷುವು ತಿಳಕೊಂಡು ಪೂರ್ವೋಕ್ತ ಬ್ರಹ್ಮಾನು ಸಂಧಾನವನ್ನು ಮಾಡಿದಲ್ಲಿ ಆನಂದಾಬ್ಧಿಯಲ್ಲಿ ಮಗ್ನನಾಗುವನು.

## ೯ ಧ್ಯಾನ ದೀಪವು.

ಈ ದೀಪದಲ್ಲಿ ಬ್ರಹ್ಮತತ್ತ್ವೋಪಾಸನೆಯಿಂದ ಮುಕ್ತಿಯು ಹೇಳಲ್ಪಟ್ಟಿದೆ. ಮಣಿಪ್ರಭಾ ದೀಪಪ್ರಭೆಗಳಲ್ಲಿ ಮಣಿಬುದ್ಧಿಯನ್ನಿಟ್ಟು ಓಡುವವನಿಗೆ ಎರಡು ಪ್ರಭೆಗಳಲ್ಲಿ ಮಿಥ್ಯಾತ್ವವಿದ್ದರೂ ಅರ್ಥಲಾಭದಲ್ಲಿ ವ್ಯತ್ಯಾಸವಿದ್ದದ್ದರಿಂದ ಮಣಿಪ್ರಭೆಯಲ್ಲಿ ಮಣಿಲಾಭವಾಯಿತು. ದೀಪಪ್ರಭೆಯಲ್ಲಿ ಮಣಿಲಾಭವಾಗಲಿಲ್ಲ. ಇಲ್ಲಿ ಮಣಿ ಪ್ರಭೆಯ ಮಂದಬುದ್ಧಿಗೆ ಸಂವಾದಿ ಭ್ರಮೆಯೆಂತಲೂ ದೀಪಪ್ರಭೆಯ ಮಣಿ ಬುದ್ಧಿಗೆ ವಿಸಂವಾದಿ ಭ್ರಮೆಯಂತಲೂ ಎರಡು ವಿಧವಿರುವದು. ಪ್ರತ್ಯಕ್ಷ ಅನುಮಾನ ಆಗಮ ಪ್ರಮಾಣಗಳಿಂದ ಸಂವಾದಿ ಭ್ರಮೆಯು ನಾನಾ ರೀತಿಯಾಗಿರುವದು. 'ಯೋಷಾವಾಗೇತಮಾಗ್ನಿಃ ಮನೋಬ್ರಹ್ಮೇತ್ಯುಪಾಸೀತ' ಈ ವಾಕ್ಯಗಳಿಗೂ ಕಾಕತಾಲೀಯ ನ್ಯಾಯಾನುಸಾರವಾಗಿ ಅಯಥಾರ್ಥದಿಂದ ಇಷ್ಟಾರ್ಥವು ಸಿದ್ಧಿಸದಲ್ಲಿ ಅದಕ್ಕೂ ಸಂವಾದಿ ಭ್ರಮೆಯೆಂದೇ ಹೇಳಬೇಕು. ಸಂವಾದಿ ಭ್ರಮದಿಂದ ಫಲಸಿದ್ಧಿಸುವಂತೆ ಬ್ರಹ್ಮೋಪಾಸನೆಯಿಂದ ಫಲಪ್ರಾಪ್ತಿಯಾಗುವದೆಂದು ಆರ್ಷಗ್ರಂಥಗಳಲ್ಲಿ ಉಕ್ತವಾಗಿದೆ ಕೇವಲ ಆಪ್ತೋಪದೇಶದಿಂದ ಬ್ರಹ್ಮಸಾಕ್ಷಾತ್ಕಾರವಾಗದು ಸ್ವತಃ ವಿಚಾರವುಬೇಕು. ನಾನೇ ಬ್ರಹ್ಮನೆಂದು ಅನುಸಂಧಾನಮಾಡುವದೇ ಉಪಾಸನೆಯು. ವಿಚಾರಮಾಡಿದರೂ ತಿಳಿಯದಿದ್ದರೆ ಪುನಃ ಪುನಃ ವಿಚಾರಮಾಡಬೇಕು ಅದಕ್ಕೂ ಮುಕ್ತಿಯು ಲಭಿಸದಿದ್ದಲ್ಲಿ ಎರಡೇ ಜನ್ಮದಲ್ಲಾದರೂ ಲಭಿಸುವದು. ವಾಮದೇವ ಋಷಿಯು ಗರ್ಭದಲ್ಲಿರುವಾಗಲೇ ಆತ್ಮಜ್ಞಾನಿಯಾದನೆಂದು ಶೃತಿ ಇರುವದು. ಮತ್ತು ಈ ಹೊತ್ತು ಬಿತ್ತಿದ ಬೀಜ ನಾಳೆ ಫಲಿಸುತ್ತದೆ. ಆದ್ದರಿಂದ ನಾವು ಯಾವುದನ್ನು ನೆನೆಯುತ್ತೇವೆಯೋ ಅದನ್ನೆ ಹೊಂದುತ್ತೇವೆಂಬುದು ಸಿದ್ಧಾಂತವಾದುದು. ಆದರೆ ತತ್ತ್ವವಿಚಾರಕ್ಕೆ ಮನಸ್ಸು ಮಾತ್ರ ನಿರ್ಮಲವಿರಲಿಕ್ಕೆಸಾಕು. ಇಲ್ಲದಿದ್ದರೆ ವಿಚಾರವು ವ್ಯರ್ಥವಾಗುದು. ಅನೇಕ ವಿಪರ್ಯಯ ಮೊದಲಾದ

ದೋಷಗಳುಂಟಾಗುವವು. ಅವುಗಳನ್ನು ಶಮದಮಾದ್ಯುಪಾಯಗಳಿಂದಲೂ ಶ್ರವಣಾದಿಗಳಿಂದಲೂ ಪರಿಹರಿಸಿಕೊಳ್ಳತಕ್ಕದ್ದು. ಆನಂತರ ಮಾಡಿದ ವಿಚಾರದಿಂದ ಬ್ರಹ್ಮಭಾವವನ್ನು ಹೊಂದುವನು. ಇನ್ನು ನಿರ್ಗುಣ ಬ್ರಹ್ಮನ ಉಪಾಸವಿಚಾರವು ಕಡಿಮೆಯಾದಲ್ಲಿ ಶುದ್ಧ ಸತ್ಪುರುಷ ವಂಶದಲ್ಲಿ ಹುಟುವನು. ಮಂದಾಧಿಕಾರಿಗೆ ನಿರ್ಗುಣ ಬ್ರಹ್ಮೋಪಾಸನೆಯು ಶಕ್ಯವಿಲ್ಲದಿದ್ದರೆ ಅವನು ಸಗುಣ ಬ್ರಹ್ಮನ ಉಪಾಸನೆಯನ್ನು ಮಾಡತಕ್ಕದ್ದು. ನಿರ್ಗುಣ ಬ್ರಹ್ಮೋಪಾಸನೆಯು ಮಂಡೂಕ್ಯಾದಿ ಉಪನಿಷತ್ತಗಳಲ್ಲಿ ಹೇಳಲ್ಪಟ್ಟಿಡೆ. ಸಚ್ಚಿದಾನಂದ ಸ್ವರೂಪ ಬ್ರಹ್ಮನೇ ನಾನಿದ್ದೇನೆಂದು ಧ್ಯಾನಮಾಡುವದೇ ನಿರ್ಗುಣ ಬ್ರಹ್ಮೋಪಾಸನೆಯುಂಬದಾಗಿ ಈ ಮೊದಲು ಹೇಳಿದೆ. ಇದರಿಂದ ಜೀವನ್ಮುಕ್ತನಾಗಿ ನಿತ್ಯ ತೃಪ್ತಿಯನ್ನು ಹೊಂದಿ ಪ್ರಾರಬ್ಧಾದಿಕರ್ಮಗಳನ್ನು ನಾಶಮಾಡಿಕೊಳ್ಳಬೇಕು. ಅವನು ಮಾತ್ರ ಬ್ರಹ್ಮನಲ್ಲಿ ತಲ್ಲೀನನಾಗಿರತಕ್ಕದ್ದು. ಪರವ್ಯಸನೀಯಾದ ಸ್ತ್ರಿಯಳು ಗ್ರಹಕರ್ಮಪರಾಯಣಳಾದರೂ ಪರಪುರುಷನಲ್ಲಿಯೇ ಅವಳ ಚಿತ್ತವಿರುವಂತೆ ಇವನ ಚಿತ್ತವಾದರೂ ಬ್ರಹ್ಮಚಿಂತನೆಯಲ್ಲಿ ತೊಡಗಿರತಕ್ಕದ್ದು. ಮಾಯಾಮಯ ಪ್ರಪಂಚಕ್ಕೆ ಮರುಳಾಗಬಾರದು. ಈ ಉಪಾಸನೆಯಿಂದ ಜ್ಞಾನವು ಸಿದ್ಧಿಸಿ ಮುಕ್ತಿಯು ದೊರೆಯುವದು. ಜಗತ್ತಿನಲ್ಲಿ ಕಾಣುವ ವರ್ಣಾಶ್ರಮಾದಿಗಳೆಲ್ಲವೂ ಮಾಯಾಕಲ್ಪಿತಗಳೇ ಇರುವವು ಆತ್ಮನೊಬ್ಬನೆ ಸತ್ಯನು ಆದರೆ ಲೋಕದಲ್ಲಿ ಕೆಲವರು ಶಾಪಾದಿಗಳಿಗಾಗಿಯೂ ಭೋಗಲಾಲಿಸೆಯಿಂದಲೂ ತಪವನ್ನು ಚರಿಸುತ್ತಿರುವರು ಇವರು ನಿಂದ್ಯರಾಗುತ್ತಾರೆ. ಇವರು ಜ್ಞಾನಿಗಳೆಂದು ಯಾರೂ ಅನ್ನುವದಿಲ್ಲ. ಮತ್ತು ಕೆಲವು ಮಹಾತ್ಮರಾದ ಜ್ಞಾನಿಗಳು ಲೌಕಿಕ ಪಾರಮಾರ್ಥಗಳೆರಡನ್ನೂ ಸಾಗಿಸಿಕೊಂಡು ಮುಕ್ತರಾಗುವದುಂಟು. ಇರಲಿ ನಿರ್ಗುಣ ಬ್ರಹ್ಮೋಪಾಸನೆಯಿಂದ ಇಷ್ಟಾರ್ಥವು ಸಿದ್ಧಿಸುತ್ತಿರಲು ತೀರ್ಥ-ಯಾತ್ರಾದಿಗಳನ್ನು ಮಾಡುವದು ಅತಿಮೂರ್ಖತನದ ಮುಪ್ರೆಂದು ಚಿನ್ಹವು. ಇದಕ್ಕಿಂತಲೂ ಸಂವಾದಿ ಭ್ರಮೆಯ ಫಲವೇ ಮಿಗಿಲಾದದ್ದು. ಇದೆಲ್ಲವನ್ನು ನಿರಾಕರಿಸಿ ಬ್ರಹ್ಮೋಪಾಸನೆಯನ್ನು ಮಾಡಿದಲ್ಲಿ ಪುನರ್ಜನ್ಮವಿಲ್ಲ. ಯಾಕಂದರೆ ಮುಮುಕ್ಷನಾದ ಪುರುಷನು ದೇಹರೂಪವಾದ ಹಾಸುಗಲ್ಲನ್ನು ಮೇಲಕ್ಕೆಬ್ಬಿ ಬುದ್ಧಿರೂಪ ಗುದ್ದಲಿಯಿಂದ ಮನೋಭೂಮಿಯನ್ನು ಅಗಿದು ನಿಧಿರೂಪನಾದ ನನ್ನನ್ನು ಅಂದರೆ ಬ್ರಹ್ಮನನ್ನು ಪಡೆಯಬೇಕೆಂದು ಆತ್ಮರೀತಿಯಲ್ಲಿ ವಿಶದವಾಗಿ ಹೇಳಲ್ಪಟ್ಟಿರುವದು. ಇದನ್ನರಿತು ಯಾವನು ಬ್ರಹ್ಮಧ್ಯಾಸವನ್ನು ಮಾಡುವದಿಲ್ಲವೋ ಅವನಿಗಿಂತಲೂ ಬೇರೊಂದು ಪಶುವು ಎಲ್ಲಿದೆ? ಆದ್ದರಿಂದ ಸರ್ವರೂ ಬ್ರಹ್ಮನ ಧ್ಯಾನವನ್ನು ಮಾಡಿ ಮುಕ್ತಿ-ಸುಖವನ್ನು ಪಡೆಯಬೇಕೆಂದು ಈ ದೀಪವು ಹೇಳಲ್ಪಟ್ಟದೆ.

## ೧೦ ನಾಟಕ ದೀಪವು.

ಪರಮಾತ್ಮನೇ ಜಗತ್ತನ್ನು ನಿರ್ಮಿಸಿ ತಾನೇ ಅದರಲ್ಲಿ ಪ್ರವೇಶಮಾಡಿದನೆಂದು

ಅನೇಕ ಸಲ ಉಕ್ತವಾಗಿದೆಯಷ್ಟೇ? ಆದರಲ್ಲಿ ಅವನು ದೇವತಾದಿ ಶರೀರಗಳಲ್ಲಿ ಇದ್ದು ಪೂಜ್ಯನೂ ಅಥವು ಶರೀರದಲ್ಲಿದ್ದು ಪೂಜಕನೂ ಆಗಿದ್ದಾನೆ. ಅವನಿಗೆ ಈ ಪೂಜ್ಯ-ಪೂಜಕಗಳು ಸ್ವಭಾವವಾದವುಗಳಲ್ಲಿ ಉಪಾಧಿಯಿಂದ ಬಂದವುಗಳು. ಈ ಉಪಾಧಿಗಳು ಜ್ಞಾನದಿಂದ ಕಳಚಿ ಹೋದಲ್ಲಿ ತಾನೋರ್ವನೇ ಉಳಿಯುವನು. ಆದರೆ ಶ್ರುತಿಗಳು ಜ್ಞಾನದ ಫಲವು ಮೋಕ್ಷವೆಂದು ಹೇಳುತ್ತಿರಲು ಈಗ ಬ್ರಹ್ಮವೆಂದು ಹೇಳುವದು ವಿರೋಧವಾಗುತ್ತದೆಂದು ಅನ್ನಲು ಬರುವದಿಲ್ಲ. ಯಾಕಂದರೆ ಮೋಕ್ಷವೆಂದರೆ ಬ್ರಹ್ಮನೆಂದರ್ಥವಿರುವದು. ಅಜ್ಞಾನದಿಂದಾದ ಭವಬಂಧವು ಜ್ಞಾನದಿಂದಲೇ ನಾಶವಾಗುವದು. ಅದ್ದರಿಂದ ಬ್ರಹ್ಮ ಸಾಕ್ಷಾತ್ಕಾರವಾಗುವ ವರೆಗೂ ಜೀವೇಶ್ವರರ ವಿಷಯಕ್ಕೆ ವಿಚಾರಮಾಡತಕ್ಕದ್ದು. ಜೀವನು ಮನಸ್ಸಿನಿಂದ ಒಳಹೊರಗಣ ವಿಷಯುಗಳನ್ನು ಅರಿಯುವನು. ಈ ಜೀವ ಕರ್ಮಗಳಿಗೆ ಈಶನು ಸಾಕ್ಷಿಯಾಗಿದ್ದಾನೆ. ಮತ್ತು ಆ ಜೀವಕೃತಿಗಳನ್ನು ನಾಟ್ಯ ಶಾಲೆಯಲ್ಲಿರುವ ದೀವಿಗೆಯಂತೆ ಬೆಳಗುತ್ತಾನೆ. ಹೇಗಂದರೆ ನಾಟಕದಲ್ಲಿರುವ ದೀವಿಗೆಯು ನಾಟಕ ದಲ್ಲಿರುವ ಸರ್ವ ಪಾತ್ರಗಳನ್ನು ಪಡದೆ ಮೊದಲಾದ ವಸ್ತುಗಳನ್ನು ಪ್ರೇಕ್ಷಕರನ್ನು ಸಹ ಪ್ರಕಾಶಗೊಳಿಸುತ್ತದೆ. ಮತ್ತು ಇವೆಲ್ಲವುಗಳ ಅಭಾವದಲ್ಲಿಯೂ ಆ ದೀವಿ ಗೆಯು ಪ್ರಕಾಶಮಾನವಿರುತ್ತದೆ. ಇದರಂತೆ ಸಾಕ್ಷಿಯಾದ ಆತ್ಮನು ಅಹಂಕಾರ ವನ್ನು ಬುದ್ಧಿಯನ್ನು ವಿಷಯುಗಳನ್ನು ಪ್ರಕಾಶಗೊಳಿಸುತ್ತಾನೆ. ಇವುಗಳಲ್ಲದಿದ್ದರೂ ತಾನು ಪ್ರಕಾಶರೂಪನೇ ಇರುತ್ತಾನೆ. ಈ ಸಾಕ್ಷಿಯೋರ್ವನೇ ಭಾಸಕನು; ಬುದ್ಧಿ ಯಲ್ಲ. ಇಲ್ಲಿ ಅಹಂಕಾರವೇ ಪ್ರಭುವು. ಶಬ್ದಾದಿ ವಿಷಯುಗಳೇ ಸಭಿಕರು. ಬುದ್ಧಿ ಯೇ ನರ್ತಕಿಯು. ಇಂದ್ರಿಯುಗಳೇ ತಾಳಗಳು. ದೀಪವೇ ಸಾಕ್ಷಿಯು ಇದೊಂದು ನಾಟಕವೇ ಸರಿ. ದೀಪವು ಸ್ವಸ್ಥಾನದಲ್ಲಿದ್ದು ಸರ್ವ ವಸ್ತುಗಳನ್ನು ಬೆಳಗುವಂತೆ ಸಾಕ್ಷಿಯು ಸ್ವಸ್ಥಾನದಲ್ಲಿದ್ದು ಸರ್ವವನ್ನು ಬೆಳಗುತ್ತಾನೆ. ಅಂದರೆ ಗಮನಾಗಮನ ಗಳಿಲ್ಲವೆಂದು ತಾತ್ಪರ್ಯ. ಮತ್ತು ಸಾಕ್ಷಿಗೆ ಬಾಹ್ಯಾಭ್ಯಂತರ ವಿಷಯಭಾಸಕತ್ವ ವಾದರೂ ಉಪಾಧಿಕೃತವೇ ಇರುವದು. ಬುದ್ಧಿಯ ಗುಣಗಳಾದ ಚಾಂಚಲ್ಯಾದಿ ಗಳು ಸಾಕ್ಷಿಯಲ್ಲಿ ಅಧ್ಯಾಸಗಳಾಗಿವೆ. ಒಟ್ಟಿನಮೇಲೆ ಈ ಪೂರ್ವದಲ್ಲಿ ಚಿತ್ರದೀಪ ತೃಪ್ತಿದೀಪ ಕೂಟಸ್ಥದೀಪಗಳೆಂಬ ಪ್ರಕರಣಗಳಲ್ಲಿ ಉತ್ತಮಾಧಿಕಾರಿಗೆ ಚಿದ್ರೂಪತ್ವ ಜ್ಞಾನವನ್ನು ತಿಳಿಸಿ ಧ್ಯಾನದೀಪವೆಂಬ ಪ್ರಕರಣದಲ್ಲಿ ಮಧ್ಯಮಾಧಿಕಾರಿಗೆ ಚಿದ್ರೂ ಪಾತ್ಮಜ್ಞಾನಕ್ಕೆ ಸಾಧನಮಾದ ನಿರ್ಗುಣೋಪಾಸನೆಯನ್ನು ತಿಳಿಸಿ ಮತ್ತು ಮಂಧಾದಿ ಕಾರಿಗೆ ಈ ನಾಟಕದೀಪವೆಂಬ ಪ್ರಕರಣದಲ್ಲಿ ಚಿದ್ರೂಪಜ್ಞಾನವನ್ನು ನಾಟಕರೂಪ ವಾಗಿ ತಿಳಿಸಿದ್ದಾರೆಂಬ ಭಾವವು.

## ೧೧ ಬ್ರಹ್ಮಾನಂದದಲ್ಲಿ ಯೋಗಾನಂದವು.

ಇಹಲೌಕಿಕ ಪಾರಲೌಕಿಕ ಅನಿತ್ಯ ಪದಾರ್ಥಗಳನ್ನು ತ್ಯಜಿಸಿ ಕೇವಲ

ಅತಿಶಯ ಸುಖವನ್ನು ಹೊಂದುವ ಬ್ರಹ್ಮಾನಂದವು ಇಲ್ಲಿ ವರ್ಣಿತವಾಗುವದು. ಬ್ರಹ್ಮಜ್ಞಾನಿಯು ಬ್ರಹ್ಮನೇ ಆಗುವನು. ಅವನಿಗೆ ಸಂಸಾರದ ಯಾವ ಭೀತಿಯು ಉಂಟಾಗಲಾರದು. ಬ್ರಹ್ಮನ ಭೀತಿಯಿಂದಲೇ ವಾಯು ಸೂರ್ಯವಹ್ನಿ ಇಂದ್ರ ಯಮ ಮೊದಲಾದವರು ತಮ್ಮ ತಮ್ಮ ಕಾರ್ಯಗಳಲ್ಲಿ ಪ್ರವೃತ್ತರಾಗಿದ್ದಾರೆ. ಅಂಥ ಬ್ರಹ್ಮನನ್ನು ತಿಳಿದವನಿಗೆ ಯಾತರಿಂದ ಹೆದರಿಕೆಯುಂಟಾಗುವದು? ಮತ್ತು ಕರ್ಮಾಗ್ನಿಯು ಅವನನ್ನು ದಹಿಸುವದಿಲ್ಲ. ಸ್ವರೂಪಜ್ಞಾನದಿಂದ ಕರ್ಮಗಳನ್ನು ತ್ಯಜಿಸಿ ಆತ್ಮಾನಂದದಲ್ಲಿಯೇ ಮಗ್ನನಾಗುತ್ತಾನೆ. ಆಗ್ಗೆ ಸರ್ವ ಸಂಶಯಗಳೂ ಸಂಚಿತಾದಿ ಕರ್ಮಗಳೂ ತಾವೇ ನಾಶವಾಗುವವು. ಅವನಿಗೆ ಜನನ-ಮರಣಗಳಾಗುವದಿಲ್ಲ. ಶ್ರುತಿ-ಸ್ಮೃತಿ-ಪುರಾಣಾದಿಗಳು ಬ್ರಹ್ಮಜ್ಞಾನದಿಂದ ಅನರ್ಥಹಾನಿಯೂ ಆನಂದಾವಾಪ್ತಿಯೂ ಆಗುತ್ತದೆಂದು ಘಂಟಾ ಘೋಷವಾಗಿ ಹೇಳುತ್ತವೆ. ಬ್ರಹ್ಮಾನಂದ ವಿದ್ಯಾನಂದ ವಿಷಯಾನಂದಗಳೆಂಬ ಆನಂದತ್ರಯಗಳುಂಟು. ಅವುಗಳಲ್ಲಿ ಬ್ರಹ್ಮಾನಂದವು ಇಲ್ಲಿ ವಿವೇಚಿಸಲ್ಪಡುವದು. "ಆನಂದಾದೇವ ಭೂತಾನಿ ಜಾಯಂತೇ ತೇನ ಜೀವನಂ ತೇಷಾಂ ಲಯಶ್ಚ ತತ್ರಾತೋ ಬ್ರಹ್ಮಾನಂದೋ ನ ಸಂಶಯಃ" ಆನಂದದ ಬಗ್ಗೆ ಅನೇಕ ಪ್ರಮಾಣಗಳುಂಟು. ಜ್ಞಾತೃ ಜ್ಞಾನ ಜ್ಞೇಯಗಳೆಂಬ ತ್ರಿಪುಟಿಯು ಕೂಡ ಇರಕೂಡದು. ಅಂದರೇನೇ ಬ್ರಹ್ಮಾನಂದವು ಲಭ್ಯವಾಗುವದು. ನಾರದನು ವೇದಪುರಾಣೇತಿಹಾಸಗಳನ್ನು ಬಲ್ಲವನಾಗಿದ್ದರೂ ಆತ್ಮಜ್ಞಾನ ಶೂನ್ಯನಾದ್ದರಿಂದ ಸಂಸಾರಕ್ಕೆ ಬೆದರಿ ತಾಪತ್ರಯದಿಂದ ಕಳವಳಪಟ್ಟು ಪಶ್ಚಾತ್ತಾಪವನ್ನು ಹೊಂದಿ ಮುಕ್ತನಾಗಬೇಕೆಂದು ಸನತ್ಕುಮಾರನನ್ನು ಮೊರೆಹೊಗಲು ಅವನಂದುದು: "ಸುಖರೂಪವಾದ ಬ್ರಹ್ಮನನ್ನೇ ತಿಳಿ ಅದರಿಂದಲೇ ನಿನ್ನ ಶೋಕವು ನಿವೃತ್ತಿಯಾಗುವದು. ವೈಷಯಿಕ ಸುಖವು ದುಃಖ ಮಿಶ್ರಿತವಾದ್ದರಿಂದ ಅದಕ್ಕೆ ಮನವೆಳಿಸಬೇಡ." ಸುಖವು ಆಧೇಯವಲ್ಲ. ಅದ್ವೈತ ರೂಪವೇ ಸುಖವು. ಸೌಷುಪ್ತಿಕ ಪ್ರಲಯದಲ್ಲಿ ಸ್ವಯಂ ಪ್ರಕಾಶಕ ಅದ್ವೈತಾನಂದವು ಬ್ರಹ್ಮಾನಂದವೆನ್ನಲ್ಪಡುವದು. ಸುಷುಪ್ತಿಯಲ್ಲಿ ದುಃಖಾಭಾವವಿರುವದರಿಂದ ಕೇವಲ ಸುಖವೇ ಇದ್ದು ವಿರೋಧಿವೃತ್ತಿ ಉತ್ಪತ್ತಿ ಪರ್ಯಂತರ ನಿರ್ವಿಘ್ನವಾಗಿರುವದು. ಆ ಸುಖವು ಮೃದುಶಯ್ಯಾದಿ ಸಾಧನ ಜನ್ಯವಲ್ಲ. ಮತ್ತು ವಿಷಯಸುಖವಾದರೂ ನಿತ್ಯ ಸುಖಾಭಾಸವೇ ಇರುವದು. ನಿಜಾನಂದವು ಬುದ್ಧಿವೃತ್ತಿಯಲ್ಲಿ ಪ್ರತಿಬಿಂಬಿಸಿದಾಗ ಸುಖಾಭಾಸವು ತೋರುವದು. ಜೀವನು ತನ್ನ ಪರಿಶ್ರಮವನ್ನು ಕಳೆದುಕೊಳ್ಳಲು ಹೋದಾಗ ಅವನಿಗೂ ಪರಮಾತ್ಮನಿಗೂ ಐಕ್ಯವಾಗಿ ಬ್ರಹ್ಮಾನಂದವು ಪ್ರಾಪ್ತವಾಗುತ್ತದೆ. ದಾರದಿಂದ ಕಟ್ಟಲ್ಪಟ್ಟ ಪಕ್ಷಿಯು ಸುತ್ತಲೂ ಹಾರಾಡಿ ಕಡೆಗೆ ದಾರ ಹಿಡಿದವನ ಕೈಯನ್ನೇ ಆಶ್ರಯಿಸಬೇಕಾಗುವದು. ಅದರಂತೆ ಜೀವನು ಅಂತಃಕರಣೋಪಾಧಿಯುಳ್ಳವನಾದ್ದರಿಂದ ಎಲ್ಲಿ ಹೋದರೂ ಜಾಗ್ರದವಸ್ಥೆಗೆ ಬರಲೇಬೇಕು. ಬಾಲನಿರಲಿ, ರಾಜನಿರಲಿ, ಬ್ರಾಹ್ಮಣನಿರಲಿ, ಮೂಢನಿರಲಿ ಯಾರಿದ್ದರೂ ಆನಂದದ ಪರಾಕಾಷ್ಠೆಯನ್ನು

ಹೊಂದಲೇಬೇಕಾಗುವದು. 'ಸುಖಮಹಮಸ್ವಾಪ್ಸಂ ನ ಕಿಂಚಿದವೇದಿಷ' ಎಂಬದಾಗಿ ಅನುಭವವುಂಟು. ಇದನ್ನರಿಯದ ಜನವು ಕರ್ಮಜಾಲದಲ್ಲಿ ಸಿಲುಕಿ ಬಳಲುತ್ತದೆ. ಇರಲಿ. ಜೀವನು ಕಾರಣಶರೀರದಲ್ಲಿ ಆನಂದಮಯತ್ವವನ್ನೂ ಸೂಕ್ಷ್ಮಶರೀರದಲ್ಲಿ ವಿಜ್ಞಾನಮಯತ್ವವನ್ನೂ ಹೊಂದಿ ಸ್ಥೂಲ ಶರೀರದಲ್ಲಿ ನೇತ್ರ ಹೃದಯ ಮೊದಲಾದ ಆಪಾದ ಮಸ್ತಕವನ್ನು ವ್ಯಾಪಿಸಿ ಇರುತ್ತಾನೆ. ಪುನಃ ಸ್ಥೂಲದಿಂದ ಕಾರಣದ ವರೆಗೆ ಹೋಗಿ ಬ್ರಹ್ಮಾನಂದವನ್ನು ಹೊಂದುತ್ತಾನೆ. ಇದಕ್ಕೆ ಯೋಗಾನಂದವೆಂತಲೂ ಅನ್ನುತ್ತಾರೆ. ಇದನ್ನೇ ಭಗವಂತನು ಅರ್ಜುನನಿಗೆ ಉಪದೇಶ ಮಾಡಿದ್ದಾನೆ. ಮತ್ತು ಶಾಕಾಯನ್ಯ ಋಷಿಯು ಬೃಹದ್ರಥ ರಾಜರ್ಷಿಗೆ ಬ್ರಹ್ಮಸುಖವನ್ನು ಇದೇ ರೀತಿಯಿಂದ ಉಪದೇಶಮಾಡಿದ್ದಾನೆ ಆದ್ದರಿಂದ ಎಲ್ಲವರಲ್ಲಿ ಬ್ರಹ್ಮಾನಂದವೇ ಮಿಗಿಲಾದದ್ದು,

## ೧೨ ಆತ್ಮಾನಂದವು.

ವಾಸನಾನಂದ ಬ್ರಹ್ಮಾನಂದಕಿಂತಲೂ ಭಿನ್ನವಾದ ಆತ್ಮಾನಂದವು. ಇಲ್ಲಿ ಮಂದಾಧಿಕಾರಿಗಾಗಿ ವಿಚಾರಿಸಲ್ಪಡುವದು. ತತ್ವಜ್ಞಾನ ವಿಮುಖನಿಗೆ ಉಪಾಸನಾ ಕರ್ಮದಿಂದಲೂ ಮಂದಾಧಿಕಾರಿಗೆ ಆತ್ಮಾನಂದದಿಂದ ಬ್ರಹ್ಮೋಪದೇಶವನ್ನು ಮಾಡತಕ್ಕದ್ದು. ಯಾಜ್ಞ್ಯವಲ್ಕ್ಯನು ತನ್ನ ಸತಿಯಳಾದ ಮೈತ್ರಾದೇವಿಗೆ ಆತ್ಮಾನಂದದಿಂದಲೇ ಬೋಧಮಾಡಿದ್ದಾನೆ. 'ಅನವಾ ಅರೇ ಪತ್ಯುರರ್ಥಃ ಪತಿಃ' ಇತ್ಯಾದಿ ಶ್ರುತಿಗನುಸರಿಸಿ ಪತಿ-ಪತ್ನಿ-ಪುತ್ರ-ಪಶುಪ್ರಾಣಿ ಅನಂತಲೋಕ ಅನಂತ ದೇವತೆಗಳೇ ಮೊದಲಾದವರು ಆತ್ಮಾನಂದಕ್ಕಾಗಿಯೇ ಸತತ ಹೆಣಗಾಡುವರು. ಪತಿಯು ತನ್ನ ಸುಖಕ್ಕಾಗಿಯೇ ಪತ್ನಿಯೊಡನೆ ಕೂಡುವನು. ಪತ್ನಿಯು ತನ್ನ ಸುಖಕ್ಕಾಗಿಯೇ ಪತಿಯೊಡನೆ ಕೂಡುವಳು. ತಂದೆಯು ತನ್ನ ಸುಖಕ್ಕಾಗಿ ಮಗನನ್ನು ಮುದ್ದಿಡುತ್ತಾನೆ. ಆದರೆ ಮುದ್ದಿಡುವ ರಭಸದಲ್ಲಿ ಹುಡುಗನಿಗೆ ಕೂದಲಗಳಿಂದ (ಗಡ್ಡಗಳಿಂದ) ನೋವಾಗುತ್ತದೆ. ಆದರೂ ಮುದ್ದಿಡುವದನ್ನು ಬಿಡುವದಿಲ್ಲ. ರತ್ನಾದಿಗಳನ್ನು ರಕ್ಷಿಸುವದು ತನ್ನ ಹಿತಕ್ಕಾಗಿಯೇ ಇರುವದು. ನಾನು ಬ್ರಾಹ್ಮಣನು, ಪೂಜ್ಯನು ಎಂದು ಪೂಜೆಯಿಂದ ಸಂತೋಷಗೊಳ್ಳುತ್ತಾನೆ. ಆದರೆ ಜಾತಿಗೆ ಸಂತೋಷದ ಸಂಬಂಧವಿಲ್ಲ. ದೇವಾಧಿದೇವತೆಗಳನ್ನು ಪಾಪನಾಶಕ್ಕಾಗಿಯೇ ಪೂಜಿಸುತ್ತಾರೆಯೇ ಹೊರತು ಕೇವಲ ಅವರ ಪ್ರೀತ್ಯರ್ಥವಾಗಿಯಲ್ಲ. ಇದರಂತೆ ಪಂಚಮಹಾಭೂತಗಳು ಸ್ನಾನಾದಿಗಳನ್ನು ಕೊಡುವದಾದರೂ ಆತ್ಮಾರ್ಥಕ್ಕಾಗಿಯೇ ಇರುವದು. ಇದರಂತೆ ಜಗತ್ತಿನ ಎಲ್ಲ ವಸ್ತುಗಳು ಸುಖಸಾಧನಗಳಾಗಿವೆ. ಆದರೆ ಆತ್ಮಸುಖದಂತೆ ವೈಷಯಿಕ ಸುಖವು ಸ್ಥಾಯಿಯಲ್ಲ. ಇದಲ್ಲದೆ ವ್ಯಭಿಚಾರದೋಷವುಳ್ಳದ್ದು. ಇವಾವ ದೋಷಗಳು ಆತ್ಮನಿಗೆ ತಟ್ಟಲಾರವು. ಮತ್ತು ಆತ್ಮನು ಆಹ್ವಾನ, ಆದಾನ, ಉಪೇಕ್ಷೆ, ಔದಾಸೀನ್ಯವೇ ಮೊದಲಾದ ಗುಣ

ಗಳುಳ್ಳವನಲ್ಲ. ಒಮ್ಮೊಮ್ಮೆ ರಾಗದ್ವೇಷಗಳಿಗೆ ಎಡೆಯಾಗುತ್ತಾನೆಂದು ತಿಳಿದರೂ ಆತ್ಮನು ತ್ಯಾಜ್ಯನಲ್ಲ. ಅನಾತ್ಮವಾದ ದೇಹದಲ್ಲಿಯೇ ತ್ಯಾಜ್ಯತ್ವಾದಿಗಳುಂಟು. 'ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ' ಇತ್ಯಾದಿ ಶ್ರುತಿಗಳೂ ಕೂಡ ಆತ್ಮನಿಗೆ ಪ್ರೇಮಾತಿಶಯವನ್ನು ಸೂಚಿಸುತ್ತವೆ. 'ಮಾನಭೂವಮಹಂ' ಅಂದರೆ ತಾನು ಇರಬಾರದೆಂದು ಯಾವನೂ ಯಾವ ಕಾಲಕ್ಕೂ ಇಚ್ಛಿಸಲಾರನು. ಇದು ಅನುಭವಸಿದ್ಧವಾದ ಮಾತುಂಟು. ಒಟ್ಟಿನಮೇಲೆ ಆತ್ಮನು ಸುಖರೂಪನೆಂದು ನಿಶ್ಚಿತವಾಯಿತು. ಇದಲ್ಲದೆ ಕೆಲವರು ಪುತ್ರಾದಿಗಳೇ ಆತ್ಮನೆಂದು ನಂಬಿ ಅವರಿಗಾಗಿ ಧನಾರ್ಜನೆಯನ್ನು ಮಾಡುತ್ತಾರೆ. ಇದರಲ್ಲಿ ಗೌಣಮಿಥ್ಯಾ ಮುಖ್ಯವೆಂದು ಆತ್ಮನಿಗೆ ವಿಶೇಷಣವುಂಟು. ಹೇಗಂದರೆ: 'ಸಿಂಹೋ ದೇವದತ್ತಃ' ದೇವದತ್ತನಲ್ಲಿ ಸಿಂಹತ್ವ ವ್ಯವಹಾರವು ಗೌಣವಿರುವದು. 'ಸ್ಥಾಣುರಯಂ ಚೋರಃ' ಸ್ಥಾಣುವಿನಲ್ಲಿ ಚೋರತ್ವವು ಮಿಥ್ಯೆಯಹುದು. ಇದರಂತೆ ಪಂಚಕೋಶಗಳಿಗೆ ಆತ್ಮವೆಂದು ಅನ್ನುವದು ಮಿಥ್ಯೆಯಹುದು. ಸರ್ವಾಂತರ್ಯಾಮಿಯೇ ಮುಖ್ಯಾತ್ಮನೆಂದು ತಿಳಿಯಬೇಕು. ಈ ರೀತಿಯಾಗಿ ಪುತ್ರಾದಿಗಳಲ್ಲಿ ಆತ್ಮತ್ವ ವ್ಯವಹಾರವು ಗೌಣ ಮಿಥ್ಯಾರೂಪವಾಗಿ ವ್ಯವಹರಿಸುವದರಿಂದ ಮುಖ್ಯವಾಗಿ 'ತದ್ಭಿನ್ನ' ಆತ್ಮನಲ್ಲಿಯೇ ಅತಿಶಯ ಪ್ರೇಮವಿರುವದು. ಆತ್ಮನು ಉಪೇಕ್ಷಾದಿ ಗುಣಗಳುಳ್ಳವನಲ್ಲವೆಂದು ಮೇಲೆ ಹೇಳಿದೆಯಷ್ಟೇ. ಆದರೂ ಉಪಾಧಿವಶದಿಂದ ಅವು ತೋರುವವು. ಹೇಗಂದರೆ: ಸಿಂಹವು ನಮ್ಮನ್ನು ಹಿಂಸಿಸಲು, ಅದರಲ್ಲಿ ದ್ವೇಷವೂ ಪರಾಙ್ಮುಖವಾಗಲು ಔದಾಸೀನ್ಯವೂ ಅದರ ಪಾಲನೆಯಿಂದ ಅದರಲ್ಲಿ ಪ್ರೇಮವೂ ಉಂಟಾಗುವಂತೆ ಆತ್ಮನಲ್ಲಿಯೂ ಕಾರ್ಯೋಪಾಧಿಯಿಂದ ಆ ಗುಣಗಳು ಕಂಡುಬರುವವು. ಇದು ಯಾಜ್ಞವಲ್ಕ್ಯರ ಮತವಷ್ಟೇ ಅಂತಲ್ಲ; ಇನ್ನುಳಿದ ಶ್ರುತಿಗಳ ಮತವಾದರೂ ಇದೇ ಇರುವದು. ಸಾಕ್ಷಿಯೇ ಆತ್ಮನು. ಅವನೇ ಪ್ರೇಮಸ್ವರೂಪನು. ಇತರ ಪಂಚಕೋಶಾದಿಗಳೂ ಪುತ್ರ-ಭಾರ್ಯಾದಿಗಳೂ ಆತ್ಮರಲ್ಲ. ಮತ್ತು ಆತ್ಮನಲ್ಲಿ ಗೌಣ ಮಿಥ್ಯಾತ್ವ ವ್ಯವಹಾರವು ವಸ್ತುತಃ ಸಂಭವಿಸಲಾರದು. ಕೇವಲ ಔಪಾಧಿಕವೆಂದು ತಿಳಿಯಬೇಕು. ಮತ್ತೆ ಕೆಲವರು ಚೈತನ್ಯಕ್ಕೂ ಆನಂದಕ್ಕೂ ಭೇದವನ್ನು ಕಲ್ಪಿಸುತ್ತಾರೆ. ಇದು ಕಲ್ಪಿತವೇ ಸರಿ. ಯಾಕಂದರೆ ಪುಷ್ಪದಲ್ಲಿರುವ ಪರಿಮಳಕ್ಕೂ ಪುಷ್ಪಕ್ಕೂ ಹೇಗೆ ಅಭೇದವಿರುವದೋ ಅದರಂತೆ ಆತ್ಮನಿಗೂ ಆನಂದಕ್ಕೂ ಅಭೇದವನ್ನು ಹೇಳಿಯೇ ತೀರಬೇಕು. ಅದರ ಹೊರತು ಗತ್ಯಂತರವಿಲ್ಲ. ಭೇದವನ್ನು ಹೇಳುವದು ಯುಕ್ತಿಯುಕ್ತವಲ್ಲ. ಈ ಅಭೇದಕ್ಕೆ ಯೋಗವು ಅವಶ್ಯಕವಾದದ್ದು. ಅಯೋಗದಿಂದಲೇ ರಾಗದ್ವೇಷಗಳು ನಾಶವಾಗುವವು. ಅದರಿಂದ ಮಂದಾಧಿಕಾರಿಯೂ ಸಹ ಬ್ರಹ್ಮನನ್ನು ಅರಿತು ನಿತ್ಯಮುಕ್ತನಾಗುತ್ತಾನೆ.

## ೧೩ ಅದ್ವೈತಾನಂದವು.

ಇಲ್ಲಿ ಅದ್ವೈತಾನಂದವು ಹೇಳಲ್ಪಡುವದು. ಆಕಾಶಾದಿಯಾಗಿ ಸರ್ವ

ಜಗತ್ತು ಬ್ರಹ್ಮನಿಂದ ಹುಟ್ಟಿದ್ದರೂ ಬ್ರಹ್ಮನಿಗೆ ಪೃಥಕ್ಕಲ್ಲ. ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳು ಬ್ರಹ್ಮನಲ್ಲಿಯೇ ಜರಗುವವು. ಮತ್ತು ಬ್ರಹ್ಮನು ಕುಲಾಲನಂತೆ ನಿಮಿತ್ತಕಾರಣನಲ್ಲ, ಮಗ್ಗಿನಂತೆ ಉಪಾದಾನಕಾರಣನಾಗುವನು. ಯಾಕಂದರೆ ಘಟದ ಸ್ಥಿತಿ ಲಯಗಳು ನಿಮಿತ್ತಕಾರಣನಾದ ಕುಂಬಾರನಲ್ಲಿ ತೋರದೆ ತದುಪಾದಾನ ಭೂತ ಮೃತ್ತಿಕೆಯಲ್ಲಿಯೇ ತೋರುವವು. ಉಪಾದಾನಕಾರಣವು ವಿವರ್ತ, ಪರಿಣಾಮ, ಆರಂಭವೆಂದು ಮೂರು ವಿಧವಾಗಿರುವದು. ಅದರಲ್ಲಿ ಕಡೆಯ ಪರಿಣಾಮ, ಆರಂಭಗಳು ಬ್ರಹ್ಮನಿಗೆ ಸಂಬಂಧವಾದವುಗಳಲ್ಲ. ಕೇವಲ ಬ್ರಹ್ಮನಿಗೆ ವಿವರ್ತವುಂಟು. ತಂತುಪಟಗಳಿಗೆ ಆರಂಭತ್ವವೂ, ದಧಿಕ್ಷೀರ, ಮೃತ್‌ಕುಂಭ, ಸುವರ್ಣಕುಂಡಲ ಇವುಗಳಿಗೆ ಪರಿಣಾಮತ್ವವೂ, ರಜ್ಜುಸರ್ಪಕ್ಕೆ ವಿವರ್ತತ್ವವೂ ತೋರುವದು. ಆಕಾಶದಲ್ಲಿ ಮಲಿನತ್ವವನ್ನು ಕಲ್ಪಿಸುವಂತೆ ನಿರಂಶನಾದ ಬ್ರಹ್ಮನಲ್ಲಿ ಜಗತ್ತನ್ನು ಕಲ್ಪಿಸುವದೇ ವಿವರ್ತವಹುದು. ಇಂದ್ರಜಾಲದಂತೆ ಬ್ರಹ್ಮನಲ್ಲಿ ಮಾಯಾಶಕ್ತಿಯು ಕಲ್ಪಿತವಾದರೂ ಅಗ್ನಿಯಲ್ಲಿರುವ ದಾಹಶಕ್ತಿಯಂತೆ ಬ್ರಹ್ಮಭಿನ್ನವಲ್ಲ. ಆ ಶಕ್ತಿಯನ್ನು ಕಾರ್ಯದಿಂದಲೇ ತಿಳಿಯಬೇಕು. (ಅಂದರೆ ಅನುಮಾನಗಮ್ಯವು) ಶಕ್ತಿಯ ಅದರ್ಶನಕ್ಕೆ ಮಂತ್ರಾದಿ ಪ್ರತಿಬಂಧಕವೇ ಕಾರಣವಹುದು. 'ದೇವಾತ್ಮ ಶಕ್ತಿಂ ಸ್ವಗುಣೈರ್ನಿಗೂಢಾಂ........ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೆ' (ಶ್ವೇ) ಎಂಬ ಶ್ರುತಿಯಾದರೂ ಉಂಟು. ಮತ್ತು ವಸಿಷ್ಠನಾದರೂ 'ಸರ್ವಶಕ್ತಿ ಪರಬ್ರಹ್ಮ ನಿತ್ಯಮಾಪೂರ್ಣಮದ್ವಯಂ' ಎಂದು ಹೇಳಿದ್ದಾನೆ. ಬ್ರಹ್ಮನ ಪ್ರಕಟನೆಗೆ ಚಿಚ್ಛಕ್ತಿಯೇ ಕಾರಣವಹುದು. ದಾರ್ಢ್ಯ, ದ್ರವ, ದಾಹ, ಸ್ಪಂದ, ಶೂನ್ಯತ್ವ ಮೊದಲಾದ ಶಕ್ತಿಗುಣಗಳು ಕ್ರಮವಾಗಿ ಪಂಚಭೂತಗಳಲ್ಲಿ ಕಂಡುಬರುವವು. ಅಂಡರಸದಲ್ಲಿ ಮಹಾಸರ್ಪವಿರುವಂತೆ, ಬೀಜದಲ್ಲಿ ಫಲ-ಪುಷ್ಪ-ಶಾಕಾದಿಗಳಿಂದ ಕೂಡಿದ ವೃಕ್ಷವಿರುವಂತೆ ಬ್ರಹ್ಮನಲ್ಲಿ ಜಗತ್ತು ಇರುವದು. ದೇಶ ಕಾಲಗಳ ವಿಭಾಗದಿಂದ ಆತ್ಮನಲ್ಲಿ ಶಕ್ತಿಗಳು ತೋರುವವು. ಸರ್ವವ್ಯಾಪಿಯಾದ ಬ್ರಹ್ಮನು ಅಸಾಧಾರಣ ಮಾನಸಿಕ ಶಕ್ತಿಯುಳ್ಳವನು. ಚಿಕ್ಕ ಬಾಲಕರ ಚಿತ್ತರಂಜನೆಗಾಗಿ ಕಲ್ಪಿಸಿ ಹೇಳುವ ಕಥೆಯಂತೆ ಈ ಮನಸ್ಸು ಪ್ರಥಮದಲ್ಲಿ ಬಂಧಮೋಕ್ಷಗಳನ್ನೂ ನಂತರ ಪ್ರಪಂಚ ರಚನೆಯನ್ನೂ ಕಲ್ಪಿಸುವದು. ವಸಿಷ್ಠನ ಈ ಅಭಿಪ್ರಾಯವನ್ನು ವಿಚಾರವಂತರಾದರೂ ಒಪ್ಪುವರು. ಅಘಟಿತಘಟನಾಸಾಮರ್ಥ್ಯವುಳ್ಳ ಮಾಯಾಶಕ್ತಿಯ ಕಾರ್ಯವು ಅಸ್ಪಷ್ಟವಂತಲ್ಲ. ಅಪಾರವಿಹುದು. ಮಣ್ಣಿನಲ್ಲಿ ಹುದುಗಿಕೊಂಡಿದ್ದ ಕೊಡವು ಕುಂಬಾರನ ಸಹಾಯದಿಂದ ಪ್ರಕಟವಾಗುವಂತೆ, ಪಂಚಭೂತಗಳಲ್ಲಿಯ ಅಂತಃಶಕ್ತಿಯು ಕಾರ್ಯರೂಪವಾಗಿ ಹೊರಹೊರಟಿತು. ಇದಲ್ಲದೆ ಘಟಕ್ಕೂ, ಮೃತ್ತಿಕೆಗೂ ಅಭೇದವಿದ್ದರೂ ಪಿಂಡದಶೆಯಲ್ಲಿ ಘಟಾಭಾವವು ವ್ಯಕ್ತವಾಗುವದು. ಹೀಗೆ ಘಟವು ತೋರಿಯೂ ತೋರದಂತಿಹುದು. ಅಂದರೆ ಘಟಭಾವಾಭಾವವು ಹೇಗೆ ಮೃತ್ತಿಕೆಯಲ್ಲಿ ಪೃಥಕ್ಕರಿಸದ ಅಭೇದವಿರುವದೋ, ಆದರಂತೀ ಮಾಯೆಯು

ಮೊದಲು ಇಲ್ಲದ್ದಾಗಿ ಪುನಃ ಕಾರ್ಯರೂಪದಿಂದ ಇಂದ್ರಜಾಲದಂತೆ ತೋರುವದರಿಂದ ಅನಿರ್ವಚನೀಯವೆಂದು ಹೇಳುತ್ತಾರೆ. ಮತ್ತು ಘಟದಲ್ಲಿ ಎತ್ತ ನೋಡಿದರೂ ಮೃತ್ತಿಕೆಯೇ ಕಾಣುವದು. ನಾಮ ರೂಪಗಳು ಮಾತ್ರ ಅನಿತ್ಯ, ಅಸತ್ಯಗಳು. ಇದರಂತೆ ಬ್ರಹ್ಮನು ಜಗದ್ರೂಪನಾಗಿದ್ದರೂ ಮಿಥ್ಯೆಗಳಾದ ನಾಮ ರೂಪಗಳನ್ನು ಅವನಲ್ಲಿ ಕಲ್ಪಿಸುತ್ತಾರೆ. ಇದರಿಂದ ಬ್ರಹ್ಮನಿಗೆ ಯಾವ ಬಾಧೆ ಯಿಲ್ಲದಿದ್ದರೂ ಬ್ರಹ್ಮನಲ್ಲಿ ವಿವರ್ತವಾದವನ್ನು ಹೇಳಲು ಹೇತುವಾಯಿತು. ಆದರೆ ವಿವರ್ತವಾದದಲ್ಲಿ ಮೂಲ ವಸ್ತುವಿಗೆ ಬಾಧೆಯಿರುವದಿಲ್ಲ. ದಧಿಕ್ಷೀರದಂತೆ ಪರಿ ಣಾಮದಲ್ಲಿ ಸ್ವರೂಪ ಹಾನಿ ಇರುವದು. ತಂತುಪಟಗಳಂತೆ ಆರಂಭದಲ್ಲಿ ಕಾರ್ಯಕಾರಣಗಳಿಗೆ ಪೃಥಕ್ಕಾಗಿ ರೂಪ ಸ್ಪರ್ಶಾದಿಗಳು ಜನಿಸುವವು. ಈ ಎರಡು ವಾದಗಳು ಬ್ರಹ್ಮನಲ್ಲಿ ಸಂಗತವಾಗುವದಿಲ್ಲ. ಘಟದ ಎಲ್ಲ ಭಾಗದಲ್ಲಿಯೂ ಮೃತ್ತಿಕೆ ಯಿರುವಂತೆ ಬ್ರಹ್ಮನು ಜಗದಾಕಾರನಾಗಿರುವನು. 'ಏಕವಿಜ್ಞಾನೇನ ಸರ್ವ ವಿಜ್ಞಾನಂ' ಎಂಬ ಶ್ರುತಿಗನುಸರಿಸಿ ಬ್ರಹ್ಮನಿಗೆ ಸರ್ವಜ್ಞತ್ವವು ಸಲ್ಲುವದು. ಮತ್ತು ಬ್ರಹ್ಮನಿಗೆ ಸಚ್ಚಿದಾನಂದತ್ವವೂ ಜಗತ್ತಿಗೆ ನಾಮ ರೂಪತ್ವಗಳೂ ಹೇಳಲ್ಪಟ್ಟಿರುವವು. ಅವ್ಯಾಕೃತವಾದ ಬ್ರಹ್ಮದಲ್ಲಿ ಅಚಿಂತ್ಯರಚನಾಶಕ್ತಿಯುಳ್ಳ ಮಾಯೆಯು ಅನೇಕ ವಿಧವಾಗಿರುವದು. ಹೀಗೆ ಮಾಯಾವಿಶಿಷ್ಟನಾದ ಬ್ರಹ್ಮನು ಮೊದಲು ಆಕಾಶ ಸ್ವರೂಪವನ್ನು ಧರಿಸಿದನು. ಅಸ್ತಿ, ಭಾತಿ, ಪ್ರಿಯ ಎಂಬ ಅವನ ಅಂಶಗಳು ಆಕಾಶದಲ್ಲ ಪ್ರತೀತವಾಗುವವು. ಇಲ್ಲಿ ಅನುಭವವೇ ಪ್ರಮಾಣವು. ನಾಮರೂಪ ಗಳು ಜಗತ್ತಿನ ಅಂಶಗಳಿರುವವು. ಅವು ಅನಿತ್ಯವಾದವುಗಳು. ಈ ವಿಷಯದಲ್ಲಿ ಭಗವಂತನು ಅರ್ಜುನನಿಗೆ ಹೇಳುವಾಗ ಉಪದೇಶ ಮಾಡಿದ್ದಾನೆ. ನಾಮ ರೂಪಾ ತ್ಮಕ ಜಗತ್ತನ್ನು ವಿಚಾರಿಸಿದಲ್ಲಿ! ಸುಖಸ್ವರೂಪ ಬ್ರಹ್ಮನ ಉಳುಮೆಯೇ ಕಾಣುವದು. ಮನೋಜನ್ಯಗಳಾದ ಅನುಕೂಲ ಪ್ರತಿಕೂಲಗಳಿಂದುಂಟಾಗುವ ದುಃಖಾನಂದ ಗಳು ಬ್ರಹ್ಮನಿಗೆ ಇಲ್ಲವೇ ಇಲ್ಲ. ಅವನು ಯಾವಾಗಲೂ ನಿರತಿಶಯ ಸುಖ ಸ್ವರೂಪನೇ ಇರುವನು. ಅಸಾಧಾರಣ ಸಾಮರ್ಥ್ಯವುಳ್ಳ ಬ್ರಹ್ಮ ಮಾಯೆಯು ಅನೇಕ ಕಾರ್ಯಗಳನ್ನು ವೈಚಿತ್ರ್ಯವಾಗಿ ಉಂಟುಮಾಡುತ್ತದೆಂದು ಈ ಹಿಂದೆಯೇ ಹೇಳಿದೆ. ಬುದ್ಬುದಾದಿಗಳಿಗೆ ಸಾಗರವು ಅಧಿಷ್ಠಾನವಾದಂತೆ ಇದೆಲ್ಲಕ್ಕೂ ಬ್ರಹ್ಮವೇ ಅಧಿಷ್ಠಾನವಾಗಿರುವದು. ಅಧಿಷ್ಠಾನಾತ್ಮಾಭ್ಯಾಸದಿಂದ ಬ್ರಹ್ಮಜ್ಞಾನವಾಗಿ ದ್ವೈತಕ್ಕೆ ಬಾಧೆ ಬಂಗು ವಾಸನಾದಿಗಳಡಗಿ ನಿಜಾನಂದವು ಪ್ರಾಪ್ತವಾಗುವದು. ಇರಲಿ. ಮಾಯೆಯ ಆಟವನ್ನು ಯಾರು ತಾನೇ ಅರಿಯುವರು? ನಾವು ಸ್ವಪ್ನ ದಲ್ಲಿ ಆಕಾಶದೊಳಗೆ ಹಾರಾಡಿದಂತೆಯೂ, ನಮ್ಮ ಕತ್ತನ್ನು ನಾವೇ ಕತ್ತರಿಸು ವಂತೆಯೂ, ಕ್ಷಣ ಕಾಲದಲ್ಲಿ ಎಷ್ಟೋ ಪುತ್ರರನ್ನು ಹೆತ್ತಂತೆಯೂ, ಮೃತರಾದ ಪುತ್ರರನ್ನು ಕಂಡಂತೆಯೂ, ಅನೇಕ ರಾಜ್ಯಾದಿ ವ್ಯವಹಾರಗಳನ್ನು ಮಾಡಿ ದಂತೆಯೂ ಆಗುತ್ತದೆ. ಇದು ಸ್ವಪ್ನಾವಸ್ಥೆಯ ಚಮತ್ಕೃತಿಯು. ಇದರಂತೆ

ಮಾಯಾಶಕ್ತಿಯು ನಿರ್ವಿಕಾರನಾದ ಬ್ರಹ್ಮನಲ್ಲಿಯೇ ವಿಕಲ್ಪಗಳನ್ನು ಕಲ್ಪಿಸುವದು. ಅಧ್ಯಾಸದಿಂದ ಬ್ರಹ್ಮನಲ್ಲಿ ತೋರುವ ನಾಮರೂಪಾದಿ ವಿಕಾರಗಳೇ ಇದಕ್ಕೆ ದೃಷ್ಟಾಂತಗಳು. ಕ್ಷಣದಲ್ಲಿ ಧ್ವಂಸವಾಗುವ ಪ್ರಪಂಚಕ್ಕೂ ಮನೋರಾಜ್ಯಕ್ಕೂ ಯಾವ ಹೆಚ್ಚು ಕಡಿಮೆಗಳಿಲ್ಲ. ಲೌಕಿಕವನ್ನಪೇಕ್ಷಿಸಿ ಬ್ರಹ್ಮ ಚಿಂತನೆಯಲ್ಲಿದ್ದು ನಟಿಸುವವನಂತೆ ಕೃತಿಗಳನ್ನು ನಿರ್ವಹಿಸಬೇಕು. ನೀರು ಮೇಲೆ ಹರಿಯುತ್ತಿದ್ದರೂ ಅದರ ಬುಡದಲ್ಲಿ ಧೃಡವಾದ ಬಂಡೆಗಲ್ಲು ಹೇಗೆ ಉಲುಕಾಡುವದಿಲ್ಲವೋ ಅದರಂತೆ ಲೌಕಿಕ ವ್ಯವಹಾರವು ಜ್ಞಾನಿಯನ್ನು ಬಾಧಿಸುವದಿಲ್ಲ. ಛಿದ್ರರಹಿತವಾದ ದರ್ಪಣದಲ್ಲಿ ವಸ್ತುಗರ್ಭಿತವಾದ ಆಕಾಶದ ಪ್ರತಿಬಿಂಬದಂತೆ ಬ್ರಹ್ಮನಲ್ಲಿ ಜಗದ್ಗರ್ಭಿತವಾದ ಆಕಾಶದ ಪ್ರತಿಬಿಂಬವು ಕಂಡೇ ಕಾಣುವದು. ದರ್ಪಣಸ್ಥ ಪ್ರತಿಬಿಂಬವನ್ನು ನೋಡಬೇಕಾದರೆ ಮೊದಲು ದರ್ಪಣವನ್ನು ನೋಡಿಯೇ ತೀರಬೇಕು. ಹಾಗೆ ಬ್ರಹ್ಮಸ್ಥ ಪ್ರತಿಬಿಂಬವನ್ನು ನೋಡಬೇಕಾದರೆ ಬ್ರಹ್ಮನು ಪ್ರತ್ಯಕ್ಷವಾಗಿರಲೇಬೇಕು. ಹ್ಯಾಗಂದರೆ: ಸಚ್ಚಿದಾನಂದರೂಪ ಬ್ರಹ್ಮನು ನಾಮರೂಪಾತ್ಮಕ ಪ್ರಪಂಚಸ್ವರೂಪನಾಗಿ ಮೊದಲು ನಮಗೆ ಪ್ರತ್ಯಕ್ಷನಾಗಿರುತ್ತಾನೆ. ಎಂದು ತಿಳಿಯತಕ್ಕದ್ದು. ಅಲ್ಲಿ ಮಿಥ್ಯಾಭೂತನಾಮರೂಪಗಳನ್ನು ತ್ಯಜಿಸಿ ಸತ್ಯಾಂಶಗಳನ್ನು ಗ್ರಹಿಸಬೇಕು. ಈ ಪ್ರಕಾರ ಸಚ್ಚಿದಾನಂದ ಲಕ್ಷಣಲಕ್ಷಿತನಾದ ಮತ್ತು ಜಗಚ್ಛೂನ್ಯನಾದ ಬ್ರಹ್ಮನನ್ನು ಯಾವನು ಅರಿಯುವನೋ ಅವನು ಅದ್ವೈತಾನಂದಾಬ್ಧಿಯಲ್ಲಿ ಮುಳುಗಿ ನಿತ್ಯ ಮುಕ್ತನಾಗುತ್ತಾನೆ.

---

# ಸಾಹಿತ್ಯ.

ಬಸವನ ಬಳಗದಿಂದ.

ಭಾವನೆಗಳನ್ನು ಭಾಷೆಯಲ್ಲಿ ಬಹಿರಂಗಗೊಳಿಸುವದು ಸಾಹಿತ್ಯ. ಹೃದಯದ ಅಂತರಾಳವನ್ನು ತಟ್ಟಿ ಭಾವನೆಗಳನ್ನು ಉದ್ದೀಪನಗೊಳಿಸಿ ಸಹಜವಾಗಿ ಅವುಗಳನ್ನು ಹೊರಹೊಮ್ಮಿಸುವ ಸಾಮರ್ಥ್ಯವೊಂದಿದೆ. ಸೃಷ್ಟಿಯ ಅಂದ-ಚಂದ ಗಳನ್ನು, ಜೀವನದ ಸುಖ-ದುಃಖಗಳನ್ನು ಅನುಭವಿಸುವದು ಮಾನವನಿಗೆ ಸಹಜವೇ. ಸಹಜವಾದ ಈ ಪ್ರವೃತ್ತಿಯೇ ಸಾಹಿತ್ಯದ ಹುಟ್ಟಿಗೆ ಕಾರಣ. ಅನು ಭವಿಸಿದ ಸುಖ-ದುಃಖಗಳನ್ನು ಎರಡನೆಯವರಿಗೆ ಕಥನ ಮಾಡುವ ಪ್ರವೃತ್ತಿ ಯಾವರೂ ಮಾನವನಿಗೆ ಸಹಜವಾಗಿದೆ. ಕಥನವು ರಮ್ಯವಾಗಬೇಕೆಂದು ಪ್ರಯತ್ನಿಸಿ ಅನುಭವಕ್ಕೆ - ಅಥವಾ ಕಲ್ಪನೆಗೆ - ಸ್ವಲ್ಪ ರಂಜಕ ಹೊದಿಕೆ ( ಉಪ್ಪು ಕಾರ ಹಚ್ಚಿ ) ಕೊಡುವ ಪ್ರವೃತ್ತಿಯಾದರೂ ಸಹಜವಾದುದು. ಮಾನವನಿಗೆ ಸಹಜವಾದ ಈ ಮೂರು ಪ್ರವೃತ್ತಿಗಳು ಯಾವದೊಂದು ಸಾಹಿತ್ಯವು ಹೊರ ಹೊರಡುವದಕ್ಕೆ ಕಾರಣವಾಗಬಲ್ಲವು. ಅವನ್ನೇ ಸಾಹಿತ್ಯ ವಿಮರ್ಶಕರು ಬಣ್ಣಿಸಿ ದ್ದಾರೆ. ನಮ್ಮಲ್ಲಿ ನಮ್ಮ ವಿಷಯವಾಗಿ ಹಾಗು ನಮ್ಮ ನೆರೆ-ಹೊರೆಯವರ ವಿಷಯ ವಾಗಿ ಇರುವ ಆಸ್ಥೆ, ನಾವು ಕಂಡುಂಡ ಅಥವಾ ಕಲ್ಪಿಸುವ ಸಂಗತಿಗಳ ವಿಷಯ ವಾದ ಅನುಭೂತಿ, ನಮ್ಮ ಅನುಭವಗಳನ್ನು ಇನ್ನಿತರರಿಗೆ ತಿಳುಹಿಸಬೇಕೆಂಬ ಕುತೂಹಲ ಹಾಗು ಕಥನವನ್ನು ರಂಜಕವಾಗಿ ಮಾಡಬೇಕೆಂಬ ಮನದಾಸೆ. ಈ ನಾಲ್ಕು ಸಂಗತಿಗಳು ಸಾಹಿತ್ಯ ಸಂವರ್ಧನಕ್ಕೆ ಪ್ರವರ್ತಕಗಳೆಂದು ಲಾಕ್ಷಣಿಕರು ಹೇಳುತ್ತಾರೆ. ಅದು ಯಥಾರ್ಥವಾಗಿದೆ. ಸ್ವಾಭಾವಿಕವೂ ಆಗಿದೆ. ನಮಗಾದ ಅನುಭೂತಿಗಳನ್ನು ಅನ್ಯರಿಗೆ ಹೇಳಿಕೊಡುವ ಉತ್ಸುಕತೆಯು ನಮ್ಮಲ್ಲಿ ಎಲ್ಲ ರಲ್ಲಿಯೂ ಉಂಟು. ಆದರೂ ಹೇಳುವ ರೀತಿಯನ್ನು ರಂಜಕ ಮಾಡುವ ಸಾಮರ್ಥ್ಯವು ನಮ್ಮಲ್ಲಿ ಎಲ್ಲರಿಗೂ ಇಲ್ಲ. ಅಲ್ಲದೆ ಎಲ್ಲರೂ ಸರಿಯಾಗಿ, ಸಮವಾಗಿ ಅನುಭೂತಿಯನ್ನು ಪಡೆಯುವದದಿಲ್ಲ. ಜೀವನದ ವಿಷಯವಾಗಿ ಸರಿಯಾದ ಆಸ್ಥೆಯುಳ್ಳವರಾಗಿರುವದಿಲ್ಲ. ಆದುದರಿಂದ ಮಾನವ ಸಹಜವಾದ ಪ್ರವೃತ್ತಿ ಯಿಂದಲೇ ಸಾಹಿತ್ಯವು ಬೆಳೆಯುತ್ತಿದ್ದರೂ ನಾವೆಲ್ಲರೂ ಸಾಹಿತ್ಯದ ಹುಟ್ಟಿಗೆ ಕಾರಣ ರಾಗಲಾರೆವು. ಅರ್ಥಾತ್ ನಾವೆಲ್ಲ ಸಾಹಿತಿಗಳಲ್ಲ. ಜೀವನದ ಸುಖ-ದುಃಖ ಗಳನ್ನು ಆಳವಾಗಿ ಅನುಭವಿಸಿ, ವಿಶೇಷವಾದ ಆಸ್ಥೆ ವಹಿಸಿ ನಮ್ಮ ಅನುಭೂತಿ

ಗಳನ್ನು ಕಲಾತ್ಮಕವಾಗಿ ಹೇಳಬಲ್ಲವರಾದರೆ ನಾವೆಲ್ಲರೂ ಸಾಹಿತಿಗಳಾಗಬಹುದು. ಅಭ್ಯಾಸ, ಸಂಸ್ಕೃತಿ, ಪರಿಶ್ರಮ ( ದೈವಿಕ ದೇಣಿಗೆ ), ಇವುಗಳ ಮೂಲಕ ಸಾಹಿತಿಗಳಲ್ಲಿ ಅನೇಕ ಅಂತಸ್ತುಗಳು ಕಂಡು ಬರುತ್ತಿವೆ. ನಮಗೆ ಅನಿಸಿದ್ದನ್ನೆಲ್ಲ ಅಂದು ತೋರಿಸುವ ಹಂಬಲವು ನಮಗಿರಬಹುದಾದರೂ ಮೋಹಕವಾಗುವಂತೆ, ಜನರಿಗೆ ರುಚಿಸುವಂತೆ ಕಲಾತ್ಮಕವಾಗಿ ಹೇಳುವ ಸಾಮರ್ಥ್ಯವು ನಮ್ಮಲ್ಲಿ ಎಲ್ಲರಿಗೂ ಬರಲಾರದು. ಕಂಡುಂಡ ಸಂಗತಿಗಳಲ್ಲಿಯ ರಸಾನುಭೂತಿಯು ಉಳಿದವರಿಗೂ ಆಗುವಂತೆ ಹೇಳುವ ಕೌಶಲ್ಯವೇ ಸಾಹಿತ್ಯದ ಒರೆಗಲ್ಲೆಂದು ಶಿಥಿಲವಾಗಿ ಹೇಳಬಹುದು. ಸಂಜೆ ಮುಂಜಾವುಗಳನ್ನು, ಸುಂದರ ಸನ್ನಿವೇಶಗಳನ್ನು, ಅಂದವಾದ ದೃಶ್ಯಗಳನ್ನು, ಫಲ-ಪುಷ್ಪಗಳನ್ನು ನಾವೆಲ್ಲರೂ ನೋಡುತ್ತೇವೆ. ಆನಂದವನ್ನು ಅನುಭವಿಸುತ್ತೇವೆ. ಜೀವನದ ಭೀಕರ ದುಃಖಗಳಿಂದ ನೊಂದುಕೊಳ್ಳುತ್ತೇವೆ. ಸುಖದಿಂದ ಹಿಗ್ಗುತ್ತೇವೆ. ಅತೃಪ್ತಿಯಿಂದ ಕುಗ್ಗುತ್ತೇವೆ. ಆದರೆ ಈ ಎಲ್ಲದರಲ್ಲಿಯ ರಸಾನುಭೂತಿಯನ್ನು ರಮ್ಯವಾಗಿ ಹೇಳುವ ಜಾಣ್ಮೆಯಿಂದ ಇನ್ನಿತರರೂ ಆ ರಸಾನುಭವವನ್ನು ಅನುಭವಿಸುವಂತೆ ಭಾವೋನ್ಮುಖರನ್ನಾಗಿ ಮಾಡಬಲ್ಲವನು ಮಾತ್ರ ಸಾಹಿತಿಯಾಗಬಲ್ಲನು. ಎಲ್ಲರಿಗೂ ಈ ಜಾಣ್ಮೆ ಇರಲಾರದು. ದಿನವೂ ನಾವು ನೋಡುತ್ತಿರುವ ವಸ್ತುಗಳನ್ನು, ಅನುಭವಿಸುತ್ತಿರುವ ಭಾವನೆಗಳನ್ನು ಸಾಹಿತಿಯು ಕಲಾತ್ಮಕವಾಗಿ ನಿರೂಪಿಸಿದಾಗ ಸಾಹಿತಿಯು ತನಗಾದ ರಸಾನುಭವವನ್ನು ನಮಗೆ ಉಂಟು ಮಾಡಿಕೊಡುತ್ತಾನೆ. ತನ್ನ ಪ್ರತಿಭೆಯ ಬಲದಿಂದ ಆತನು ನಮಗೆ ಅಗೋಚರವಾದ ಸಂಗತಿಗಳನ್ನು ನಿರ್ಮಿಸಲೂ ಬಹುದು. ಆಗಲೂ ರಸಾನುಭವವಾಗುತ್ತದೆ. ಅದು ಉಚ್ಚ ಸಾಹಿತ್ಯ.

ಬರೆದವ : ಉಣಕಲ್ಲ.

---

# ಇಂದಿನ ಸಾಹಿತ್ಯದ ದಶ ಸೂತ್ರಗಳು

---

ಇಂದಿನ ಸಾಹಿತ್ಯದ ವಿಚಾರಸರಣಿ ಮತ್ತು ಪ್ರಚಾರ ನೀತಿಯನ್ನು ಹಕ್ಕಿಯ ನೋಟದಿಂದ ನೋಡುವಾಗ ಹೊಳೆದು ಬಂದ ನಾಲ್ಕಾರು ಮಾತುಗಳಿವು :

(೧) ಅಸ್ಪಷ್ಟತೆ:- ತಿಳಿಯದ ಅಲ್ಲಸಲ್ಲದ ಅಸ್ಪಷ್ಟ ಸಂದಿಗ್ಧ ವಾಙ್ಮಯವನ್ನು ಇಂದು ನಿರ್ಮಾಣ ಮಾಡುವುದಕ್ಕಿಂತ ಸುಮ್ಮನೆ ಬೂದಿ ಬಡಿದುಕೊಂಡು ಸುಡುಗಾಡಸಿದ್ಧರಾಗುವದು ಮೇಲು. ಹಿಂದಿನ ಸಾಹಿತ್ಯವು ಸಾವಿರ ವರುಷದ್ದಿದ್ದರೂ ಎಷ್ಟು ನಿರ್ಮಲ, ಕಾಂತಿಯುಕ್ತವಾದದ್ದು! ಎಷ್ಟು ಸರಸ!

(೨) ಅಶ್ಲೀಲತೆಯ ಆಗರವಿಂದಿನ ಸಾಹಿತ್ಯ:- **ಕೌಮುದಿ** ನಾಟಕವಂತೂ ದುರ್ಗಂಧದ ಮನೆಯೆಂದು ಪ್ರಸಿದ್ಧವಿದೆ. **ಆಹುತಿ**ಯಾದರೂ ಅದರ ಹಾದಿಯಲ್ಲಿಯೇ ಕಾಲಿಟ್ಟದೆ.

(೩) ಪ್ರಾಸಯುತಿಗಳು ಕೂಡಿದರಿಷ್ಟೇ ಕವಿತೆಯಲ್ಲ. ಇಂದಿನ ಕವನಗಳಲ್ಲಿ ಸ್ವಾತಂತ್ರ್ಯಕ್ಕಿಂತ ಸ್ವೈರಾಚಾರ ಹೆಚ್ಚು. ಎಷ್ಟು ಕವಿಗಳಿದ್ದಾರೋ ಅಷ್ಟು ಪ್ರಾಸಗಳು, ಮಟ್ಟಗಳು. ಅಂತ್ಯ ಪ್ರಾಸವನ್ನು ಕೂಡಿಸುವುದಿಷ್ಟೇ ಇಂದಿನ ಕವಿಗಳ ಉದ್ದಾಮ ಧ್ಯೇಯವೆಂದು ತೋರುತ್ತದೆ.

(೪) ಅಂಧ ಅನುಕರಣವೇ ಮಾಮಾರಿ ಮರಣ. ಪಾಶ್ಚಾತ್ಯರಂತೂ ಇವರ ಪಾಲಿಗೆ ಸರ್ವಜ್ಞ ಸರ್ವಶಕ್ತರು. ಸ್ವತಂತ್ರ ವಿಚಾರ ಸರಣಿಯಂತೂ ಇಲ್ಲವೇ ಇಲ್ಲ. ಕೆಲಕೆಲವು ಮಹಾಶಯರಂತೂ ಭಾಷಾಂತರ ಮಾಡಿದ ಕವನಗಳನ್ನು ತಮ್ಮವೆಂತೇ ಹೇಳುವರು. ಎಂತಹ ಬಹದ್ದೂರರಿವರು! ಇವರಿಗೇ ಅಲ್ಲವೇ ಇಂದಿನ ಸಾಹಿತ್ಯ ಕುಂಭಕರ್ಣರೆಂಬುದು.

(೫) ಸ್ವಂತ ಅನುಭವವಿಲ್ಲ. ಆಳವಾದ – ವಿಶಾಲವಾದ ಅನುಭವವಂತೂ ಕೆಲವು ಕಡೆಯಲ್ಲಿ ಶೂನ್ಯವೇ ಶೂನ್ಯ. ಉದಾ: ಒಂದು ಕಾದಂಬರಿಯ ಸಂಗತಿಯು ಬೆಳಗಾವಿಯಲ್ಲಿ ನಡೆಯುತ್ತದೆ. ಅದರ ಉಡಿಗೆ-ತೊಡಿಗೆ, ಆಚಾರ-ವಿಚಾರ, ತಿಂಡಿ-ತೀರ್ಥಗಳೆಲ್ಲ ಮಾತ್ರ ಮೈಸೂರಿನವು. ಎಂತಹ ಅನುಭವ, ಎಂತಹ **ಹಂಡಬಂಡ** ಸಾಹಿತ್ಯವಿದು. ಹೊಲೆಸಾಹಿತ್ಯವಿಂದಿನದು. ಕೆಲ ಮಹಾಶಯರು ಕಾದಂಬರಿಯೆಂದರೆ "ಸಿದ್ಧಿಕಿ ಸಿದ್ಧಿ ವಾಹವರೆ ಸಿದ್ಧಿ" ಆಟವೆಂದು ತಿಳಿದಂತೆ ತೋರುತ್ತದೆ. ಉದಾ: ವಿಶ್ವಾಮಿತ್ರನ ಸೃಷ್ಟಿ.

(೬) ಇವುಗಳಲ್ಲಿಯೇ ಇನ್ನೊಂದು ಪೆಡಂಭೂತ ಹೊಕ್ಕಿದೆ. **ಕಲೆಗಾಗಿ ಕಲೆಯಂತೆ!** ಕಲೆಗಾಗಿ ಕಲೆಯೋ ಜೀವನದ ಕೊಲೆಯೋ ತಿಳಿಯದಾಗಿದೆ.

ತಾಳಮೇಳಗಳಿಲ್ಲದೆ ಮನಬಂದತೆ ಬರೆಯುವದೇ ಈ ತತ್ವದ ಹೆಗ್ಗುರುತೆಂದು ತೋರುತ್ತದೆ,

(೭) ವಿಷಯವೈವಿಧ್ಯತೆ ಕಡಿಮೆ. ಗಂಡು-ಹೆಣ್ಣಿನ ವಿಷಯವನ್ನು ಬಿಟ್ಟು ಮತ್ತೊಂದಿಲ್ಲ. ಬರ್ಟ್ರಾಂಡ ರಸೆಲರ ಶಿಷ್ಯರೇ ಇಂದು ನಮ್ಮ ಸಾಹಿತ್ಯದಲ್ಲಿ ಹೊರಬೀಳ ಹೊರಟಿದ್ದಾರೆ. ಇವರಿಗೆ ಇನ್ನಿತರ ವಿಷಯುಗಳ ಗಂಧವೇ ಇಲ್ಲ. ಹರಿಹರ, ಪಂಪ, ಬಸವ, ಕುಮಾರವ್ಯಾಸರಂತಹ ಕವಿಗಳಿಂದಿರುವರೇ ? ನಮಗಿಂದು ಬೇಕಾದುದು ವೀರರಸ. ಶಕ್ತಿಯೇ ನಮಗೆ ಮುಕ್ತಿಯನ್ನು ಕೊಡುವಂತಹದು.

(೮) ಮುಚ್ಚುಮರೆಯಿಲ್ಲದೆ ಬಿಚ್ಚಿ ಬಿಚ್ಚಿ ಹೇಳುವ ವಿಮರ್ಶೆಯಂತೂ ಇಲ್ಲವೇ ಇಲ್ಲ. ಕೆಲವು ವಿಮರ್ಶಕರಂತೂ ಹೆಳವರಂತೆ ಬರಿಯ ಹೊಗಳುವ ಬೊಗಳುವ ಕೆಲಸವನ್ನೇ ಕೈಕೊಂಡಿದ್ದಾರೆ. ಇವನು ನನ್ನ ಅಣ್ಣ, ಇವನು ನನ್ನ ಬೀಗನೆಂದು ಮುತುವರ್ಜಿ ಹಿಡಿಯುವವರೇ ಹೆಚ್ಚು. ನ್ಯಾಯವಾದ-ಪವಿತ್ರ ವಾದ ವಿಮರ್ಶೆಯು ಇಲ್ಲವೇ ಇಲ್ಲ. ಕೆಲ ಮಹಾಶಯರಂತೂ ಒಳಗೊಳಗೆ ವೈಯಕ್ತಿಕ ಅಂಗವೈಕಲ್ಯಗಳನ್ನು ತಂದು ವಿಮರ್ಶಿಸುತ್ತಿದ್ದಾರೆ.

(೯) ಸಾಮಾಜಿಕ ಸಾಹಿತ್ಯವಂತೆ! ಹಳೆಯ ನಡೆವಳಿಕೆಗಳನ್ನೆಲ್ಲ ಬಾಯಿಗೆ ಬಂದಂತೆ ಬಯ್ಯುವದು. ಬರಿಯ ಕಂಡದ್ದನ್ನೆ ಕಾರಿದರೆ ಸಾಹಿತ್ಯವಲ್ಲ. ಭಕ್ತಿ ಹುಟ್ಟುವ ಹಾಗೆ ಯಾವುದೇ ವಸ್ತುವನ್ನು ಸಹಾನುಭೂತಿ ಸೌಹಾರ್ದ್ರಗಳಿಂದ ವರ್ಣಿಸಬೇಕು.

(೧೦) ಅಶುದ್ಧ ವ್ಯಾವಹಾರಿಕ ಶಬ್ದಗಳನ್ನುಪಯೋಗಿಸಿ ಕವನ ಬರೆಯುವ ಮುದಿ ಹುಚ್ಚೂ ಉಂಟು ಇಂದಿನವರಿಗೆ. ಪ್ರತಿಭಾಸಂಪನ್ನರು ಹಾಗೆ ಮಾಡಿದರೆ ಒಳಿತು. ಸಂಗ, ಲಿಂಗ, ಶೀನು, ಗುಂಡುಗಳೆಲ್ಲರೂ ಅದೇ ಚಾಳಿಯನ್ನು ಅನುಸರಿಸಿ ದ್ದಾರೆ. ಹಿರಿಯಕ್ಕನ ಚಾಳಿ ಮನೆಯ ಮಂದಿಗೆಲ್ಲವೆನ್ನುವ ಗಾದೆಯು ಇಂದು ಸಾರ್ಥಕತೆಯನ್ನು ಪಡೆಯಿತೆಂದೇ ಹೇಳಬೇಕು.

ಒಟ್ಟಿಗೆ ಹಿಂದಿನ ಆಳವಿಂದಿಲ್ಲ. ಹಿಂದಿನ ಸ್ಪಷ್ಟತೆ ಇಂದಿಲ್ಲ. ಹಿಂದಿನ ಬಿಗುವು ಗಾಂಭೀರ್ಯಗಳಿಂದು ಸಡಲುತಿವೆ. ಇಂದಿನ ಸಾಹಿತ್ಯದಲ್ಲಿ ಹುಡುಗಾಟ ಗುಡುಗಾಟ, ಒದರಾಟ ಚೀರಾಟಗಳೇ ಹೆಚ್ಚು. ಕಟ್ಟು ನಿಟ್ಟಿಲ್ಲದೆ ಮನಬಂದಂತೆ ಓಡಾಡುತಿದ್ದಾರೆ ಸಾಹಿತಿಗಳು. **ಇಂದಿನವರೆಲ್ಲರೂ ವಿಶ್ವಸಾಹಿತ್ಯಕ್ಕೆ ಸೇರುವ ಕವನಗಳನ್ನು ಬರೆಯುವವರಂತೆ.** ಇಂದಿನ ವಿಮರ್ಶಕಾರರಂತೂ ವಟಗುಡು ವದೊಂದೇ ಕಾಯಕವೆಂದು ತಿಳಿದಿದ್ದಾರೆ. ಅದೇ ಅವರಿಗೆ ಕೈಲಾಸ.

ಮುಕ್ಕಣ್ಣ

( ಬ. ಮ. ಏಳುಕೋಟಿ ಬಸವನ ಬಳಗ, ಕೊಲ್ಲಾಪುರ. )

## ಸಾಮಾಜಿಕ ಕತೆ



# ನ್ಯಾಯ!

ಲೇಖಕ :- ಶ್ರೀ. ವೆಂಕಟರಾವ ಫಡಣೀಸ, ಶಿರಹಟ್ಟಿ.

೧

ಪಾರಮ್ಮ ವಿಧವೆ. ಅನಾಥೆ. ಸಮಾಜದ ನಿವಾಳಿ. ಬೆಳಕಿಲ್ಲದ, ಪ್ರೇಮವಿಲ್ಲದ, ನಿರಾಶೆಯ, ದುಃಖಮಯ ಬಾಳು ಅವಳದು! ಹೇಗೋ ಎಂತೋ ಜೀವ ಹಿಡಿದಿರುವಳು! ಆ ಜೀವಧಾರಣಕ್ಕೊಂದು ಮಾರ್ಗ ಬೇಕಷ್ಟೆ? ಒಂದು ಆಸ್ಪತ್ರೆಯಲ್ಲಿ 'ನರ್ಸ' ಕೆಲಸ ಮಾಡುತ್ತಿದ್ದಳು. ೨೦—೨೧ ವರುಷ ಅವಳಿಗೆ. ಸುಂದರಳು! ಕೋಮಲ ಸ್ವಭಾವದವಳು. ಪ್ರೇಮಲ ಹೃದಯದವಳು. ಆದರೆ.... ಎಲ್ಲವೂ ವ್ಯರ್ಥ ಅವಳ ಬಾಳು!

ಒಂದು ದಿನ ಆಸ್ಪತ್ರೆಯಲ್ಲಿ ಪಾರಮ್ಮ ತನ್ನ ಕೆಲಸದಲ್ಲಿ ತೊಡಗಿದ್ದಳು. ಆಗ ಅಲ್ಲಿ ಒಂದು ಪುರುಷ ವ್ಯಕ್ತಿ ಬಂದಿತು. ಅವನನ್ನು ನೋಡಿ "ಓಹೋ ಶಿವರಾಯ ಯಾವಾಗ್ಗೆ ಬಂದಿ? ಈಗೆಲ್ಲಿರುವದು?" ಅಂದಳು. "ಪಾರು ನನ್ನನ್ನು ಮರೆತಿಲ್ಲವಷ್ಟೇ? ಕಾಲೇಜಿನಲ್ಲಿನ ನನ್ನ ನಿನ್ನ ಜೀವನವು ಅದೆಷ್ಟು ಆನಂದದಿಂದ ಹೋಯಿತು ಬಲ್ಲೆಯಾ? ಆದರೆ ಅಂದಿನ-ಇಂದಿನ ಜೀವನದಲ್ಲಿ ಅದೆಷ್ಟು ಮಾರ್ಪಾಟವಾಗಿ ಹೋಗಿದೆ! ಪಾರು! ಕಾಲೇಜದ ನಂದನ ವನದೊಳಗಿಂದ ನಾನೂ ನೀನೂ ಬೇರೆ ಬೇರೆಯಾಗಿ ಹೊರಬಿದ್ದಮೇಲೆ ನಿನ್ನ ವಿಷಯವಾವದೂ ತಿಳಿಯಲಿಲ್ಲ. ಯೋಗಾಯೋಗ ನೋಡು ಹೇಗಿದೆ ಪಾರು?" ಶಿವರಾಯನು ನಸುನಗುತ್ತ ನುಡಿದ.

"ಶಿವರಾಯಾ! ನೋಡಿದಿಯಾ ಇಂದಿನ ನನ್ನ ಅವಸ್ಥೆ! ವೈಧವ್ಯದ ಬಾಳಿನ ಕಡಲಲ್ಲಿ ಮುಳುಗಿ ಮುಳುಗಿ ಏಳುತ್ತಲಿದ್ದೇನೆ! ಜಗದ ದೃಷ್ಟಿಯಲ್ಲಿ ಹೀನಳಾಗಿ ತೋರುವ ಈ ಪಾರಮ್ಮನ ಜೀವನ..........! ಶಿವರಾಯ ಎಷ್ಟು ದುಃಖಪೂರ್ಣವಾಗಿದೆ! ಅದಿರಲಿ ಶಿವರಾಯ ಬಹಳ ದಿವಸಕ್ಕೆ ಭೆಟ್ಟಿಯಾಗಿದೆ. ಒಂದೆರಡು ದಿನ ಇದ್ದು ಹೋಗಲ್ಲಾ?" ಆಶಾಪೂರ್ಣತೆಯಿಂದ ಪಾರಮ್ಮ ಅಂದಳು.

೨

ಅಂದಿನಿಂದ—ಶಿವರಾಯನ ದರ್ಶನವಾದಂದಿನಿಂದ ಪಾರಮ್ಮನ ಉದಾಸೀನ ವೃತ್ತಿಯು ಇಲ್ಲದಾಯಿತು! ಮುಖಕಮಲವು ವಿಕಸಿತವಾಯಿತು. ಮೊದಲಿನ ಉರುಟು ಬಿಳೇ ಸೀರೆ ಹೋಗಿ, ಬೆಡಗಿನ ಕೋಯಿಮುತ್ತೂರ ಪತ್ತಲ ಉಡಹತ್ತಿದಳು. ಪಾರಮ್ಮ ಪೋಲಕಾ ತೊಡುವಳು. ಸಡಿಲಾದ ಬುಚುಡ. ಕೈಗಳಲ್ಲಿ ಎರಡೆರಡು ಬಿಲ್ಲದ್ವಾರ ಕಾಜಿನ ಬಳೆಗಳು. ವಾರಿ ಬೈತಲ. ಸುಗಂಧದೆಣ್ಣೆಯ ಲೇಪನ. ಈಗಿನ ಸುಧಾರಿಸಿದ ಕಾಲಗಲ್ಲಿ ಅಂತಹ ಎಣ್ಣೆಗಳಿಗೇನು ಕಡಿಮೆ? ಕಾಮಿನಿಯಾ ಆಯಿಲ್, ಹೇಯರ ಆಯಿಲ್, ಕೇಶವರ್ಧಿನಿ ತೈಲ, ಕುಂತಲ ಕೌಮುದಿ ತೈಲ ಒಂದೆ ಎರಡೆ? ಯಾವ ವರ್ತಮಾನಪತ್ರ ನೋಡಲಿ, ಮಾಸಿಕ ವಹಿಗಳನ್ನು ನೋಡಲಿ ಇಂತಹ ಜಾಹೀರಾತುಗಳ ಪ್ರಸ್ತ ಬೆಳೆದು ಬಿಟ್ಟದೆ! ಜಾಹೀರಾತಿನ ವರ್ಣನೆಗೆ ಮರುಳಾಗಿ ಪಾರಮ್ಮ ದುಡ್ಡಿನ ಸೂರೆ ಗೈದಳು. ಈ ಮೊದಲು ಪಾರಮ್ಮನನ್ನು ನೋಡಿದವರು ಈಗ "ಆ ಪಾರಮ್ಮ ಇವಳೇ ಏನು?" ಎಂದು ಸಾಶಂಕಿತರಾಗಿ ಕೇಳಬಹುದು. ಅವಳ ಈ ಪರಿವರ್ತನಕ್ಕೆ ಶಿವರಾಯನೇ ಕಾರಣ.

ಇದುವರೆಗೆ ಬತ್ತಿ ಹೋದಿದ್ದ ಪ್ರೇಮದ ಝುರಿಯು ಸೆಲೆಯೊಡೆದು ಪುನಃ ಒಳ್ಳೇ ವೇಗವಾಗಿ ಅವಳ ಹೃದಯದಲ್ಲಿ ಹರಿಯತೊಡಗಿದೆ! ಇಂದು ಆವಳ ಬಾಳಿಗೊಂದು ಪ್ರೇಮದ ಕಿರಣದ ಬೆಳಕು ಬೀಳತೊಡಗಿದೆ! ಕೇವಲ ಅವಳ ರೂಪಕೆ ಮೋಹಿತನಾದ ಶಿವರಾಯನು ಆ ಪ್ರೇಮದ — ಆ ಸೌಂದರ್ಯದ — ಆ ನವ ನಾಗರಿಕತೆಯ ಸೊಬಗಿನ ಬಾಲೆಗೆ ಹಿಂದು ಮುಂದಿನ ವಿಚಾರವಿಲ್ಲದೆ ಪುನರ್ವಿವಾಹಕ್ಕಾಗಿ ವಚನವಿತ್ತನು! ಆದರೆ........ರೂಢಿ! ಸಮಾಜವು ಹೊತ್ತಿಸಿದ ಈ ನಡುಗಿಚ್ಚು! ಶಿವರಾಯನ ಅಂತರ್ಯವನ್ನು ಸುಡಹತ್ತಿತು!

ಒಂದೆಡೆ ಪಾರಮ್ಮನ ಅಪಾರವಾದ ಪ್ರೇಮ-ವಾತ್ಸಲ್ಯಗಳು! ಇನ್ನೊಂದೆಡೆ ಸಮಾಜ ಘಟಸರ್ಪದ ಫೂತ್ಕಾರ! ಒಂದು ಕಡೆ ವಿಶ್ವಾಸಘಾತ ಮಾಡಿದರೆ ಸುಂದರ ಕೋಮಲ ತರುಣಿಯ — ಆದಿಶಕ್ತಿಯ ಶಾಪ! ಮತ್ತೊಂಡೆ ಸಮಾಜದ -ಧರ್ಮದ ಅಭಿಶಾಪ! ಇವೆರಡರ ತಿಕ್ಕಾಟದಿಂದ ಶಿವರಾಯ ಮರ್ಮಾಹತನಾದ! ಹೇಗೋ ೪-೫ ದಿವಸ ಅವಳ ಸಹವಾಸದಲ್ಲಿ ಕಳೆಯುವಷ್ಟರಲ್ಲಿ ತಂದೆಯ ಕಡೆಯಿಂದ ಓಲೆ ಬಂದಿತು ಊರಿಗೆ ಬರಲು. ಪುನಃ ತಾನು ಬರುವದಾಗಿ ಪಾರಮ್ಮನನ್ನು ಸಮಾಧಾನಬಡಿಸಿ ಅವನು ಹೊರಟು ಹೋದ.

೩

ಮುಂದೊಂದು ವಾರದೊಳಗಾಗಿ ಶಿವರಾಯನಿಂದ ಓಲೆ ಬಂದಿತು ಪಾರಮ್ಮಗೆ. ಉತ್ಸುಕತೆಯಿಂದ— ಪ್ರೇಮಾವೇಗದಿಂದ ಓಲೆ ಓದಿದಳು. ಆದರೆ ಅದು ಓಲೆ

ಯಾಗಿರದೆ ಶಿವರಾಯನ ಲಗ್ನಪತ್ರಿಕೆ! ಆಗ ಅವಳ ಕರುಳಿಗೆ ಕಿಚ್ಚಿಕ್ಕಿದ ಹಾಗಾಯಿತು! ಹೃದಯದಲ್ಲಿ ದುಃಖದ ದಳ್ಳುರಿ ಎದ್ದಿತು! ಎಷ್ಟೆಂದರೂ ಅಬಲೆಯಲ್ಲವೆ ಅವಳು? ಅನಾಥಳಲ್ಲವೆ?

"ನೀಚಾ! ದ್ರೋಹಿ! ವಿಶ್ವಾಸಘಾತಕಿ! ನಿನ್ನನ್ನು ನಂಬಿ ಸಮಾಜವನ್ನು ಎದುರಿಸಲು ಸಿದ್ಧಳಾದೆ! ಹಾಯ್! ದೇವಾ! ಅಬಲೆಯರ ಅವಸ್ಥೆ! ಅಬಲೆಯರ ಹೀನ ಬಾಳು! ಪುರುಷ ಪಿಶಾಚಿಗಳ ದಬ್ಬಾಳಿಕೆ! ಇವುಗಳಿಗೆ ಬಲಿಯಾಗಿ ಸಾವಿರಾರು ಬಾಲೆಯರು ಹತರಾಗುವದು ನಿನಗೆ ಕಾಣಿಸಲಾರದೆ? ದೇವಾ, ದಯೆಯು ಅಟ್ಟಿಸಿ ಹೋಯಿತೆ ನಿನ್ನಲ್ಲಿಯದು?" ಪಾರಮ್ಮನ ಕಣ್ಣುಗಳಲ್ಲಿ ಅಶ್ರುಗಳು ತುಂಬಿ ತುಳುಕಿ ಹೊರಚಲ್ಲಹತ್ತಿದವು! ನಿರಾಶೆಯ ವಿಷವು ಅವಳ ದೇಹವನ್ನೆಲ್ಲ ವ್ಯಾಪಿಸಿತು! ನಿಲ್ಲಲು ಶಕ್ತಿ ಸಾಲದೆ ಹಾಗೇ ನೆಲಕ್ಕುರುಳಿದಳು! ಹೃದಯಕ್ರಿಯೆ ನಿಂತು ಹೋಯಿತು! ದೀರ್ಘವಾದ ಅವಳ ಕೊನೆಯುಸುರು ಲಗ್ನ ಮಂಟಪದಲ್ಲಿ ನಿಂತ ಶಿವರಾಯನ ಕಿವಿಯನ್ನು ಮುಟ್ಟಿರಬಹುದೇ?

ವಾಚಕರೇ ನೋಡಿದಿರಾ? ಜಗದ ದೃಷ್ಟಿಯಲ್ಲಿ ಪಾರಮ್ಮ ಭ್ರಷ್ಟಳು! ಶಿವರಾಯನು ಶಿಷ್ಟನು! ಅವಳು ವ್ಯಭಿಚಾರಿಣಿ! ಇವನು ಸಂಭಾವಿತ! ಅವಳು ನಿಂದ್ಯಳು! ಇವನು ವಂದ್ಯನು! ಅವಳು ಪತಿತಳು ಇವನು ಪಾವನನು! ಇದು ಜಗತ್ತಿನ ನ್ಯಾ........ಯ!

---

# ಗಮಕಕಲಾ ಅಭ್ಯಾಸಗೋಷ್ಠಿ

## (ಪದ್ಯ ಕಾವ್ಯಗಳನ್ನು ಓದುವ ವಿದ್ಯೆ ಕಲಿಸಲು ಏರ್ಪಾಟು)

ಕನ್ನಡ ಕಾವ್ಯಗಳನ್ನು ಕಿವಿಗಿಂಪಾಗುವಂತೆಯೂ ಅರ್ಥ ವಿಶದಪಡಿಸುವಂತೆಯೂ ಓದುವ ವಿದ್ಯೆಯನ್ನು ಪ್ರಚಾರ ಪಡಿಸುವ ಉದ್ದೇಶದಿಂದ ಕರ್ಣಾಟಕ ಸಾಹಿತ್ಯ ಪರಿಷತ್ತು ಒಂದು ಗಮಕ ಕಲಾಭ್ಯಾಸ ಗೋಷ್ಠಿಯನ್ನು (ಸದ್ಯಕ್ಕೆ ಪರೀಕ್ಷಾರ್ಥವಾಗಿ) ಏರ್ಪಡಿಸಬೇಕೆಂದು ನಿಶ್ಚಯಿಸಿದೆ.

ಈ ಗೋಷ್ಠಿಯು ಈ ಸಲದ ಬೇಸಿಗೆಯ ರಜಾಕಾಲದಲ್ಲಿ—ಎಂದರೆ ೧೯೩೩ನೆಯ ಇಸವಿ ಎಪ್ರಿಲ್, ಮೇ, ಜೂನ ತಿಂಗಳುಗಳಲ್ಲಿ—ಬೆಂಗಳೂರಿನಲ್ಲಿರುವ ಪರಿಷನ್ಮಂದಿರದಲ್ಲಿ ನಡೆಯುವದು.

ಈ ಗೋಷ್ಠಿಗೆ ಸೇರಲಿಚ್ಛಿಸುವವರು ತಮ್ಮ ಅಪೇಕ್ಷಾಪತ್ರವನ್ನು ೧೯೩೩ನೆಯ ಇಸವಿ ಮಾರ್ಚ ೩೧ನೆಯ ತಾರೀಖಿನೊಳಗಾಗಿ ಪರಿಷತ್ತಿನ ಕಛೇರಿಗೆ ತಲಪುವಂತೆ ಬರೆದು ಕಳುಹಿಸಬೇಕು. ಹೆಚ್ಚಿನ ವಿಷಯಗಳಿಗಾಗಿ ಪರಿಷತ್ತಿನ ಕಛೇರಿಗೆ ಬರೆದುಕೊಳ್ಳಬೇಕು. ಸಿ ಕೆ. ವೆಂಕಟರಾಮಯ್ಯ, M.A ,LL.B.

ಗೌರವ ಕಾರ್ಯದರ್ಶಿ, ಕರ್ಣಾಟಕ ಸಾಹಿತ್ಯ ಪರಿಷತ್ತು.

# ಕರ್ಣಾಟಕ ಸಾಹಿತ್ಯ ಪರಿಷತ್ತು

ಶ್ರೀ ಕೃಷ್ಣ ರಾಜೇಂದ್ರ ಪರಿಷನ್ಮಂದಿರ, ಚಾಮರಾಜಪೇಟೆ, ಬೆಂಗಳೂರ ಸಿಟಿ.

---

## ವಿಶೇಷ ಸಾಹಿತ್ಯೋತ್ಸವ.—ಎಪ್ರಿಲ್ ೨೫ರಿಂದ ಮೇ ೧

**ಉಪನ್ಯಾಸಗಳು, ಕಾವ್ಯಪಠನ, ಸಂಗೀತ, ವಿಜ್ಞಾನ ಪ್ರದರ್ಶನ ಇ.**

ಸಮಸ್ತ ಕನ್ನಡ ಮಹಾಜನರ ಉಪಯೋಗಕ್ಕಾಗಿಯೂ, ವಿಶೇಷವಾಗಿ ಉಪಾಧ್ಯಾಯರ ಮತ್ತು ವಿದ್ಯಾ ಪ್ರಚಾರದಲ್ಲಿ ಆಸಕ್ತರಾದ ಇತರ ಮಹಾಶಯರ ಪ್ರಯೋಜನಕ್ಕಾಗಿಯೂ, ಕರ್ಣಾಟಕ ಸಾಹಿತ್ಯ ಪರಿಷತ್ತು ಕಳೆದ ವರ್ಷ ಏರ್ಪಡಿಸಿದ್ದಂತೆ, ಈ ವರ್ಷವೂ ಬೇಸಿಗೆಯ ರಜಾಕಾಲದಲ್ಲಿ, ತಾ|| ೨೫-೪-೩೫ನೆಯ ಗುರುವಾರದಿಂದ ತಾ|| ೧-೫-೧೯೩೫ನೆಯ ಬುಧವಾರದ ವರೆಗೆ ಒಂದು ವಿಶೇಷ ಸಾಹಿತ್ಯೋತ್ಸವವನ್ನು ನೆರವೇರಿಸಲು ನಿಶ್ಚಯಿಸಿದೆ.

ಈ ವಾರದಲ್ಲಿ ಪ್ರತಿದಿವಸವೂ ಪ್ರಸಿದ್ಧರಾದ ಪಂಡಿತರುಗಳಿಂದ ವಿಧವಿಧದ ವಿಷಯಗಳಮೇಲೆ ಉಪನ್ಯಾಸಗಳು ನಡೆಯುವವು.

ಉಪನ್ಯಾಸಕರು ಮುಖ್ಯವೂ ಮತ್ತು ಕಷ್ಟವೂ ಆದ ವಿಷಯಗಳನ್ನು ಬ್ಲ್ಯಾಕ್ ಬೋರ್ಡಿನ ಸಹಾಯದಿಂದಲೂ ಮ್ಯಾಜಿಕ್ ಲ್ಯಾಂಟರ್ನ್ ಸಹಾಯದಿಂದಲೂ ವಿವರಿಸುವರು.

ಪ್ರತಿಯೊಂದು ಉಪನ್ಯಾಸವೂ ಸುಮಾರು ಒಂದು ಘಂಟೆ ನಡೆಯುವುದು. ಅದಾದ ಬಳಿಕ ಇನ್ನೊಂದು ಘಂಟೆಕಾಲ ಪ್ರಶ್ನೋತ್ತರಗಳು ನಡೆಯಬಹುದು.

ಮೇಲ್ಕಂಡ ವಾರದಲ್ಲಿ ಕಾವ್ಯವಾಚನ, ಸಂಗೀತ ಮೊದಲಾದ ಇತರ ಸಾಹಿತ್ಯ ಕಾರ್ಯಗಳೂ ನಡೆಯುವುವಲ್ಲದೆ ಬೆಂಗಳೂರಿನಲ್ಲಿರುವ ಕಾರ್ಖಾನೆಗಳನ್ನೂ ವಿಜ್ಞಾನಕಾರ್ಯಶಾಲೆಗಳನ್ನೂ ನೋಡಿಕೊಂಡು ಬರಲು ಏರ್ಪಾಟು ಮಾಡಲಾಗುವದು.

ಈ ಎಲ್ಲ ಕಾರ್ಯಗಳಿಗೂ ಪ್ರವೇಶವು ಟಿಕೆಟ್ಟಿನ ಮೂಲಕ ದೊರೆಯುವದು.

ಉಪನ್ಯಾಸಗಳ ದಿನ, ಘಂಟೆ, ಉಪನ್ಯಾಸಕರ ಹೆಸರುಗಳು ಮೊದಲಾದ ವಿವರುಗಳನ್ನು ಕ್ರಮೇಣ ಪ್ರಕಟಿಸಲಾಗುವದು.

ಎಂ. ಆರ್. ಶ್ರೀನಿವಾಸಮೂರ್ತಿ,
ವ್ಯವಸ್ಥಾಪಕ, ವಿಶೇಷ ಸಾಹಿತ್ಯೋತ್ಸವ ಸಮಿತಿ.

---

# ನಮ್ಮ ಮಾತು

ಕನ್ನಡ ಸಾಹಿತ್ಯವು ಬಗೆಬಗೆಯಾಗಿ ಬೆಳೆಯಬೇಕಾಗಿದೆ. ಶುದ್ಧ ಸುಂದರವಾದ ಶೈಲಿಯಲ್ಲಿ ರಚಿಸಿದ ಸುಸಂಸ್ಕೃತ ಗ್ರಂಥಗಳು ಹೆಚ್ಚು ಹೆಚ್ಚಾಗಿ ಹುಟಿ ಕನ್ನಡ ಸಾಹಿತ್ಯವು ಸಮೃದ್ಧಿಯನ್ನು ಪಡೆಯಬೇಕಾಗಿದೆ. ವಿವಿಧ ವಿಷಯಗಳನ್ನು ಕುರಿತು ವಿವಿಧ ರೀತಿಯಿಂದ ವಿಕಾಶಗೊಳಿಸಿ ಕೃತಿಕುಸುಮಗಳಿಂದ ಕನ್ನಡ ಸಾಹಿತ್ಯೋದ್ಯಾನದ ವೈವಿಧ್ಯವೂ ಸೊಬಗೂ ಬಗೆಗೊಳ್ಳಬೇಕಾಗಿದೆ. ಈ ಮಹಾ ಕಾರ್ಯದಲ್ಲಿ ಕಾವ್ಯ, ತತ್ವಜ್ಞಾನ, ಶಿಕ್ಷಣ, ಶಿಕ್ಷಣಸಮಾಜ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ಲಲಿತ ಶಾಸ್ತ್ರೀಯ ಪ್ರಬೋಧಕ ಗ್ರಂಥ ನಿರ್ಮಿತಿಯಿಂದ ಯಥಾಶಕ್ತಿ ಕನ್ನಡದಭಿಮಾನಿಗಳು ನೆರವಾಗಬೇಕೆಂಬುದೇ ನನ್ನ ಬಯಕೆ.

ವಾಮನ ರಾಮಚಂದ್ರ ಮುಧೋಳಕರ,
ಗೌ। ಕಾರ್ಯದರ್ಶಿಗಳು :
ಸಾಹಿತ್ಯ ಸೇವಾ ಸಮಿತಿ, ಧಾರವಾಡ.

---

# ವಿಮರ್ಶೆ.

---

## ಸರಸ್ವತಿ ವಿಶೇಷಾಂಕು

ಸಂಪಾದಕಿ :- ಶ್ರೀ. ಆರ್. ಕಲ್ಯಾಣಮ್ಮನವರು ಬೆಂಗಳೂರು

ಸಾಮಾನ್ಯವಾಗಿ ವಿಚಾರ ಮಾಡಿದರೆ ಮಹಿಳೆಯರಿಗೆಂದು ಕಳೆದ ೨೦ ವರ್ಷಗಳಿಂದ ಸಾಹಿತ್ಯ ಸೇವೆಯಲ್ಲಿ ದೇಹ ಸವಿಸುವದನ್ನು ನೋಡಿದರೆ ಸಂಪಾದಕೀಯರಿಗಾಗಿ ಒಂದು ತರ ಆದರ ಭಾವವು ಸಹಜವಾಗಿ ಉಂಟಾಗುವಂತಿದೆ. ಮಹಿಳೆಯರ ಉನ್ನತಿಗಾಗಿ ಹೆಣಗುವ ಇವರ ಪತ್ರವು ಅಖಿಲ ಕರ್ನಾಟಕದಲ್ಲಿ ಒಂದೇ ಒಂದಾಗಿದ್ದು ಅದರಲ್ಲಿ ಸ್ತ್ರೀಯರಿಗುಚಿತವಾದ ಒಳ್ಳೇ ಲೇಖನಗಳಿಂದ ಕೂಡಿದ್ದಾಗಿದೆ. ವಿಶೇಷಾಂಕು ಕೂಡ ಅವರ ಗುರಿಗೆ ವಿಶೇಷ ಅನುಕೂಲವಾಗುವಂತಹದಿದೆ ಎಂದು ಹೇಳಲು ಪ್ರತ್ಯವಾಯವಿಲ್ಲ. ಉದಾರ ಕನ್ನಡಿಗರು ತನ್ನ ಹೆಣ್ಣುಮಕ್ಕಳಿಗಾಗಿ "ಸರಸ್ವತಿ" ಯನ್ನು ಪ್ರೇಮಾದರದಿಂದ ಬರಮಾಡಿಕೊಳ್ಳಬೇಕೆಂದು ನಾವು ಕೋರುತ್ತೇವೆ.

ಬಾಲೇಹೊಸೂರ ರಾಮರಾಯರು
ವಿಮರ್ಶಕರು.

---

## ಕಥಾಕುಂಜ

---

ಸಂಪಾದಕರು :-

ಬೆಳಗಾವಿ

ಸದ್ಯಕ್ಕೆ ಸಮಾಜಕ್ಕೆ ಯಾವ ವಿಷಯುವನ್ನು ಹೇಳಿದರೂ ಕತೆ ಕಾದಂಬರಿಗಳ ರೂಪದಲ್ಲಿ ಹೇಳುವ ಪ್ರಸಂಗ ಬಂದಿದೆ. ಹೆಚ್ಚಿನ ವಿಷಯ ವಿವೇಚನೆ ಅಥವಾ ತಾತ್ವಿಕ ವಿಷಯುಗಳುಳ್ಳ ಗ್ರಂಥಗಳು ರುಚಿಸದಾಗಿವೆ. ಇಂತಹ ಈ ಜನತೆಯ ರಹಸ್ಯವನ್ನರಿತುಕೊಂಡು "ಕಥಾಕುಂಜ" ಮಾಸಪತ್ರವೊಂದನ್ನು ಹೊರಡಿಸಿದ್ದು ಸಂಪಾದಕರಿಗೆ ಶ್ರೇಯಸ್ಕರವಾಗಿದೆ. ಇಂದು ಅದರ ವಿಶೇಷ ಸಂಚಿಕೆಯಲ್ಲಿನ ವಿಷಯುಗಳಂತೂ ಕನ್ನಡ ಸಾಹಿತ್ಯದಲ್ಲಿ ಒಳ್ಳೇ ಬೆಲೆಯುಳ್ಳವಾಗಿವೆ.

ಬಾಲೇಹೊಸೂರ ರಾಮರಾಯರು
ವಿಮರ್ಶಕರು.

# ವಿನಂತಿ



ನಮ್ಮ ವೀರಶೈವ ಚಂದ್ರಿಕೆಯು ಕನ್ನಡ ಭಾಷಾಸೇವೆಯನ್ನೇ ತನ್ನ ಗುರಿಯಾಗಿಟ್ಟುಕೊಂಡು ನಿಃಸ್ವಾರ್ಥತೆಯಿಂದ ಈ ವರೆಗೆ ದುಡಿದುದು ಸರ್ವರಿಗೂ ವಿದಿತವಿದೆ. ವಾಙ್ಮಯಪ್ರೇಮಿಗಳು ಚಂದಾದಾರರಾಗಬೇಕಲ್ಲದೆ ತಮ್ಮ ಪ್ರೋತ್ಸಾಹನದಿಂದ ಹೆಚ್ಚು ಜನ ಚಂದಾದಾರರನ್ನು ಕೂಡಿಸಿ ಕೊಡಬೇಕು. ಚಂದ್ರಿಕೆಗೆ ಸಹಾಯಮಾಡಿ ಶ್ರೀಗುರು ಫಕೀರೇಶ್ವರನ ಕೃಪೆಗೆ ಪಾತ್ರರಾಗಬೇಕು.

ಚಂದ್ರಿಕೆಯ ಹೊಸ ವರುಷವು ವೈಶಾಖ ಶು|| ೧೫ ಆಗಿಯ ಹುಣ್ಣಿವೆಯಿಂದ ಪ್ರಾರಂಭವಾಗುವದು. ಚಂದಾ ಹಣವು ಎರಡೇ ರೂಪಾಯಿ. ಹೊಸ ವರುಷದಿಂದ ಚಂದಾದಾರರಾಗಲು ಅಪೇಕ್ಷೆಯುಳ್ಳವರು ಒಂದು ವರ್ಷದ ಚಂದಾ ಹಣವನ್ನು ಮನಿಯಾರ್ಡರಿನಿಂದ ಕಳುಹಿಸಬೇಕು. ಅಥವಾ ಪತ್ರ ಬರೆದರೆ ವ್ಹಿ. ಪಿ.ಯಿಂದ ಕಳುಹಿಸುವೆವು. ಮಾತ್ರ ವ್ಹಿ. ಪಿ. ಮರಳಿ ಬಿಟ್ಟು ಚಂದ್ರಿಕೆಯ ನಷ್ಟ ಮಾಡಬಾರದು.

ಶ್ರೀ ಫಕೀರೇಶ್ವರನು ಎಲ್ಲರಿಗೂ ಸದ್‌ಬುದ್ಧಿ ಸತ್‌ಪ್ರೇರಣೆಗಳನ್ನು ಕೊಡಲಿ. ಸರ್ವರೂ ಸುಖಿಗಳಾಗಿರಲಿ.

—ಸಂಪಾದಕರು.

R. NO. B. 3350 VEERASHAIVA CHANDRIKE

# ಚಂದ್ರಿಕೆಯ ಚಂದಾದಾರರಲ್ಲಿ ವಿಜ್ಞಾಪನೆ.

ನಮ್ಮ ವೀರಶೈವ ಚಂದ್ರಿಕೆಯು ಈ ಸಾರೆಯ ಸಂಚಿಕೆಯು ವಾಚಕರ ಕೈಸೇರಿತೆಂದರೆ ಚಂದ್ರಿಕೆಗೆ ಒಂದು ವರ್ಷ ತುಂಬಿದಂತಾಯಿತು. ಶ್ರೀ ಫಕ್ಕೀರೇಶ್ವರನ ಕೃಪೆಯಿಂದಲೂ ಉದಾರ ಕನ್ನಡ ವಾಚಕ ವೃಂದದ ಆಶ್ರಯದಿಂದಲೂ ಇದುವರೆಗೆ ಚಂದ್ರಿಕೆಯು ವಾಚಕರ ಸೇವೆಯನ್ನು ಅವ್ಯಾಹತವಾಗಿ ಮಾಡುತ್ತ ಬಂದಂತೆ ಇನ್ನು ಮುಂದಾದರೂ ಇದಕ್ಕೂ ಹೆಚ್ಚು ಹುರುಪಿನಿಂದ ಮುಂದಡಿಯಿಡಲು ನಿಶ್ಚಯಿಸಿರುವೆವು. ನಾವಾದರೂ ಚಂದ್ರಿಕೆಯು ಅಂತರ್ಬಾಹ್ಯಾಂಗಗಳು ಹೆಚ್ಚು ಚಿತ್ತಾಕರ್ಷಕವಾಗುವಂತೆ ಪ್ರಯತ್ನಿಸುವೆವು. ಆದರೆ ಈ ಎಲ್ಲ ನಮ್ಮ ಪ್ರಯತ್ನಗಳಿಗೆ ಯಶವು ದೊರೆಯಬೇಕಾದರೆ ಕನ್ನಡಿಗರ ಉದಾರಾಶ್ರಯವು ಅವಶ್ಯವಾಗಿದೆ. ಇದು ವರೆಗೆ ಚಂದ್ರಿಕೆಗೆ ಎಲ್ಲ ರೀತಿಯಿಂದಲೂ ನೆರವಾಗುತ್ತ ಬಂದ ನಮ್ಮ ಕೊಡಗೈ ಕನ್ನಡಿಗರಿಗೆ ಅಭಿನಂದನೆಗಳನ್ನರ್ಪಿಸುವೆವು. ಮುಂದಾದರೂ ಇದೇ ರೀತಿಯಿಂದ ಸಹಾಯಕರಾಗುವರೆಂದು ಪೂರ್ಣ ನಂಬಿದ್ದೇವೆ.

—ಸಂಪಾದಕರು.

ಚಂದಾದಾರರು ತಮ್ಮ ಚಂದಾಹಣವನ್ನು ಈ ಸಂಚಿಕೆಯು ತಲ್ಪಿದೊಡನೆ ಮನಿಯಾರ್ಡರ ಮಾಡಬೇಕು. ವ್ಹಿ. ಪಿ. ಮಾಡಿಸಲು ಹಚ್ಚಿ ಸುಮ್ಮನೆ ನಮ್ಮನ್ನು ತೊಂದರೆಗೆ ಗುರಿಮಾಡಬಾರದು.

—ಸಂಪಾದಕರು.

ಇದನ್ನು ಗದಗ-ರಸಿಕರಂಜನಿ ಮುದ್ರಣಾಲಯದಲ್ಲಿ ಮುದ್ರಿಸಿ ಶಿರಹಟ್ಟಿ-ವೀರಶೈವ ಚಂದ್ರಿಕೆಯ ಆಫೀಸಿನಲ್ಲಿ ಪ್ರಸಿದ್ಧಪಡಿಸಿತು.

